# ಪುರೋನುವಾಕ್ಯ

'ಕುರ್ವನ್ನೇವೇಹ ಕರ್ಮಾಣಿ ಜಿ ಜೀವಿಷೇತ್'– ಈ ಲೋಕದಲ್ಲಿ ಬದುಕಲು ಇಚ್ಛಿಸುವ ಜೀವಿಯು ಸತ್ಕರ್ಮಗಳನ್ನು ಆಚರಿಸುತ್ತಾ ಬದುಕಬೇಕೆಂಬುದು ಉಪನಿಷತ್ತುಗಳ ಆಶಯವಾಗಿದೆ. ಚತುರ್ವಿಧ ಪುರುಷಾರ್ಥಗಳಲ್ಲಿ ಪರಮವೂ ಚರಮವೂ ಆದ ಮೋಕ್ಷಪ್ರಾಪ್ತಿಗೆ ಚಿತ್ತಶುದ್ಧಿಯು ಪ್ರಥಮ ಮೆಟ್ಟಿಲು. ಈ ಚಿತ್ತಶುದ್ಧಿಯು 'ಕರ್ಮಾಣಿ ಚಿತ್ತಶುದ್ಧ್ಯರ್ಥಂ' ಎಂಬಂತೆ ಸತ್ಕರ್ಮಗಳಿಂದ ಘಟಿಸುತ್ತದೆ ಎಂದು ನಮ್ಮ ಪೂರ್ವಿಕರ ಅಂಬೋಣ. ದೇವತಾ ಆರಾಧನೆಯ ತಾತ್ಪರ್ಯ ದೇವರ ಮೂರ್ತಿಗಳ ಸಗುಣೋಪಾಸನೆಯು ಈ ಸತ್ಕರ್ಮಗಳ ಸಾಲಿನಲ್ಲಿ ಅಗ್ರಗಣ್ಯವಾಗಿ ನಿಲ್ಲುತ್ತದೆ. ಈ ರೀತಿಯಲ್ಲಿ ಶ್ರೇಷ್ಠವಾದ ಈ ಸಗುಣೋಪಾಸನೆಯನ್ನು ಅಥವಾ ದೇವತಾರಾಧನೆಯನ್ನು ಅತ್ಯಂತ ವ್ಯವಸ್ಥಿತವಾಗಿ ಅನೂಚಾನವಾಗಿ ಸಾಗಿ ಬರುವಂತೆ ಮಾಡಿರುವ ಶಾಸ್ತ್ರವೇ ಆಗಮಶಾಸ್ತ್ರ. ಆಗಮಶಾಸ್ತ್ರದ ಕುರಿತು ಈ ಶ್ಲೋಕವು ಅತ್ಯಂತ ಜನಪ್ರಿಯವಾಗಿದೆ.

**ಆಗತಂ ಶಿವವಕ್ತ್ರಾತ್ತು ಗತಂ ತು ಗಿರಿಜಾನನಂ ।**

**ಮತಂ ಚ ವಾಸುದೇವಸ್ಯ ತಸ್ಮಾದಾಗಮ ಉಚ್ಯತೇ ॥**

ಆ – ಶಿವನ ಮುಖದಿಂದ ಆಗಮಿಸಿದ್ದು,

ಗ – ಪಾರ್ವತಿಯ ಕಿವಿಗೆ ಗಮಿಸಿದ್ದು (ಪಾರ್ವತಿಯು ಆಲಿಸಿದ್ದು)

ಮ – ವಿಷ್ಣುವು ಅಭಿಮತ ನೀಡಿದ್ದರಿಂದ (ಅಭಿಮತದಿಂದ)

**'ಆಗಮಶಾಸ್ತ್ರ'** ಎಂದು ಪ್ರಸಿದ್ಧಿ ಪಡೆದಿದೆ ಎಂದು ಈ ಶ್ಲೋಕದ ಅಭಿಪ್ರಾಯ. ವಸ್ತುನಿಷ್ಠವಾಗಿ ಚಿಂತಿಸಿದಾಗ ಅನೇಕ ತಾಂತ್ರಿಕ ಗ್ರಂಥಗಳು ಶಿವ ಪಾರ್ವತಿಯರ ಸಂವಾದ ರೂಪದಲ್ಲಿರುವುದು ಈ ಶ್ಲೋಕದ ತಾತ್ಪರ್ಯಕ್ಕೆ ಪುಷ್ಟಿ ನೀಡುತ್ತದೆ. ಹೀಗೆ ಶಿವಪಾರ್ವತಿಯರ ಸಂವಾದ ರೂಪದಲ್ಲಿ ತತ್ರ-ತತ್ರ ಅನ್ಯರೂಪದಲ್ಲಿಯೂ ದೊರೆಯುವ ಅನೇಕ ಆಗಮ ಗ್ರಂಥಗಳು ಭರತಭೂಮಿಯಲ್ಲಿ ಅಸ್ತಿತ್ವದಲ್ಲಿ ಉಳಿದುಕೊಂಡಿವೆ.

ಅತ್ಯಂತ ವಿಸ್ತಾರವೂ ವಿಷಯಗಳು ವಿಕ್ಷಿಪ್ತವೂ ಆದ್ದರಿಂದ ಈ ಗ್ರಂಥಗಳು ಕಾಲಕ್ರಮೇಣ ಸಾಮಾನ್ಯ ವಿದ್ವಾಂಸರಿಗೆ ಅನುಷ್ಠಾನಕ್ಕೆ ತರಲು ದುಷ್ಕರವಾಯಿತು. ಇದನ್ನರಿತು ಅನೇಕ ಶ್ರೇಷ್ಠ ವಿದ್ವಾಂಸರು ತಮ್ಮ ಆಳವಾದ ಅಧ್ಯಯನದಿಂದ ಹಾಗೂ ಉನ್ನತವಾದ ಅನುಷ್ಠಾನದಿಂದ ಈ ಮೂಲಗ್ರಂಥಗಳ ಸಾರವನ್ನು ಗ್ರಹಿಸಿ ಮೂಲಗ್ರಂಥಗಳ ವಿಧಿ ನಿಯಮಗಳಿಗೆ ಧಕ್ಕೆ ಉಂಟಾಗದಂತೆ ಆಚರಿಸಲು ಸುಲಭವಾಗುವಂತೆ ಅನೇಕ ಗ್ರಂಥಗಳನ್ನು ಹೊರತಂದರು. ಇಂಥಹ ಗ್ರಂಥಗಳಲ್ಲಿ ನಾರಾಯಣ ನಂಬೂದರಿ ಕೃತ **'ತಂತ್ರ ಸಮುಚ್ಚಯ'**ವೂ ಒಂದು ರತ್ನಪ್ರಾಯ ಗ್ರಂಥವಾಗಿದೆ. ಈ ಗ್ರಂಥವು ದೇವಾಲಯ ಹಾಗೂ ಮೂರ್ತಿ ವಿಷಯವಾಗಿ ಹನ್ನೆರಡು ಪಟಲಗಳಲ್ಲಿ (೧೮೦೧) ಸಾವಿರದ ಎಂಟುನೂರ ಒಂದು ವಿವಿಧ ಛಂದಸ್ಸಿನ ಶ್ಲೋಕಗಳಲ್ಲಿ ವಿದಿತ ಪಡಿಸಿದೆ. ಕಾಶ್ಯಪೀಯ ಪ್ರಪಂಚಸಾರ, ಈಶಾನ ಗುರುದೇವ ಪದ್ಧತಿ ಮುಂತಾದ ಗ್ರಂಥಗಳು ಸಾರಸ್ವರೂಪದ ಮೂರ್ತಿರೂಪವೇ ಈ ಗ್ರಂಥವು. ಕೇರಳದ ಕೆಲವು ಧಾರ್ಮಿಕ ಶಿಕ್ಷಣ ಕೇಂದ್ರಗಳಲ್ಲಿ ಈ ಗ್ರಂಥವು ಪಠ್ಯದ ವಿಷಯದಲ್ಲಿ ಸೇರಿರುವುದು ಈ ಪುಸ್ತಕದ ಜನಪ್ರಿಯತೆಗೆ, ವೈಶಿಷ್ಟ್ಯತೆಗೆ ಹಿಡಿದ ಸಾಕ್ಷಿಯಾಗಿದೆ.

ಶ್ಲೋಕರೂಪದಲ್ಲಿ ವಿಷದವಾಗಿರುವ ಈ ಗ್ರಂಥವನ್ನಾಧರಿಸಿ **'ಅನುಷ್ಠಾನ ಪದ್ಧತಿ'** ಎಂಬ ಪ್ರಯೋಗಾತ್ಮಕ ಗ್ರಂಥವು ರೂಪುಗೊಂಡಿತು. ಈ ಗ್ರಂಥದ ಕರ್ತೃವೂ ಕೇರಳ ಪ್ರಾಂತದವನಾಗಿರಬೇಕೆಂದು ವಿಮರ್ಶಕರ ಅಭಿಪ್ರಾಯ. ತಾಳೆಗರಿ ರೂಪವಾದ ಈ ಗ್ರಂಥದಲ್ಲಿ ಪೂಜಾಪದ್ಧತಿಯಿಂದಾರಂಭಿಸಿ– ಉತ್ಸವಾಂತ ಭಾಗಗಳು ಒಳಗೊಂಡಿದ್ದುವು. ಈ ಗ್ರಂಥವನ್ನು ಪುನಃ ಪರಿಷ್ಕರಿಸಿದವರು ನಮ್ಮ ರಾಜ್ಯದ ಘನ ವಿದ್ವಾಂಸರೂ ಚತುಃಶಾಸ್ತ್ರ ಕೋವಿದರೂ ಆದ ಕೋಟ ವಾಸುದೇವ ಸೋಮಯಾಜಿಗಳು. ಶ್ರೀಯುತರು ಈ ಗ್ರಂಥದಲ್ಲಿ ಪ್ರತಿಷ್ಠಾಪ್ರಯೋಗ, ಜೀರ್ಣೋದ್ಧಾರ ವಿಧಾನಗಳನ್ನೂ ಸೇರಿಸಿ ಪರಿಪೂರ್ಣ ಗ್ರಂಥವನ್ನಾಗಿ ನಿರೂಪಿಸಿದರು. ಈ ಅನುಷ್ಠಾನ ಪದ್ಧತಿಯ ರೀತಿಯಲ್ಲಿಯೇ ತಂತ್ರಸಮುಚ್ಚಯವನ್ನಾಧರಿಸಿ ಮಳೆಯಾಳಿ ಭಾಷೆಯಲ್ಲಿ **'ಕುಳಿಕ್ಕಾಟ್ಟುಪಚ್ಚಿ'** ಎಂಬ ಗ್ರಂಥವು ಪ್ರಸಿದ್ಧಿಯಲ್ಲಿರುವುದು ಗಮನಾರ್ಹವಾಗಿದೆ.

ದೇವನಾಗರಿ ಲಿಪಿಯಲ್ಲಿರುವ ಗ್ರಂಥವನ್ನು ಅಧ್ಯಯನ ಮಾಡಿ ಪ್ರಯೋಗಕ್ಕಿಳಿಸುವುದು ಇಂದಿನ ಪೀಳಿಗೆಗೆ ಸ್ವಲ್ಪ ಕಷ್ಟಸಾಧ್ಯ ವಿಷಯ. ಅನುಷ್ಠಾನ ಪದ್ಧತಿಯಂತಹ ಗ್ರಂಥ ಕನ್ನಡ ಭಾಷೆಯಲ್ಲಿ ದೊರೆತರೆ ಪ್ರಯೋಗಜ್ಞರಿಗೆ ಬಹಳ ಪ್ರಯೋಜನ ಆದೀತು ಎನ್ನುವುದನ್ನು ಮನಗಂಡು ನನ್ನ ಗುರುಗಳಾದ ಆಗಮಶಾಸ್ತ್ರ ವಿಶಾರದರಾದ ಕೆ.ಪಿ. ಶಂಕರ ಸೋಮಯಾಜಿಗಳು **'ತಂತ್ರ ಕುಸುಮಾಂಜಲಿ'** ಎಂಬ ಗ್ರಂಥವನ್ನು ನಮಗಾಗಿ ರೂಪಗೊಳಿಸಿದ್ದಾರೆ.

**ತಂತ್ರ ಕುಸುಮಾಂಜಲಿಯ ವೈಶಿಷ್ಟ್ಯತೆಗಳು:**

೧) ಈ ಕುಸುಮಾಂಜಲಿಯು ಅನುಷ್ಠಾನಪದ್ಧತಿಯ ಕನ್ನಡಾನುವಾದವಾಗಿದೆ.

೨) ಇದರಲ್ಲಿ ಅನುಷ್ಠಾನಪದ್ಧತಿಯಂತೆ ವಿಷ್ಣು ಶಿವಾದಿ ಏಳು ದೇವತೆಗಳ ಪ್ರತಿಷ್ಠಾಪನಾವಿಧಿ, ಕಲಶ, ಉತ್ಸವಾದಿಗಳು ವಿವರಿಸಲ್ಪಟ್ಟಿವೆ.

೩) ಬಲಿಸೂತ್ರಗಳನ್ನು ಬೇರೆಡೆಯಿಂದ ಅನುಕೂಲಕ್ಕಾಗಿ ಸಂಗ್ರಹಿಸಲಾಗಿದೆ.

೪) ಈಶಾನ ಗುರುದೇವ ಪದ್ಧತಿಯಿಂದ ಸೂರ್ಯಬಲಿಸೂತ್ರವನ್ನು ಸಂಗ್ರಹಿಸಲಾಗಿದೆ. ಸೂರ್ಯ ಪ್ರತಿಷ್ಠಾವಿಧಿಯು ನವಗ್ರಹಸಪರ್ಯಾ ಪದ್ಧತಿಯಲ್ಲಿ ಸಂಗ್ರಹಿಸಲಾಗಿದೆ. ಹಸ್ತಪ್ರತಿಯೊಂದರಿಂದ ಹನುಮದ್ಬಲಿ ಸೂತ್ರ ಮೊದಲಾಗಿ ಸಂಗ್ರಹಿಸಲಾಗಿದೆ. ಅನುಷ್ಠಾನ ಪದ್ಧತಿಯಲ್ಲಿ ಈ ವಿಷಯಗಳು ಒಳಗೊಂಡಿಲ್ಲವೆನ್ನುವುದು ಗಮನಾರ್ಹ.

೫) ಕಲಶಮಂಡಲಗಳು ಸುಂದರವಾಗಿ ಮೂಡಿಬಂದಿದೆ.

೬) ಗರ್ಭಗುಡಿಯನ್ನು ಮಧ್ಯದಲ್ಲಿ ಹೊಂದಿಸಿ ಅದಕ್ಕನುಗುಣವಾಗಿ ಬಲಿದೇವತೆಗಳ ಸ್ಥಾನ ನಿರ್ದೇಶನಪೂರ್ವಕವಾಗಿ ಚಿತ್ರಿಸಲಾಗಿದೆ.

ಹೀಗೆ ಹಲವು ವೈಶಿಷ್ಟ್ಯಗಳಿಂದ ಕೂಡಿದ ಈ ಗ್ರಂಥವನ್ನು ವಿಷಯದ ದೃಷ್ಟಿಯಿಂದ ಐದು ವಿಧವಾಗಿ ವಿಭಾಗಿಸಬಹುದು.

**ವಿಷಯಗಳು:**

೧) ಪ್ರತಿಷ್ಠಾ ವಿಧಾನ

೨) ಪೂಜಾ ವಿಧಾನ

೩) ಕಲಶ ವಿಧಾನ

೪) ಉತ್ಸವ ವಿಧಾನ

೫) ಪ್ರಾಯಶ್ಚಿತ್ತ (ಜೀರ್ಣೋದ್ಧಾರ) ವಿಧಾನ

**ಪ್ರತಿಷ್ಠಾ ವಿಧಾನದಲ್ಲಿ–** ವರಣೆ ಮಧುಪರ್ಕಾದಿಗಳು, ಆಚಾರ್ಯ ಪರಿಗ್ರಹ, ಬಿಂಬಪರಿಗ್ರಹ, ಜಲಾಧಿವಾಸ ಇತ್ಯಾದಿ ಆರಂಭಿಸಿ ಮೂರ್ತಿ ಪ್ರತಿಷ್ಠಾ ವಿಧಾನಗಳು ಅನುಷ್ಠಾನ ಪದ್ಧತಿಯಂತೆ ವಿವರಿಸಲ್ಪಟ್ಟಿವೆ.

**ಪೂಜಾ ವಿಧಾನದಲ್ಲಿ–** ನಾಡೀ ಶೋಧ, ಶೋಷಣಾದಿಗಳು, ಪೀಠಪೂಜಾ, ಪೂಜಾಹೋಮ, ನಿತ್ಯಬಲಿ, ಪ್ರಸನ್ನಪೂಜೆ ಇತ್ಯಾದಿ.

**ಉತ್ಸವವಿಧಿಯಲ್ಲಿ–** ಧ್ವಜಾರೋಹಣ, ತೋರಣ ಮೂಹೂರ್ತ, ಅಂಕುರ ಪೂಜೆ, ಅಧಿವಾಸಾದಿ ಹೋಮಗಳು, ಉತ್ಸವಬಲಿ, ರಥೋತ್ಸವ ಹೀಗೆ ಹಲವಾರು ವಿಧಿ ವಿಧಾನಗಳು.

**ಜೀರ್ಣೋದ್ಧಾರ ವಿಧಿಯಲ್ಲಿ–** ಪುನಃಪ್ರತಿಷ್ಠೆ, ಅಷ್ಟಬಂಧಕರಣ, ಬಿಂಬತ್ಯಾಗ ಪಕ್ಷ, ಜೀವಕುಂಭ ಪಕ್ಷ, ಧ್ಯಾನ ಸಂಕೋಚಾದಿಗಳು ವಿವರಿಸಲ್ಪಟ್ಟಿವೆ.

ಒಟ್ಟಿನಲ್ಲಿ ಈ ಗ್ರಂಥವು ಆಗಮಿಕರಿಗೆ ಅತ್ಯಂತ ಪರಿಪೂರ್ಣವಾದ ಕೈಪಿಡಿಯಂತಿದೆ. ಈ ಸಂಗ್ರಹವನ್ನು ಕನ್ನಡದಲ್ಲಿ ನೀಡಿದ ಪಂಡಿತ ಕೆ.ಪಿ.ಶಂಕರ ಸೋಮಯಾಜಿಗಳಿಗೆ ನಾವು ಋಣಿಗಳಾಗಿದ್ದೇವೆ. ಶ್ರೀಯುತರು ಬಹುಭಾಷಾ ಪಂಡಿತರು, ಹಲವು ಲಿಪಿಗಳನ್ನು ಬಲ್ಲವರೂ, ಆಯುರ್ವೇದ, ಜ್ಯೋತಿಷದಲ್ಲೂ ಪರಿಚಯ ಹೊಂದಿದ ಸಾಹಿತ್ಯ ವಿದ್ವಾಂಸರೂ ಆಗಿದ್ದಾರೆ. 'ತಂತ್ರಸಮುಚ್ಚಯ'ದಂತಹ ಮೇರು ಕೃತಿಯ ಕನ್ನಡಾನುವಾದಕರಾದ ಇವರು ಅನೇಕ ಆಗಮ ಸಂಬಂಧಿ ಪ್ರತಿಷ್ಠಾ ಗ್ರಂಥಗಳನ್ನು ಬರೆದಿದ್ದಾರೆ. ಗಣಪತಿ ಹಾಗೂ ರಾಮನ ಕುರಿತ ಸಮಗ್ರ ಸಂಗ್ರಹ ಗ್ರಂಥಗಳು ಈವಾಗಲೇ ಪ್ರಕಟಗೊಂಡಿವೆ. 'ಉತ್ಸವ

## ವಿಷಯಾನುಕ್ರಮಣಿಕೆ

# ಆಚಾರ್ಯಾದಿವರಣ

ಬ್ರಾಹ್ಮಣರಿಗೆ ವಿಹಿತವಾದ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳಲ್ಲಿ ನಿರತನಾದ ವೇದಾಧ್ಯಯನ ಸಂಪನ್ನನಾದ ಸತ್ಕುಲದಲ್ಲಿ ಜನಿಸಿದ, ಷೋಡಶ ಸಂಸ್ಕಾರಗಳನ್ನು ಹೊಂದಿದ ಶಾಂತ ಸ್ವಭಾವದವನಾದ, ಆಗಮಾದಿ ಶಾಸ್ತ್ರಗಳನ್ನು ಅರ್ಥವತ್ತಾಗಿ ತಿಳಿದು ಆಚರಿಸುವವನೂ ವರ್ಣಾಶ್ರಮಗಳ ನಿಯಮಗಳನ್ನು ತಿಳಿದು, ಕರ್ಮಕುಶಲನೂ ದೈವಭಕ್ತನೂ ಆದ ಬ್ರಾಹ್ಮಣನನ್ನು ಆಚಾರ್ಯನನ್ನಾಗಿ ಹೊಂದಬೇಕು.

ಆಚಾರ್ಯನು ಹೇಳಿದ ಕಾರ್ಯಗಳನ್ನು ಶ್ರದ್ಧೆಯಿಂದ ಆಚರಿಸುವ ಸ್ವಾನುಷ್ಠಾನಪರರಾದ ವಿಷಯಗಳನ್ನು ಚೆನ್ನಾಗಿ ತಿಳಿದ ಶ್ರದ್ಧಾಭಕ್ತಿಯಿಂದ ಕೂಡಿದ ಅಲ್ಲಿನ ಕಾರ್ಯಗಳಿಗೆ ಅನುಕೂಲವಾಗುವಂತೆ ಮೂರ್ತಿಪರನ್ನೂ, ಬ್ರಹ್ಮನನ್ನೂ, ಅನುಕೂಲಿಸಲು ಪರಿಕರ್ಮಿಗಳನ್ನೂ ಹೊಂದಿಸಿಕೊಳ್ಳಬೇಕು. ಅಧಿವಾಸ ಕುಂಡವನ್ನನುಸರಿಸಿ, ನಾಲ್ಕು, ಎಂಟು ಮೂರ್ತಿಪರನ್ನು ವರಿಸಬೇಕು.

ಈಶಾನ್ಯದಲ್ಲಿ ಸ್ಥಂಡಿಲವನ್ನು ರಚಿಸಿ, ಅದರ ಮೇಲೆ ಇರಿಸಲ್ಪಟ್ಟ ಪೂರ್ವಾಗ್ರವಾಗಿರುವ ದರ್ಭೆಗಳಲ್ಲಿ ಪಶ್ಚಿಮಾದಿ ಕ್ರಮದಿಂದ ಪ್ರೋಕ್ಷಣೀ ಪಾತ್ರದಿಂದ ಕೂಡಿ ಅರ್ಘ್ಯ, ಪಾದ್ಯ, ಆಚಮನೀಯಗಳೆಂದು ನಾಲ್ಕು ಪಾತ್ರೆಗಳನ್ನು ಕೆಳಮುಖವಾಗಿರಿಸಿ, ಅದರ ಜೊತೆಯಲ್ಲೇ ವಸ್ತ್ರ, ಅಂಗುಲೀಯಕ, ಕುಂಡಲ, ಯಜ್ಞೋಪವೀತಾದಿಗಳನ್ನಿರಿಸಿ ಪ್ರೋಕ್ಷಣ ಪಾತ್ರವನ್ನು ಮೇಲ್ಮುಖವಾಗಿಸಿ ಪವಿತ್ರ ಕೂರ್ಚನ್ನಿರಿಸಿ, ಶುದ್ಧೋದಕದಿಂದ ತುಂಬಿಸಬೇಕು. ಗಂಧ, ಹೂವು, ಅಕ್ಷತೆಗಳಿಂದ ಪೂಜಿಸಿ, ಪ್ರಣವದಿಂದ(ಓಂ)ಅಭಿಮಂತ್ರಿಸಬೇಕು. ಮೂಲಮಂತ್ರವನ್ನು ಹೇಳಿ ಉತ್ಪವನ ಮಾಡಿ ಸಂಸ್ಕರಿಸಲ್ಪಟ್ಟ ಜಲದಿಂದ ಅರ್ಘ್ಯಾದಿ ಪಾತ್ರೆಗಳನ್ನು ವಸ್ತ್ರಾದಿಗಳನ್ನೂ ಮೂರಾವರ್ತಿ ಪ್ರೋಕ್ಷಿಸಬೇಕು. ಮೇಲ್ಮುಖವಾಗಿ ಪಾತ್ರೆಗಳನ್ನಿರಿಸಿ, ಪುನಃ ಮೂರಾವರ್ತಿ ಷಡಂತ ಪ್ರಣವದಿಂದ ಪ್ರೋಕ್ಷಿಸಿ ತಾರೋಚ್ಚಾರಣೆಯೊಂದಿಗೆ ಆ ಪಾತ್ರೆಗಳಲ್ಲಿ ಕೂರ್ಚನ್ನಿರಿಸಬೇಕು. ಅರ್ಘ್ಯ, ಪಾದ್ಯ, ಆಚಮನೀಯ ಪಾತ್ರೆಗಳಲ್ಲಿ ಆಯಾಯ ದ್ರವ್ಯಗಳನ್ನು ಸೇರಿಸಿ ಆಯಾಯ ದೇವತೆಗಳ ಮೂಲ ಮಂತ್ರಗಳಿಂದ ಅಭಿಮಂತ್ರಿಸಬೇಕು ಅಥವಾ ಅರ್ಘ್ಯವನ್ನು ಶಿರೋಮಂತ್ರದಿಂದಲೂ, ಪಾದ್ಯವನ್ನು ಹೃದಯಮಂತ್ರದಿಂದಲೂ, ಆಚಮನೀಯವನ್ನು ಶಿಖಾಮಂತ್ರದಿಂದಲೂ ಪಾತ್ರವನ್ನು ಮುಟ್ಟಿಕೊಂಡು ಅಭಿಮಂತ್ರಿಸಬೇಕು. ವಸ್ತ್ರಾದಿಗಳನ್ನು ಮೂಲ ಮಂತ್ರದಿಂದ ಅಭಿಮಂತ್ರಿಸಬೇಕು. ಮೊದಲು ಈ ಪಾತ್ರಗಳನ್ನು ಶೋಷಣ, (ಯಂ) ದಾಹನ, (ರಂ) ಪ್ಲಾವನ (ಲಂ) ಸುಷರೀಕರಣ (ಹಂ) ಸಂಸ್ಕಾರಗಳನ್ನು ಮಾಡಬೇಕು. ವಿಷ್ಣುದೇವತಾ ಸಂಬಂಧಿಸಿದ ಈ ವರಣ ಕಾರ್ಯದಲ್ಲಿ ಅರ್ಘ್ಯಾದಿ ಪಾತ್ರೆಗಳನ್ನು ತಾವರೆಯ ಎಲೆಯೇ ಮೊದಲಾದವುಗಳಿಂದ ಮುಚ್ಚಿಟ್ಟು ಮೂರ್ತಿಪಾಲರಿಂದ ಕೂಡಿದ ಆಚಾರ್ಯನನ್ನು ನಮಸ್ಕರಿಸಿ ಪಾದ್ಯ, ಆಚಮನೀಯ, ಅರ್ಘ್ಯಗಳನ್ನು–ಗುರುವಿಗೆ ಮೂಲಮಂತ್ರದಿಂದಲೂ, ಮೂರ್ತಿಪರಿಗೆ ವಾಸುದೇವಾದಿ ಮಂತ್ರಗಳಿಂದಲೂ ಕೊಡಬೇಕು. ಅಥವಾ ಹೃದಯ, ಶಿರಸ್ಸು, ಶಿಖಾಮಂತ್ರಗಳಿಂದಲಾದರೂ ಕೊಡಬಹುದು. ಕವಚ ಮಂತ್ರದಿಂದ ಬಟ್ಟೆಗಳೆರಡನ್ನೂ, ಚಿನ್ನದ ಪವಿತ್ರ ಉಂಗುರವನ್ನೂ ಕೊಡಬೇಕು. ಅಸ್ತ್ರ ಮಂತ್ರದಿಂದ ಕುಂಡಲಗಳನ್ನೂ, ಉಪವೀತಗಳನ್ನೂ ಉಷ್ಣೀಷ ಮೊದಲಾದ ಅಲಂಕಾರಗಳನ್ನು ಆಯಾಯ(ಅಸ್ತ್ರ)ಮಂತ್ರದಿಂದ ಕೊಡಬೇಕು.

ಆಮೇಲೆ ಆಯಾಯ ಮೂಲಮಂತ್ರದಿಂದ ಜಲ, ಗಂಧ, ಪುಷ್ಪ, ಧೂಪ, ದೀಪ, ಅಕ್ಷತೆಗಳಿಂದ (ಷಡುಪಹಾರ) ಪೂಜಿಸಿ, ತಿರುಗಿ ಅರ್ಘ್ಯವನ್ನು ಕೊಟ್ಟು ಮೂರ್ತಿಪಾಲರಿಂದೊಡಗೂಡಿ ಆಚಾರ್ಯನನ್ನು ತುಪ್ಪದೊಡನೆ ಹಾಲನ್ನವನ್ನು (ವ್ಯಂಜನಗಳಿಂದಲೂ ಕೂಡಿ) ಊಟ ಮಾಡಿಸಬೇಕು. ಊಟದ ನಂತರ ಆಚಮನ ಮಾಡಿದ ಆಚಾರ್ಯ ಮೂರ್ತಿಪರಿಗೆ ತಾಂಬೂಲ, ಅಡಿಕೆ ಮೋದಕ ಮೊದಲಾದುವನ್ನು ಕೊಟ್ಟು ಗೌರವಿಸಿ ಅವಸಾನೀಯ (ಸಮಾಪ್ತಿಯ) ಅರ್ಘ್ಯೋದಕವನ್ನು ಕೊಟ್ಟು, ತಿಂದುಳಿದುದನ್ನು (ಉಚ್ಚಿಷ್ಟ) ತೆಗೆದು ನೆಲವನ್ನು ಗೋಮಯದಿಂದ ಸಾರಿಸಿ ಪರಿಶುದ್ಧಿಗೊಳಿಸಿ ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು, ಅವರನ್ನು ಪ್ರದಕ್ಷಿಣೆ ಬಂದು ನಮಸ್ಕರಿಸಿ, ಅಭಿವಾದನದೊಂದಿಗೆ ಸಂತುಷ್ಟರಾದ ಅವರನ್ನು ಪ್ರಾರ್ಥಿಸಿ, ತನ್ನ ಬಲಗೈಯಿಂದ, ಅವರ ಬಲಗೈಯನ್ನು ಆಯಾಯ ಮಂತ್ರಗಳಿಂದ– ಈ ಮಂತ್ರಗಳಿಂದ ವರಿಸಬೇಕು.

**ಮಯಾ ಸಂಪೂಜತೈರತ್ರ ದಕ್ಷಿಣಾಭಿಶ್ಚ ತೋಷಿತೈಃ ।**
**ಕ್ರಿಯತಾಂ ವಿಷ್ಣುಯಾಗೋ ಮೇ ಪ್ರಾರ್ಥಯಾಮಿ ಪ್ರಸೀದತ ॥**

(ನನ್ನಿಂದ ಪೂಜಿಸಲ್ಪಟ್ಟ ಹಾಗೂ ದಕ್ಷಿಣೆಯಿಂದಲೂ ಸಂತೋಷಗೊಂಡ ತಮ್ಮಿಂದ ನನ್ನ ವಿಷ್ಣು ಯಾಗವು ಮಾಡಲ್ಪಡಲಿ– ಎಂದು ಪ್ರಾರ್ಥಿಸುತ್ತೇನೆ– ಪ್ರಸನ್ನರಾಗಿರಿ)

ವಿಷ್ಣುಯಾಗೇ ಆಚಾರ್ಯಂ ತ್ವಾಂ-ಗೋತ್ರಂ-ಶರ್ಮಾಣಂ ವೃಣೇ ಹೀಗೆ ನಾಮ ಗೋತ್ರ ನಿರ್ದೇಶನ ಪೂರ್ವಕವಾಗಿಯೂ ವರಿಸಬಹುದು. ಈ ಪ್ರಾರ್ಥನಾ ಶ್ಲೋಕದಲ್ಲಿ ದೇವತಾ ಭೇದವನ್ನನುಸರಿಸಿ- ವಿಷ್ಣು ಯಾಗೋ ಮೇ-ಪದಸ್ಥಾನದಲ್ಲಿ- ಈಶ ಯಾಗೋ ಮೇ- ದುರ್ಗಾ ಯಾಗೋ ಮೇ- ಶಾಸ್ತ್ರ ಯಾಗೋ ಮೇ- ಗಣ ಯಾಗೋ ಮೇ- ಮೊದಲಾಗಿ ಹೇಳಿಕೊಳ್ಳಬಹುದು. ಆಚಾರ್ಯ ಮೂರ್ತಿಪರು- ಓಂ ತಥಾ- ಎಂದು ಹೇಳಬೇಕು. ಅಲ್ಲಿ ಶಿವಾದಿ ದೇವತೆಗಳಲ್ಲಿ- ಪಾದ್ಯ-ಅರ್ಘ್ಯ-ಆಚಮನ ಹೀಗೆ ಕ್ರಮವು. ಶಿವನಲ್ಲಿ ಶಿವಾಯ ಕ್ಷಿತಾತ್ಮನೇ । ರುದ್ರಾಯಾಗ್ನ್ಯಾತ್ಮನೇ । ಪಶುಪತಯೇ ಯಜ್ಞಾತ್ಮನೇ । ಈಶಾನಾಯ ಸೂರ್ಯಾತ್ಮನೇ । ಭವಾಯ ಜಲಾತ್ಮನೇ । ಉಗ್ರಾಯ ವಾಯ್ವಾತ್ಮನೇ । ಮಹಾದೇವಾಯ ಸೋಮಾತ್ಮನೇ । ಭೀಮಾಯವ್ಯೋಮಾತ್ಮನೇ- ಇವು ಮೂರ್ತಿ ಮಂತ್ರಗಳು. ಆಚಾರ್ಯನಿಗೆ ಶೈವ ಗಾಯತ್ರಿಯು ನಮಸ್ಕಾರ ಮಂತ್ರವು ಅಥವಾ 'ತ್ರಿಯಂಬಕಾಯ' ಮಂತ್ರವು.

**ತ್ರಿಯಂಬಕಾಯ, ಶರ್ವಾಯ, ಶಂಕರಾಯ, ಶಿವಾಯ ಚ ।**
**ಸರ್ವಲೋಕಪ್ರಧಾನಾಯ ಶಾಶ್ವತಾಯ ನಮೋ ನಮಃ ॥**

-ಈ ಮಂತ್ರವು. ಇನ್ನು ಮೂರ್ತಿಪರ ಮಂತ್ರಗಳು ಬರೆಯಲ್ಪಡುತ್ತೆ.

**ಕ್ಷಿತಿರ್ವೈ ಧಾರ್ಯತೇ ಲೋಕಾನ್ ಲೋಕಾಃ ಕ್ಷಿತಿಮಯಾಃ ಸ್ಮೃತಾಃ ।**
**ಸರ್ವಗಂ ಕ್ಷಿತಿರೂಪಂ ತೇ ಕ್ಷಿತಿಮೂರ್ತೇ ನಮೋಽಸ್ತುತೇ ॥ ೧ ॥**

**ಅಗ್ನಿ ರ್ವೈ ಧಾರ್ಯತೇ ಲೋಕಾನ್ ಲೋಕಾಃ ಅಗ್ನಿಮಯಾಃ ಸ್ಮೃತಾಃ ।**
**ಸರ್ವಗಂ ಅಗ್ನಿರೂಪಂ ತೇ ಅಗ್ನಿಮೂರ್ತೇ ನಮೋಽಸ್ತುತೇ ॥ ೨ ॥**

**ಯಜ್ಞೋ ಧಾರಯತೇ ಲೋಕಾನ್ಲೋಕಾಃ ಯಜ್ಞಮಯಾಃ ಸ್ಮೃತಾಃ ।**
**ಸರ್ವಗಂ ಯಜ್ಞರೂಪಂ ತೇ ಯಜ್ಞಮೂರ್ತೇ ನಮೋಽಸ್ತುತೇ ॥ ೩ ॥**

**ಸೂರ್ಯೋ ಧಾರಯತೇ ಲೋಕಾನ್ಲೋಕಾಃ ಸೂರ್ಯಮಯಾಃ ಸ್ಮೃತಾಃ ।**
**ಸರ್ವಗಂ ಸೂರ್ಯರೂಪಂ ತೇ ಸೂರ್ಯಮೂರ್ತೇ ನಮೋಽಸ್ತುತೇ ॥ ೪ ॥**

**ಜಲಂ ವೈ ಧಾರ್ಯತೇ ಲೋಕಾನ್ಲೋಕಾಃ ಜಲಮಯಾಃ ಸ್ಮೃತಾಃ ।**
**ಸರ್ವಗಂ ಜಲರೂಪಂ ತೇ ಜಲಮೂರ್ತೇ ನಮೋಽಸ್ತುತೇ ॥ ೫ ॥**

**ವಾಯುರ್ಧಾರಯತೇ ಲೋಕಾನ್ಲೋಕಾಃ ವಾಯುಮಯಾಃ ಸ್ಮೃತಾಃ ।**
**ಸರ್ವಗಂ ವಾಯುರೂಪಂ ತೇ ವಾಯುಮೂರ್ತೇ ನಮೋಽಸ್ತುತೇ ॥ ೬ ॥**

**ಸೋಮೋ ಧಾರಯತೇ ಲೋಕಾನ್ಲೋಕಾಃ ಸೋಮಮಯಾಃ ಸ್ಮೃತಾಃ ।**
**ಸರ್ವಗಂ ಸೋಮರೂಪಂ ತೇ ಸೋಮಮೂರ್ತೇ ನಮೋಽಸ್ತುತೇ ॥ ೭ ॥**

**ವ್ಯೋಮಃ ಧಾರಯತೇ ಲೋಕಾನ್ಲೋಕಾಃ ವ್ಯೋಮಮಯಾಃ ಸ್ಮೃತಾಃ ।**
**ಸರ್ವಗಂ ವ್ಯೋಮರೂಪಂ ತೇ ವ್ಯೋಮಮೂರ್ತೇ ನಮೋಽಸ್ತುತೇ ॥ ೮ ॥**

ಹೀಗೆ ನಾಲ್ಕು, ಆರು, ಎಂಟು (ಹನ್ನೆರಡು) ಮೂರ್ತಿಪರನ್ನು ವರಿಸುವುದು. ಸ್ಕಂದನಿಗೆ ವರಣೆಯಲ್ಲಿ ಮಂತ್ರವು-

**ವಾಸ್ತು ಸಂಗ್ರಹಮಾರಭ್ಯ ತೀರ್ಥಸ್ನಾನಾವಸಾನಿಕಂ ।**
**ಕ್ರಿಯತಾಂ ಸ್ಕಂದ ಯಾಗೋ ಮೇ ಪ್ರಾರ್ಥಯಾಮಿ, ಪ್ರಸೀದತ ॥**

ಹೀಗೆ ವರಿಸಲ್ಪಟ್ಟ ಮೂರ್ತಿಪರರಿಂದ ಕೂಡಿದ ಆಚಾರ್ಯನು ಭೂಪರಿಗ್ರಹ ಮೊದಲಾಗಿ ತೀರ್ಥಸ್ನಾನ (ಅವಭೃತ) ಪರ್ಯಂತವಾದ ಕರ್ಮಗಳನ್ನು ಮಾಡಬೇಕು.

* * * *

## ಭೂ ಪರೀಕ್ಷೆ, ಪರಿಗ್ರಹ

ಪವಿತ್ರ ಸರೋವರ, ತೀರ್ಥದ ಸಮೀಪ, ನದೀ ದಡ, ಸಮುದ್ರದ ಸಮೀಪ, ಹೊಳೆಯು ಸಮುದ್ರವನ್ನು ಸೇರುವ ಸಂಗಮ ಸ್ಥಾನಗಳು, ಬೆಟ್ಟದ ತುದಿ, ಬೆಟ್ಟದ ಪ್ರಾಂತ ಸಾನು ಪ್ರದೇಶ, ಹೂದೋಟದ ಪ್ರದೇಶ, ಸಿದ್ಧಿ ಪಡೆದು ಕೃತ ಕೃತ್ಯರೆನಿಸಿದವರ

ಆಶ್ರಯ ಸ್ಥಾನ, ಬ್ರಾಹ್ಮಣರು ವಾಸವಾಗಿರುವ (ಅಗ್ರಹಾರ) ಹಳ್ಳಿಗಳಲ್ಲಿ, ಬೇರೆ ಮನೋಹರವಾದ ಪ್ರದೇಶ, ಹೊಳೆಯ ದಡದ ದಕ್ಷಿಣ ಭಾಗದಲ್ಲಿ, ಭತ್ತಧಾನ್ಯ ಬೆಳೆಯುವ ಕ್ಷೇತ್ರಗಳಿಂದ ಕೂಡಿದ ಪಶ್ಚಿಮ ದಿಕ್ಕಿನಲ್ಲಿ, ಯಜ್ಞಕ್ಕೆ ಯೋಗ್ಯವಾದ ಪಲಾಶ ಖದಿರಾದಿಗಳಿಂದ, ರಸವತ್ತಾದ ಹಣ್ಣು ಹೂವುಗಳಿಂದ ಕೂಡಿದ ಮರಗಳನ್ನು ಹೊಂದಿ ಹೂದೋಟದ ಸೊಬಗನ್ನು ನೀಡುತ್ತಿರುವ 'ಭದ್ರಾ' ಎಂದು ಕರೆಯಲ್ಪಡುವ ಭೂಭಾಗವನ್ನು, ಅರಳಿ ಆಲದ ಮರ, ಬೇವು, ಸಂಪಿಗೆ, ಹೊನ್ನೆ ಮೊದಲಾದ ಮರಗಳಿಂದ ಕೂಡಿದ 'ಪೂರ್ಣಾ' ಎಂದು ಕರೆಯಲ್ಪಡುವ ಭೂಭಾಗವನ್ನಾಗಲೀ ಪರೀಕ್ಷಿಸಿ, ಆಚಾರ್ಯನು ದೇವತಾಪ್ರತಿಷ್ಠೆಗಾಗಿ ಭೂಮಿಯನ್ನು ಗೊತ್ತು ಪಡಿಸಬೇಕು. ಗ್ರಾಮ ಮೊದಲಾದ ಪ್ರದೇಶದಲ್ಲಿ ವಿಷ್ಣುವನ್ನು ಪೂರ್ವ ಹಾಗೂ ಪಶ್ಚಿಮದಲ್ಲಿ, ಶಿವನನ್ನು ಈಶಾನ್ಯ ದಿಕ್ಕಿನಲ್ಲಿ, ದುರ್ಗಿಯನ್ನು ವಾಯುವ್ಯ ದಿಕ್ಕಿನಲ್ಲಿ, ಗಣಪತಿ ಹಾಗೂ ಶಾಸ್ತಾರನನ್ನು ನೈಋತ್ಯದಲ್ಲಿಯೂ, ಶಂಕರನಾರಾಯಣ ಮಧ್ಯಭೂಪರಿಗ್ರಹಣವು, ಸ್ಕಂದನನ್ನು ವಾಯುವ್ಯದಲ್ಲಿಯೂ ಪ್ರತಿಷ್ಠಾಪಿಸಬೇಕು. ಈ ಪ್ರದೇಶಗಳು ಪ್ರಶಸ್ತವೆಂದು ತಿಳಿಯಬೇಕು.

ಈ ರೀತಿಯಾದ ಲಕ್ಷಣಗಳಿಂದ ಕೂಡಿದ ಭೂಮಿಯನ್ನು ಹೊಂದಿ ರಾತ್ರಿಯಲ್ಲಿ ಈಶಾನ್ಯ ದಿಕ್ಕಿನಲ್ಲಿ ಕುಳಿತುಕೊಂಡು, ಭೂತಶುದ್ಧ್ಯಾದಿ ಆತ್ಮಾರಾಧನ ಪರ್ಯಂತವಾಗಿ ಕರ್ಮವನ್ನು ಮಾಡಿ ಗುರು, ಗಣಪತಿಯರನ್ನು ಮಂಡಲದಲ್ಲಿ ಪೂಜಿಸಿ, ದೀಪವನ್ನೂ ಪೂಜಿಸಿ, ಸ್ವಸ್ತಿಕವನ್ನು ಬರೆದು ಗುದ್ದಲಿ ಮೊದಲಾದ ಸಾಧನಗಳನ್ನು ಅದರಲ್ಲಿರಿಸಿ ಅಸ್ತ್ರ ಮಂತ್ರದಿಂದ ಪೂಜಿಸಬೇಕು. ದೊಡ್ಡ ಸುತ್ತು ಗೋಡೆಯಿಂದ ಆವೃತ್ತವಾದ ಭೂಮಿಯನ್ನು ಸಿದ್ಧಗೊಳಿಸಿ–

**ದೇವತಾಭ್ಯಃ ಪಿತೃಭ್ಯೋಽಥ ಭೂತೇಭ್ಯಃ ಸಹ ಜಂಗಮೈಃ ।**
**ಏತತ್ಸ್ಥಾನನಿವಾಸಿಭ್ಯಃ ಪ್ರಯಚ್ಛಾಮಿ ಬಲಿಂ ನಮಃ ॥**

ಈ ಮಂತ್ರದಿಂದ ಮಧ್ಯದಲ್ಲಿ ಹಾಗೂ ಎಂಟು ದಿಕ್ಕುಗಳಲ್ಲಿ ಭೂತಕ್ರೂರ ಹವಿಸ್ಸಿನಿಂದ (ಅರಸಿನ, ಮೊಸರು, ಅರಳು ಹಿಟ್ಟು ಮಾಂಸಗಳಿಂದೊಡಗೂಡಿದ್ದು–ಭೂತಕ್ರೂರ ಹವಿಸ್ಸು) ಬಲಿಯನ್ನು ಕೊಡಬೇಕು.

(ದೇವತೆಗಳಿಗೂ ಪಿತೃಗಳಿಗೂ ಸಂಚರಿಸುವ ಭೂತಗಳಿಂದೊಡಗೂಡಿ ಈ ಭೂಮಿಯನ್ನಾಶ್ರಯಿಸಿ ವಾಸಿಸುವವುಗಳಿಗೆ ಬಲಿಯನ್ನು ಕೊಡುತ್ತೇನೆ. ಅವುಗಳಿಗೆಲ್ಲಾ ನಮಸ್ಕಾರವು)

ಪುನಃ ಆಚಮನ ಮಾಡಿ ಸಕಲೀಕರಣವನ್ನು (ಋಷಿಛಂದೋ ದೇವತಾಪೂರ್ವಕವಾಗಿ ಅಂಗನ್ಯಾಸ) ಮಾಡಿ, ಆತ್ಮರಕ್ಷಣೆಯನ್ನು ಮಾಡಿ ಬೊಗಸೆಗೈ (ಅಂಜಲಿ)ಯೊಂದಿಗೆ ಮೂರಾವರ್ತಿಯಲ್ಲಿ ವಿನಂತಿಸಿಕೊಳ್ಳಬೇಕು.

**ಭೂತಾನಿ ರಾಕ್ಷಸಾ ವಾಪಿ ಯೇಽತ್ರ ತಿಷ್ಠಂತಿ ಕೇಚನ ।**
**ತೇ ಸರ್ವೇ ವ್ಯಪಗಚ್ಛಂತು ಸ್ಥಾನಂ ಕುರ್ಯಾಮಹಂ ಹರೇಃ ॥**

(ಭೂತಗಳಾಗಲೀ ಯಾ ರಾಕ್ಷಸರಾಗಲೀ ಯಾರು ಇಲ್ಲಿ ವಾಸಿಸುತ್ತಿವೆಯೋ ಅವುಗಳೆಲ್ಲವೂ ಇಲ್ಲಿಂದ ಹೊರಟು ಹೋಗಲಿ. ಇಲ್ಲಿ ನಾನು ವಿಷ್ಣು ಪ್ರತಿಷ್ಠೆಗಾಗಿ ಸ್ಥಾನವನ್ನು ಕಲ್ಪಿಸುತ್ತಿದ್ದೇನೆ)

ಈ ಮಂತ್ರದಿಂದ ಭೂತ ಸಮೂಹವನ್ನು ದೂರ ಮಾಡಬೇಕು.

* * * *

**ಗುಹನಲ್ಲಿ ಪ್ರಾರ್ಥನಾ ಮಂತ್ರವು–**

**ಯೇ ವಸಂತಿ ವನೇ ತ್ವತ್ರ ಭೂತಾಃ ಪ್ರೇತಾಶ್ಚ ರಾಕ್ಷಸಾಃ ।**
**ಕೂಷ್ಮಾಂಡಾಶ್ಚ ಪಿಶಾಚಾಶ್ಚ ವೇತಾಲಾ ಬ್ರಹ್ಮರಾಕ್ಷಸಾಃ ॥**

**ನಿರ್ಗಚ್ಛಂತ್ವನ್ಯತಃ ಶೀಘ್ರಮಿತಃ ಕ್ರೂರಾಃ ಸುಖಂ ಪುನಃ ।**
**ಭವನಂ ಕುರ್ಮಹೇ ತತ್ರ ಗುಹಸ್ಯ ಪರಮಾತ್ಮನಃ ॥**

(ಈ ಕಾಡಿನಲ್ಲಿ ಯಾವ ಭೂತ, ಪ್ರೇತ, ರಾಕ್ಷಸರು, ಕೂಷ್ಮಾಂಡ ಪ್ರಮಥಗಣಗಳು, ಪಿಶಾಚಿಗಳು, ಬೇತಾಳಗಳು, ಬ್ರಹ್ಮರಾಕ್ಷಸರು ವಾಸಿಸುತ್ತವೆಯೋ ಕ್ರೂರಿಗಳಾದ ಅವುಗಳು ಇಲ್ಲಿಂದ ಸುಖವಾಗಿ ಕೂಡಲೇ ತಿರುಗಿ ಬೇರೆಡೆಗೆ ಹೊರಟು ಹೋಗಲಿ. ನಾವು ಇಲ್ಲಿ ಪರಮಾತ್ಮನಾದ ಸುಬ್ರಹ್ಮಣ್ಯನ ದೇಗುಲವನ್ನು ನಿರ್ಮಿಸುತ್ತೇವೆ.)

**ಶಾಸ್ತಾರನಲ್ಲಿ ಪ್ರಾರ್ಥನೆ–**

**ಯೇಽತ್ರಾಶುಭಕರಾಃ ಸಂತಿ ಭೂತವೇತಾಲರಾಕ್ಷಸಾಃ ।**
**ವ್ಯಪಗಚ್ಛಂತು ತೇ ಶಾಸ್ತು ಕುರ್ಮಹೇ ಭವನಂ ತ್ವಿಹ ॥**

ಇಲ್ಲಿ ಅಮಂಗಲಕರಗಳಾದ ಯಾವ ಭೂತ ವೇತಾಳ ರಾಕ್ಷಸರುಗಳು ವಾಸವಾಗಿರುವುವೋ ಅವುಗಳೆಲ್ಲವೂ ಇಲ್ಲಿಂದ ಹೊರಟುಹೋಗಲಿ. ಇಲ್ಲಿ ಶಾಸ್ತಾರನ ದೇಗುಲವನ್ನು ನಿರ್ಮಿಸುತ್ತೇವೆ.

**ದುರ್ಗಿಯಲ್ಲಿ ಪ್ರಾರ್ಥನಾ ಮಂತ್ರವು–**

**ದೇವದಾನವಗಂಧರ್ವಪಿಶಾಚಾ ವಾಽಪಿ ರಾಕ್ಷಸಾಃ ।**
**ನಾಗಾಃ ಸರ್ಪಾಸ್ತಥಾ ಕೀಟಾಃ ಯೇಽತ್ರ ತಿಷ್ಠಂತಿ ಜಂತವಃ ॥**

**ತೇ ಸರ್ವೇಽನ್ಯೇ ಚ ಜಾನಂತು ಪ್ರಯಾಂತ್ವಸ್ಮಾದ್ಯಥಾ ಸುಖಂ ।**
**ದೇವ್ಯರ್ಥಂ, ಪ್ರತಿಗೃಹ್ಣಾಮಿ ಸಾಸ್ಮಾಕಂ ಕ್ಷಮತಾಮಿತಿ ॥**

ದೇವತೆಗಳು, ದಾನವರು, ಗಂಧರ್ವರು, ಪಿಶಾಚಿಗಳು ಅಲ್ಲದೇ ರಾಕ್ಷಸರು, ನಾಗಗಳು, ವಾಸುಕಿಯ ಗಣಗಳಾದ ಸರ್ಪಗಳು, ಅಂತೆಯೇ ಇಲ್ಲಿ ವಾಸಿಸುವ ದೊಡ್ಡ ಜಾತಿಯ ಹುಳಗಳು, ಪ್ರಾಣಿಗಳು ಈ ಸ್ಥಳದಿಂದ ಮನಬಂದಂತೆ ಸಂತಸದಿಂದ ಬೇರೆಡೆಗೆ ಹೋಗಲಿ. ಬೇರೆ ಕ್ಷುದ್ರ ರೂಪಿಗಳು ಇದನ್ನು ತಿಳಿಯಲಿ. ಈ ಭೂಮಿಯನ್ನು ದೇವೀಭವನ ನಿರ್ಮಾಣಕ್ಕಾಗಿ ತೆಗೆದುಕೊಳ್ಳುತ್ತಿದ್ದೇವೆ. ಆ ದೇವಿಯು ನಮ್ಮನ್ನು (ಹಾಗೂ ನಿಮ್ಮನ್ನು) ಕ್ಷಮಿಸಲಿ.

ಭೂತಾನಿ ರಾಕ್ಷಸಾವಾಪಿ– ಈ ಪ್ರಾರ್ಥನಾ ಮಂತ್ರದಲ್ಲಿ ಯಾವ ಯಾವ ದೇವತೆಯ ನಿಮಿತ್ತವಾಗಿ ಭೂಮಿಯು ಪರಿಗ್ರಹಿಸಲ್ಪಡುವುದೋ ಆಯಾಯ ದೇವತೆಗೆ ಸಂಬಂಧಿಸಿದ ಪದಗಳನ್ನು ಸೇರಿಸಿ (ವ್ಯತ್ಯಾಸ ಮಾಡಿ) ಹೇಳಬೇಕು. 'ಸ್ಥಾನಂಕುರ್ಯಾಮಿ ಕಪರ್ದಿನಃ' (ಶಿವಾಲಯ ನಿರ್ಮಿಸಲು ಸ್ಥಳವನ್ನು ಪರಿಗ್ರಹಿಸುತ್ತೇನೆ) 'ಸ್ಥಾನಂಕುರ್ಯಾಮಿ ಹರೀಶಯೋಃ', 'ಸ್ಥಾನಂಕುರ್ಯಾಮಿ ಗಣೇಶಿತುಃ' ಹೀಗೆ ಕೊನೆಯ ಪಾದವನ್ನು ಬದಲಾಯಿಸಬೇಕು. ಸ್ಕಂದ, ಶಾಸ್ತಾರ, ದುರ್ಗಿಯರಲ್ಲಿ ಪ್ರಾರ್ಥನಾ ಮಂತ್ರಗಳು ಪ್ರತ್ಯೇಕವಾಗಿ ಯೇ ವಸಂತಿ ಮೊದಲಾದ ಶ್ಲೋಕ ಮಂತ್ರಗಳು ಹೇಳಲ್ಪಟ್ಟಿವೆ. ಭೂ ಪರಿಗ್ರಹ ಬುದ್ಧಿಯಿಂದ ಪ್ರದಕ್ಷಿಣಾಕಾರವಾಗಿ ಪರಿಧಿಯ ಸಮೀಪದಿಂದ ಒಮ್ಮೆ ಸುತ್ತು ತಿರುಗಿ ಬರಬೇಕು. ಭೂಪರಿಗ್ರಹ, ಕರ್ಷಣ ಖನನ, ಪ್ರಥಮೇಷ್ಟಕಾ ಸ್ಥಾಪನ, ಗರ್ಭಾದಾನ, ಪ್ರತಿಮಾ ದ್ರವ್ಯಸಂಗ್ರಹಾದಿ ಪ್ರತಿಯೊಂದನ್ನೂ ಸುಲಗ್ನದಲ್ಲಿ ಕೈಗೊಳ್ಳಬೇಕು.

## ಭೂಕರ್ಷಣಾದಿಕ್ರಿಯೆಗಳು

ಈ ರೀತಿಯಾಗಿ ಭೂಮಿಯನ್ನು ಪರಿಗ್ರಹಿಸಿ ಇನ್ನೊಂದು ಶುಭ ಮುಹೂರ್ತದಲ್ಲಿ ಸಕಲೀಕರಣ ಆತ್ಮಾರಾಧನಾದಿ ಕಾರ್ಯಗಳನ್ನು ನಿರ್ವಹಿಸಿ ಹೊನ್ನೆ ಮುಂತಾದ ಮರಗಳಿಂದ ಸಿದ್ಧಗೊಳಿಸಲ್ಪಟ್ಟ ನೇಗಿಲು, ನೊಗ, ಲಾಂಗಲಯಷ್ಟಿ ಮೊದಲಾದವುಗಳಿಂದ ದರ್ಭೆಯ ರಜ್ಜು (ಹಗ್ಗ)ವಿನಿಂದ ಕಟ್ಟಲ್ಪಟ್ಟ ಸರಿಸಮನಾದ ಎತ್ತುಗಳೆರಡರಿಂದ ಹಿಂಗಡೆಯಲ್ಲಿ ಪೂರ್ವಾಭಿಮುಖವಾಗಿ ನಿಂತು 'ಓಂ ನಮೋ ಭಗವತೇ ವಾಸುದೇವಾಯ' ಎಂದು ದ್ವಾದಶಾಕ್ಷರ (ಹನ್ನೆರಡಕ್ಷರ) ಮಂತ್ರದಿಂದ ವಿಷ್ಣುವಿನಲ್ಲಿ ಮೂರು ಅಥವಾ ಐದು ಆವರ್ತಿಯಲ್ಲಿ ನೆಲವನ್ನು ಉತ್ತು, ಹೆಸರು, ಎಳ್ಳು, ಸಾಸಿವೆ ಮೊದಲಾದ ಅಂಕುರಾರೋಪಣದಲ್ಲಿ ಹೇಳಿದ ಬೀಜಗಳನ್ನು ಮೂಲ ಮಂತ್ರೋಚ್ಛಾರಣ ಪೂರ್ವಕವಾಗಿ ಬಿತ್ತನೆ ಮಾಡಿ, 'ಜಿತಂ ತೇ ಪುಂಡರೀಕಾಕ್ಷ ನಮಸ್ತೆ ವಿಶ್ವ ಭಾವನ । ಸುಬ್ರಹ್ಮಣ್ಯ ನಮಸ್ತೇಽಸ್ತು ಮಹಾಪುರುಷ ಪೂರ್ವಜ ॥' ಈ ಮಂತ್ರದಿಂದ ನೀರನ್ನು ಸಿಂಪಡಿಸಬೇಕು. ಸುತ್ತಲೂ ಸುದರ್ಶನಾಸ್ತ್ರ (ಓಂ ಸಹಸ್ರಾರಹುಂಫಟ್) ಮಂತ್ರದಿಂದ ದಶದಿಗ್ಬಂಧನವನ್ನೂ ತಾಲತ್ರಯದಿಂದ ಸಂರಕ್ಷಣೆಯನ್ನು ಮಾಡಿ, ಬಿತ್ತಿದ ಬೀಜವು ಬೆಳೆದು ಫಲಿಸಿದಾಗ ಎರಡು ಭಾಗ ಮಾಡಿ ಹಸುವಿಗೂ, ಬ್ರಾಹ್ಮಣರಿಗೂ ವಿಭಾಗ ಮಾಡಿ ಕೊಟ್ಟು ಗೋನಿವಾಸವನ್ನು ಕಲ್ಪಿಸಿ ಭೂಮಿಯನ್ನು ಸಿದ್ಧಗೊಳಿಸಬೇಕು. ಈ ಕ್ರಮವು ವಿಷ್ಣುವಿನಲ್ಲಿ ಹೇಳಲ್ಪಟ್ಟಿದೆ.

ಶಿವನಲ್ಲಿ 'ಸದ್ಯೋಜಾತಂ ಪ್ರಪದ್ಯಾಮಿ'– ಮಂತ್ರದಿಂದ ಉಳುವುದನ್ನೂ, 'ವಾಮದೇವಾಯ ನಮೋ'– ಬೀಜ ಬಿತ್ತುವುದನ್ನೂ, 'ಅಘೋರೇಭ್ಯೋ'– ನೀರು ಸಿಂಪಡಿಸುವುದನ್ನೂ, 'ಈಶಾನಃ ಸರ್ವ ವಿದ್ಯಾನಾಂ'– ರಕ್ಷಣೆಯನ್ನೂ, 'ತತ್ಪುರುಷಾಯ ವಿದ್ಮಹೇ'– ದಾನವನ್ನೂ ಮಾಡಬೇಕು. ವಿಷ್ಣುವಿನ ಹೊರತಾಗಿ ಇತರ ದೇವತೆಗಳಲ್ಲಿ ಈ ಕರ್ಷಣಾದಿಕಾರ್ಯಗಳನ್ನು ಆಯಾಯ ದೇವತೆಯ ಮೂಲಮಂತ್ರದಿಂದಲೇ ಮಾಡಬೇಕು.

ಶಂಕರನಾರಾಯಣನಲ್ಲಿ ಪಂಚತತ್ತ್ವಗಳಿಂದ ಶಿವನಿಗೆ ಹೇಳಿದ ಕ್ರಮವನ್ನನುಸರಿಸಿ ಕರ್ಷಣ, ಬೀಜಾವಾಪನ ಮೊದಲಾದ ಐದು ಕ್ರಿಯೆಗಳನ್ನು ಮಾಡಬೇಕು. ಅಥವಾ ಐದು ಕ್ರಿಯೆಗಳನ್ನು ಮೂಲಮಂತ್ರದಿಂದಲೇ ಮಾಡಬಹುದು. ಅಥವಾ ಶಿವನಿಗೆ ಹೇಳಲ್ಪಟ್ಟ ಸದ್ಯೋಜಾತಾದಿ ಪಂಚ ಬ್ರಹ್ಮಮಂತ್ರಗಳಿಂದಲೂ ಕರ್ಷಣಾದಿಗಳನ್ನು ಮಾಡಬಹುದು.

ಎಲ್ಲಾ ದೇವತೆಗಳಲ್ಲಿಯೂ ಆ ಭೂಮಿಯನ್ನು ಒಂದು ಪುರುಷ ಪ್ರಮಾಣ ಆಳದ ಪರ್ಯಂತ ಖಾತ ಮಾಡಿ (ಅಗೆದು) ತೆಗೆದ ಭಾಗದ ಮಣ್ಣನ್ನು ಕಾಲಂಶ ತುಂಬಿಸಿ ಮಾರ್ಜನ ಲೇಪನಾದಿಗಳಿಂದ ಪರಿಶುದ್ಧವಾದ ಭೂಮಿಯಲ್ಲಿ ಈಶಾನ್ಯದಿಕ್ಕಿನಲ್ಲಿ ದಿಙ್ಗ್ಲೆಯಲ್ಲಿ ರಾತ್ರಿಯಲ್ಲಿ ವಾಸ್ತು ಪೂಜೆಯನ್ನು ಮಾಡಬೇಕು. ಬಲಿಯ ಪರ್ಯಂತವಾಗಿ ವಾಸ್ತು ಪೂಜೆಯನ್ನು ಮಾಡಿ, ಆ ಪರಿಧಿಯನ್ನು ವಾಸ್ತು ದೇವತೆಗಳು ಆಶ್ರಯಿಸಿರುವಂತೆ ಭಾವಿಸಬೇಕು.

## ವಾಸ್ತು ಪೂಜೆ

ಅಲ್ಲಿ ಮಂಡಲವನ್ನು ಬರೆದು ಪೂರ್ವಾಗ್ರವಾಗಿ ಅದರ ಮೇಲೆ ಉತ್ತರಾಗ್ರವಾಗಿ ಪ್ರತ್ಯೇಕವಾಗಿ ಹತ್ತು ರೇಖೆಗಳನ್ನು ಮಾಡಿ. ಒಂಭತ್ತು ಪುಟದ ಕ್ಷೇತ್ರದಲ್ಲಿ ಮಧ್ಯದ ಒಂಭತ್ತು ಪುಟದಿಂದ ಬ್ರಹ್ಮನ ಸ್ಥಾನವನ್ನು ಕಲ್ಪಿಸಬೇಕು. ಪೂರ್ವದ ಆರು ಪದಗಳು ಆರ್ಯಕನ ಪದವು. ಆಗ್ನೇಯ ಮೂಲೆಯ ನಾಲ್ಕು ಪುಟದಲ್ಲಿ ಉತ್ತರದ ಎರಡು ಪುಟಗಳು ಸಾವಿತ್ರನ ಪದವು. ದಕ್ಷಿಣದ ಎರಡು ಪುಟವು ಸವಿತೃಪದವು. ದಕ್ಷಿಣದಲ್ಲಿ ಆರು ಪದವು ವಿವಸ್ವಂತನ ಸ್ಥಾನವು. ನಿಋತಿ ಮೂಲೆಯ ನಾಲ್ಕು ಪುಟದಲ್ಲಿ ಪೂರ್ವದ ಎರಡು ಪದವು ಇಂದ್ರ ಜಯನ ಪದವು. ಪಶ್ಚಿಮದ ಎರಡು ಕೋಷ್ಠವು ಇಂದ್ರನ ಪದವು. ಪಶ್ಚಿಮ ದಿಕ್ಕಿನ ಆರು ಕೋಷ್ಠವು ಮಿತ್ರನ ಪದವು. ವಾಯು ಮೂಲೆಯ ನಾಲ್ಕು ಕೋಷ್ಠಗಳಲ್ಲಿ ದಕ್ಷಿಣದ ಎರಡು ಪದವು ರುದ್ರ ಜಯನ ಪದವು. ಉತ್ತರದ ಎರಡು ಪದಗಳು ರುದ್ರನ ಪದವು. ಉತ್ತರದ ಆರು ಕೋಷ್ಠವು ಮಹೀಧರನ ಪದವು. ಈಶಾನ್ಯ ಮೂಲೆಯ ನಾಲ್ಕು ಪದಗಳಲ್ಲಿ ಪಶ್ಚಿಮದ ಎರಡು ಪದವು ಆಪವತ್ಸನ ಪದವು.

### ಕೋಷ್ಟಕ ೧

| | | | | | | | | |
|---|---|---|---|---|---|---|---|---|
| ಈಶಾನಾಯ | ಪರ್ಜನ್ಯಃ | ಜಯಂತಃ | ಇಂದ್ರಃ | ಸೂರ್ಯ | ಸತ್ಯಃ | ಭೃಶಃ | ಅಂತರಿಕ್ಷಃ | ಅಗ್ನಿಃ |
| ಉದಿತಿಃ | ಆಪಃ | | ಆರ್ಯಕಃ | | | ಸಾವಿತ್ರಃ | ಸವಿತೃ | ಪೂಷಾ |
| ದಿತಿಃ | ಆಪವತ್ಸಃ | | | | | | | ವಿತಥಃ |
| ಅರ್ಗಲಃ | ಮಹೀಧರಃ | | ವಾಸ್ತುಪುರುಷಃ | | | ವಿವಸ್ವಾನ್ | | ಗೃಹಕ್ಷತಃ |
| ಸೋಮಃ | | | | | | | | ಯಮಃ |
| ಭಲ್ಲಾಟಃ | | | ಬ್ರಹ್ಮಾ | | | | | ಗಂಧರ್ವ |
| ಮುಖ್ಯಃ | ರುದ್ರಃ | ರುದ್ರಜಯಃ | ಮಿತ್ರಃ | | | ಇಂದ್ರಜಯಃ | | ಭೃಂಗರಾಜಃ |
| ನಾಗಃ | | | | | | ಇಂದ್ರಃ | | ಮೃಗಃ |
| ವಾಯುಃ | ರೋಗಃ | ಶೋಷಃ | ಅಸುರಃ | ವರುಣಃ | ಪುಷ್ಪದಂತಃ | ಸುಗ್ರೀವಃ | ದೌವಾರಿಕಃ | ಪಿತರಃ |

• ಇನ್ನೊಂದು ಬಗೆಯ ವಿಭಜನೆ






• ಚಿತ್ರ ೨.೧ ಅಪ್ಪಾಸ್ತ್ರಾಕಾರದ ಪರಮಶಾಯಿಕ ವಾಸ್ತುಪದಮಂಡಲ (೮೧ ಪದಗಳು)–೮



• **ಚಿತ್ರ ೨.೨ ವಾಸ್ತು ಮಂಡಲದಲ್ಲಿ ವಾಸ್ತು ಪುರುಷ ಮತ್ತು ಆತನ ಅಂಗಾಂಗಗಳು**



ಪೂರ್ವದ ಎರಡು ಕೋಷ್ಠವು ಆಪನಪದವೆಂದು ಕಲ್ಪಿಸಬೇಕು. ಅದರ ಹೊರಭಾಗದಲ್ಲಿ ಒಂದೊಂದು ಕೋಷ್ಠವನ್ನು ಒಂದೊಂದು ದೇವತೆಯ ಪದವೆಂದು ಕಲ್ಪಿಸಬೇಕು. ಅದರ ಹೊರಗೆ ಎಂಟು ದಿಕ್ಕುಗಳಲ್ಲಿ ಒಂದೊಂದು ಪದವನ್ನು ಕಲ್ಪಿಸಬೇಕು. ಪುನಃ ಎಲ್ಲೆಡೆಯಲ್ಲೂ ಬಣ್ಣದ ಪುಡಿಗಳಿಂದ ಚೆನ್ನಾಗಿ ಕಂಗೊಳಿಸುವಂತೆ ತುಂಬಿ ಅದರ ಮೇಲೆ ದರ್ಭೆಗಳನ್ನಿಡಬೇಕು. ಅಲ್ಲಿ ಕುಳಿತುಕೊಂಡು ಗುರುವಂದನೆ ಮೊದಲಾದವುಗಳನ್ನು ಮಾಡಿ, ಸಕಲೀಕರಣದೊಂದಿಗೆ ಶಂಖ ಪೂರಣವನ್ನು ಮಾಡಿ ಗಣಪತಿಯನ್ನು ಪೂಜಿಸಿ, ಪೀಠ ಪೂಜೆಯನ್ನು ಮಾಡಿ ವಾಸ್ತು ಪುರುಷನನ್ನು ಭಾವಿಸಿ (ಸಂಕಲ್ಪಿಸಿ) ಓಂ ವಾಂ ವಾಸ್ತು ಪುರುಷಾಯ ನಮಃ– ಭಗವನ್ನಾಗಚ್ಛಾಗಚ್ಛ– ಓಂ ಆವಾಹಯಾಮಿ– ಹೀಗೆ ಆವಾಹಿಸಿ, ಮುದ್ರೆಗಳನ್ನು ತೋರಿಸಿ, ವ್ಯಾಪನೆಯನ್ನು ಮಾಡಿ– ವಾಂ ಹೃದಯಾಯ– ವೀಂ ಶಿರಸೇ– ವೂಂ ಶಿಖಾಯೈ– ವೈಂ ಕವಚಾಯ– ವೌಂ ನೇತ್ರಾಭ್ಯಾಂ– ವಃ ಅಸ್ತ್ರಾಯ– ಹೀಗೆ ಅಂಗಗಳನ್ನು ಮಾಡಿ, ಉಪಹಾರಗಳನ್ನು ಕೊಟ್ಟು ಪೂಜಿಸಿ ಅರ್ಘ್ಯವನ್ನು ಕೊಟ್ಟು, ಪುಷ್ಪಾಂಜಲಿಯನ್ನು ಮಾಡಬೇಕು. ಓಂ ತತ್ಸನ್ನಮೋ ಬ್ರಹ್ಮಣೇ ತತ್ಸನ್ನಮಃ– ಇದು ಬ್ರಹ್ಮನ ಹನ್ನೆರಡು ಅಕ್ಷರದ ಮಂತ್ರವು. ಓಂ ನಮೋ ಬ್ರಹ್ಮಣೇ– ಇದು ಆರಕ್ಷರದ ಮಂತ್ರವು. ಓಂ ಹೃದಯಾಯ– ತತ್ಸಚ್ಛಿರಸೇ– ನಮಃ ಶಿಖಾಯೈ– ಬ್ರಹ್ಮಣೇ ಕವಚಾಯ– ತತ್ಸತ್‌ನೇತ್ರಾಭ್ಯಾಂ– ನಮಃ ಅಸ್ತ್ರಾಯ– ಇದು ದ್ವಾದಶಾಕ್ಷರ ಮಂತ್ರದ ಅಂಗಗಳು. ಓಂ ಹೃದಯಾಯ– ನಂ ಶಿರಸೇ– ಮೋಂ ಶಿಖಾಯೈ– ಬ್ರಂ ಕವಚಾಯ– ಹ್ಮಂ ನೇತ್ರಾಭ್ಯಾಂ– ಣೇಂ ಅಸ್ತ್ರಾಯ– ಹೀಗೆ ಷಡಕ್ಷರ ಮಂತ್ರದ ಅಂಗಗಳು. ಪುನಃ ದ್ವಾದಶಾಕ್ಷರದಿಂದಾಗಲೀ ಷಡಕ್ಷರದಿಂದಾಗಲೀ ಚಚ್ಚೌಕದ ವಾಸ್ತು ವಿಗ್ರಹದ ನಾಭಿಯಲ್ಲಿ ಬ್ರಹ್ಮನನ್ನು ಆವಾಹಿಸಿ, ಆವಾಹನಾದಿ ಮುದ್ರೆಗಳನ್ನು ತೋರಿಸಿ, ವ್ಯಾಪನೆಯನ್ನು ಮಾಡಿ ಲಿಪಿನ್ಯಾಸ ಮೊದಲಾದವುಗಳಿಂದ ಸಕಲೀಕರಣವನ್ನು ಮಾಡಿ ಪಂಚೋಪಚಾರಗಳನ್ನು ಸಮರ್ಪಿಸಿ, ಪ್ರಣವ, ಮೂಲಾಕ್ಷರಾಂಗನ್ಯಾಸದ ಕೊನೆಯಲ್ಲಿ ವಿಷ್ಣು ಮತ್ತು ದುರ್ಗಿಯರಲ್ಲಿ ಆರ್ಯಕ ಮೊದಲಾಗಿ ಪೂಜಿಸಬೇಕು.

(೧) ಆರ್ಯಕಾಯ ನಮಃ (೨) ಸಾವಿತ್ರಾಯ (೩) ಸವಿತ್ರೇ (೪) ವಿವಸ್ವತೇ (೫) ಇಂದ್ರಜಯಾಯ (೬) ಇಂದ್ರಾಯ (೭) ಮಿತ್ರಾಯ (೮) ರುದ್ರಜಯಾಯ (೯) ರುದ್ರಾಯ (೧೦) ಮಹೀಧರಾಯ (೧೧) ಆಪವತ್ಸಾಯ (೧೨) ಆಪಾಯನಮಃ ಹೀಗೆ ಪೂರ್ವ ದಿಕ್ಕಿನಿಂದ ಈಶಾನ್ಯ ಪರ್ಯಂತವಾಗಿ (ಪ್ರದಕ್ಷಿಣವಾಗಿ) ಆವಾಹಿಸಿ, ಪುನಃ (೧) ಈಶಾನಾಯ (೨) ಪರ್ಜನ್ಯಾಯ (೩) ಜಯಂತಾಯ (೪) ಇಂದ್ರಾಯ (೫) ಸೂರ್ಯಾಯ (೬) ಸತ್ಯಾಯ (೭) ಭೃಶಾಯ (೮) ಅಂತರಿಕ್ಷಾಯ (೯) ಅಗ್ನಯೇ (೧೦) ಪೂಷ್ಣೇ (೧೧) ವಿತಥಾಯ (೧೨) ಗೃಹಕ್ಷತಾಯ (೧೩) ಯಮಾಯ (೧೪) ಗಂಧರ್ವಾಯ (೧೫) ಭೃಂಗರಾಜಾಯ (೧೬) ಮೃಗಾಯ (೧೭) ಪಿತೃಭ್ಯಃ (೧೮) ದೌವಾರಿಕಾಯ (೧೯) ಸುಗ್ರೀವಾಯ (೨೦) ಪುಷ್ಪದಂತಾಯ (೨೧) ವರುಣಾಯ (೨೨) ಅಸುರಾಯ (೨೩) ಶೋಷಾಯ (೨೪) ರೋಗಾಯ (೨೫) ವಾಯವೇ (೨೬) ನಾಗಾಯ (೨೭) ಮುಖ್ಯಾಯ (೨೮) ಭಲ್ಲಾಟಾಯ (೨೯) ಸೋಮಾಯ (೩೦) ಅರ್ಗಲಾಯ (೩೧) ದಿತ್ಯೈ (೩೨) ಉದಿತ್ಯೈ– ಹೀಗೆ ಈಶಾನ್ಯದಿಂದಾರಂಭಿಸಿ ಒಂದೊಂದು ಪದದಲ್ಲಿ ಪೂಜಿಸಬೇಕು. ದುರ್ಗಿ ಮತ್ತು ವಿಷ್ಣುವಿನಲ್ಲಿ ಈ ಕ್ರಮವು. ಶಿವ, ಶಂಕರನಾರಾಯಣ, ಸುಬ್ರಹ್ಮಣ್ಯ, ಗಣಪತಿ, ಶಾಸ್ತಾರರಲ್ಲಿ ಈಶಾನಾಯ ನಮಃ ಮೊದಲಾಗಿ ಉದಿತ್ಯೈ ನಮಃ– ಪರ್ಯಂತವಾಗಿ ಆವಾಹಿಸಿ– ಅನಂತರ– ಆಪಾಯ। ಆಪವತ್ಸಾಯ। ಆರ್ಯಕಾಯ। ಸವಿತ್ರೇ। ಸಾವಿತ್ರಾಯ। ವಿವಸ್ವತೇ। ಇಂದ್ರಾಯ। ಇಂದ್ರ ಜಯಾಯ। ಮಿತ್ರಾಯ। ರುದ್ರಾಯ। ರುದ್ರಜಯಾಯ। ಮಹೀಧರಾಯ ॥ ೧೨ ॥ ಓಂ ನಮೋ ಬ್ರಹ್ಮಣೇ– ಹೀಗೆ ಕ್ರಮವು. ಪುನಃ ಎಲ್ಲಾ ದೇವತೆಗಳಲ್ಲಿಯೂ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ (೧) ಶರ್ವಸ್ಕಂದಾಯ (೨) ಅರ್ಯಮ್ಣೇ (೩) ಜಂಭಕಾಯ (೪) ಪಿಲಿಪಿಂಛಕಾಯ ॥ ಈಶಾನಾದಿವಿದಿಕ್ಕುಗಳಲ್ಲಿ (೫) ಚರಕ್ಯೈ (೬) ವಿದಾರ್ಯೈ (೭) ಪೂತನಾಯೈ (೮) ಪಾಪರಾಕ್ಷಸ್ಯೈ– ಹೀಗೆ ಆವಾಹನ ಮಾಡಿ ಹೊರ ಭಾಗದಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ (೧) ದೇವಗ್ರಹೇಭ್ಯಃ (೨) ಅಸುರಗ್ರಹೇಭ್ಯಃ (೩) ಗಂಧರ್ವಗ್ರಹೇಭ್ಯಃ (೪) ಯಕ್ಷಗ್ರಹೇಭ್ಯಃ (೫) ಪಿತೃಗ್ರಹೇಭ್ಯಃ (೬) ನಾಗಗ್ರಹೇಭ್ಯಃ (೭) ರಾಕ್ಷಸಗ್ರಹೇಭ್ಯಃ (೮) ಪಿಶಾಚ ಗ್ರಹೇಭ್ಯಃ– ಹೀಗೆ ಈ ದೇವತೆಗಳಿಂದ ಕೂಡಿದ ಬ್ರಹ್ಮನನ್ನು ಜಲಗಂಧಾದಿ ಷಡುಪಹಾರಗಳಿಂದ ಪೂಜಿಸಿ ಬ್ರಹ್ಮನಿಗೆ ನೈವೇದ್ಯವನ್ನು ಸಮರ್ಪಿಸಿ, ವಿಸರ್ಜನೆಯನ್ನು ಮಾಡಿ ಗಂಡೂಷ (ಬಾಯಿ ಮುಕ್ಕಳಿಸುವ ನೀರು)ವನ್ನು ಕೊಟ್ಟು ಸ್ವಲ್ಪ ಪೂಜಿಸಿ ಬಲಿದಾನವನ್ನು ಮಾಡಬೇಕು. ಹವಿಸ್ಸನ್ನು ಅಲ್ಲಿ ಇರಿಸಿ, ಸಂಸ್ಕಾರವನ್ನು ಮಾಡಿ ದರ್ಭೆ, ಹೂವು, ಅಕ್ಷತೆ, ನೀರುಗಳನ್ನು ಹವಿಸ್ಸಿನಲ್ಲಿ ಸೇರಿಸಿ ವಾಸ್ತು ಪುರುಷನಿಗೆ ಮತ್ತು ಬ್ರಹ್ಮನಿಗೆ ಮೂರಾವರ್ತಿ ಬಲಿಯನ್ನು ಕೊಟ್ಟು ಆರ್ಯಕಾದಿಗಳಿಗೆ ಅಥವಾ ಈಶಾನಾದಿಗಳಿಗೆ ಒಂದೊಂದಾವರ್ತಿ, ದೇವಗ್ರಹಾದಿಗಳಿಗೆ ಪಂಚಕ್ರೂರಸಹಿತವಾಗಿ (ಮಾಂಸ ಅರಸಿನ ಪುಡಿ, ಅರಳು ಮೊಸರು, ಅರಳು ಹಿಟ್ಟು) (ಪಲಲಂ ರಜನೀ ಚೂರ್ಣಂಸಲಾಜಂದಧಿಸಕ್ತುಕಂ । ಭೂತ ಕ್ರೂರ ಬಲಿಂದದ್ಯಾತ್ಪೂರ್ವಂಭೂತ ಪ್ರಹರ್ಷಣಂ) ಒಂದೊಂದಾವರ್ತಿ ಬಲಿಯನ್ನು ಕೊಡಬೇಕು. ಪುನಃ ಗಂಡೂಷ ಮೊದಲಾಗಿ ಕೊಟ್ಟು ಒಮ್ಮೊಮ್ಮೆ (ಒಂದೊಂದಾವರ್ತಿ) ನೀರನ್ನು ಕೊಟ್ಟು ಬ್ರಹ್ಮನಿಗೆ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ, ಆ ಸುತ್ತು ಗೋಡೆಯ (ಪರಿಧಿಯ) ಮಂಡಲವನ್ನು ವಾಸ್ತು ದೇವತೆಗಳಿಂದ ಆವಾಸಗೊಂಡಿರುವುದಾಗಿ ಭಾವಿಸಬೇಕು.

* * * *

# ನಿಧಿ ಕಲಶ ಸ್ಥಾಪನೆ

ಶುದ್ಧಗೊಳಿಸಲ್ಪಟ್ಟ ಕುಳಿಯಲ್ಲಿ ಇಡಲ್ಪಟ್ಟ ಆಧಾರಶಿಲೆಯ ಮಧ್ಯದ ಗರ್ತವನ್ನು ಪಂಚಗವ್ಯ ಮೊದಲಾದವುಗಳಿಂದ ಅಸ್ತ್ರಮಂತ್ರದಿಂದ ಶುದ್ಧೀಕರಿಸಿ, ಶೋಷಣಾದಿಗಳನ್ನು ಮಾಡಿ ಪ್ರಣವ ಹಾಗೂ ಶಕ್ತಿ ಬೀಜಗಳಿಂದ ಪೂಜಿಸಬೇಕು. ಧ್ರುವಾದ್ಯೌರ್ಧ್ರುವಾ- ಮಂತ್ರದಿಂದ ಆಧಾರ ಶಿಲೆಯನ್ನು ಮುಟ್ಟಿಕೊಂಡು ಜಪಿಸಿ, ಅದರ ಮಧ್ಯ ಕುಳಿಯಲ್ಲಿ ಸ್ವಸ್ತಿಕವನ್ನೋ, ಅಷ್ಟದಳ ಪದ್ಮವನ್ನೋ ಬರೆದು ಧಾನ್ಯ ಮೊದಲಾದವುಗಳಿಂದ ಪೀಠವನ್ನು ರಚಿಸಿ ತಾಮ್ರ ಯಾ ಶಿಲೆಯಿಂದ ಸಿದ್ಧಗೊಳಿಸಿದ ನಿಧಿಕಲಶವನ್ನು ಕುಂಭಸಂಸ್ಕಾರವನ್ನು ಮಾಡಿ ಕಲಶನ್ಯಾಯದಂತೆ ವಿಧಿಪೂರ್ವಕವಾಗಿ ರತ್ನ, ಚಿನ್ನ, ಬೆಳ್ಳಿ ಮೊದಲಾದವುಗಳಿಂದ ತುಂಬಿದ ಆ ಕಲಶವನ್ನು ಅಲುಗಾಡದಂತೆ ಮೂಲಮಂತ್ರವನ್ನು ಹೇಳುತ್ತಾ ಇರಿಸಿ, ಲಿಪಿ ಪಂಕಜದಿಂದ ಪೂಜಿಸಿ, ಹ್ರೀಂ ಬೀಜದಿಂದ ಭುವನೇಶ್ವರಿಯನ್ನು ಆವಾಹಿಸಿ ಪೂಜಿಸಿ, ಆಧಾರ ಶಕ್ತಿಯನ್ನು ಮುಂದೆ ಹೇಳುವ ಮಂತ್ರದಿಂದ ಪ್ರಾರ್ಥಿಸಬೇಕು–

**ತ್ವಮೇವ ಪರಮಾ ಶಕ್ತಿ ಸ್ತ್ವಮೇವಾಸನಧಾರಿಕಾ ।**
**ಸಂತೃಪ್ತಯಾ ತ್ವಯಾ ದೇವಿ ಸ್ಥಾತವ್ಯಮಿಹ ಸರ್ವದಾ ॥**

(ನೀನೇ ಹೆಚ್ಚಿನ ಶಕ್ತಿಯು ಈ ಆಸನ (ಪೀಠ)ವನ್ನು ಧರಿಸಿದವಳು. ಪೂಜಾದಿಗಳಿಂದ ಸಂತೃಪ್ತಿಗೊಂಡ ನಿನ್ನಿಂದ ದೇವಿಯೇ ಸದಾ ಕಾಲವೂ ಇಲ್ಲಿ ನೆಲಸಲ್ಪಡಬೇಕು)

ಹೀಗೆ ಪ್ರಾರ್ಥಿಸಿ ಆಧಾರ ಶಿಲೆಯ ದಕ್ಷಿಣಭಾಗದಲ್ಲಿ ಭತ್ತ ಮೊದಲಾದ ಧಾನ್ಯಗಳಿಂದ ಸಿದ್ಧಗೊಳಿಸಿದ ಪೀಠದಲ್ಲಿ ದರ್ಭೆ, ಮಣ್ಣು, ತೊಪ್ಪೆಗಳಿಂದ ತಿಕ್ಕಿ ತೊಳೆಯಲ್ಪಟ್ಟ ಶುದ್ಧಗೊಳಿಸಲ್ಪಟ್ಟ ಶಿಲಾಪದ್ಮ, ಶಿಲಾಕೂರ್ಮ, ರಜತಪದ್ಮ, ರಜತಕೂರ್ಮ, ಸ್ವರ್ಣಪದ್ಮ, ಸ್ವರ್ಣಕೂರ್ಮಗಳನ್ನು ಭೂತಸಂಹಾರ ಶೋಷಣದಾಹನಾದಿಗಳಿಂದ, ಭೂತಸೃಷ್ಟಿ, ಪ್ರಾಣಪ್ರತಿಷ್ಠೆ ಮುಂತಾದವುಗಳಿಂದ ಆತ್ಮಮಂತ್ರದಿಂದ (ಓಂ ಅಕೂಬಾರಾಯ ನಮಃ) ಪೂಜಿಸಿ, ಬಟ್ಟೆಯಿಂದ ಮುಚ್ಚಿ, ಅಧಿವಾಸನ (ಮೂರ್ತಿಸಂಸ್ಕಾರ) ವನ್ನು ಮಾಡಿ ನಿಧಿ ಕಲಶದ ಮೇಲೆ ಶಿಲಾಪದ್ಮವನ್ನಿರಿಸಿ ಲಿಪಿಪಂಕಜವನ್ನು ಪೂಜಿಸಿ, ಪದ್ಮದಲ್ಲಿ ಶಿಲಾಕೂರ್ಮವನ್ನು 'ಓಂ ಅಕೂಬಾರಾಯ ನಮಃ'– ಈ ಮಂತ್ರದಿಂದ ಇರಿಸಿ, ಈ ಮಂತ್ರದಿಂದಲೇ ಆವಾಹಿಸಿ, ಪ್ರಣವ (ಓಂಕಾರ)ದಿಂದ ಅಂಗವನ್ನು ಪೂಜಿಸಬೇಕು. ಅದರ ಮೇಲೆ ರಜತ ಪದ್ಮವನ್ನಿರಿಸಿ, ಲಿಪಿಪಂಕಜವನ್ನು ಪೂಜಿಸಿ, ರಜತ ಕೂರ್ಮವನ್ನು ಅದರ ಮೇಲಿರಿಸಿ ಅದೇ ಮಂತ್ರದಿಂದ ಪೂಜಿಸಿ, ಹಿಂದಿನಂತೆ ಚಿನ್ನದ ಕಮಲವನ್ನಿರಿಸಿ, ಲಿಪಿಪಂಕಜದಿಂದ ಪೂಜಿಸಿ, ಅದೇ ಮಂತ್ರದಿಂದ ಸ್ವರ್ಣ ಕೂರ್ಮವನ್ನಿರಿಸಿ, ಹಿಂದಿನಂತೆಯೇ ಪೂಜಿಸಿ–

**ನಮಸ್ತೇ ಕೂರ್ಮರೂಪಾಯ ವಿಷ್ಣವೇ ವಿಶ್ವಧಾರಿಣೇ ।**
**ಕರಿಷ್ಯಮಾಣಂ ಪ್ರಾಸಾದಂ ಇಹ ತ್ವಂ ಧರ್ತುಮರ್ಹಸಿ ॥**

(ವ್ಯಾಪಕನಾದ ಪ್ರಪಂಚವನ್ನು ಧರಿಸಿದ ಕೂರ್ಮ ರೂಪನಾದ ನಿನಗೆ ನಮಸ್ಕಾರವು. ಇಲ್ಲಿ ಸಿದ್ಧಗೊಳಿಸಲ್ಪಡುವ ದೇಗುಲವನ್ನು ಧರಿಸಲು ನೀನು ಸಮರ್ಥನಾಗಿದ್ದೀಯ)

–ಹೀಗೆ ಪ್ರಾರ್ಥನೆಯನ್ನು ಮಾಡಿ, ಹೀಗೆಯೇ ದಕ್ಷಿಣದ ಬಾಗಿಲಿನ ಪ್ರದೇಶದಲ್ಲಿ ಗಣಪತಿ, ದಕ್ಷಿಣಾಮೂರ್ತಿಗಳ ಪೂಜೆಯನ್ನು ಮಾಡಿ, ಕೂರ್ಮದ ಇದುರಿನಲ್ಲಿ ಸ್ವಸ್ತಿಕ ಯಾ ಪದ್ಮವನ್ನು ಬರೆದು, ಅಲ್ಲಿ ದೇವರನ್ನು ಸಾಕ್ಷಿಯಾಗಿ ಪೂಜಿಸಿ, ನೈವೇದ್ಯವನ್ನು ಮಾಡಿ, ಪೂಜಾಹೋಮವನ್ನು ಮಾಡಿ, ಕೂರ್ಮದ ಮೇಲ್ಭಾಗದಲ್ಲಿ ನಪುಂಸಕ ಶಿಲಾಪರ್ಯಂತವಾಗಿ ಯೋಗ ನಳಿಕೆಯನ್ನಿರಿಸಿ ಕುಳಿಯನ್ನು ಮಳಲು ಕಲ್ಲುಗಳಿಂದ ತುಂಬಿಸಿ, ನಮಸ್ತೇ ಕೂರ್ಮ–ಮೊದಲಾದವುಗಳಿಂದ ಪ್ರಾರ್ಥಿಸಿ, ಕುಟ್ಟಾಣಿಯಿಂದ ಹೊಡೆದು ಬಡಿದು ಸಮತಟ್ಟಾಗಿಸಿ, ಗಟ್ಟಿಮಾಡಬೇಕು. ಪುನಃ ಇನ್ನೊಂದು ರಾತ್ರಿಯ ಮುಹೂರ್ತದಲ್ಲಿ ದಕ್ಷಿಣ ದ್ವಾರ ಪ್ರದೇಶದ ಉತ್ತರದ ಭಾಗದಲ್ಲಿ ಇಷ್ಟಕಾಹೋಮ ಗರ್ಭನ್ಯಾಸ ಹೋಮಕ್ಕಾಗಿ ಉಲ್ಲೇಖನ ಮಾಡಿ ಅಗ್ನಿ ಪ್ರತಿಷ್ಠಾಪನೆಯನ್ನು ಮಾಡಿ, ಪರಿಧಿಸ್ಥಾಪನೆಗೆ ಮೊದಲಾಗಿ ಹೋಮಾಗ್ನಿಯ ದಕ್ಷಿಣ ದಿಗ್ಭಾಗದಲ್ಲಿ ಸಿದ್ಧಗೊಳಿಸಿದ ಪೀಠದಲ್ಲಿ ಪಂಚಗವ್ಯ, ಮೃಜ್ಜಲ, ಗೋಮೂತ್ರಾದಿಗಳಿಂದ ತೊಳೆಯಲ್ಪಟ್ಟ ಅಷ್ಟಗಂಧ ಲಿಪ್ತವಾದ ಅಸ್ತ್ರಮಂತ್ರೋಚ್ಚಾರಣಪೂರ್ವಕವಾಗಿ ಶುದ್ಧಗೊಳಿಸಲ್ಪಟ್ಟ ಎಂಟು ಇಟ್ಟಿಕೆಗಳನ್ನು ಶೋಷಣಾದಿಗಳಿಂದ ಶುದ್ಧ ಮಾಡಿ ಆಯಾಯ ದೇವತಾ ಸಂಬಂಧಿಯಾದ ಮೂಲಮಂತ್ರಗಳಿಂದ ಆವಾಹನೆ ಮಾಡಿ ಸಾಂಗವಾಗಿ ಪೂಜಿಸಿ, ಅದರ ದಕ್ಷಿಣದಲ್ಲಿ ರತ್ನ ಜಲಪೂರ್ಣವಾದ ಕಲಶ ಸ್ಥಾಪನೆಯನ್ನು ಮಾಡಿ, ಕ್ರಮದಂತೆ ಪರಿಧಿ ಸ್ಥಾಪನೆಯೇ ಮೊದಲಾಗಿ ಹೋಮತಂತ್ರವನ್ನು ಮಾಡಿ, ಶಿವ–ದುರ್ಗಾ–ಶಂಕರನಾರಾಯಣರಲ್ಲಿ ಪಕ್ಷಹೋಮಕ್ಕೆ ಮೊದಲಾಗಿ– ಓಂ ಸ್ವಾಹಾ– ನಂ ಸ್ವಾಹಾ– ಮೊದಲಾಗಿ ಮೂಲಾಕ್ಷರಗಳಿಂದ ಆಜ್ಯವನ್ನು ಹೋಮಿಸಬೇಕು. ಗಣಪತಿಯಲ್ಲಿ ಪಕ್ವದ ಕೊನೆಯಲ್ಲಿ ಓಂ ವಜ್ರದಂತಾಯ ಸ್ವಾಹಾ– ಮೊದಲಾದ ಹನ್ನೆರಡು ನಾಮಗಳಿಂದ ತುಪ್ಪವನ್ನು ಹೋಮಿಸಬೇಕು. ಶಂಕರನಾರಾಯಣನಲ್ಲಿ– ಪಕ್ವದ ಕೊನೆಯಲ್ಲಿ ಪಂಚತತ್ತ್ವಗಳಿಂದ ಹೋಮಿಸಬೇಕು. ವಿಷ್ಣುವಿನಲ್ಲಿ– ಮೂಲ ಮಂತ್ರಾಕ್ಷರಗಳಿಂದ, ಶಿವನಲ್ಲಿ ಪಂಚಬ್ರಹ್ಮ

ಮಂತ್ರಗಳಿಂದ ಆಜ್ಯವನ್ನು ಹೋಮಿಸಬೇಕು. [ಪುನಃ ವಿಷ್ಣುವಿನಲ್ಲಿ ದ್ರವ್ಯಾಹುತಿಗೆ ಮೊದಲು ಭೂರಾದಿವ್ಯಾಹೃತಿಗಳಿಂದ, ಇಂದ್ರಾದಿ ಲೋಕಪಾಲರಿಂದ (ಓಂ ಇಂದ್ರಾಯ ಸ್ವಾಹಾ– ಇತ್ಯಾದಿ)] ಪುನಃ ಅಗ್ನಯೇ ಸೋಮಾಯ, ಗ್ರಹೇಭ್ಯಃ, ನಕ್ಷತ್ರೇಭ್ಯಃ, ಭೂತೇಭ್ಯಃ, ನಾಗೇಭ್ಯಃ ಸರ್ವಾಭ್ಯೋದೇವತಾಭ್ಯಃ, ವಿಶ್ವೇಭ್ಯೋ ದೇವೇಭ್ಯಃ, ವಿಷ್ಣವೇ– ಹೀಗೆ ಹೋಮಿಸಿ, ವ್ಯಾಹೃತಿಗಳಿಂದ ತುಪ್ಪವನ್ನು ಹೋಮಿಸಬೇಕು. ಉಳಿದ ದೇವತೆಗಳಲ್ಲಿ ದ್ರವ್ಯಹೋಮಾ ನಂತರದಲ್ಲಿ ಈ ಆಹುತಿಗಳನ್ನು ಮಾಡಬೇಕು. ವಿಷ್ಣು ಪದಸ್ಥಾನದಲ್ಲಿ ಆಯಾಯ ದೇವತೆಗಳ ಮೂಲಮಂತ್ರದಿಂದ ಆಹುತಿಯು– ಹೀಗೆ ವಿಶೇಷವು. ಪುನಃ ದುರ್ಗಿಯ ಹೊರತಾಗಿ ಎಲ್ಲಾ ದೇವತೆಗಳಲ್ಲಿಯೂ ಗಾಯತ್ರೀ ಮಂತ್ರದಿಂದ ಸಮಿದಾಜ್ಯಚರ್ವಾಜ್ಯಾಹುತಿಗಳನ್ನು ನೂರೆಂಟರ ಸಂಖ್ಯೆಯಲ್ಲಿ ಹೋಮಿಸಬೇಕು. ದುರ್ಗಿಯಲ್ಲಿ ಮೂಲ ಮಂತ್ರದಿಂದ ನಾಲ್ಕು ದ್ರವ್ಯಗಳನ್ನು ಹೋಮಿಸಬೇಕು. ಸ್ಕಂದನಿಗೆ ಪಕ್ಷದ ಕೊನೆಯಲ್ಲಿ ಹನ್ನೆರಡು ನಾಮಗಳಿಂದ ಆಜ್ಯವನ್ನು ಹೋಮಿಸಿ, ಇಂದ್ರ ಮೊದಲಾದುವುಗಳಿಂದ ಭೂತಗಳಿಂದ ಮಹತ್ತುಗಳಿಂದ ಚಂದ್ರಸೂರ್ಯರಿಂದ, ಕಾಲನಿಂದ ವಹ್ನಿಯಿಂದ ಗ್ರಹಗಳಿಂದ ದಿಕ್ಕುಗಳಿಂದ ನಕ್ಷತ್ರಗಳಿಂದ– ನಾಮಮಂತ್ರದಿಂದ ಒಂದೊಂದಾಹುತಿಯನ್ನು ಹೋಮಿಸಬೇಕು. ಮೂಲಮಂತ್ರದಿಂದ ನಾಲ್ಕು ದ್ರವ್ಯ ಹೋಮವು. ಶಾಸ್ತಾರನಲ್ಲಿ–ಪಕ್ವಾನಂತರದಲ್ಲಿ ರೇವಂತ– ಮೊದಲಾದ ಆರು ಮಂತ್ರಗಳಿಂದ ತುಪ್ಪವನ್ನೂ, ಗಾಯಿತ್ರಿಯಿಂದ ದ್ರವ್ಯಚತುಷ್ಟಯವನ್ನು ಹೋಮಿಸಿ– ಗೋಪ್ತಾದಿ ಹನ್ನೆರಡು ನಾಮಗಳಿಂದ ಇಂದ್ರಾದಿಗಳಿಂದ, ನಕ್ಷತ್ರಪರ್ಯಂತವಾಗಿ, ಸ್ಕಂದನಿಗೆ ಹೇಳಿದುದರಿಂದಲೂ ತುಪ್ಪವನ್ನು ಹೋಮಿಸಬೇಕು. ಸ್ವಿಷ್ಟಕೃದ್ಹೋಮದ ಕೊನೆಯಲ್ಲಿ ಸಂಪಾತಾಜ್ಯವನ್ನು ಇಟ್ಟಿಕೆಗಳಲ್ಲಿ ಹಾಗೂ ಕಲಶದಲ್ಲಿ ಸಮರ್ಪಿಸಿ ಸಂರಕ್ಷಿಸಬೇಕು. ಒಳ್ಳೆಯ ಮುಹೂರ್ತದಲ್ಲಿ ಆಲಯದ ದಕ್ಷಿಣದ ಬಾಗಿಲಿನ ಕೆಳಭಾಗದಲ್ಲಿ ಇಟ್ಟಿಗೆಯ ಸ್ಥಳವನ್ನು ಸಿದ್ಧಗೊಳಿಸಿ, ಚಚ್ಚೌಕದ ಸ್ಥಳದಲ್ಲಿ ಅಗ್ನಿವಾಯು ಪದಗಳಲ್ಲಿ ಪೂರ್ವದಲ್ಲಿ ಮುಂಭಾಗದಲ್ಲಿ (ತುದಿ) ಉಳಿದವುಗಳಲ್ಲಿ ಉತ್ತರಕ್ಕೆ ತುದಿಯುಳ್ಳ ಎರಡು ಗೆರೆಗಳನ್ನು ಓಂಕಾರದಿಂದ ಬರೆಯಬೇಕು. ಶಿವನಲ್ಲಿ ಈ ರೇಖೆಯನ್ನು ಅಸ್ತ್ರ ಮಂತ್ರೋಚ್ಚಾರಣೆಯಿಂದಲೂ ಬರೆಯಬಹುದು. ಅಲ್ಲಿ ಇಟ್ಟಿಗೆಗಳು ಹನ್ನೆರಡು ಅಂಗುಲ ಉದ್ದ, ಎಂಟು ಅಂಗುಲ ಅಗಲ, ನಾಲ್ಕು ಅಂಗುಲ ಎತ್ತರ. ಹೀಗಿರುವಾಗ ನಡುವೆ (ಮಧ್ಯ) ನಾಲ್ಕು ಅಂಗುಲ ಸಮನಾದ ಗರ್ಭಪಾತ್ರವಿಡುವ ಗುಳಿಯು ಉಂಟಾಗುತ್ತದೆ. ಅಲ್ಲಿ ಕವಚ ಮಂತ್ರದಿಂದ ನೀರನ್ನು ಚಿಮುಕಿಸಿ, ಪೀಠಪೂಜೆಯನ್ನು ಮಾಡಿ ಕೊನೆಯಲ್ಲಿ ನಿಂತವನಾಗಿ ಬೊಗಸೆಗೈಯುಳ್ಳವನಾಗಿ ದೇವರನ್ನು ಸ್ಮರಿಸುತ್ತಾ ಈಶ್ವರನಲ್ಲಿ ಹನ್ನೊಂದು ಆವರ್ತಿಯಲ್ಲಿ, ಬೇರೆ ದೇವತೆಗಳಲ್ಲಿ ಎಂಟು ಆವರ್ತಿ ಮೂಲ ಮಂತ್ರವನ್ನು ಜಪಿಸಿ, ಅಗ್ನಿಚೈತನ್ಯ (ಪ್ರಕೃತಿ) ಯನ್ನು ಇಟ್ಟಿಗೆಗಳಲ್ಲಿ ಉದ್ವಾಸನೆಯನ್ನು ಮಾಡಿ ಸದ್ಯೋಜಾತ ಎಂಟು ಕಲೆಗಳಿಂದ ಆಗ್ನೇಯದಿಂದಾರಂಭಿಸಿ, ಈಶಾನ ಪರ್ಯಂತವಾಗಿ ಎಂಟು ಇಟ್ಟಿಗೆಗಳನ್ನು ಇರಿಸಬೇಕು. ವಿಷ್ಣು, ಶಂಕರನಾರಾಯಣರಲ್ಲಿ ಮೂಲಮಂತ್ರದ ಅಕ್ಷರಗಳಿಂದಲೂ, ಉಳಿದ ದೇವತೆಗಳಲ್ಲಿ ಮೂಲಮಂತ್ರದಿಂದಲೂ ಇಡಬೇಕು. ಮೂಲಮಂತ್ರದಿಂದ ದೇವತೆಗಳನ್ನು ಆವಾಹಿಸಿ ಅಂಗ ಸಹಿತವಾಗಿ ಪೂಜಿಸಿ, ಮಣ್ಣಿನಿಂದ ಸಂದುಗಳನ್ನು ಮುಚ್ಚಿ ಕಲಶದ ನೀರಿನಿಂದ ಗರ್ಭಗುಳಿಯನ್ನು ತುಂಬಿಸಬೇಕು. ಓಂ ಎಂದು ಜಪಿಸಿ ಅಕ್ಷತೆ, ಹೂವನ್ನು ಅಲ್ಲಿ ಹಾಕಿ ನೀರಿನ ಸುಳಿಯನ್ನು ನೋಡಬೇಕು. ಎಡಸುಳಿಯಾದ ಸಂದರ್ಭ ಅಸ್ತ್ರಮಂತ್ರದಿಂದ ಆಜ್ಯವನ್ನು ಹೋಮಿಸಿ, ಆ ಸಂಪಾತವನ್ನು ಅಲ್ಲಿ ಸಮರ್ಪಿಸಬೇಕು. ದೇವರನ್ನು ಪೂಜಿಸಿ ಅಸ್ತ್ರ ಮಂತ್ರದಿಂದ ರಕ್ಷಣೆಯನ್ನು ಮಾಡಿ ಬೇರೆ ನಾಲ್ಕು ಇಟ್ಟಿಗೆಗಳನ್ನಿಟ್ಟು ಧಾನ್ಯ, ಮಣ್ಣುಗಳಿಂದ ಕುಳಿಯನ್ನು ತುಂಬಬೇಕು.

* * * *

## ಗರ್ಭನ್ಯಾಸ

ಪುನಃ ಮಂಗಳಕರವಾದ ರಾತ್ರಿಯಲ್ಲಿ ವಾಸ್ತು ಪೂಜಾ ಬಲಿಗಳನ್ನು ಮಾಡಿ, ಗರ್ಭಾಧಾನದ ಸಾಮಗ್ರಿಗಳನ್ನು ಸಂಗ್ರಹಿಸಿ ಅಗ್ನಿಪ್ರತಿಷ್ಠಾಪನೆಯನ್ನು ಪರಿಧಿ ಸ್ಥಾಪನ ಪರ್ಯಂತವಾಗಿ ಮಾಡಬೇಕು. ಅಗ್ನಿಯ ದಕ್ಷಿಣ ದಿಗ್ಭಾಗದಲ್ಲಿ ಸಿದ್ಧಗೊಳಿಸಿದ ಬತ್ತ ಮೊದಲಾದ ಧಾನ್ಯಗಳಿಂದ ಸಿದ್ಧಗೊಳಿಸಿದ ಪೀಠದಲ್ಲಿ ಮುಚ್ಚಳದಿಂದ ಕೂಡಿದ ತಾಮ್ರದ ಪಂಚಗವ್ಯಾದಿಗಳಿಂದ ಶುದ್ಧಿಗೊಳಿಸಲ್ಪಟ್ಟ ಸಂಸ್ಕೃತವಾದ ಗರ್ಭಪಾತ್ರೆಯನ್ನು ಕೆಳಮುಖವಾಗಿರಿಸಿ, ಪೀಠ ಪೂಜಾದಿ ಕುಂಭಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟ ಗರ್ಭಪಾತ್ರೆಯನ್ನು ಮೇಲ್ಮುಖವಾಗಿಸಿ, ಚಿನ್ನದ ಪವಿತ್ರವನ್ನು ಧರಿಸಿದ ಕೈಯಿಂದ ಸುತ್ತಲೂ ಸಮುದ್ರದ ಮರಳಿನಿಂದ ಆವರಣ (ಬೇಲಿ) ಮಾಡಬೇಕು. ಗರ್ಭಪಾತ್ರೆಯಲ್ಲಿ ಒಳಗಿನಿಂದ ಪಶ್ಚಿಮಾದಿ ಪೂರ್ವಾಂತವಾಗಿ, ದಕ್ಷಿಣಾದಿ ಉತ್ತರಾಂತವಾಗಿ ಎರಡೆರಡು ರೇಖೆಗಳನ್ನು ಸಮುದ್ರದ ಮಣ್ಣಿನಿಂದಲೇ ಬರೆದು, ಒಂಭತ್ತು ಖಂಡಗಳನ್ನಾಗಿ ಮಾಡಿ ಲಿಪಿಪಂಕಜವನ್ನು ಪೂಜಿಸಿ ಆ ದೇವತೆಗೆ ಹೇಳಿದ ದ್ರವ್ಯಗಳನ್ನು ಆಯಾಯ ಕ್ರಮದಿಂದ ಆಯಾಯಾ ಮಂತ್ರಗಳಿಂದ ಇಡಬೇಕು. ಎಲ್ಲಾ ದೇವತೆಗಳಲ್ಲಿ ಮಣ್ಣು ಮೂಲಗಳು ಧಾತುಗಳು ರತ್ನಬೀಜ ಲೋಹ ವಾಹನ ಕ್ರಮಗಳಿಂದ ನ್ಯಾಸವು. ಸ್ಕಂದನಲ್ಲಿ ವಾಹನ ರತ್ನಲೋಹ ಧಾತು ಬೀಜ ಮೃತ್ ಮೂಲ– ಈ ಕ್ರಮದಲ್ಲಿ ನ್ಯಾಸವು. ಶಾಸ್ತಾರನಲ್ಲಿ ಸ್ಕಂದನಿಗೆ ಹೇಳಿದ ಕ್ರಮವನ್ನು ಬೇಕಾದರೂ (ವಿಕಲ್ಪ) ಅನುಸರಿಸಬಹುದು. ಸ್ಕಂದನ ಹೊರತಾದ ದೇವತೆಗಳಲ್ಲಿ– ಬೆಟ್ಟ, ತೀರ್ಥ, ಹೊಳೆ, ಮಡು ಎಡಿಯ, ಗುಹೆ, ಹುತ್ತ, ಭೂಖಿಲ (ಉಸುಗು ಪ್ರದೇಶ) ಗಜದ ಕೊಂಬಿನದು, ಎತ್ತಿನ ಕೊಂಬಿಗೆ ಹಿಡಿದುದು– ಈ ಮಣ್ಣುಗಳನ್ನು ಕ್ರಮವಾಗಿ ಪೂರ್ವಾದಿ ದಿಕ್ಕುಗಳಲ್ಲಿ, ಆಗ್ನೇಯಾದಿ ವಿದಿಕ್ಕುಗಳಲ್ಲಿಯೂ ಮಧ್ಯದಲ್ಲಿಯೂ ಇಡಬೇಕು. ದಿಕ್ಕುಗಳಲ್ಲಿ ತಾವರೆ, ನೀಲಿಕೋಳೆ, ಕಿರುಕೋಳೆ, ಕೆಂಪುಕೋಳೆಗಳ ಗಡ್ಡೆಗಳನ್ನು

ಇಡಬೇಕು. ಸ್ಕಂದನ ಹೊರತಾಗಿ ಬೇರೆ ದೇವತೆಗಳಲ್ಲಿ ಪೂರ್ವದಿಂದಾರಂಭಿಸಿ ಈಶಾನಪರ್ಯಂತವಾಗಿ ಮನಃಶಿಲಾ ಹರಿತಾಳ, ಅಂಜನ, ಶ್ಯಾಮ, ಸೀಸ, ಸೌರಾಷ್ಟ್ರಿ ಗೋರೋಚನ, ಗೈರಿಕವನ್ನೂ ಮಧ್ಯದಲ್ಲಿ ಪಾದರಸವನ್ನೂ ಇಡಬೇಕು. ಸ್ಕಂದನ ಹೊರತಾಗಿ ಆರು ದೇವತೆಗಳಲ್ಲಿ ಪೂರ್ವದಿಂದ ಈಶಾನ್ಯ ಪರ್ಯಂತವಾಗಿ ಮತ್ತು ಮಧ್ಯದಲ್ಲಿ ಕ್ರಮವಾಗಿ ವಜ್ರ, ಮುತ್ತು, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗಗಳನ್ನು ಇಡಬೇಕು. ಹಾಗೆಯೇ ಶಂಕರನಾರಾಯಣ, ಶಾಸ್ತಾರ, ದುರ್ಗಾ, ವಿಷ್ಣುವಿನಲ್ಲಿ– ಭತ್ತ, ನವಣೆ, ಕಂಕು, ಉದ್ದು, ಹುರುಳಿ, ನಿಷ್ಪಾವ, ತಿಲ, ಮುದ್ಗ, ಸಾಸಿವೆಗಳನ್ನು ನ್ಯಾಸ ಮಾಡಬೇಕು. ವಿಷ್ಣುವಿನಲ್ಲಿ ದಿಕ್ಕುಗಳಲ್ಲಿ ಚಿನ್ನ, ಬೆಳ್ಳಿ, ಕಬ್ಬಿಣ, ತವರಗಳನ್ನಿರಿಸಿ, ವಿದಿಕ್ಕುಗಳಲ್ಲಿ ಚಿನ್ನದಿಂದ ಸಿದ್ಧಗೊಳಿಸಿದ ಗರುಡ, ಕೂರ್ಮ, ಶಂಖ, ಚಕ್ರಗಳನ್ನು ಮಧ್ಯದಲ್ಲಿ ಚಿನ್ನದ ಬಿಲ್ಲು, ಗದೆ, ಪದ್ಮಗಳನ್ನಿರಿಸಬೇಕು. ದುರ್ಗಿಯಲ್ಲಿ ಚಿನ್ನ ಮೊದಲಾದುವುಗಳನ್ನು ವಿಷ್ಣುವಿನಲ್ಲಿ ಹೇಳಿದಂತೆ ನ್ಯಾಸ ಮಾಡಿ ಗರುಡ ಸ್ಥಾನದಲ್ಲಿ ಸಿಂಹವನ್ನಿರಿಸಬೇಕು– ಎನ್ನುವುದು ವಿಶೇಷವು. ಶಾಸ್ತ್ಯ ಶಂಕರನಾರಾಯಣರಲ್ಲಿ ದಿಕ್ಕುಗಳಲ್ಲಿ ಚಿನ್ನ, ಬೆಳ್ಳಿ, ಕಬ್ಬಿಣ, ತವರಗಳನ್ನಿರಿಸಿ, ವಿದಿಕ್ಕುಗಳಲ್ಲಿ ಶೂಲ, ಕುಠಾರ, ಶಂಖ, ಚಕ್ರಗಳನ್ನಿಡಬೇಕು. ಶಂಕರನಾರಾಯಣನಲ್ಲಿ ನಡುವಿನಲ್ಲಿ ಚಿನ್ನದಿಂದ ಸಿದ್ಧಗೊಳಿಸಿದ ಖಟ್ವಾಂಗ, ಅರ್ಧಚಂದ್ರ, ವೃಷಭ, ಗರುಡ, ಕೂರ್ಮ, ಅಕ್ಷಮಾಲೆ, ಗದೆ, ಪದ್ಮ, ಬಿಲ್ಲುಗಳನ್ನು ಇಡಬೇಕು. ಶಾಸ್ತಾರನಲ್ಲಿ ಮಧ್ಯದಲ್ಲಿ ತೋಮರ, ಶರ, ಪದ್ಮಗಳನ್ನಿರಿಸಬೇಕು. ಶಿವನಲ್ಲಿ ಬೀಜನ್ಯಾಸಕ್ಕೆ ಮೊದಲು ಎಲ್ಲ ನ್ಯಾಸವನ್ನು ಮಾಡಿ, ಬೀಜನ್ಯಾಸದಲ್ಲಿ ಶಾಲಿ, ನೀವಾರ, ಶ್ಯಾಮಾಕ, ಕುಂಕು, ಮಾಷ ಕುಲಿತ್ಥ ನಿಷ್ಪಾವ ತಿಲ ಮುದ್ಗ ಬೀಜಗಳನ್ನು ಇಡಬೇಕು. ಲೋಹನ್ಯಾಸದಲ್ಲಿ ಪೂರ್ವದಿಂದ ಈಶಾನ್ಯಪರ್ಯಂತವಾಗಿ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ತವರ, ಕೂರ್ಮ, ಪದ್ಮಶೂಲಗಳನ್ನೂ ಮಧ್ಯದಲ್ಲಿ ಚಿನ್ನದಿಂದ ತಯಾರಿಸಿದ ಖಟ್ವಾಂಗ, ಅರ್ಧಚಂದ್ರ, ವೃಷಭ, ಬಿಲ್ಲು ಕುಠಾರಗಳನ್ನಿರಿಸಬೇಕು. ಗಣಪತಿಯಲ್ಲಿ ಶಿವನಂತೆ ಬೀಜಗಳನ್ನು, ಲೋಹಗಳನ್ನು ನ್ಯಾಸ ಮಾಡಿ, ಚಿನ್ನದಿಂದ ಸಿದ್ಧಗೊಳಿಸಿದ ಮೂಷಿಕ, ಸ್ವದಂತ, ಪದ್ಮ, ಅಂಕುಶಗಳನ್ನು ದಿಕ್ಕುಗಳಲ್ಲಿರಿಸಿ, ಮಧ್ಯದಲ್ಲಿ ಚಿನ್ನದ ಆನೆಯನ್ನಿರಿಸಬೇಕು. ಗುಹನಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಚಿನ್ನದಿಂದ ತಯಾರಿಸಿದ ಮಯೂರ (ನವಿಲು) ಹಕ್ಕಿ, ಕುಕ್ಕುಟ (ಕೋಳಿ) ವಜ್ರ (ಆಯುಧ)ಗಳನ್ನು ಮಧ್ಯದಲ್ಲಿ ಆನೆಯನ್ನು ಇಡಬೇಕು. ಆಮೇಲೆ ಮಧ್ಯದಿಂದ ಈಶಾನಪರ್ಯಂತವಾಗಿ ಪದ್ಮರಾಗ, ವಜ್ರಮೌಕ್ತಿಕ, ವೈಡೂರ್ಯ, ಸ್ಫಟಿಕ, ಶಂಖ, ನೀಲ, ಪುಷ್ಯರಾಗ, ಪ್ರವಾಲ (ಹವಳ)ಗಳನ್ನು ಇಡಬೇಕು. ಅದರ ಹೊರಭಾಗದಲ್ಲಿ ಪೂರ್ವ ಮೊದಲಾಗಿ ಎಂಟುದಿಕ್ಕುಗಳಲ್ಲಿ ಸುವರ್ಣ, ರಜತ, ತಾಮ್ರ, ಆಯಃ (ಕಬ್ಬಿಣ) ತ್ರಪು ನಾಗ ಪಿತ್ತಲ, ಕಾಂಸ್ಯಗಳನ್ನೂ ಒಳಗೆ ಎಂಟು ಲೋಹಗಳನ್ನಿರಿಸಬೇಕು. ಅದರ ಹೊರಭಾಗದಲ್ಲಿ ಮಧ್ಯದಿಂದ ಈಶಾನ್ಯ ಪರ್ಯಂತವಾಗಿ ಪಾದರಸ, ಮನಃಶಿಲಾ, ಹರಿತಾಳ, ಅಂಜನ ಮಾಕ್ಷಿಕ (ಜೇನು) ಶ್ಯಾಮ, ಸೌರಾಷ್ಟ್ರಿ, ರಾಜಾವರ್ತಗೈರಿಕ– ಹೀಗೆ ನ್ಯಾಸ ಮಾಡಬೇಕು. ಅದರ ಹೊರಭಾಗದಲ್ಲಿ ಮಧ್ಯದಿಂದ ಈಶಾನ್ಯ ಪರ್ಯಂತವಾಗಿ ಸಾಸಿವೆ, ಶಾಲಿ, ಯವ, ಗೋಧೂಮ, ತಿಲ, ಮಾಷಿ, ಪ್ರಿಯಂಗು, ಮುದ್ಗ, ನೀವಾರ– ಇವುಗಳನ್ನು ಇಡಬೇಕು. ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಸಮುದ್ರ, ಬೆಟ್ಟ, ನದಿ, ತೀರ್ಥ, ಹ್ರದ, ಕೇದಾರ, ದಂತಿ, ಭೂಖಿಲ– ಇಲ್ಲಿಯ ಮಣ್ಣುಗಳನ್ನು, ಮಧ್ಯದಲ್ಲಿ ಇವೆಲ್ಲವೂ ಒಟ್ಟಿಗೆ ಸೇರಿದ ಮಣ್ಣುಗಳನ್ನಿಡಬೇಕು. ನೀಲಿ, ಕೋಳೆ, ಕೆಂಪು ಕೋಳೆ, ತಾವರೆ, ಕಿರುಕೋಳೆಗಳ ಗಡ್ಡೆಗಳನ್ನು ದಿಕ್ಕುಗಳಲ್ಲಿಯೂ, ಮಧ್ಯದಲ್ಲಿ ಎಲ್ಲಾ ಗಡ್ಡೆಗಳನ್ನು ಇಡಬೇಕು. ಆಮೇಲೆ ಗುಹನಲ್ಲಿ ಇವೆಲ್ಲವನ್ನೂ ಅಸ್ತ್ರದಿಂದ ಪ್ರೋಕ್ಷಣೆ ಮಾಡಿ, ಕವಚದಿಂದ ಅವಗುಂಠನ (ಮುಖಪರದೆ) ಮಾಡಿ, ಆ ದ್ರವ್ಯ ಸಮೂಹವನ್ನು ಧೇನು ಮುದ್ರೆಯಿಂದ ಅಮೃತಮಯವಾಗಿಸಬೇಕು. ಶಿವಾದಿ ಎಲ್ಲಾ ದೇವತೆಗಳಲ್ಲೂ ಇದು ಸರಿಸಮನಾದುದೆಂದು ಸಂಪ್ರದಾಯವು. ಶಿವ ಹಾಗೂ ವಿಷ್ಣುವಿನಲ್ಲಿ ಸ್ವ ಸ್ವ (ತಮ್ಮ) ಗಾಯತ್ರಿಯಿಂದ ದ್ರವ್ಯಗಳನ್ನು ನ್ಯಾಸ ಮಾಡಬೇಕು. ಉಳಿದ ದೇವತೆಗಳಲಿ ಮೂಲಾಕ್ಷರಗಳಿಂದ ಮತ್ತು ಮೂಲಗಳಿಂದಲೂ, ಗಣೇಶ ಮತ್ತು ಗುಹರಲ್ಲಿ ಮೂಲಮಂತ್ರದಿಂದಲೇ ಇಡಬೇಕು. ಶಿವನಲ್ಲಿ ವ್ಯೋಮವ್ಯಾಪಿ ದಶಾಕ್ಷರ ಮಂತ್ರದ ಒಂಭತ್ತು ಅಕ್ಷರಗಳಿಂದ ಮಣ್ಣುಗಳನ್ನು ತತ್ಪುರುಷ ಕಳೆರಾಳಿಂದ ಮೂಲದ್ರವ್ಯಗಳಿಂದ, ಅಘೋರಕಲೆಗಳಿಂದ ಧಾತುದ್ರವ್ಯಗಳನ್ನೂ, ಸದ್ಯೋಜಾತ ಕಲೆಗಳಿಂದ ರತ್ನಗಳನ್ನೂ ವಾಮದೇವ ಕಲೆಗಳಿಂದ ಬೀಜಗಳನ್ನು ಸ್ವರ್ಣಾದಿಗಳನ್ನು ಈಶಾನ ಕಲೆಗಳಿಂದ ಖಡ್ವಾಂಗ ಮೊದಲಾದುವನ್ನೂ ಇಡಬೇಕು. ವಿಷ್ಣುವಿನಲ್ಲಿ ಹನ್ನೆರಡು ಅಕ್ಷರದ (ಓಂ ನಮೋ ಭಗವತೇ ವಾಸುದೇವಾಯ) ನಾಮದಿಂದಲೂ, ಬೇರೆ ದೇವತೆಗಳಲ್ಲಿ ಮೂಲಮಂತ್ರದಿಂದಲೂ ಪಂಚಗವ್ಯದಿಂದ ಸಿಂಪಡಿಸಬೇಕು. ಎಲ್ಲಾ ದೇವತೆಗಳಲ್ಲಿಯೂ ಮೂಲಮಂತ್ರದಿಂದ ಪೂಜಿಸಿ, ಅಧಿವಾಸವನ್ನು ಮಾಡಿ ಪರಿಧಿಯಿಂದಾರಂಭಿಸಿ, ಪಕ್ವಾಂತವಾಗಿ ಇಷ್ಟಕಾ ಹೋಮದಂತೆ (ಈಶ, ದುರ್ಗಾ, ವಿಷ್ಣುಗಳಲ್ಲಿ ಪಕ್ವಕ್ಕಿಂತ ಮೊದಲು ಮೊದಲಾಗಿ ಸಮಾನವು) ಮಾಡಿ, ಪ್ರಣವ ಸಂಪುಟಿತ ದ್ವಾದಶಾಕ್ಷರಗಳಿಂದ ಸ್ವಾಹಾಂತವಾಗಿ ಒಂದೊಂದಾಹುತಿಯನ್ನೂ ಇಂದ್ರಾಯ– ಮೊದಲಾಗಿ ದಿಗಧಿಪತಿಗಳಿಗೆ, ನಾರಾಯಣಾಯ, ಸರ್ವಬೀಜೇಭ್ಯಃ ಸರ್ವಧಾತುಭ್ಯಃ, ಸರ್ವಲೋಹೇಭ್ಯಃ ಸರ್ವಪರ್ವತೇಭ್ಯಃ, ಸರ್ವಸಮುದ್ರೇಭ್ಯಃ, ಸರ್ವಪಾತಾಲೇಭ್ಯಃ, ಸರ್ವನಾಗೇಭ್ಯಃ, ಸರ್ವದಿಗ್ಗಜೇಭ್ಯಃ, ಸರ್ವವೃಷಭೇಭ್ಯಃ ಸ್ವಾಹಾ– ಹೀಗೆ ಪ್ರತಿನಾಮ ಮಂತ್ರದಿಂದ ಒಂದೊಂದು ಆಹುತಿಯನ್ನು ಹೋಮಿಸಿ, ವ್ಯಾಹೃತಿಗಳಿಂದ ಪ್ರಣವ (ಓಂ) ದಿಂದಲೂ ಹೋಮಿಸಬೇಕು. ಈ ಮಂತ್ರಗಳಿಂದ ಮೊದಲು ತುಪ್ಪವನ್ನು ಹೋಮಿಸಿ ವಿಷ್ಣುವಿನಲ್ಲಿ ನಾರಾಯಣಾಯ ವಿದ್ಮಹೇ– ಈ ಗಾಯತ್ರಿಯಿಂದ ನಾಲ್ಕು ದ್ರವ್ಯ ಹೋಮಗಳನ್ನು ಮಾಡಿ ಸಂಪಾತವನ್ನು ಹಾಕಿದ ಗರ್ಭಪಾತ್ರೆಯಲ್ಲಿ ಅಗ್ನಿಯನ್ನು ಉದ್ವಾಸನೆಯನ್ನು ಮಾಡಿ ಮೂಲ ಮಂತ್ರ ಜಪವನ್ನು ಮಾಡಬೇಕು.

ದುರ್ಗಾ, ಶಾಸ್ತೃ, ಗಣಪತಿ, ಶಂಕರನಾರಾಯಣರಲ್ಲಿ ನಾಲ್ಕು ದ್ರವ್ಯ ಹೋಮಪರ್ಯಂತವಾಗಿ ತಮ್ಮ ಇಟ್ಟಿಗೆಯ ಹೋಮದಂತೆ ಮಾಡಿ- ಇಂದ್ರಾಯ- ಮೊದಲಾಗಿ ಹಿಂದೆ ಹೇಳಿದ ಹೋಮದಲ್ಲಿ ನಾರಾಯಣ ಪದಸ್ಥಾನದಲ್ಲಿ ತಮ್ಮ ತಮ್ಮ ಮೂಲಮಂತ್ರವನ್ನು ಪ್ರಯೋಗಿಸಿ, ಉಳಿದುದೆಲ್ಲವನ್ನು ಹಿಂದಿನಂತೆಯೇ ಹೋಮಿಸಬೇಕು. ಶಿವನಲ್ಲಿ ದ್ರವ್ಯಹೋಮದ ಕೊನೆಯಲ್ಲಿ ಮೂಲಮಂತ್ರದಿಂದ ಹನ್ನೊಂದು ಆಜ್ಯಾಹುತಿಗಳನ್ನು ಮಾಡಿ ಇಂದ್ರಾಯ-ಮೊದಲಾಗಿ ಹಿಂದೆ ಹೇಳಿದ ಆಹುತಿಗಳನ್ನು ಹೋಮಿಸಬೇಕು. ಅಲ್ಲಿ ನಾರಾಯಣ ಪದಸ್ಥಾನದಲ್ಲಿ- ಶಂಕರೇಭ್ಯಃ ಸ್ವಾಹಾ ಎಂದು ವಿಶೇಷವು. ಸ್ಕಂದನಲ್ಲಿ ತನ್ನ ಇಷ್ಟಕಾ ಹೋಮದಲ್ಲಿ ಹೇಳಿದ ಕ್ರಮದಂತೆ ದ್ವಾದಶ ನಾಮವೇ ಮೊದಲಾಗಿ ನಕ್ಷತ್ರ ಪರ್ಯಂತ ಹೋಮಿಸಿ- ಓಂ ಹೇತಿಭ್ಯಃ, ರತ್ನೇಭ್ಯಃ, ಲೋಹೇಭ್ಯಃ, ಧಾತುಭ್ಯಃ, ಬೀಜೇಭ್ಯಃ, ಮೃತ್ತಿಕಾಭ್ಯಃ, ಮೂಲೇಭ್ಯಃ- ಆಹುತಿಯನ್ನು ಹೋಮಿಸಿ, ಮೂಲಮಂತ್ರದಿಂದ ನಾಲ್ಕು ದ್ರವ್ಯಗಳನ್ನು ಹೋಮಿಸಬೇಕು. ಶಾಸ್ತಾರನಲ್ಲಿ- ಗುಹನಿಗೆ ಹೇಳಿದಂತೆ ನ್ಯಾಸ ಮಾಡಿದ ಸಂದರ್ಭದಲ್ಲಿ ಮಯೂರ-ಶಕ್ತಿ-ವಜ್ರಸ್ಥಾನಗಳಲ್ಲಿ- ಅಶ್ವ-ಕ್ಷುರಿಕಾ-ಖಡ್ಗಗಳನ್ನು ಹೇಳಬೇಕು. ತನ್ನ ಇಷ್ಟಕಾ ಹೋಮಕ್ಕೆ ಸಂಬಂಧಿಸಿದಂತೆ ನಕ್ಷತ್ರಾಹುತಿಯ ಸಮನಂತರದಲ್ಲಿ ಹೇತಿ ಮೊದಲಾದ ಸ್ಕಂದನಿಗೆ ಹೇಳಿದವುಗಳ ಹೋಮವಾಗಿರುತ್ತದೆ. ಹೀಗೆ ಹೋಮಿಸಿದ ಮೇಲೆ ಇಟ್ಟಿಗೆಯ ಕುಳಿಯ ಮಣ್ಣು ಮೊದಲಾದವುಗಳನ್ನು ತೆಗೆದು ಪರಿಶುದ್ಧಗೊಳಿಸಿ ಮಾರ್ಜನ ಮೊದಲಾದುವನ್ನು ಮಾಡಿ, ಪಂಚಗವ್ಯ, ಅಷ್ಟಗಂಧಗಳಿಂದ ತೊಯ್ಯಲ್ಪಟ್ಟ ದರ್ಭೆಯ ಪೀಠದಲ್ಲಿ ಪೀಠ ಪೂಜೆಯನ್ನು ಮಾಡಿ ಆ ದೇವತೆಗೆ ಸಂಬಂಧಿಸಿದ ಶಕ್ತಿಯನ್ನು ಆವಾಹಿಸಿ ಪೂಜಿಸಬೇಕು. ಬ್ರಾಹ್ಮಣರಿಂದ ಒಪ್ಪಿಗೆ ಪಡೆದುಕೊಂಡು ಮುಚ್ಚಳದಿಂದ ಕೂಡಿದ ಗರ್ಭಪಾತ್ರೆಯನ್ನು ಬೊಗಸೆ ಕೈಯಲ್ಲಿ ಹಿಡಿದುಕೊಂಡು-ನಿಂತುಕೊಂಡು ಮೂಲಮಂತ್ರವನ್ನು ನೂರೆಂಟಾವರ್ತಿ ಜಪಿಸಿ ಸಂಪೂರ್ಣ ಪ್ರಪಂಚವನ್ನು ದೇಗುಲದ ಗರ್ಭಗುಡಿಯನ್ನು ಗರ್ಭಾಶಯವನ್ನಾಗಿ ಬಯಸುವ ಶಕ್ತಿಯನ್ನು ಧ್ಯಾನಿಸಿ, ಕುಳಿಯಲ್ಲಿ ತಮ್ಮ ತಮ್ಮ ದೇವತೆಗೆ ಹೇಳಿದ ಮಂತ್ರವನ್ನು ಜಪಿಸುತ್ತಾ ರಾತ್ರಿಯಲ್ಲಿ ಇಡಬೇಕು.

**ಸರ್ವಭೂತಾಲಯೇ ಭದ್ರೇ ಸಾಗರಾಂಬರಭೂಷಿತೇ ।**
**ಉತ್ತುಂಗಾದ್ರಿಸ್ತನಭರೇ ದೇವಿ ಗರ್ಭಂ ಸಮಾಶ್ರಯ ॥**

(ಎಲ್ಲ ಪಂಚ ಮಹಾಭೂತಗಳಿಗೂ ಆವಾಸಸ್ಥಾನಳಾದ ಮಂಗಳಕರಳೇ ಸಮುದ್ರವೆಂಬ ಬಟ್ಟೆಯಿಂದ ಅಲಂಕರಿಸಲ್ಪಟ್ಟವಳೇ ಎತ್ತರವಾದ ಗಿರಿಗಳೆಂಬ ಕುಚಗಳಿಂದ ಶೋಭಿತಳಾದ ದೇವಿಯೇ ಈ ಗರ್ಭಸ್ಥಾನವನ್ನು ಆಶ್ರಯಿಸು.) ಇದು ಸ್ಕಂದ ಮತ್ತು ಶಾಸ್ತಾರರಲ್ಲಿ ಪಠಿಸಬೇಕಾದ ಮಂತ್ರವು.

**ಸರ್ವಭೂತಧರೇ ಕಾಂತೇ ಪರ್ವತಸ್ತನಮಂಡಿತೇ ।**
**ಸಮುದ್ರಪರಿಧಾನೇ ತ್ವಂ ದೇವಿ ಗರ್ಭಂ ಸಮಾಶ್ರಯ ॥**

(ಪೃಥಿವ್ಯಾದಿ ಪಂಚಭೂತಗಳನ್ನು ಧರಿಸಿದ ಮನಮೋಹಕಳಾದ ಬೆಟ್ಟವೆಂಬ ಕುಚಗಳಿಂದ ಶೋಭಿಸುವ, ಸಮುದ್ರವನ್ನೇ ಬಟ್ಟೆಯಾಗಿ ತೊಟ್ಟಿರುವ ನೀನು ದೇವಿಯೇ ಈ ಗರ್ಭವನ್ನಾಶ್ರಯಿಸು.) ಸ್ಕಂದ ಮತ್ತು ಶಾಸ್ತಾರನ ಹೊರತಾಗಿ ಇತರ ದೇವತೆಗಳಲ್ಲಿ ಈ ಮಂತ್ರವು ಗರ್ಭಪಾತ್ರ ಸ್ಥಾಪನೆಗಾಗಿ ಆಗಿರುತ್ತದೆ.

ಮಂದಿರವಾಗಿ ರೂಪಗೊಳ್ಳುವ ಈ ಗರ್ಭದಲ್ಲಿ ಮೂಲ ಮಂತ್ರದಿಂದ ದೇವತೆಯನ್ನು ಆವಾಹಿಸಿ ಸ್ವಲ್ಪವೇನನ್ನಾದರೂ ನೈವೇದ್ಯ ಮಾಡಿ ಸಂತಸಗೊಳಿಸಿ, ಸಂರಕ್ಷಿಸಿ, ಬಡಗಿಯಿಂದ ದೇಗುಲವನ್ನು ಸಿದ್ಧಗೊಳಿಸಬೇಕು.

* * * *

## ಶಸ್ತ್ರಪೂಜೆ

ಭವನ ನಿರ್ಮಾಣದ ಮೊದಲ ಕ್ರಿಯೆಯಾಗಿ ಸ್ವಸ್ತಿಕ ಯಾ ಅಷ್ಟದಳ ಪದ್ಮವನ್ನು ಬರೆದು, ಅಲ್ಲಿ ಬತ್ತ ಮೊದಲಾದ ಧಾನ್ಯಗಳಿಂದ ಪೀಠ ಮಾಡಿ, ಪೀಠಪೂಜೆಯನ್ನು ಮಾಡಿ, ಮೂಲಮಂತ್ರದಿಂದ ದೇವತಾವಾಹನೆಯನ್ನು ಮಾಡಿ, ಪೂಜಿಸಿ ಪಾಯಸವನ್ನು ನೈವೇದ್ಯ ಮಾಡಿ ಅದರ ಎಡ ಭಾಗದಲ್ಲಿ ಸ್ವಸ್ತಿಕ ಯಾ ಪದ್ಮವನ್ನು ಬರೆದು ಸುತ್ತಿ, ಉಳಿ ಮೊದಲಾದ ಸಾಧನಗಳನ್ನಿರಿಸಿ, ಅಸ್ತ್ರ ಮಂತ್ರದಿಂದಾವಾಹಿಸಿ ಶೋಷಣಾದಿಗಳಿಂದ ಶುದ್ಧೀಕರಿಸಿ ಪೀಠಪೂಜಾದಿಗಳನ್ನು, ಶಿಲ್ಪಿಗಳ ಶಸ್ತ್ರಾಯುಧಗಳನ್ನಿರಿಸಿ ಅಸ್ತ್ರಾವಾಹನೆಯೊಂದಿಗೆ ಮಾಡಿ ಪೂಜಿಸಬೇಕು. ನೈವೇದ್ಯಾನಂತರ ಉಳಿದ ಪಾಯಸ (ಹವಿಸ್ಸು)ವನ್ನು ಮೂಲಮಂತ್ರದಿಂದ ಅಗ್ನಿಯಲ್ಲಿ ಹೋಮಿಸಿ ನೈವೇದ್ಯದ ಪಾಯಸದಿಂದ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ದೇವತೆಗೆ ಪ್ರಸನ್ನಪೂಜೆಯನ್ನು ಮಾಡಿ ಯಜಮಾನನು ಆಚಾರ್ಯ ಶಿಲ್ಪಿಗಳಿಂದ ಕೂಡಿ ಮೊಸರನ್ನವನ್ನು ಊಟ ಮಾಡಬೇಕು. ಶಿಲ್ಪಿಯನ್ನು ವಸ್ತ್ರಾಲಂಕಾರ ಮೊದಲಾದವುಗಳಿಂದ ಸಂತೋಷಗೊಳಿಸಬೇಕು.

* * * *

## ಶಿಲಾಪರಿಗ್ರಹ

ಆಮೇಲೆ ಆಚಾರ್ಯನು ಶಸ್ತ್ರಸಜ್ಜಿತರಿಂದೊಡಗೂಡಿ, ಶಿಲ್ಪಿಗಳಿಂದಲೂ ಯಜಮಾನನಿಂದಲೂ ಜೊತೆಯಾಗಿ ಅಸ್ತ್ರಭಾವನೆಯೊಂದಿಗೆ ಅರ್ಘ್ಯಹಸ್ತಳಾದ ವಿದ್ಯಾರಾಜ್ಞಿಯನ್ನು ಸ್ಮರಿಸುತ್ತಾ, ರಕ್ಷಣೆಯನ್ನು ಮಾಡಿಕೊಂಡು, ಶಾಕುಂತ ಸೂಕ್ತ ಸ್ವಸ್ತ್ಯಾದಿ ಮಂಗಲ ಸೂಕ್ತಗಳನ್ನು ಶಂಖಧ್ವನಿ, ಪ್ರದೀಪ, ಪೂರ್ಣಕುಂಭ ಮೊದಲಾಗಿ ಮಂಗಳದೊಡನೆ ಶಕುನಾದಿ ಸೂಚಿತ ಸುಮುಹೂರ್ತದಲ್ಲಿ ಶಿಲಾಪರಿಗ್ರಹಣಾರ್ಥವಾಗಿ ಪೂರ್ವ ಉತ್ತರ ಈಶಾನ್ಯ– ಯಾವುದಾದರೂ ದಿಕ್ಕಿಗೆ ಹೋಗಬೇಕು. ಶಿಲೆ ಇರುವ ಸ್ಥಾನವನ್ನು ಹೊಂದಿ ಸ್ನಾನ ಶಂಖಪೂರಣ, ಆತ್ಮಾರಾಧನಾದಿಗಳಿಂದ ಪರಿಶುದ್ಧನಾಗಿ ಶಿವನಲ್ಲಿ 'ತ್ರಿಣೇತ್ರಾದಿ' ಮಂತ್ರವನ್ನೂ ಇತರ ದೇವತೆಗಳಲ್ಲಿ ತತ್ತದ್ದೇವತಾ ಮಂತ್ರವನ್ನು ಜಪಿಸಿ, ಪ್ರತಿಮೆಯ ರಚನೆಗೆ ಯೋಗ್ಯವಾದ ಶಿಲೆಯನ್ನು ಹುಡುಕಾಡಿ ಪರಿಕಲ್ಪಿಸಬೇಕು.

**ತ್ರಿಣೇತ್ರಾಯ ಚ ರುದ್ರಾಯ ಧ್ವಜಾಧಿಪತಯೇ ನಮಃ ।**
**ಶಿಲಾಂ ದರ್ಶಯ ದೇವೇಶ ಪ್ರಸನ್ನೋ ಮೇ ವೃಷಧ್ವಜ ॥**

(ಮೂರು ಕಣ್ಣುಳ್ಳ ರುದ್ರನಾದ ಧ್ವಜಾಧಿಪತಿಗೆ ನಮಸ್ಕಾರವು. ದೇವಶ್ರೇಷ್ಠನೇ ಸರಿಯಾದ ಶಿಲೆಯನ್ನು ತೋರಿಸು. ವೃಷಧ್ವಜನೇ ನನಗೆ ಪ್ರಸನ್ನನಾಗಿ ಅನುಗ್ರಹಿಸು) ಲೋಕ ಪ್ರಸಿದ್ಧವಾದ ಬೆಟ್ಟದಲ್ಲಿ ಹುಟ್ಟಿದ ಭೂಮಿಯಲ್ಲಿ ಹುದುಗಿ ಹೋಗಿರುವ ಬ್ರಾಹ್ಮಣಾದಿ ನಿಜ ವರ್ಣಾನುರೂಪವಾದ ಮನೋಹರವಾದ ಕರ್ಕಶವಲ್ಲದ ಉಳಿಯ ಏಟನ್ನು ಸಹಿಸಲು ಸಮರ್ಥವಾದ ಗಂಭೀರವಾದ ಶಬ್ದದಿಂದ ಕೂಡಿದ ದಿಕ್ಕಿನ ಕಡೆಗೆ ಚಾಚಿರುವ ಕೆಳಮುಖವಾಗಿ ಬಾಗಿರುವ ಮುಖವೆತ್ತಿ ನಿಂತಂತಿರುವ ಶಿಲೆಯನ್ನು ಪರಿಗ್ರಹಿಸಬೇಕು. ಪ್ರತಿಮೆಯನ್ನು ತಯಾರಿಸಲು ಆಲದ ಎಲೆಯಂತಾಗಲೀ ಅಶ್ವತ್ಥದ ಎಲೆಯಂತಾಗಲೀ ಆಕಾರ ಹೊಂದಿನ ಕಠಿಣವಾದ ಗಂಭೀರವಾದ ಧ್ವನಿಯಿಂದ ಕೂಡಿದ, ಹೆಚ್ಚಿನ ಹೊಳಪಿನಿಂದ ಕೂಡಿದ ಬಹಳ ವಿಸ್ತಾರವಾಗಿ ಹರಡಿರುವ ಪುರುಷ ಶಿಲೆಯು ಪರಿಗ್ರಹಿಸಲ್ಪಡಬೇಕು. ಪೀಠದ ರಚನೆಗಾಗಿ ಬಾಳೆಎಲೆಯಂತೆ ಆಕೃತಿಯುಳ್ಳ ಹೆಚ್ಚಿನ ಕಠಿಣವಲ್ಲದ ಮಧುರಧ್ವನಿಯಿಂದ ತಣ್ಣಗಿನ ಸ್ತ್ರೀ ಶಿಲೆಯು ಪರಿಗ್ರಹಿಸಲ್ಪಡಬೇಕು. ಪ್ರತಿಮೆ ಹಾಗೂ ಪೀಠದ ಪಾದಸ್ಥಾನವಾದ ನಪುಂಸಕ ಶಿಲೆಗಾಗಿ ಪುರುಷ ಹಾಗೂ ಸ್ತ್ರೀ ಲಕ್ಷಣಗಳೆರಡರಿಂದ ಕೂಡಿದ ನಪುಂಸಕ ಶಿಲೆಯನ್ನು ಪರಿಗ್ರಹಿಸಬೇಕು. ಶುಭಲಕ್ಷಣಗಳಿಂದ ಕೂಡಿದ ಶಿಲೆಯು ದೊರಕಿದ ಅನಂತರದಲ್ಲಿ ಭೂಮ್ಯಂತರ್ಹಿತವಾದಲ್ಲಿ ಖನನ ಮಾಡಿ ತೆಗೆದು, ದರ್ಭೆ, ಮಣ್ಣು, ತೊಪ್ಪೆ ಮೊದಲಾದವುಗಳಿಂದ ಹೆಚ್ಚಿನ ನೀರುಗಳಿಂದ ತೊಳೆದು ಪರಿಶುದ್ಧಗೊಳಿಸಿ ತಿರುಗಿ ಅಷ್ಟಗಂಧ ಜಲದಿಂದ ಮೊದಲು ಪೂಜಿಸಿ ಇರಿಸಲ್ಪಟ್ಟ ಕಲಶೋದಕದಿಂದ ಅಭಿಷೇಕ ಮಾಡಿ ಪಂಚಗವ್ಯದಿಂದ ಪವಮಾನ ಮಂತ್ರದಿಂದ ಪ್ರೋಕ್ಷಣೆ ಮಾಡಿ ಪೂರ್ವದಲ್ಲೇ ಸಿದ್ಧಗೊಳಿಸಿದ ಮಂಟಪದಲ್ಲಿ ಶಿಲೆಯನ್ನಿರಿಸಿ, ಎಲ್ಲಾ ದೇವತೆಗಳಲ್ಲಿಯೂ ಮೂಲಮಂತ್ರದಿಂದ ದೇವತೆಯನ್ನು ಆವಾಹಿಸಿ ಯಥಾವತ್ತಾಗಿ ಪೂಜಿಸಿ, ದಿಕ್ಕುಗಳಲ್ಲಿ ದಿಕ್ಪಾಲಕರನ್ನು ಪೂಜಿಸಿ ಪಾಯಸವನ್ನು ನೈವೇದ್ಯ ಮಾಡಬೇಕು. ಈ ರೀತಿ ಪೂಜೆಯನ್ನು ಸ್ವಸ್ತಿಕಾದಿಗಳಲ್ಲಿ ಮಾಡಬೇಕು. ಕಲಶದಲ್ಲಾದರೂ ಮಾಡಬಹುದು. ಶಿವನಲ್ಲಿ ಮೂಲಮಂತ್ರಾವಾಹನೆಯ ನಂತರ 'ಬೀಜಮುಖ್ಯ' ಮಂತ್ರದಿಂದ 'ಕ್ಷುರಿಕಾಸ್ತ್ರ' ಮಂತ್ರದಿಂದ 'ಮೃತ್ಯುಂಜಯ' ಮಂತ್ರದಿಂದಲೂ ಆವಾಹಿಸಿ ಪೂಜಿಸಬೇಕು. ನಂತರ ಅಂಗಾದ್ಯಾವರಣದಿಂದ ಪೂಜಿಸಬೇಕು. (ಬೀಜಮಂತ್ರ– ಮ್ರುಂ ಜ್ರುಂ ಕ್ಷುಂ ॥ ಕ್ಷುರಿಕಾಮಂತ್ರಂ– ಚಿಚ್ಛಿವೇಚ್ಛಿ ದೀಕ್ಷಿಕೃತ್ ॥ ಮೃತ್ಯುಂಜಯ ಮಂತ್ರ– ಓಂ ಜೂಂ ಸಃ) ಆ ಪೂಜಿಸಲ್ಪಟ್ಟ ಶಿಲೆಯ ಪಶ್ಚಿಮದಲ್ಲಿ ಅಸ್ತ್ರಮಂತ್ರದಿಂದ ನೂರೆಂಟು ಅಜ್ಯಾಹುತಿಯನ್ನು ಮಾಡಿ ಸಂಪಾತಾಜ್ಯದಿಂದ ಶಸ್ತ್ರಗಳನ್ನು ಸಂಸ್ಪರ್ಶಿಸಿ ಆ ಶಸ್ತ್ರಗಳನ್ನು ಬಟ್ಟೆ ಹಾಗೂ ದರ್ಭೆಯಿಂದ ಹೊದಿಸಿ ಅಧಿವಾಸ ಮಾಡಿ ಅಲ್ಲಿ ವಾಸವಾಗಿರುವ ಭೂತಾದಿಗಳ ನಿರಸನಕ್ಕಾಗಿ ಶಿಲಾಶೋಧನೆ ಮೊದಲಾಗಿಯಾಗಲೀ ಈ ಸಂದರ್ಭದಲ್ಲಾಗಲೀ ಭೂತಕೂರದಿಂದ ಕೂಡಿದ ಬಲಿಯನ್ನು ಓಂ ದೇವತಾಭ್ಯಃ– ಎಂಬ ಮಂತ್ರದಿಂದ ಹಾಕಬೇಕು. ಪುನಃ ರಾತ್ರಿಯಲ್ಲಿ ದೇವರ ಇದುರಿನಲ್ಲಿ ದರ್ಭೆ ಮಯವಾದ ಹಾಸಿಗೆಯಲ್ಲಿ ಮಲಗಿ ವಿಷ್ಣುವಿನಲ್ಲಿ 'ನಮಃ ಸಕಲಲೋಕಾಯ–' ಮುಂತಾದ ಮಂತ್ರಗಳನ್ನು ಜಪಿಸಬೇಕು. ಶಿವನಲ್ಲಿ 'ನಮಃ ಶಂಭೋ ತ್ರಿಣೇತ್ರಾಯ'– ಎಂಬ ಮಂತ್ರಗಳೆರಡರಿಂದ ಪ್ರಾರ್ಥಿಸಿ, ಸ್ವಪ್ನದರ್ಶನಕ್ಕಾಗಿ 'ಓಂಹಿಲಿಹಿಲಿ'– ಮೊದಲಾಗಿ ಮಂತ್ರಗಳನ್ನು ಜಪಿಸಬೇಕು. ಇತರ ದೇವತೆಗಳಲ್ಲಿ ನಿಜಮೂಲಮಂತ್ರವನ್ನು ಜಪಿಸಬೇಕು. ಆಮೇಲೆ ಸ್ವಪ್ನ ನೋಡಬೇಕು. ನಮಃ ಸಕಲ ಲೋಕಾಯ ನಮಃ ಶಂಭೋ ತ್ರಿಣೇತ್ರಾಯ– ಇದು ಸ್ವಪ್ನಮಾಣಕವೆಂಬ ಮಂತ್ರವು. ಶಂಕರನಾರಾಯಣ ಮುಂತಾದ ದೇವತೆಗಳಲ್ಲಿ ವಿಷ್ಣು ಯಾ ಶಿವನನ್ನು ಪೂಜಿಸಿ ಮೂಲಮಂತ್ರ ಜಪದೊಡನೆ ಹಿಂದೆ ವಿವರಿಸಿದ ಸ್ವಪನವನ್ನು ಮಾಡಬೇಕು.

**ನಮಃ ಸಕಲಲೋಕಾಯ ವಿಷ್ಣವೇ ಪ್ರಭವಿಷ್ಣವೇ ।**
**ವಿಶ್ವಾಯ ವಿಶ್ವರೂಪಾಯ ಸ್ವಪ್ನಾಧಿಪತಯೇ ನಮಃ ॥**

(ಸರ್ವಸಮರ್ಥನಾದ ಎಲ್ಲಾ ಲೋಕರೂಪನಾದ ವ್ಯಾಪ್ತನಾದ ವಿಷ್ಣುವಿಗೆ ನಮಸ್ಕಾರವು. ಪ್ರಪಂಚ ಸ್ವರೂಪನಾದ ವಿಶ್ವನಾಥ ಸ್ವಪ್ನಾಧಿಪತಿಗೆ ನಮಸ್ಕಾರವು)

**ನಮಃ ಶಂಭೋ ತ್ರಿಣೇತ್ರಾಯ ರುದ್ರಾಯ ವರದಾಯ ಚ ।**
**ವಿಶ್ವಾಯ ವಿಶ್ವರೂಪಾಯ ಸ್ವಪ್ನಾಧಿಪತಯೇ ನಮಃ ॥**

**ಆಚಕ್ಷ್ವ ದೇವ ದೇವೇಶ ಪ್ರಪನ್ನಾಸ್ಮಿ ತವಾಂತಿಕಂ ।**
**ಸ್ವಪ್ನೇ ಸರ್ವಾಣಿ ಕಾರ್ಯಾಣಿ ಹೃದಯಸ್ಥಾನಿ ಯಾನಿ ವೈ ॥**

(ಶಿವನೇ ಮುಕ್ಕಣ್ಣನಾದ ಭಯಂಕರನಾದ ಇಷ್ಟಾರ್ಥವನ್ನು ಕೊಡುವವನಿಗೆ ನಮಸ್ಕಾರವು. ವಿಶ್ವನೇ ಆದ ವಿಶ್ವಸ್ವರೂಪನಾದ ಸ್ವಪ್ನಾಧಿಪತಿಗೆ ನಮಸ್ಕಾರವು. ದೇವನೇ ದೇವೇಶನೇ ನಿನ್ನ (ಸಮೀಪದಲ್ಲಿ) ಸನ್ನಿಧಿಯಲ್ಲಿ ನಾನು ಶರಣು ಹೋಗಿದ್ದೇನೆ. ಸ್ವಪ್ನದಲ್ಲಿ ಮನದಲ್ಲಿ ಮೂಡಿದ ಎಲ್ಲಾ ಕೆಲಸವನ್ನು ಹೇಳು.) ದುಃಸ್ವಪ್ನವು ನೋಡಲ್ಪಟ್ಟಲ್ಲಿ ಮರುದಿನ ಬೆಳಿಗ್ಗೆ ಅಸ್ತ್ರಮಂತ್ರದಿಂದ ನೂರೆಂಟು ಆಜ್ಯಾಹುತಿಯನ್ನು ಮಾಡಬೇಕು. ಮೂಲಮಂತ್ರದಿಂದ ಆವಾಹಿಸಿ ಪೂಜಿಸಿ ಸಂಪಾತಾಜ್ಯದಿಂದ ಆ ಶಿಲೆಯ ಮುಖಪಾದ ಮೊದಲಾದ ಎಲ್ಲಾ ಅವಯವಗಳಲ್ಲಿ 'ಉದ್ಬುಧ್ಯಸ್ವಾಗ್ನೇ'– ಮಂತ್ರದಿಂದ ಆವರ್ತನೆಯೊಂದಿಗೆ ಚಿಹ್ನೆಯನ್ನು ಮಾಡಬೇಕು. ಪುನಃ ಶಿಲ್ಪಿಯಿಂದ ಪೀಠವಾದ ಶಿಲೆಗಳಿಂದ ಕೂಡಿದ ಆ ಪ್ರತಿಮಾಶಿಲೆಯನ್ನು ಅಲ್ಲಿಂದ ಮೇಲಕ್ಕೆತ್ತಿ ರಥದಲ್ಲಿ ರಥಸ್ಥಾನೀಯವಾದ ಗಾಡಿ ಮೊದಲಾದವುಗಳಲ್ಲಿ ಇರಿಸಿ, ಈ ನಿರ್ಮಾಣವಾಗಲಿರುವ ಮಂದಿರದ ಸಮೀಪದಲ್ಲಿ ದೇಗುಲದ ಉತ್ತರಭಾಗದಲ್ಲಿ ಸಿದ್ಧಗೊಳಿಸಲ್ಪಟ್ಟ ಶಿಲ್ಪಿಯ ಆಲಯಕ್ಕೆ ಕೊಂಡು ಹೋಗಿ ಬಿಂಬ ಪೀಠ ಮೊದಲಾಗಿ ಎಲ್ಲವನ್ನೂ ಸಿದ್ಧಗೊಳಿಸಬೇಕು. ಒಳ್ಳೆಯ ಸ್ವಪ್ನವಾದಲ್ಲಿ ಅದು ಸ್ವೀಕರಿಸಲ್ಪಡಬೇಕು. ಚಿನ್ನದ ಸೂಜಿಯಿಂದ ಗುರುತಿಸಿ ಅಸ್ತ್ರಮಂತ್ರದಿಂದ ಧ್ಯಾನದೊಡನೆ ಹೊಡೆಯಲ್ಪಡಬೇಕು. ಒಮ್ಮೆ ಉದ್ಬುಧ್ಯಸ್ವ– ಎಂದು ಹೇಳಿ ಪುನಃ ಅಸ್ತ್ರಮಂತ್ರವನ್ನುಚ್ಚರಿಸಬೇಕು. ಪೀಠ ಪಾದಶಿಲೆಗಳನ್ನು ಅಸ್ತ್ರದಿಂದಲೇ ಗುರುತಿಸಬೇಕು.

* * * *

## ಅಂಕುರಾರ್ಪಣ

ಗರ್ಭಗೃಹವು ತಯಾರಾದಾಗ, ವಿಗ್ರಹವೂ ಸಿದ್ಧಗೊಂಡಾಗ ಅಧಿವಾಸ ದಿವಸಕ್ಕೆ ಮೊದಲು ಹನ್ನೆರಡು, ಒಂಭತ್ತು, ಏಳು ಯಾ ಐದು ದಿನಕ್ಕೆ ಮೊದಲಾಗಿ ರಾತ್ರಿಯಲ್ಲಿ ದೇಗುಲದ ಉತ್ತರಭಾಗದಲ್ಲಿ ಪಶ್ಚಿಮ ಬಾಗಿಲಿನಿಂದ ಕೂಡಿದ ಮುಚ್ಚಿದ ಸಂಸ್ಕಾರ (ಶುದ್ಧಿ) ವನ್ನು ಮಾಡಿದ ಮಂಟಪದಲ್ಲಿ ಅಂಕುರಾರೋಪಣವನ್ನು ಮಾಡಬೇಕು.

**ಮೃತ್ತಿಕಾಹರಣಂ**– ಆಚಾರ್ಯನು ಮೂರ್ತಿಪರಿಂದ ಒಡಗೂಡಿ ಗುರು ಗಣಪತಿಗಳನ್ನು ನಮಸ್ಕರಿಸಿ, ಛತ್ರ ಚಾಮರಾದಿಗಳಿಂದ ಕೂಡಿ ಪೂರ್ವಾಭಿಮುಖವಾಗಿ ಯಾ ಉತ್ತರಾಭಿಮುಖನಾಗಿ ನದಿ, ಸರೋವರ, ಬೆಟ್ಟ, ಉಳಗದ್ದೆ ಮೊದಲಾದ ಶುದ್ಧಸ್ಥಾನವನ್ನು ಹೊಂದಿ ಅಸ್ತ್ರಮಂತ್ರದಿಂದ ಶೋಧಿಸಬೇಕು. ಗುದ್ದಲಿಯನ್ನು ಗಂಧ ಹೂವು ಮೊದಲಾದವುಗಳಿಂದ ಅಲಂಕರಿಸಿ ಪೂಜಿಸಿ, ಅಸ್ತ್ರಮಂತ್ರದಿಂದ ಕುಳಿ ತೋಡಿ ಮಣ್ಣನ್ನು ಸಂಗ್ರಹಿಸಿ ಹೃದಯ ಮಂತ್ರದಿಂದ ಕುಳಿಯನ್ನೂ ಪೂಜಿಸಿ, ಮಣ್ಣು ಮತ್ತು ಕುಳಿಯನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ, ನೈವೇದ್ಯ ಮಾಡಿ ನೀರಾಜನೆಯನ್ನು ಮಾಡಿ ಪ್ರಾರ್ಥಿಸಿ, ತೆಗೆದುಕೊಂಡು ಹೋಗಿ ಮಂಟಪದ ಈಶಾನ್ಯ ದಿಕ್ಕಿನಲ್ಲಿರಿಸಬೇಕು.

ಆಚಾರ್ಯನು ಸ್ನಾನ ಮಾಡಿ ಆಚಮನವನ್ನು ಮಾಡಿ ದರ್ಭಮುಷ್ಟಿಯನ್ನು ಪಸರಿಸಿ ಸ್ಥಳ ಶುದ್ಧಿಯನ್ನು ಮಾಡಿ ಹದಿನಾರು ಪದದ (ಕೋಣದ) ಮಂಡಲವನ್ನು ಬಣ್ಣದ ಪುಡಿಗಳಿಂದ ಕಂಗೊಳಿಸುವಂತೆ ಬರೆದು ಆ ಹದಿನಾರು ಪದಗಳಲ್ಲಿ ಬತ್ತಗಳನ್ನು ದರ್ಭೆಯ ತುಂಡುಗಳನ್ನಿರಿಸಿ ಪೀಠವನ್ನು ಮಾಡಿ ಆ ಮಂಡಲದ ದಕ್ಷಿಣ ಯಾ ಪೂರ್ವ ದಿಕ್ಕಿನಲ್ಲಿ ಬೀಜವನ್ನಿರಿಸಲು ಸ್ವಸ್ತಿಕವನ್ನು ಬರೆದು ಬತ್ತಗಳಿಂದ ಪೀಠವನ್ನು ರಚಿಸಬೇಕು. ಪುನಃ ಹದಿನಾರು ಪಾಲಿಕೆ (ಘಟಿಕಾ= ಕುರುಪೆ, ಶರಾವಾ= ಚಿಕ್ಕ ಮಣ್ಣಿನ ಪಾತ್ರೆ)ಗಳನ್ನು ಆಯಾಯ ಅಸ್ತ್ರಮಂತ್ರದಿಂದ ತೊಳೆದು, ಆಯಾಯ ಕವಚಗಳಿಂದ ಮೂರೆಳೆಯಾದ ನೂಲಿನಿಂದ ಸುತ್ತಿಬಿಟ್ಟು ಗರಿಕೆ ಮೊದಲಾದುವುಗಳಿಂದ ಅಲಂಕರಿಸಿ ಕೂರ್ಚನ್ನಿರಿಸಿ ಮಣ್ಣು, ಹೊಯಿಗೆ (ವಾಲುಕೆ) ಒಣಗಿದ ಸಗಣಿ ಪುಡಿಯಿಂದ ಒಂದರ ಮೇಲೊಂದರಂತೆ ತುಂಬಿಸಿ, ಆ ಪಾಲಿಕೆ (ಘಟಿಕಾ, ಶರಾವೆ)ಗಳನ್ನು ಆಗ್ನೇಯ ಮೂಲೆಯಿಂದಾರಂಭಿಸಿ, ಮೊದಲನೆಯ ಸಾಲಿನಲ್ಲಿ ಪಶ್ಚಿಮಾಂತವಾಗಿ, ಎರಡನೆಯ ಸಾಲಿನಲ್ಲಿ ಪಶ್ಚಿಮದಿಂದಾರಂಭಿಸಿ ಪೂರ್ವಾಂತವಾಗಿ, ಮೂರನೆಯ ಸಾಲಿನಲ್ಲಿ ಪೂರ್ವಾದಿ ಪಶ್ಚಿಮಾಂತವಾಗಿ ನಾಲ್ಕನೆಯ ಪಂಕ್ತಿಯಲ್ಲಿ ಪಶ್ಚಿಮಾದಿ ಪೂರ್ವಾಂತವಾಗಿ ಇರಿಸಬೇಕು. ಆಯಾಯ ದೇವತೆಗಳ ಬೀಜಗಳನ್ನು ಒಂದು ಪಾತ್ರೆಯಲ್ಲಿ ಸೇರಿಸಿ, ಆಯಾಯ ಅಸ್ತ್ರಮಂತ್ರಗಳಿಂದ ನೀರಿನಿಂದ ತೊಳೆದು ನೀರಿನಲ್ಲಿರಿಸಿ, ಪುನಃ ಆಯಾಯ ದೇವತಾಮಂತ್ರಗಳಿಂದ ಹಾಲಿನಿಂದ ತೊಳೆದು ಮುಂಭಾಗದಲ್ಲಿ ಇಡಬೇಕು. ಆಚಾರ್ಯನು ಅಲ್ಲಿ ಕುಳಿತುಕೊಂಡು ದೇಹಶುದ್ಧಿ, ಶಂಖಪೂರಣ, ಆತ್ಮಾರಾಧನೆಯನ್ನು ಮಾಡಿ ಗಣಪತಿಯನ್ನು ಪೂಜಿಸಿ ಪ್ರಾಯಶ್ಚಿತ್ತ ಮತ್ತು ನಾಂದೀಮುಖವನ್ನು ಮಾಡಿ, ಮೂರ್ತಿಪರಿಂದ ಕೂಡಿ, 'ಓಂ ಬೀಜಾಂಕುರ ದೇವತಾಃ ಪ್ರೀಯಂತಾಂ' (ಬೀಜ ಅಂಕುರ (ಮೊಳಕೆಯ)ದೇವತೆಗಳು

ಸಂತಸಗೊಳ್ಳಲಿ) ಎಂದು ವಿಶೇಷದಿಂದ ಕೂಡಿ ಬೀಜ ಮತ್ತು ಪಾಲಿಕೆಗಳಲ್ಲಿ ಪುಣ್ಯಾಹವನ್ನು ಮಾಡಿ ಪುಣ್ಯಾಹದಲ್ಲಿ ಉಳಿದ ನೀರಿನಿಂದ ಬೀಜಗಳನ್ನು ಸಿಂಪಡಿಸಿ ಆ ಸ್ವಸ್ತಿಕದಲ್ಲಿ ಇಡಬೇಕು. ಪಾಲಿಕೆಗಳಲ್ಲಿ ಒಂದು ಪೀಠವನ್ನು ಪೂಜಿಸಿ, ಬೀಜದಲ್ಲಿ ಪೀಠಪೂಜೆಯನ್ನು ಮಾಡಿ ಪಾಲಿಕೆ (ಕುರುಪೆ ಯಾ ಶರಾವೆ)ಯಲ್ಲಿ ಕಲಶದಲ್ಲಿ ಹೇಳಿದ ಕ್ರಮದಂತೆ ಶೋಷಣ ಮೊದಲಾಗಿ ದರ್ಭೆವಿನ್ಯಾಸ ಮೊದಲಾದುವನ್ನು ಮಾಡಿ 'ಓಂ ನಮೋ ವಿಷ್ಣವೇ' ಎಂದು ಪಾಲಿಕೆಗಳಲ್ಲಿ ವಿಷ್ಣುವನ್ನು ಆವಾಹಿಸಿ, ವಿಷ್ಣುವನ್ನು ಪೂಜಿಸಬೇಕು. ಘಟಿಕೆಯನ್ನಿಟ್ಟಿದ್ದರೆ 'ಬ್ರಹ್ಮಣೇ ನಮಃ' ಎಂದು ಆವಾಹಿಸಿ ಬ್ರಹ್ಮನನ್ನು ಪೂಜಿಸಬೇಕು. ಶರಾವಗಳನ್ನಿರಿಸಿದ್ದರೆ ರುದ್ರನನ್ನು ಆವಾಹಿಸಿ ಪೂಜಿಸಬೇಕು. ಬೀಜಗಳಲ್ಲಿ ಶೋಷಣ ದಾಹನ ಪ್ಲಾವನವನ್ನು 'ಓಂ ಸೋಂ ಸೋಮಾಯ ನಮಃ' ಎಂಬ ಮಂತ್ರದಿಂದ ಸೋಮನನ್ನು ಆವಾಹಿಸಿ ಪೂಜಿಸಬೇಕು. ದಾನವನ್ನು ಮಾಡಿ ನೀರಾಜನೆಯನ್ನು ಮಾಡಿ ಕೂರ್ಚನ್ನು (ದರ್ಭೆಯನ್ನು) ಕೈಯಲ್ಲಿ ಹಿಡಿದು, ವಾದ್ಯ ಧ್ವನಿಯೊಡನೆ ತಮ್ಮ ತಮ್ಮ ಮಂತ್ರಗಳಿಂದ ಪಾಲಿಕೆಗಳಲ್ಲಿ (ಕುರುಪೆ ಯಾ ಶರಾವೆಗಳಲ್ಲಿ) ಆಗ್ನೇಯದಿಂದಾರಂಭಿಸಿ, ಈಶಾನ್ಯಪರ್ಯಂತವಾಗಿ ಪಾಲಿಕೆಯಲ್ಲಿ ಹೇಳಿದ ಕ್ರಮದಂತೆ ಬೀಜವನ್ನು ಬಿತ್ತಬೇಕು. ಪುನಃ ಕೂರ್ಚಪಾಣಿಯಾಗಿ ನಿಜನಿಜ ಮಂತ್ರದಿಂದ ಅಷ್ಟಗಂಧ ಜಲ, ಅರಸಿನದ ನೀರಿನಿಂದ ಹಿಂದೆ ಹೇಳಿದಂತೆ ಸಿಂಪಡಿಸಿ, ನಿಜನಿಜ ಮೂಲದಿಂದ ಆವಾಹಿಸಿ, ಲಿಪಿನ್ಯಾಸ ಮೊದಲಾದವುಗಳಿಂದ ಸಕಲೀಕರಣವನ್ನು ಮಾಡಿ, ಉಪಹಾರಗಳನ್ನು ಸಮರ್ಪಿಸಿ, ಸ್ನಾನದ ಸಮಯದಲ್ಲಿ 'ಆಪೋಹಿಷ್ಠಾ' ಮೊದಲಾದವುಗಳಿಂದ ಪ್ರೋಕ್ಷಣೆಯನ್ನು ಮಾಡಿ ಉಳಿದ ಉಪಹಾರಗಳನ್ನು ಕೊಟ್ಟು ಕ್ರಮವತ್ತಾಗಿ ಪೂಜಿಸಿ, ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ಬಟ್ಟೆಯಿಂದ ಹೊದಿಸಿ, ತಮ್ಮ ತಮ್ಮ ಅಸ್ತ್ರದಿಂದ ರಕ್ಷಿಸಬೇಕು. ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಸವರಿ ಬಿಟ್ಟು ದರ್ಭೆಗಳನ್ನಿರಿಸಿ ತಮ್ಮ ತಮ್ಮ ಮಂತ್ರದಿಂದ ರಾತ್ರೀಶರಿಗೆ ಬಲಿಯನ್ನು ಕೊಡಬೇಕು. ಮುಂದಿನ ದಿನಗಳಲ್ಲಿ ವೇಳೆಯಲ್ಲಿ ದೇಹಶುದ್ಧಿ ಮೊದಲಾದುವನ್ನು ಮಾಡಿ ಪೀಠಪೂಜೆಯನ್ನು ಮಾಡಿ ಪಾಲಿಕೆಯಲ್ಲಿ ವಿಷ್ಣುವನ್ನೂ ಬೀಜಗಳಲ್ಲಿ ಸೋಮನನ್ನೂ ಪೂಜಿಸಿ, ದರ್ಭಹಸ್ತನಾಗಿ ಅರಿಸಿನ, ಗಂಧದ ನೀರುಗಳಿಂದ ತಮ್ಮ ತಮ್ಮ ಮಂತ್ರಗಳಿಂದ ಚಿಮುಕಿಸಿ, ನಿಜನಿಜ ಮೂಲದಿಂದ ದೇವತೆಯನ್ನು ಆವಾಹಿಸಿ ಲಿಪಿನ್ಯಾಸ ಮೊದಲಾದವುಗಳಿಂದ ಸಕಲೀಕರಣವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಸ್ನಾನಕಾಲದಲ್ಲಿ 'ಆಪೋಹಿಷ್ಠಾ' ಮೊದಲಾದವುಗಳಿಂದ ಪ್ರೋಕ್ಷಣೆ ಮಾಡಿ ವಸ್ತ್ರ ಮೊದಲಾದುವನ್ನು ಕೊಟ್ಟು ಜಲ ಗಂಧ ಮೊದಲಾದ ಷಡುಪಹಾರಗಳಿಂದ ಪೂಜಿಸಿ, ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಬೇಕು. ಪುನಃ ರಾತ್ರಿಯಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಆಯಾಯ ರಾತ್ರೀಶರಿಗೆ ಆಯಾಯ ಪಾರ್ಷದರಿಗೆ ಬಲಿಯನ್ನು ಕೊಡಬೇಕು. ಪ್ರಧಾನ ಕರ್ಮದ ದಿವಸದಲ್ಲಿ ಬೆಳಗ್ಗೆ ಬಲಿಯನ್ನು ಮಾಡಿ ಬ್ರಹ್ಮಕಲಶದ ಸುತ್ತಲೂ ಹಾಸಿಗೆಯ ಸುತ್ತಲಾಗಿಯಾಗಲೀ ಬೀಜಾಂಕುರ ಪಾಲಿಕೆಗಳನ್ನು ಇರಿಸಬೇಕು. ಕಲಶ ಕಾರ್ಯಗಳಲ್ಲಿ ಉತ್ಸವದ ಕಾಲದಲ್ಲಿ ಬೀಜಾಂಕುರಾರ್ಪಣವನ್ನು ಮಾಡಬೇಕು. ಶಂಕರನಾರಾಯಣ, ದುರ್ಗಾ, ವಿಷ್ಣುಗಳಲ್ಲಿ ಶಾಲೀ ಮಾಷ ಯವ ಪ್ರಿಯಂಗು ತಿಲ ಮತ್ಸಾರ ಬಿಲ್ವ ಮುದ್ಗಾಸುರಿಃ ಶಿಂಬ ಶ್ಯಾಮಾಕ ರಾಜಮಾಷ– ಹೆಸರಿನ ಹನ್ನೆರಡು ಬೀಜಗಳು. ಶಿವ ವಿಘ್ನೇಶ್ವರರಲ್ಲಿ ಯವ ರಾಜಮಾಷಗಳ ಹೊರತಾಗಿ ಹತ್ತು ಬೀಜಗಳು. ಸುಬ್ರಹ್ಮಣ್ಯನಲ್ಲಿ ಶ್ಯಾಮಾಕ ರಾಜಮಾಷಗಳ ಹೊರತಾಗಿ ಹತ್ತು ಬೀಜಗಳು. ಶಾಸ್ತಾರನಲ್ಲಿ ಮುದ್ಗ ಮೊದಲಾಗಿ ಐದು ಬೀಜಗಳನ್ನು ಹೊರತುಪಡಿಸಿ ಸುಮನ ವೇಣು ಬೀಜನೀವಾರಗಳನ್ನು ಸೇರಿಸಿ ಹತ್ತು ಬೀಜಗಳು. ಅನಂತರ ಶಿವನಲ್ಲಿ ಹಾಲಿನಿಂದ ತೊಳೆಯಲು 'ತತ್ಪುರುಷಾಯ'– ಈ ಮಂತ್ರವು. ಬೀಜ ಬಿತ್ತನೆ ಹಾಗೂ ನೀರಿನ ಚಿಮುಕಿಸುವಲ್ಲಿ–

**ತ್ರಿಯಂಬಕಾಯ ಶರ್ವಾಯ ಶಂಕರಾಯ ಶಿವಾಯ ಚ ।**
**ಸರ್ವಲೋಕಪ್ರಧಾನಾಯ ಶಾಶ್ವತಾಯ ನಮೋ ನಮಃ ॥**

ಈ ಮಂತ್ರವು. (ಮುಕ್ಕಣ್ಣನಾದ ಶರ್ವನಿಗೆ ಮಂಗಳಕರನಾದ ಶಿವನಿಗೆ ಸಮಸ್ತಲೋಕಗಳಿಗೂ ಪ್ರಮುಖನಾದ ಅಜರಾಮರನಿಗೆ ನಮಸ್ಕಾರವು.) ವಿಷ್ಣುವಿನಲ್ಲಿ ಹಾಲಿನಿಂದ ತೊಳೆಯಲು ದ್ವಾದಶಾಕ್ಷರ ಮಂತ್ರವು (ಓಂ ನಮೋ ಭಗವತೇ ವಾಸುದೇವಾಯ) ಶಂಕರನಾರಾಯಣ, ದುರ್ಗಾ, ಸುಬ್ರಹ್ಮಣ್ಯ, ಗಣಪತಿ, ಶಾಸ್ತಾರರಲ್ಲಿ ಹಾಲಿನಿಂದ ತೊಳೆಯಲು ನಿಜನಿಜ ಮೂಲಮಂತ್ರಗಳು. ಶಿವನನ್ನು ಹೊರತಾಗಿ ಉಳಿದ ಆರು ದೇವತೆಗಳಲ್ಲಿ ಬೀಜಬಿತ್ತನೆಯಲ್ಲಿ ತಮ್ಮ ತಮ್ಮ ಮೂಲಮಂತ್ರಗಳು. (ಗಣಪತಿ, ಶಾಸ್ತಾರ, ಸ್ಕಂದರಲ್ಲಿ ತಮ್ಮ ತಮ್ಮ ಗಾಯತ್ರಿಯಿಂದ ನೀರಿನ ಸಿಂಪಡಿಸುವಿಕೆಯು. ಶಂಕರನಾರಾಯಣ, ವಿಷ್ಣುವಿನಲ್ಲಿ ಮೂರು ಪ್ರಣವದಿಂದ ಕೂಡಿದ ನಮೋಂತವಾದ ಮಂತ್ರದಿಂದ ಕೂಡಿದ ಜಿತಂತೇ– ಮಂತ್ರದಿಂದ, ದುರ್ಗೆಯಲ್ಲಿ ಪ್ರಣವ ಸಂಪುಟಿತವಾದ ಶಕ್ತಿಯಿಂದಲೂ, ಶಿವನಲ್ಲಿ ಬಿತ್ತನೆಗೆ ಹೇಳಿದ ತ್ರಿಯಂಬಕ ಮಂತ್ರದಿಂದೆಂದು ಮೂಲಾಶಯವು) ಸಿಂಪಡಿಸುವಿಕೆಯಲ್ಲಿ ಶಿವ ಮತ್ತು ಗಣಪತಿಯನ್ನು ಹೊರತುಪಡಿಸಿ ಉಳಿದ ಐದು ದೇವತೆಗಳಲ್ಲಿ ತಮ್ಮ ತಮ್ಮ ಉಪಚಾರ ಮಂತ್ರಗಳು. ವಿಷ್ಣುವಿನಲ್ಲಿ–

**ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ಸುಬ್ರಮ್ಹಣ್ಯ ನಮೋಽಸ್ತೇಽಸ್ತು ಮಹಾಪುರುಷ ಪೂರ್ವಜ ॥**

ಓಂ ಓಂ ನಮಃ– ಹೀಗೆ ಮಂತ್ರವು. ಗಣಪತಿಯಲ್ಲಿ ಪ್ರೋಕ್ಷಣೆಯಲ್ಲಿ ತನ್ನ ಗಾಯತ್ರೀ ಮಂತ್ರವು. ಸುಬ್ರಹ್ಮಣ್ಯನಲ್ಲಿ ಸಿಂಪಡಿಕೆಗೆ ನಿಜಗಾಯತ್ರೀ ಮಂತ್ರವು. ಬಲಿದೇವತೆಗಳು ಬರೆಯಲ್ಪಡುತ್ತವೆ– ಶಿವ ಮತ್ತು ಗಣಪತಿಯರಲ್ಲಿ– ಬ್ರಹ್ಮಗ್ರಹೇಭ್ಯೋ ನಮಃ । ಭೂತಗ್ರಹೇಭ್ಯೋ * ಇಂದ್ರಗ್ರಹೇಭ್ಯೋ * ಗಂಧರ್ವಗ್ರಹೇಭ್ಯೋ * ಯಕ್ಷಗ್ರಹೇಭ್ಯೋ * ರಾಕ್ಷಸಗ್ರಹೇಭ್ಯೋ * ಪಿಶಾಚಗ್ರಹೇಭ್ಯೋ * ವಿಷ್ಣುಗ್ರಹೇಭ್ಯೋ * ವಿಘ್ನಗ್ರಹೇಭ್ಯೋ * ಸ್ಕಂದಗ್ರಹೇಭ್ಯೋ * ರುದ್ರಗ್ರಹೇಭ್ಯೋ * ಶಿವಗ್ರಹೇಭ್ಯೋ ನಮಃ– ಹೀಗೆ ಹನ್ನೆರಡು ದೇವತಾ ಮಂತ್ರಗಳು. ಐದು ದಿವಸ ಪಕ್ಷದಲ್ಲಿ ಆರಂಭದಿಂದ ಐದು ದೇವತೆಗಳು, ಏಳು, ಒಂಭತ್ತು, ಹತ್ತು, ಹನ್ನೆರಡು ದಿನಗಳಲ್ಲಿ ಆರಂಭದಿಂದ ಆಯಾಯ ಸಂಖ್ಯೆಯ ಬಲಿದೇವತೆಗಳೆನ್ನುವುದಾಗಿ ಅಭಿಪ್ರಾಯವು. ಸುಬ್ರಹ್ಮಣ್ಯನಲ್ಲಿ– ಬ್ರಹ್ಮಗ್ರಹೇಭ್ಯೋ * ಇಂದ್ರಗ್ರಹೇಭ್ಯೋ * ಭೂತಗ್ರಹೇಭ್ಯೋ * ಗಂಧರ್ವಗ್ರಹೇಭ್ಯೋ * ಯಕ್ಷಗ್ರಹೇಭ್ಯೋ * ರಾಕ್ಷಸಗ್ರಹೇಭ್ಯೋ * ಪಿಶಾಚಗ್ರಹೇಭ್ಯೋ * ಹೀಗೆ ಏಳು ಮಂತ್ರಗಳು. ಎಂಟರಲ್ಲಿ ಸ್ಕಂದಗ್ರಹೇಭ್ಯೋ ನಮಃ. ಆಮೇಲೆ ಮೂಲ ಮಂತ್ರವು ಸ್ಕಂದಗ್ರಹೇಭ್ಯೋ * ಎಂದೂ ಹೇಳಬಹುದು. ಪುನಃ ಶಂಕರನಾರಾಯಣ, ದುರ್ಗಾ, ವಿಷ್ಣು– ಗಳಲ್ಲಿ ಯವ, ರಾಜ, ಮಾಷ ಹೊರತಾಗಿ ಶಿವನಿಗೆ ಹೇಳಿದ ಬೀಜಗಳಲ್ಲಿಯೂ ಸುಬ್ರಹ್ಮಣ್ಯನಲ್ಲಿಯೂ– ಭೂತಗ್ರಹೇಭ್ಯೋ * ಪಿತೃಗ್ರಹೇಭ್ಯೋ * ಯಕ್ಷಗ್ರಹೇಭ್ಯೋ * ನಾಗಗ್ರಹೇಭ್ಯೋ * ಬ್ರಹ್ಮಗ್ರಹೇಭ್ಯೋ * ಶಿವಗ್ರಹೇಭ್ಯೋ * ವಿಷ್ಣುಗ್ರಹೇಭ್ಯೋ ನಮಃ ಹೀಗೆ ಏಳು ಬಲಿ ದೇವತಾ ಮಂತ್ರಗಳು. ಪುನಃಶಾಸ್ತಾರನಲ್ಲಿ– ಭೂತಗ್ರಹೇಭ್ಯೋ * ಪಿಶಾಚಗ್ರಹೇಭ್ಯೋ * ಯಕ್ಷಗ್ರಹೇಭ್ಯೋ * ನಾಗಗ್ರಹೇಭ್ಯೋ * ಬ್ರಹ್ಮಗ್ರಹೇಭ್ಯೋ ನಮಃ ಶಿವಗ್ರಹೇಭ್ಯೋ * ವಿಷ್ಣುಗ್ರಹೇಭ್ಯೋ ನಮಃ ಪಿತೃಗ್ರಹೇಭ್ಯೋ * ಸರ್ವದೇವಗ್ರಹೇಭ್ಯೋ ನಮಃ– ಹೀಗೆ ಒಂಭತ್ತು ಬಲಿದೇವತೆಗಳು.

ಇತಿ ಬೀಜಾಂಕುರ ಪ್ರಕಾರಃ.

* * * *

## ಧ್ವಜಾರೋಹಣ

ಮರುದಿನದಲ್ಲಿ ಧ್ವಜಾರೋಹಣವನ್ನು ಮಾಡಬೇಕು. ದೇಗುಲದ ಒಳಗೆ ಹಾಗೂ ಹೊರಗೆ ಬಾಗಿಲು ಇರುವುದಾದರೆ ಒಳಬಾಗಿಲಿನ ಶಾಖೆಯ ಉದ್ದವನ್ನು ಅಳೆದು, ಆ ಉದ್ದದಿಂದ ಧ್ವಜವನ್ನು ಹತ್ತು ಪಟ್ಟು ಉದ್ದವನ್ನಿಡಬೇಕು. ಒಳ್ಳೆಯ ಲೋಹದಿಂದಾಗಲಿ, ಮರದಿಂದಾಗಲೀ ವಾಹನವನ್ನು ರಚಿಸಬೇಕು. ಮಹಾಬಲಿ ಪೀಠದ ಹೊರಗೆ ಧ್ವಜದಂಡವನ್ನು ಸ್ಥಾಪಿಸಲು ಗುಳಿಯನ್ನು ತೋಡಿ ಅದರ ಹತ್ತಿರ ಧ್ವಜದಂಡವನ್ನು ಉತ್ತರಕ್ಕೆ ತುದಿ ಇರುವಂತೆ ಇರಿಸಿ, ತೊಳೆದು ಮಾವಿನ ಕುಡಿ (ಚಿಗುರು)ಗಳಿಂದ ಅಲಂಕರಿಸಬೇಕು. ಆಚಾರ್ಯನು ಸ್ನಾನ ಮಾಡಿ, ಆಚಮನ ಮಾಡಿ, ಪೂರ್ವ ಯಾ ಉತ್ತರಾಭಿಮುಖವಾಗಿ ಅಲ್ಲಿ ಕುಳಿತು ದೇಹಶುದ್ಧಿ, ಶಂಖಪೂರಣ ಆತ್ಮಾರಾಧನೆಯನ್ನು ಮಾಡಿ, ಗಣಪತಿಯನ್ನು ಪೂಜಿಸಿ, ಪ್ರಾಯಶ್ಚಿತ್ತ ಮೊದಲಾದುವುಗಳನ್ನು ಮಾಡಿ ಅಲ್ಲಿ ಇದುರಿನಲ್ಲಿ ಅಕ್ಕಿಯನ್ನು ತುಂಬಿದ ಪಾತ್ರೆಯಲ್ಲಿ ವಾಹನವನ್ನು ತೊಳೆದು ಇರಿಸಿ, ಪತಾಕೆಯನ್ನೂ ಇಟ್ಟು, ಗುಳಿಯನ್ನು ಅಸ್ತ್ರದಿಂದ ತೋಡಿ (ಯಂ) ವಾಯು ಬೀಜದಿಂದ ಧೂಳನ್ನು ತೆಗೆದುಬಿಟ್ಟು, ಸಗಣಿಯಿಂದ ಹಚ್ಚಿ, ಗಂಧ ಹೂವು ದರ್ಭೆ ಅಕ್ಷತೆಯನ್ನು ಗುಳಿಯಲ್ಲಿ ಹಾಕಿ, ಮೂರ್ತಿಪರಿಂದ ಕೂಡಿ 'ಓಂ ಧ್ವಜ ದೇವತಾಃ ಪ್ರೀಯಂತಾಂ' ಈ ವಾಕ್ಯದಿಂದ ಕೂಡಿ, ವಾಹನದಲ್ಲಿ, ಗುಳಿಯಲ್ಲಿ, ಧ್ವಜದಂಡದಲ್ಲಿಯೂ ಪುಣ್ಯಾಹವನ್ನು ಮಾಡಿ, ಪುಣ್ಯಾಹೋದಕದಿಂದ ತೊಳೆದು ಧ್ವಜದಂಡಕ್ಕೆ ಶೋಷಣ, ದಾಹನ ಪ್ಲಾವನಗಳನ್ನು ಮಾಡಿ, ಪ್ರಣವ (ಓಂಕಾರ) ದಿಂದ ಪೂಜಿಸಿ, ವೃಷಾಯ ನಮಃ, ಷಣ್ಮುಖಾಯ ನಮಃ, ವಾಯವೇ ನಮಃ ಎಂದು ಮೂಲದಲ್ಲಿ ಮಧ್ಯದಲ್ಲಿ ತುದಿಯಲ್ಲಿ ಪೂಜಿಸಬೇಕು. ಪುನಃ ವಾಹನದಲ್ಲಿ ಭೂತಸಂಹಾರವನ್ನು ಶೋಷಣ ಮೊದಲಾದುವನ್ನೂ ಭೂತಸೃಷ್ಟಿಯನ್ನೂ ಮಾಡಿ ಲಿಪಿಪ್ರಾಣಾಯಾಮವನ್ನೂ, ಲಿಪಿನ್ಯಾಸವನ್ನೂ ವಾಹನ ಮಂತ್ರ ಪ್ರಾಣಾಯಾಮವನ್ನೂ ಮಾಡಿ ವ್ಯಾಪನೆಯನ್ನು ಮಾಡಿ ಪ್ರಣವದಿಂದ ಅಂಗನ್ಯಾಸವನ್ನು ಮಾಡಬೇಕು. ಗುಳಿಯಲ್ಲಿ ಹಾಗೂ ಧ್ವಜದ ತುದಿಯಲ್ಲಿ ಪೀಠಪೂಜೆಯನ್ನು ಮಾಡಿ, ಅಕ್ಕಿಯ ಪಾತ್ರೆಯೊಂದಿಗೆ ಘಂಟೆ ಪತಾಕೆಗಳಿಂದ ಕೂಡಿ ವಾಹನವನ್ನು ತೆಗೆದುಕೊಂಡು ಮಂಗಳನೀರಾಜನದೊಂದಿಗೆ ದೇಗುಲದ ಒಳಗಡೆ ಪ್ರವೇಶಿಸಿ ದೇವರನ್ನು ಉಪಹಾರಗಳಿಂದ ಪೂಜಿಸಿ ವಾಹನದ ಪೀಠವನ್ನು ಪೂಜಿಸಿ ಮೂರ್ತಿಯನ್ನು ಭಾವಿಸಿ, ನೀರಾಜನವನ್ನು ಮಾಡಿ ದೇವರ ಇದಿರಿನಲ್ಲಿ ಇರುವ ವಾಹನದಿಂದ ವಾಹನ ಮಂತ್ರದಿಂದ ಅಲ್ಲಿ ಆವಾಹನೆ ಮಾಡಿ ಪ್ರಣವದಿಂದ ಅಂಗವನ್ನು ಮಾಡಿ ಶಾಕುಂತ ಸೂಕ್ತವನ್ನು ಜಪಿಸುತ್ತಾ ವಾದ್ಯಸ್ವರಗಳೊಂದಿಗೆ ಹೊರಗೆ ಹೋಗಿ ಧ್ವಜದ ಹತ್ತಿರ ಕುಳಿತು ತನ್ನ ಹೃದಯದಿಂದ ವಾಹನ ಮಂತ್ರದಿಂದ ವಾಹನ ಮೂರ್ತಿಯಲ್ಲಿ ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ ಅರ್ಘ್ಯವನ್ನಿತ್ತು ನೀರಾಜನವನ್ನು ಮಾಡಿ, ಪ್ರಣವ, ಉಪಚಾರ, ಮೂಲಮಂತ್ರ ಪಂಚತತ್ತ್ವ ವಾಹನ ಪ್ರಣವಗಳಿಂದ ಧ್ವಜದ ತುದಿಯಲ್ಲಿ ವಾಹನವನ್ನು ಸರಿಯಾಗಿ ಸ್ಥಿರವಾಗಿರುವಂತೆ ಇರಿಸಿ ವಾಹನದ ಎಡಭಾಗದಲ್ಲಿಯಾಗಲೀ ಉತ್ತರಭಾಗದಲ್ಲಾಗಲೀ ಧ್ವಜ ಸಮೀಪದಲ್ಲಿ ಪತಾಕೆ, ಘಂಟೆ, ಮಾಲೆಯನ್ನು ಜೋತಾಡಿಸಿ ಧ್ವಜವನ್ನು ಜಾಗ್ರತೆಯಾಗಿ ದೇವರ ಅಭಿಮುಖವಾಗಿ ಗುಳಿಯಲ್ಲಿ ಸ್ಥಾಪಿಸಿ ನಿಶ್ಚಲವಾಗಿ (ಗಟ್ಟಿಯಾಗಿರುವಂತೆ) ಮಾಡಿ, ವೇದಿಕೆ (ಜಗುಲಿ)ಯನ್ನು ಮಾಡಿ, ತನ್ನ ಮಂತ್ರದಿಂದ ಪ್ರತಿಷ್ಠಾಪಿಸಿ ತನ್ನ ಹೃದಯದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ

ಪೂಜಿಸಿ ನೈವೇದ್ಯವನ್ನು ವಿಸರ್ಜಿಸಿ ಗಂಡೂಷ (ಬಾಯಿ ಮುಕ್ಕಳಿಸುವ ನೀರು)ವನ್ನು ಕೊಟ್ಟು ಸ್ವಲ್ಪ ಪೂಜಿಸಿ ಬಲಿಯನ್ನು ಕೊಟ್ಟು ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ ಲಯಾಂಗವನ್ನು ಮಾಡಿ ಅಸ್ತ್ರಮಂತ್ರದಿಂದ ತಾಲತ್ರಯದಿಂದ ರಕ್ಷಿಸಬೇಕು. ಈ ಧ್ವಜಸ್ಥಾಪನೆಯನ್ನು ಕೃತಾಕೃತವೆಂದು ಕೆಲವು ಆಗಮಿಕರು ಹೇಳುತ್ತಾರೆ.

ಅಧಿವಾಸ ಮಾಡಲಿರುವ ನಾಲ್ಕು ದಿನದ ಮೊದಲು ಮುಸ್ಸಂಜೆ ಸಮಯದಲ್ಲಿ ಶುಭಲಕ್ಷಣದಿಂದ ಕೂಡಿದ ವಿಗ್ರಹವನ್ನು ಶಿಲ್ಪಿ ಶ್ರೇಷ್ಠನಿಂದ ಪರಿಗ್ರಹಿಸಿ ನೀರಿನಲ್ಲಿ ಅಧಿವಾಸ ಮಾಡಬೇಕು. ಆಚಾರ್ಯನು ಈ ಕಾರ್ಯಾಂಗವಾಗಿ ಸ್ನಾನವನ್ನು ಮಾಡಿ, ಮಂತ್ರಾಚಮನವನ್ನು ಮಾಡಿ ಶುದ್ಧವಾದ ಸ್ಥಳದಲ್ಲಿ ಕುಳಿತು ಸಕಲೀಕರಣ ಶಂಖ ಪೂರಣ ಆತ್ಮಾರಾಧನೆಯನ್ನು ಮಾಡಿ ವಿನಾಯಕನನ್ನು ಪೂಜಿಸಿ, ಇದುರಿನಲ್ಲಿ ಬರೆದ ಸ್ವಸ್ತಿಕದಲ್ಲಿ ಸಿದ್ಧಗೊಳಿಸಿದ ವ್ರೀಹ್ಯಾದಿ ಪೀಠದಲ್ಲಿ ಕ್ರಮದಂತೆ ಶೋಧಿಸಿದ ಚಿನ್ನದ ಪೇಲೇ (ಚಷಕ)ಯನ್ನಿರಿಸಿ ಕೂರ್ಚನ್ನಿರಿಸಿ ಅದರಲ್ಲಿ ಜೇನು, ತುಪ್ಪಗಳನ್ನು ಸೇರಿಸಿ, ಮೂಲಮಂತ್ರದಿಂದ ಅಭಿಮಂತ್ರಿಸಿ, ಪೂಜಿಸಿ ದಾನ ಮೊದಲಾದವುಗಳಿಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿ ಪರಿಗ್ರಹ ಮಂಟಪದಲ್ಲಿ ಹೋಗಿ ಬಿಂಬದ ನೇತ್ರೋನ್ಮೀಲನವನ್ನು ಮಾಡಬೇಕು.

* * * *

## ನೇತ್ರೋನ್ಮೀಲನ

ಚಿನ್ನದ ಪ್ಯಾಲೆಯಲ್ಲಿರುವ ತುಪ್ಪ ಹಾಗೂ ಜೇನು ಮಿಶ್ರಣವನ್ನು 'ಮಧುವಾತಾ ಋತಾಯತೇ'– ಮೊದಲಾದ ಮೂರು ಋಕ್ಕುಗಳಿಂದ ಜಪಿಸಿ ಮಂದಿರದ ಅಭಿಮುಖವಾಗಿ ಹಾಸಿಗೆಯಲ್ಲಿರಿಸಿದ ವಿಗ್ರಹದ ಕಣ್ಣುಗಳೆರಡನ್ನು ತುಪ್ಪ ಜೇನುಗಳಿಂದ ಕೂಡಿದ ಚಿನ್ನದ ಸೂಜಿಯ ತುದಿಯಿಂದ ಬರೆದು ಶಿಲ್ಪಿಯಿಂದ ಆ ಕಣ್ಣುಗಳೆರಡನ್ನು ಕೆತ್ತಿಸಿ, ನೀರಿನಿಂದ ಚಿಮುಕಿಸಿ ತುಪ್ಪ ಜೇನಿನಿಂದ ಕಣ್ಣುಗಳನ್ನು ಪ್ರಣವೋಚ್ಚಾರದಿಂದ ತುಂಬಿಸಿ, ಚಿನ್ನದ ಪ್ಯಾಲೆ ಮೊದಲಾದುವನ್ನು ಶಿಲ್ಪಿಗೆ ಕೊಡಬೇಕು. ಶಿವ ಮತ್ತು ಸ್ಕಂದರಲ್ಲಿ ಕಣ್ಣು ಬಿಡಿಸುವುದರ ಮೊದಲು ಹಾಸಿಗೆಯಲ್ಲಿ ಮಲಗಿಸಿದ ಬಿಂಬದ ಸುತ್ತಲೂ ಸಾಸಿವೆ ತುಪ್ಪದಿಂದ ಕೂಡಿದ ಪಾಯಸದಿಂದ–

**ದೇವತಾಭ್ಯಃ ಪಿತೃಭ್ಯೋಽಥ ಭೂತೇಭ್ಯಃ ಸಹ ಜಂಗಮೈ : ।**
**ಏತತ್ಸ್ಥಾನನಿವಾಸಿಭ್ಯಃ ಪ್ರಯಚ್ಛಾಮಿ ಬಲಿಂ ನಮಃ ॥**

ಈ ಮಂತ್ರದಿಂದ ಬಲಿಯನ್ನು ಕೊಡಬೇಕು. ಗುಹನಲ್ಲಿ ಹಿಂದೆ ವಿವರಿಸಿದಂತೆ ನೇತ್ರೋಲ್ಲೇಖನ ಮೊದಲಾದುವನ್ನು ಮಾಡಬೇಕು. ಅಲ್ಲಿ ಶಿವನಲ್ಲಿ ತಲೆಯಲ್ಲಿ ಸಾಸಿವೆಯಿಂದ ಕೂಡಿದ ಬಿಳಿಯ ಹೂವನ್ನಿಡಬೇಕು. ಆಮೇಲೆ ಚಂದನದಲ್ಲಿ ಅದ್ದಿದ ದಾರದಿಂದ– **ಓಂ ನಮೋ ಭಗವತೇ ರುದ್ರಾಯ ಹಿರಣ್ಯರೇತಸೇ ಮಹಾತ್ಮನೇ ಶಿವಾಯ ಶಿವರೂಪಾಯ ಉಮಾಪ್ರಿಯಾಯ ನಮೋ ನಮಃ**– ಈ ಮಂತ್ರದಿಂದ ಮಣಿರೇಖೆಯಲ್ಲಿ ಗುರುತಾಗುವಂತೆ ಆಸ್ಫಾಲಿಸಿ ಇಡಬೇಕು. ಶಿವನಲ್ಲಿ ಅಘೋರ ಮಂತ್ರದಿಂದ ತುಪ್ಪ ಜೇನನ್ನು ಸೇರಿಸಿ 'ಮಧುವಾತಾ'– ಮೂರು ಮಂತ್ರಗಳನ್ನು ಜಪಿಸಿ, 'ಮಧುವಾತಾ'– ಮೂರು ಮಂತ್ರಗಳಿಂದ ತುಪ್ಪದಿಂದ ಕೂಡಿದ ಜೇನಿನಿಂದ ಮಣಿರೇಖೆ ಪಾರ್ಶ್ವರೇಖೆಯಿಂದ ಕೂಡಿ ಗುರುತನ್ನು ಬರೆದು ಶಿಲ್ಪಿಯಿಂದ ಹಾಗೆಯೇ ರೇಖೆಯನ್ನು ಮಾಡಿಸಿ ತುಪ್ಪ ಜೇನಿನಿಂದ ತುಂಬಿಸಬೇಕು. ಆಮೇಲೆ ಆಚಾರ್ಯನು ಸಂತೋಷಗೊಂಡು ಶಿಲ್ಪಿಯಿಂದ ಅಲ್ಲಿಂದ ಎತ್ತಿ ಮಂದಿರದ ಬಾಗಿಲಿಗೆ ಅಭಿಮುಖವಾಗಿ ಭದ್ರ ಪೀಠದಲ್ಲಿ ಇಡಲ್ಪಟ್ಟ ಬಿಂಬವನ್ನು ಯಜಮಾನನು ಶಿಲ್ಪಿಯ ಕೈಯಿಂದ ಸ್ವೀಕರಿಸಿ, ಆಚಾರ್ಯನಿಗೆ ಒಪ್ಪಿಸಿದ ಸಮನಂತರದಲ್ಲಿ ಆ ಮನು ಬಿಂಬವನ್ನು ಪ್ರಣವೋಚ್ಚಾರದಿಂದ ನೋಡಿ ಬೊಗಸೆಗೈಯಲ್ಲಿ ಮೇಲ್ಭಾಗಕ್ಕೆ ಅಗ್ರವನ್ನು ಹೊಂದಿದ ಎರಡು ದರ್ಭೆಗಳಿಂದ ತ್ರಿಮಾತ್ರಾ (ಪ್ಲುತ) ಪ್ರಣವವನ್ನು ಉಚ್ಚರಿಸುತ್ತಾ ಬಲಗೈಯಿಂದ ಬಲಗಾಲನ್ನೂ ಎಡಗೈಯಿಂದ ಎಡಗಾಲನ್ನೂ ದರ್ಭೆಯಿಂದ ಸ್ಪರ್ಶಿಸುತ್ತಾ ಆ ಪ್ರತಿಮೆಯನ್ನು ಸ್ವೀಕರಿಸಬೇಕು. ವಿಷ್ಣುವಿನಲ್ಲಿ ತನ್ನ ತಿಕ್ಕಿ, ತುಪ್ಪದಿಂದ ಅಭಿಷೇಕ ಮಾಡಿ ಚೆನ್ನಂಗಿ ಬೇಳೆಯ ಹಿಟ್ಟಿನಿಂದ ಉಜ್ಜಿ ನೀರಿನಿಂದ ತೊಳೆಯಬೇಕು. ಹೀಗೆ ಎಲ್ಲೆಡೆಯಲ್ಲೂ ಮೂಲಮಂತ್ರದಿಂದಾಗಲೀ, ಅಸ್ತ್ರಮಂತ್ರದಿಂದಾಗಲೀ ನೀರಿನಿಂದ ತೊಳೆದು, ದರ್ಭೆಗಳಿಂದ ಉಜ್ಜಿ, ದನದ ಹಾಲದಿಂದಲೂ ವ್ಯವಸ್ಥೆ (ಪ್ರಯೋಗ) ಮಾಡಬೇಕು. ಎಲ್ಲೆಡೆಯಲ್ಲೂ ಅಸ್ತ್ರ ಅಥವಾ ಮೂಲಮಂತ್ರವು ಶುದ್ಧಗೊಳಿಸುವ ಮಂತ್ರವು. ಶಿವನಲ್ಲಿ– ತುಪ್ಪದಿಂದ ಕೂಡಿದ ಜೇನಿನಿಂದ, ತೊಪ್ಪೆಗಳಿಂದ, ಮಣ್ಣುಗಳಿಂದ, ಭಸ್ಮದಿಂದ, ಹಿಟ್ಟುಗಳಿಂದ, ಗಂಧದನೀರುಗಳಿಂದಲೂ. **ಶಂಕರನಾರಾಯಣನಲ್ಲಿ**– ನೀರು, ಜೇನು ತುಪ್ಪ, ದರ್ಭೆ, ತೊಗಟೆ, ಮಣ್ಣು, ನೀರುಗಳಿಂದಲೂ, ದುರ್ಗೆಯಲ್ಲಿ– ನೀರು, ದರ್ಭೆ, ದನದ ಹಾಲ, ಜೇನು, ತುಪ್ಪ, ಚೆನ್ನಂಗಿ ಬೇಳೆ ಹಿಟ್ಟು, ನೀರುಗಳಿಂದಲೂ, **ಗುಹನಲ್ಲಿ**– ದರ್ಭೆ, ಮಣ್ಣು, ತೊಪ್ಪೆ, ನೀರು ಹಸುವಿನ ಹಾಲ, ತುಪ್ಪ, ಚನ್ನಂಗಿಹಿಟ್ಟು ನೀರು, ಗೋಮಯ ನೀರುಗಳಿಂದಲೂ, **ಗಣಪತಿಯಲ್ಲಿ**– ನೀರು, ಮಣ್ಣು, ಪ್ಲಕ್ಷದಿಂದ ಹೊರತಾದ ತೊಪ್ಪೆ, ದರ್ಭೆನೀರು, ಜೇನು, ಆಜ್ಯಮಾಸೂರ ಪಿಷ್ಟಗಳಿಂದಲೂ, **ಶಾಸ್ತಾರನಲ್ಲಿ**– ನೀರು, ದರ್ಭೆ ಕುಶ, ಮಣ್ಣು ಪಂಚಗವ್ಯ, ಅಕ್ಕಿಹಿಟ್ಟು ನೀರಿನಿಂದಲೂ ಒಂದಾದ ಮೇಲೆ ಒಂದರಂತೆ ಅನುಕ್ರಮವಾಗಿ ಆಯಾಯ ದೇವತೆಗಳ

ಮೂಲಮಂತ್ರದಿಂದಾಗಲೀ ಆಯಾಯ ಅಸ್ತ್ರ ಮಂತ್ರಗಳಿಂದಾಗಲೀ ತೊಳೆದು ಶುದ್ಧಗೊಳಿಸಬೇಕು. ಶಿವನಲ್ಲಿ– ಮುದ್ಗ, ಹರಿದ್ರಾ, ಯವ, ಶಾಲಿ, ಗೋಧೂಮ ಚಿನ್ನದ ಪುಡಿಗಳು. ಎಲ್ಲಾ ದೇವತೆಗಳಿಗೂ ಮಣ್ಣು ಮೊದಲಾದವುಗಳನ್ನು ಬಿಂಬಕಲಶದಿಂದ ತಿಳಿದುಕೊಳ್ಳಬೇಕು. ಶಿವನಲ್ಲಿ ಜೇನು, ಮುತ್ತುಗ, ಬಿಲ್ವಪತ್ರೆ, ಹಲಸು, ಕಬ್ಬು ಇವುಗಳಿಂದ ಅಭಿಷೇಕ. ವಿಷ್ಣು ಶಿವರಲ್ಲಿ ಅರಳೀ ಮರದ ಹೊರತಾಗಿ ಹಾಲುಮರದ ತೊಪ್ಪೆಗಳು. ಈಶ್ವರನ ಬಿಂಬಕಲಶದಲ್ಲಿ ಹುತ್ತ, ಎತ್ತಿನ ಕೊಂಬಿನದು, ತೀರ್ಥಕ್ಷೇತ್ರ, ಆನೆಯ ದಂತದ್ದು, ಬೆಟ್ಟದ ತುದಿಯದು, ಹೊಳೆಯದು, ಯಜ್ಞವೇದಿಕೆ, ನಾಲ್ಕು ದಾರಿ ಕೂಡುವ ಚೌಕ– ಇಲ್ಲಿಯ ಮಣ್ಣುಗಳು. ಶಂಕರನಾರಾಯಣನಲ್ಲಿ ಕುದಿಸಿದ ಹೇಳಲ್ಪಟ್ಟ ಮರದ ತೊಪ್ಪೆಗಳು ಸಗಣಿ (ಒಣಗಿದ್ದು) ಚೆನ್ನಾಗಿ ಸುಟ್ಟ ಬೂದಿ, ಸಾಮಾನ್ಯ ಸಿದ್ಧವಾದ ಭಸ್ಮಗಳು. ಹಾಲಸೊಣೆ ಮರ, ಅರಳಿ, ಶಮೀ, ಖದಿರ– ಇವುಗಳ ತೊಪ್ಪೆಗಳು ದುರ್ಗಿಗೆ ಹೇಳಿದುದು. ಶಂಕರನಾರಾಯಣನಲ್ಲಿ– ಖದಿರೆಯ ಹೊರತಾಗಿ ಉಳಿದ ತೊಪ್ಪೆಗಳು. ಹೊಳೆಯ ಎರಡು ದಡ, ಗದ್ದೆ, ಹುತ್ತ, ಎತ್ತಿನ ಕೊಂಬಿನದು– ಈ ಮಣ್ಣುಗಳು. ಸ್ಕಂದನಲ್ಲಿ– ಯಜ್ಞವೇದಿ, ಉಳಗದ್ದೆ, ಆನೆಯ ದಂತದ್ದು, ಎತ್ತಿನ ಕೊಂಬಿನದು, ಬೆಟ್ಟದ ತುದಿಯದು, ಹುತ್ತದ್ದು, ಹೊಳೆ ಮತ್ತು ಸಮುದ್ರ ಇಲ್ಲಿಂದ ಸಂಗ್ರಹಿಸಿದ ಮಣ್ಣುಗಳು. ಆಲ, ಅತ್ತಿ, ಅಶ್ವತ್ಥ, ಅರಳೆ, ಕಬ್ಬು (ಹಲಸು) ಶಿರಸಲ, ಹಿಪ್ಪೆಮರ– ಇವುಗಳ ತೊಪ್ಪೆಗಳು. ಗಣಪತಿಗೆ ಶಿವನಿಗೆ ಹೇಳಿದ ಮಣ್ಣುಗಳು (ಯಜ್ಞವೇದಿ, ಉಳಗದ್ದೆ, ಆನೆದಂತದ್ದು, ಎತ್ತಿನಕೊಂಬಿನದು, ಬೆಟ್ಟದ ತುದಿಯದು, ಹುತ್ತ) ಮತ್ತು ಮೂಷಕಾಲಯದ್ದು ತೀರ್ಥದ ಮಣ್ಣು. ಹಾಲಿನ ಮರ, ಬೇಲದ ಮರ, ಹಿಪ್ಪೆ ಮರ, ಬಿಲ್ವಮರ ಈಮರ ತೊಪ್ಪೆಗಳು. ಶಾಸ್ತಾರನಲ್ಲಿ– ಆನೆದಂತದ್ದು, ದೇವದಾರು, ಎತ್ತಿನ ಕೊಂಬಿನದು, ಹುತ್ತದ್ದು, ಯಜ್ಞವೇದಿ– ಈ ಮಣ್ಣುಗಳು. ಹಾಲುಸೊಣೆಯ ಮರದ ತೊಪ್ಪೆಗಳು– ಈ ರೀತಿಯಾಗಿ ಹೇಳಲ್ಪಟ್ಟಿವೆ.

ಶಿವ ಮತ್ತು ಶಾಸ್ತಾರರಲ್ಲಿ ಆಮೇಲೆ ಅಲಂಕರಿಸಿ ನೀರಾಜನವನ್ನು ಮಾಡಬೇಕು. ವಿಷ್ಣು ದುರ್ಗಾ ಸ್ಕಂದರಲ್ಲಿ ತಮ್ಮ ಅಕ್ಷತ ಹೋಮದ ಕೊನೆಯಲ್ಲಿ, ಗಣಪತಿ ಶಂಕರನಾರಾಯಣರಲ್ಲಿ ಕೌತುಕಕಟ್ಟಿದ ಮೇಲೆ ನೀರಾಜನ ಮಾಡಬೇಕು. ಗುಹನಲ್ಲಿ ಕೌತುಕ ಬಂಧನವನ್ನು ಇಲ್ಲಿ ಮಾಡಬೇಕು.

* * * *

## ಅಕ್ಷತಹೋಮ

ದುರ್ಗಾ, ಗುಹ, ವಿಷ್ಣುಗಳಲ್ಲಿ ಪ್ರತಿಮೆಯ ಮುಂಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ, ಶಮೀ ಪತ್ರಗಳಿಂದ ಬೆರೆತ ತುಪ್ಪದಿಂದ ಕೂಡಿದ ಅಕ್ಷತೆಗಳಿಂದ ಭೂರಾದಿ ಏಳುವ್ಯಾಹೃತಿಗಳಿಂದ– ಓಂ ಸತ್ಯಂ ಸ್ವಾಹಾ– ಹೀಗೆ ಕೊನೆಗೊಳ್ಳುವ ಮಂತ್ರಗಳಿಂದ ಪ್ರತ್ಯೇಕವಾಗಿ ನೂರೆಂಟರ ಸಂಖ್ಯೆಯಲ್ಲಿ ಹೋಮಿಸಬೇಕು. ವಿಷ್ಣುವಿನ ಅಕ್ಷತ ಹೋಮದಲ್ಲಿ ವಿಷ್ಣು ಗಾಯತ್ರಿಯಿಂದ ಪೂಜಾಹೋಮದ ಕೊನೆಯಲ್ಲಿ ಮತ್ತು ಪ್ರತಿ ಮಂತ್ರ ಹೋಮದ ಕೊನೆಯಲ್ಲಿಯೂ ತುಪ್ಪದಿಂದ ಪೂರ್ಣಾಹುತಿಯನ್ನು ಮಾಡಬೇಕು. ದುರ್ಗಾ ಗುಹ ಮೊದಲಾದ ದೇವತೆಗಳಲ್ಲಿ ಮೂಲಮಂತ್ರದಿಂದಲೇ ಪೂರ್ಣಾಹುತಿಯು. ಪ್ರತಿಮೆಯ ಅಂಗಪರಿಪೂರ್ಣತೆಗಾಗಿ ಸಂಪಾತಾಜ್ಯವನ್ನು ಪಾದ ಜಾನು ಗುಹ್ಯ ನಾಭಿ ಹೃದಯ ಮುಖ ತಲೆ ಈ ಸ್ಥಾನಗಳಲ್ಲಿ ಸಮರ್ಪಿಸಿ, ಆಮೇಲೆ ಪುಷ್ಪಾಂಜಲಿಯನ್ನು ಮಾಡಬೇಕು. (ಶಿವನಲ್ಲಿ ಅಧಿವಾಸ ಹೋಮಕ್ಕೆ ಮೊದಲು ಪ್ರತಿಷ್ಠಾ ಹೋಮವೆಂದು ಹೇಳಲ್ಪಡುತ್ತದೆ. ಗಣಪತಿಯಲ್ಲಿ ಇದು ವಿಕಲ್ಪವೆಂದು ವ್ಯಾಖ್ಯಾತೃಗಳ ಮತವು.) **ಗಣಪತಿ ಶಂಕರನಾರಾಯಣರಲ್ಲಿ**– ಮಣ್ಣು ಮೊದಲಾದವುಗಳಿಂದ ಶುದ್ಧಗೊಳಿಸಿದ ನಂತರ ಮೂಲಮಂತ್ರದಿಂದ ಕೌತುಕವನ್ನು ಕಟ್ಟಬೇಕು. **ಸ್ಕಂದನಲ್ಲಿ**– ಅಕ್ಷತಹೋಮಕ್ಕೆ ಮೊದಲು ಪ್ರಣವಪುಟಿತವಾದ ಉಪಚಾರ ಮಂತ್ರದಿಂದಲೂ, **ದುರ್ಗಿಯಲ್ಲಿ**– ಹೇಳಲ್ಪಟ್ಟ ಆಹುತಿಗಳ ಮೊದಲು ಯಾ ಅನಂತರದಲ್ಲಿ ಸುದರ್ಶನ ಮಂತ್ರದಿಂದಲೂ, **ವಿಷ್ಣುವಿನಲ್ಲಿ**– ಜಲಾಧಿವಾಸದಿಂದ ತೆಗೆದೊಡನೆಯೇ ಜಿತಂತೇ– ಉಪಚಾರ ಮಂತ್ರದಿಂದ ಕೂಡಿದ ಅಷ್ಟಾಕ್ಷರ ಮಂತ್ರದಿಂದಲೂ, **ಶಾಸ್ತಾರನಲ್ಲಿ**– ಬಿಂಬಶುದ್ಧಿ ಕಲಶಾಭಿಷೇಕಕ್ಕೆ ಮೊದಲು ಬೀಜಮಂತ್ರದಿಂದ ಕೌತುಕವನ್ನು ಕಟ್ಟಬೇಕು. (ಬೀಜಮಂತ್ರ– ಓಂ ಶ್ರೀಂ ಹ್ರೀಂ ಕ್ಷ್ಮೀಂ (ಕ್ಷ್ರೀಂ) ಹ್ರೂಂ (ಹ್ಯಾಂ) ಘ್ರೂಂ ಶಂಬರ ಕುಮಾರಾಯ ಪದ್ಮಿನೇ ಸ್ವಾಹಾ) ಶಿವನಲ್ಲಿ ಕೌತುಕವು ಇರುವುದಿಲ್ಲ. ಮೇಲ್ಮುಖವಾದ ತುದಿಯುಳ್ಳ ಎರಡು ದರ್ಭೆಗಳಿಂದ ಕೂಡಿದ ಅಂಜಲಿಬದ್ಧನಾಗಿ ವಿಗ್ರಹದ ಸಮ್ಮುಖದಲ್ಲಿ ನಿಂತುಕೊಂಡು ನಮಸ್ತೇಽರ್ಚೇ– ಎಂಬ ಎರಡು ಮಂತ್ರಗಳಿಂದ ಪ್ರಾರ್ಥಿಸಿ ಪಟ್ಟೆಯ ತುಣುಕಿನಲ್ಲಿ ಮತ್ತು ಸಾಸಿವೆ ಚಿನ್ನದ ಚೂರುಗಳನ್ನಿಟ್ಟು, ಕಂಬಳಿಯ ದಾರದಿಂದ ಸುತ್ತಿ ಅಸ್ತ್ರಪ್ರೋಕ್ಷಣಾದಿ ಶೋಷಣಾದಿಗಳನ್ನು ಮಾಡಿ, ಪೂಜಿಸಿ ಮಂಗಲಮಯವೆಂದು ಭಾವಿಸಿ, ಆಯಾಯ ದೇವತೆಗಳ ಮೂಲಮಂತ್ರದಿಂದ ಅಭಿಮಂತ್ರಿಸಿ ಜಪಮಾಡಿ ಅಂಗುಷ್ಠಸಹಿತವಾದ ಅನಾಮಿಕೆಯಿಂದ ತನ್ನ ಮೂಲ ಮಂತ್ರದ ಪಠನದೊಂದಿಗೆ ಪ್ರಧಾನವಾದ ಬಲಗೈಯಲ್ಲಿ ಏಳು ಸುತ್ತು ಸುತ್ತಿ ಏಳು ಬಾರಿ ಮಂತ್ರ ಪಠಿಸಬೇಕು.

**ನಮಸ್ತೇಽರ್ಚೇ ಸುರೇಶಾನಿ ಪ್ರತೀಕೇ ವಿಶ್ವಕರ್ಮಣಃ ।**
**ಪ್ರಭಾವಿತಾಶೇಷ ಜಗದ್ಧಾತ್ರಿ ತುಭ್ಯಂ ನಮೋ ನಮಃ ॥**

**ತ್ವಯಿ ಸಂಪೂಜಯಾಮೀಶಂ ನಾರಾಯಣಮನಾಮಯಂ ।**
**ರಹಿತಾ ಯೋನಿದೋಷೈಸ್ತ್ವಮೃದ್ಧಿಯುಕ್ತಾ ಸದಾ ಭವ ॥**

ಇದು ವಿಷ್ಣು ಸಂಬಂಧವಾದ ಪ್ರಾರ್ಥನಾ ಮಂತ್ರವು. ಶಂಕರನಾರಾಯಣನಲ್ಲಿ– ತ್ವಯಿ ಸಂಪೂಜಯಾಮೀಶ ಶಂಭುನಾರಾಯಣಾ ಸದಾ– ಹೀಗೆ ಬೇರೆ ದೇವತೆಗಳಲ್ಲೂ ಊಹೆಯನ್ನು ಮಾಡಿಕೊಳ್ಳಬೇಕು. ಕಾರ್ತಿಕೇಯ ಮನಾಮಯ್ಯ ಇತ್ಯಾದಿ. ದುರ್ಗಿಯಲ್ಲಿ–

**ನಮಸ್ತೇಽರ್ಚೇ ಸುರೇಶಾನಿ ವಿಶ್ವಾವಾಸೇಽಸುರಾರಿಣೆ ।**
**ಪ್ರಭಾಮಿತಾಶೇಷಜಗದ್ಧಾತ್ರಿ ತುಭ್ಯಂ ನಮೋ ನಮಃ ॥**

**ತ್ವಯಿ ಸಂಪೂಜಯಾಮೀಶೇ ದೇವೀಂ ನಾರಾಯಣೀಂ ಸದಾ ।**
**ರಹಿತಾ ಯೋನಿದೋಷೈಸ್ತ್ವಮೃದ್ಧಿಯುಕ್ತಾ ಸದಾ ಭವ ॥–ಇತಿ**

ಬಟ್ಟೆ ದರ್ಭೆಗಳಿಂದ ಕವಚಮಂತ್ರಗಳೊಂದಿಗೆ ಸುತ್ತಲ್ಪಟ್ಟ ಬಿಂಬವನ್ನು ರಥವೇ ಮೊದಲಾದ ಯಾನ ಸಾಧನಗಳಲ್ಲಿರಿಸಿ, ಮನಸ್ಸನ್ನು ಸೂರೆಗೊಳ್ಳುವ ವಾದ್ಯ ಮೊದಲಾದುವುಗಳಿಂದ ಕೂಡಿ ಆಚಾರ್ಯನು ಕನಿಕ್ರದಜ್ಜನುಷಂ– ಮೊದಲಾದ ಸೂಕ್ತವನ್ನು ಜಪಿಸುತ್ತಾ ತೀರ್ಥಸ್ಥಾನ, ನದಿಯ ದಡ ಮೊದಲಾದೆಡೆಗೆ ಜಲಾಧಿವಾಸಕ್ಕಾಗಿ ಕೊಂಡುಹೋಗಿ ಬಿಂಬವನ್ನು ಯಾನದಿಂದಿಳಿಸಿ, ತನಗೆ ಸಕಲೀಕರಣಾದಿಗಳನ್ನು ಮಾಡಿ, ಓಂ ವಂ ವರುಣಾಯ ನಮಃ– ಎಂದು ವರುಣನನ್ನು ಮೂಲದಿಂದ ದೇವರನ್ನೂ ಪೂಜಿಸಿ– ತತ್ತ್ವಾಯಾಮಿ– ಇಮಂ ಮೇ ವರುಣ ಅವತೇಹೇಳೋ– ತ್ವಂನೋ ಅಗ್ನೇ– ಉದುತ್ತಮ– ಹೀಗೆ ಐದು ವಾರುಣಮಂತ್ರವನ್ನು ಜಪಿಸಿ, ಅಶ್ವತ್ಥಮರದಿಂದ ಸಿದ್ಧಗೊಳಿಸಿದ ಹಲಗೆಯನ್ನಿರಿಸಿ, ಅಲ್ಲಿ ಪೀಠವನ್ನಿರಿಸಬೇಕು. ಮೊದಲು ಸುತ್ತಿದ ವಸ್ತ್ರ ಮೊದಲಾದವುಗಳನ್ನು ತೆಗೆದು ಅಭಿಷೇಕ ಮಾಡಿ ಅಲಂಕರಿಸಿ– ಓಂ ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮಗಳನ್ನು ಮಾಡಿ– ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ನಮಃ– ಹೀಗೆ ಪಾದದಿಂದಾರಂಭಿಸಿ ನಾಭಿ (ಹೊಕ್ಕುಳು) ಪರ್ಯಂತವಾಗಿ ವ್ಯಾಪಿಸಿ, ಹ್ಲೀಂ ನಮಃ ಪರಾಯಾಬಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ನಾಲ್ಕು ಪ್ರಾಣಾಯಾಮಗಳನ್ನು ಮಾಡಿ, ಹ್ಲೀಂ ನಮಃ ಪರಾಯ ಅಬಾತ್ಮನೇ ನಮಃ– ನಾಭಿಯಿಂದ ಹೃದಯ ಪರ್ಯಂತವಾಗಿ ವ್ಯಾಪಿಸಿ, ಹ್ಲೂಂ ನಮಃ ಪರಾಯತೇಜ ಆತ್ಮನೇ ಹುಂಫಟ್– ಎಂದು ಇಪ್ಪತ್ತೈದು ಸಂಖ್ಯೆಯ ಮೂರು ಪ್ರಾಣಾಯಾಮಗಳನ್ನು ಮಾಡಿ, ಹ್ಲೂಂ ನಮಃ ಪರಾಯ ತೇಜ ಆತ್ಮನೇ ನಮಃ– ಹೃದಯದಿಂದಾರಂಭಿಸಿ ಕಂಠ ಪರ್ಯಂತವಾಗಿ ವ್ಯಾಪಿಸಿ, ಹ್ಲೈಂ ನಮಃ ಪರಾಯ ವಾಯ್ವಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಎರಡು ಪ್ರಾಣಾಯಾಮಗಳನ್ನು ಮಾಡಿ, ಹ್ಲೈಂ ನಮಃ ಪರಾಯ ವಾಯ್ವಾತ್ಮನೇ ನಮಃ ಎಂದು ಕಂಠದಿಂದ ತಾಲು ಪರ್ಯಂತವಾಗಿ ವ್ಯಾಪಿಸಿ, ಹ್ಲೌಂ ನಮಃ ಪರಾಯ ಆಕಾಶಾತ್ಮನೇ ಹುಂಫಟ್ ಹೀಗೆ ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ, ಓಂ ಹ್ಲೌಂ ನಮಃ ಪರಾಯಾ ಆಕಾಶಾತ್ಮನೇ ನಮಃ– ಹೀಗೆ ತಾಲುವಿನಿಂದಾರಂಭಿಸಿ ಮೂರ್ಧಾಂತವಾಗಿ ವ್ಯಾಪಿಸಿ ಭೂತಸಂಹಾರವನ್ನು ಮಾಡಿ, ಆಯಾಯ ಬೀಜಗಳಿಂದ ಶೋಷಣ(ಯಂ) ದಾಹನ(ರಂ)ಗಳನ್ನು ಮಾಡಿ ಅಗ್ನಿ ಸ್ವರೂಪದಂತಿರುವ ವಿಗ್ರಹವನ್ನು ಬಟ್ಟೆ ಮೊದಲಾದವುಗಳಿಂದ ಹೊದಿಸಿ ಓಂಕಾರದಿಂದ ಪೂರ್ವಕ್ಕೆ ತಲೆಯಾಗಿ ನೀರಿನಲ್ಲಿ ಮಲಗಿಸಬೇಕು. ದಿಕ್ಕುಗಳಲ್ಲಿ ಮೇಲ್ಭಾಗದಲ್ಲಿಯೂ ಪಂಚತತ್ತ್ವಗಳಿಂದಲೂ ಅಸ್ತ್ರದಿಂದಲೂ ರಕ್ಷಣೆಯನ್ನು ಮಾಡಿ ಅದರ ಹೊರಭಾಗದಲ್ಲಿ ದಿಕ್ಪಾಲಕರನ್ನು ಸಂರಕ್ಷಣೆಗಾಗಿ ಇರಿಸಿ, ದೀಪಗಳನ್ನೂ ಬೆಂಕಿಯನ್ನೂ ಎಚ್ಚರವಾಗಿರುವ ಕಾವಲುಗಾರರನ್ನೂ ಇಟ್ಟು ಮೂರು ರಾತ್ರೆ ಸಂರಕ್ಷಣೆ ಮಾಡಬೇಕು.

* * * *

## ಗೇಹಪರಿಗ್ರಹಃ

ಆಮೇಲೆ ಅಧಿವಾಸದ ಹಿಂದಿನ ದಿವಸ ಯಜಮಾನನು ಶಿಲ್ಪಿಯಿಂದ ಕೊಡಲ್ಪಟ್ಟ ಪ್ರಾಸಾದವನ್ನು ಪರಿಗ್ರಹಿಸಬೇಕು.

**ದಾರುಭಿರ್ನಿರ್ಮಿತಂ ಗೇಹಂ ದೃಢಂ ಸೌಮ್ಯಂ ತ್ವಯಾ ಕೃತಂ ।**
**ದೇಹಿ ಮೇ ಶಿಲ್ಪಶಾಸ್ತ್ರಜ್ಞ ಸ್ಥಾಪನಾರ್ಥಂ ಹರೇಃ ಶುಭಂ ॥**

ಶಿಲ್ಪಶಾಸ್ತ್ರವನ್ನು ತಿಳಿದ ಶಿಲ್ಪಿಯೇ ಮರಗಳಿಂದಲೂ, ಶಿಲೆಗಳಿಂದಲೂ ಸುಂದರವಾಗಿ ಪ್ರಾಸಾದವು ನಿನ್ನಿಂದ ಮಾಡಲ್ಪಟ್ಟಿದೆ. ಮಂಗಳಪ್ರದವಾಗಿರುವ ಇದನ್ನು ಮಹಾವಿಷ್ಣುವಿನ ಸ್ಥಾಪನೆಗಾಗಿ ನನಗೆ ಕೊಡುವವನಾಗು. (ಬೇರೆ ದೇವತೆಗಳಲ್ಲಿ ಆಯಾಯ ದೇವತೆಗಳಿಗೆ ಹೊಂದಿಕೊಳ್ಳುವಂತೆ ಚರಣಗಳನ್ನು ಬದಲಾಯಿಸಬೇಕು. ಸ್ಥಾಪನಾರ್ಥಂಗಣೇಶಿತುಃ ಶಿವಸ್ಯಚ, ಗುಹಸ್ಯಚ- ಇತ್ಯಾದಿ)

**ತ್ವಯಾ ಸಂಸ್ಥಾಪಿತಂ ಪುಣ್ಯಂ ದಶಾಂಶಂ ದೇಹಿ ಮೇ ವಿಭೋ ।**
**ತದ್ಗೃಹೀತ್ವಾ ಮುದಾ ಗೇಹಂ ಪ್ರದಾಸ್ಯಾಮಿ ನರೋತ್ತಮ ॥**

ಶ್ರೇಷ್ಠನಾದ ಪ್ರಭುವೇ, ನಿನ್ನಿಂದ ಪ್ರತಿಷ್ಠೆ ಮಾಡಲ್ಪಡುವ ದೇವರಿಂದ ಸಿಗಬಹುದಾದ ಪುಣ್ಯದಲ್ಲಿ ಹತ್ತಂಶವನ್ನು ನನಗೆ ಕೊಡುವವನಾಗು. ಅದನ್ನು ತೆಗೆದುಕೊಂಡು ಭವನವನ್ನು ಬಿಟ್ಟುಕೊಡುತ್ತೇನೆ.

**ವಿಷ್ಣೋಃ ಸಂಸ್ಥಾಪನಂ ಪುಣ್ಯಂ ನ ದಾಸ್ಯಾಮಿ ಕದಾಚನ ।**
**ತ್ವಯೇಪ್ಸಿತಂ ಧನಂ ರತ್ನಂ ಗೃಹಾಣಾಲಯಕಾರಕ ॥**

ವಿಷ್ಣು ಪ್ರತಿಷ್ಠೆಯ ಪುಣ್ಯವನ್ನು ಯಾವಾಗಲೂ ಕೊಡುವುದಿಲ್ಲ. ಎಲೈ ಶಿಲ್ಪಿಯೇ ನೀನು ಬಯಸಿದ ಹಣ, ರತ್ನ ಮೊದಲಾದವುಗಳನ್ನು ತೆಗೆದುಕೊಳ್ಳು. (ನೀನು ಸಂತೋಷದಿಂದ ಕೊಡುವವನಾಗು)

**ಮಯಾ ಕೃತಮಿದಂ ಗೇಹಂ ದೃಢಂ ಸೌಮ್ಯಂ ಶಿಲಾತ್ಮಕಂ ।**
**ಗೃಹಾಣಾಹಂ ಪ್ರದಾಸ್ಯಾಮಿ ವಿಷ್ಣೋಃ ಸಂಸ್ಥಾಪನಾಯಂ ಚ ॥**

ನನ್ನಿಂದ ಮಾಡಲ್ಪಟ್ಟ ಶಿಲಾಮಯವಾದ ಗಟ್ಟಿಮುಟ್ಟಾದ ಸುಂದರವಾದ ಪ್ರಾಸಾದವನ್ನು ವಿಷ್ಣುವಿನ ಪ್ರತಿಷ್ಠೆಗಾಗಿ ನಾನು ಸಂತೋಷದಿಂದ ಕೊಡುತ್ತೇನೆ. ಸ್ವೀಕರಿಸುವವನಾಗು.

ಹೀಗೆ ಶಿಲ್ಪಿಯಿಂದ ಕೊಡಲ್ಪಟ್ಟ ಮಂದಿರವನ್ನು ಯಜಮಾನನು ಪರಿಗ್ರಹಿಸಿ, ಆಚಾರ್ಯನಿಗೆ ಕೊಡಬೇಕು. ಆಚಾರ್ಯನು ರಾತ್ರಿಯ ಸಮಯದಲ್ಲಿ ಸುತ್ತಲೂ ಪರಿಶೀಲಿಸಿ, ಪರಿಶೋಧನೆ ಮಾಡಿ ದಕ್ಷಿಣ ಭಾಗದಲ್ಲಿ ಕುಳಿತುಕೊಂಡು ಪ್ರಾಸಾದಶುದ್ಧಿಯನ್ನು ಮಾಡಬೇಕು.

* * * *

## ಸ್ಥಾನಶುದ್ಧಿಃ

**ಖನನಂ ಹರಣಂ ದಾಹಃ ಪೂರಣಂ ಗೋನಿವಾಸನಂ ।**
**ವಿಪ್ರೋಚ್ಛಿಷ್ಟಂ ಪಂಚಗವ್ಯಂ ಸಪ್ತೈತಾಃ ಸ್ಥಾನಶುದ್ಧಯಃ ॥**

ಹೊಂಡ(ಕುಳಿ) ತೆಗೆಯುವುದು, ಆ ಮಣ್ಣನ್ನು ತೆಗೆಯುವುದು, ಆ ಸ್ಥಳವನ್ನು ಸುಡುವುದು, ಹೊಸ ಮಣ್ಣನ್ನು ಕುಳಿಯಲ್ಲಿ ತುಂಬಿಸುವುದು, ಅಲ್ಲಿ ಹಸುವನ್ನು ಕಟ್ಟಿ ಆಹಾರ ಕೊಡುವುದು, ಬ್ರಾಹ್ಮಣರು ಅಲ್ಲಿ ತಿಂದು ಮಿಕ್ಕಿ ಬಿಡುವುದು, ಪಂಚಗವ್ಯವನ್ನು ಪ್ರೋಕ್ಷಣೆ ಮಾಡುವುದು– ಈ ಏಳು ಬಗೆಯ ಕಾರ್ಯವು ಸಪ್ತಶುದ್ಧಿಯು.

ಕುಳಿ ತೋಡಲು ಸರಿಯಾದ ಸ್ಥಳದಲ್ಲಿ ಕುಳಿತು– ದೇಹಶುದ್ಧಿ, ಶಂಖಪೂರಣ, ಆತ್ಮಾರಾಧನೆಯನ್ನು ಮಾಡಿ, ಗಣಪತಿಯನ್ನು ಪೂಜಿಸಿ ಅದರ ಹತ್ತಿರ ಖದಿರದಿಂದ ಮಾಡಿದ ಗುದ್ದಲಿಯನ್ನಿರಿಸಿ, ಆಯಾಯ ದೇವತೆಯ ಅಸ್ತ್ರ ಮಂತ್ರದಿಂದ ಪೂಜಿಸಿ, ಬ್ರಾಹ್ಮಣರಿಗೆ ದಾನವನ್ನು ಕೊಟ್ಟು, ಅಸ್ತ್ರಮಂತ್ರದಿಂದ ಕೃಣುಷ್ವಪಾಜಃ– ಈ ಋಕ್ಕಿನಿಂದ ಪುರುಷ ಪ್ರಮಾಣವಾಗಲೀ, ಮೊಳಕೈ ಪ್ರಮಾಣದಷ್ಟು ಆಗಲೀ ಗುದ್ದಲಿಯಿಂದ ಕುಳಿತೋಡಿ, ಆಮೇಲೆ ಖದಿರೆ( ಕಗ್ಗಲಿ)ಯ ಪಾತ್ರೆಯಿಂದ ಅಸ್ತ್ರಮಂತ್ರ ಹಾಗೂ ವಾಯುಬೀಜದಿಂದ ಮಣ್ಣನ್ನು ನೈಋತ್ಯ ಭಾಗದಲ್ಲಿ ಹಾಕಬೇಕು. ಆ ಕುಳಿಯಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ ಆಘಾರಪರ್ಯಂತವಾಗಿ ಹೋಮಿಸಿ, ಇಪ್ಪತ್ತುನಾಲ್ಕು ಬಾರಿ ಅಸ್ತ್ರಮಂತ್ರದಿಂದ ತುಪ್ಪವನ್ನು ಹೋಮಿಸಿ, ಪುನಃ ಆಯಾಯ ದೇವತೆಯ ಪಂಚ ತತ್ತ್ವದಿಂದ ಎಳ್ಳು, ಗರಿಕೆ, ಅಕ್ಷತೆ, ಜೇನು, ತುಪ್ಪ–ಗಳಿಂದ ಕ್ರಮವಾಗಿ ಹೋಮಿಸಿ, ನಡುವೆ ವ್ಯಾಹೃತಿಯಿಂದಲೂ ಹೋಮಿಸಿ ಹೋಮವನ್ನು ಪೂರ್ತಿಗೊಳಿಸಿ ಪರಿಸ್ತರಣದರ್ಭೆಗಳಿಂದ ಸುತ್ತಲೂ ಶುದ್ಧಿಗೊಳಿಸಿ ಅಗ್ನಿಯನ್ನು ವಿಸರ್ಜಿಸಿ ಭಸ್ಮ ಮೊದಲಾಗಿ ಎಲ್ಲಾ ತೆಗೆದು ಅಲ್ಲಿ ಬ್ರಾಹ್ಮಣರ ಕಾಲನ್ನು ತೊಳೆದು ಅವರಿಗೆ ದಕ್ಷಿಣೆಯನ್ನು ಕೊಟ್ಟು, 'ಶಂ ನೋ ದೇವೀರಭಿಷ್ಟಯ'– ಈ ಮಂತ್ರದಿಂದ ಪಂಚಗವ್ಯದಿಂದ ತೊಯ್ದು 'ಧ್ರುವಾದ್ಯೌರ್ಧ್ರುವಾ'– ಹೀಗೆ ದರ್ಭೆ ಶೀರ್ಥ ಕುಶ ಮೊದಲಾದುವುಗಳಿಂದ ಪರಿಶುದ್ಧವಾದ ಮಣ್ಣುಗಳಿಂದ ಕುಳಿಯನ್ನು ತುಂಬಿಸಿ ನೀರೆರೆದು ಕಲಿಸಿ ಕುಟ್ಟುಮಣೆಯಿಂದ ಕುಟ್ಟಿ ಗಟ್ಟಿಯಾಗಿಸಿ ದಿನದ ಕೊನೆ (ಸಂಜೆ)ಯಲ್ಲಿ ಜೋಡಿ ಹಸುವನ್ನು ಕಟ್ಟಿ, 'ಋಷಭಂ ಮಾ ಸಮಾನಾನಾಂ' ಈ ಸೂಕ್ತದಿಂದ ಹುಲ್ಲು, ಬೂಸ (ಹಿಂಡಿ) ಮೊದಲಾಗಿ ಕೊಟ್ಟು ಆ ಜೋಡಿ ಹಸುವನ್ನು ಆಚಾರ್ಯನಿಗೆ ಕೊಡಬೇಕು. ಅಲ್ಲಿ ನೆಲವನ್ನು ಶುದ್ಧಿಗೊಳಿಸಿ ಬ್ರಾಹ್ಮಣರ ಊಟಕ್ಕೆ ಯೋಗ್ಯವಾದ ಮಂಟಪವನ್ನು ಮಾಡಿ ಅಲ್ಲಿ ಚೆನ್ನಾಗಿ ಬ್ರಾಹ್ಮಣರಿಗೆ ಊಟ ಬಡಿಸಿ, ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಊಟ ಮಾಡಿ ಬಿಟ್ಟದ್ದನ್ನು (ಮಿಗಿಸಿದ್ದನ್ನು) ತೆಗೆದು, ಸ್ಥಳವನ್ನು ಶುದ್ಧಗೊಳಿಸಿ, ಅಸ್ತ್ರಮಂತ್ರದಿಂದ ಪಂಚಗವ್ಯವನ್ನು ಸಿಂಪಡಿಸಬೇಕು. ಪುನಃ ಅಲ್ಲಿ ಪದ್ಮವನ್ನು ಬರೆದು, ಪೀಠಪೂಜೆ ಮಾಡಿ ಮೂಲಮಂತ್ರದಿಂದಾವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ, ಲಯಾಂಗ ಮೊದಲಾದುವುಗಳನ್ನು ಮಾಡಿ ಆ ಸ್ಥಳವು ಆ ದೇವತಾ ಚೈತನ್ಯದಿಂದ ವ್ಯಾಪಿಸಲ್ಪಟ್ಟಿದೆ ಎಂದು ಭಾವಿಸಿ ರಕ್ಷಿಸಬೇಕು.

* * * *

## ಗೇಹಪೂಜೆ

ಸ್ವಸ್ತಿಕವನ್ನು ಬರೆದು ಭತ್ತ ಮೊದಲಾದುವುಗಳನ್ನಿರಿಸಿ ಪೀಠಪೂಜೆಯನ್ನು ಗಂಧಾದಿಗಳಿಂದ ಪೂಜಿಸಿ ನವಶಕ್ತಿಯನ್ನು ಪೂಜಿಸಬೇಕು. ನವಶಕ್ತಿಗಳು– ಜಯಾಯೈ । ಮಾಯಾಯೈ । ಸಮಾಯೈ । ಸೌಮ್ಯಾಯೈ । ಪುಷ್ಪಳಾಯೈ । ಮಂಗಲಪ್ರದಾಯೈ । ಶ್ರೀಪ್ರದಾಯೈ । ಭೋಗದಾಯೈ । ವಿಶ್ವಾಯೈ । ಓಂ ನಮೋ ಭಗವತೇ– ಮೊದಲಾಗಿ ಪೂಜಿಸಿ ಮೂಲಮಂತ್ರದಿಂದಾವಾಹಿಸಿ ಧೂಪದೀಪಾದಿಗಳನ್ನು ಮಾಡಿ ಬಲಿಯನ್ನು ಕೊಡಬೇಕು. ಓಂ ಹೌಂ ನಮಃ– ಹೀಗೆ ಪ್ರಾಸಾದ ಬೀಜದಿಂದ ಆವಾಹನೆಯು ಮಾಡಲ್ಪಡಬೇಕು. ಕೆಲವರು ಪ್ರಾಸಾದ ಶುದ್ಧಿಯ ನಂತರದಲ್ಲಿ ಗೇಹಪೂಜೆಯನ್ನು ಮಾಡುತ್ತಾರೆ.

* * * *

## ಪ್ರಾಸಾದಶುದ್ಧಿಃ

ಆಚಾರ್ಯನು ಸ್ನಾನ ಮಾಡಿ ಆಚಮನ ಮಾಡಿ ಪ್ರಾಸಾದದ ಮುಂಭಾಗದಲ್ಲಿ ದಕ್ಷಿಣ ದಿಕ್ಕಿನಲ್ಲಿ ಕುಳಿತು ದೇಹಶುದ್ಧಿ, ಶಂಖಪೂರಣ ಆತ್ಮಾರಾಧನೆಯನ್ನು ಮಾಡಿ, ಗಣಪತಿಯ ಮಂಡಲವನ್ನು ಬರೆದು ಗಣಪತಿಯನ್ನು ಪೀಠ ಪೂಜೆಯೊಂದಿಗೆ 'ಓಂಗಂ' ಎಂದು ಬೀಜಮಂತ್ರದಿಂದ ಆವಾಹಿಸಿ, ಸಕಲೀಕರಣದೊಂದಿಗೆ ಪೂಜಿಸಿ, ಬಾಳೆಹಣ್ಣು ಮೊದಲಾಗಿ ಹೆಚ್ಚಿನ ಹಣ್ಣುಗಳನ್ನು ಸಂಗ್ರಹಿಸಿ ನೈವೇದ್ಯ ಮಾಡಿ ಪ್ರಸನ್ನಪೂಜೆಯನ್ನು ಮಾಡಿ ಸಂತೋಷಗೊಳಿಸಿ ಆರಂಭಿಸಿದ ಕರ್ಮವು ತೊಂದರೆಯ ಹೊರತಾಗಿ ನೆರವೇರಲೆಂದು ಪ್ರಾರ್ಥಿಸಬೇಕು.

| | |
|---|---|
| ತ್ರಿಗುಣೀಕೃತ ಸೂತ್ರ ೧ | ದರ್ಭದಾಮ ೨ |
| ಮುಷ್ಟಿಃ ೩ | ಗೋಮಯಜಲಂ ೪ |
| ಸರ್ಷಪಃ ೫ | ಮುಷ್ಟಿಃ ೬ |
| ಗೋಮಯಜಲಂ ೭ | ಪಂಚಗವ್ಯಃ ೮ |
| ವಿಕಿರಂ ೯ | ಮುಷ್ಟಿಃ ೧೦ |
| ಗಂಧಾಂಬು ೧೧ | ದರ್ಭಪುಷ್ಪಯುತಮಕ್ಷತಂ೧೨ |

ಅದರ ಸಮೀಪದಲ್ಲಿ ಪೂರ್ವ ಹಾಗೂ ಪಶ್ಚಿಮಕ್ಕೆ ಹೊಂದಿಸಿ, ಮಂಡಲವನ್ನು ಬರೆದು, ಪೂರ್ವಾಭಿಮುಖವಾಗಿ ದರ್ಭೆಯನ್ನು ಬಿಡಿಸಿ ಅಲ್ಲಿ (೧) ತ್ರಿಗುಣೀಕೃತ ಸೂತ್ರ (೨) ದರ್ಭದಾಮ (೩) ದರ್ಭಮುಷ್ಟಿ (೪) ಗೋಮಯಜಲ (೫) ಸರ್ಷಪ (೬) ಪುನರ್ಮುಷ್ಟಿಃ (೭) ಪುನರ್ಗೋಮಯಜಲಂ (೮) ಪಂಚಗವ್ಯಂ (೯) ವಿಕಿರಂ (೧೦) ದರ್ಭಮುಷ್ಟಿಃ (೧೧) ಗಂಧಾಂಬು (೧೨) ದರ್ಭಪುಷ್ಪಯುತಮಕ್ಷತ– ಹೀಗೆ ದ್ರವ್ಯಗಳನ್ನು ಕ್ರಮವಾಗಿ ಇರಿಸಿ ಮುಟ್ಟಿಕೊಂಡು ಶೋಷಣಾದಿಗಳನ್ನು ಮಾಡಿ ಓಂಕಾರದಿಂದ ಪೂಜಿಸಿ ಮೂಲಮಂತ್ರದಿಂದ ಜಪಿಸಬೇಕು. ಸೂತ್ರದಲ್ಲಿ ಪ್ರಣವಾಕ್ಷರಗಳು (ಅಂ, ಉಂ, ಮಂ) ದರ್ಭಮಾಲೆಯಲ್ಲಿ ಪ್ರಣವ (ಓಂಕಾರ) ಮೂರು ದರ್ಭೆಮುಷ್ಟಿಗಳಲ್ಲಿ– ವಾಯುಬೀಜ(ಯಂ) ಗೋಮಯ ಜಲದಲ್ಲಿ ಅಮೃತಬೀಜ (ವಂ) ಸರ್ಷಪದಲ್ಲಿ (ಸಾಸಿವೆ) ಅಗ್ನಿಬೀಜ (ರಂ)ಪಂಚಗವ್ಯದಲ್ಲಿ– ಆಯಾಯ ದೇವತೆಯ ಪಂಚತತ್ತ್ವಗಳು, ವಿಕಿರ ಮೊದಲಾದವುಗಳಲ್ಲಿ ಮೂಲಮಂತ್ರವು.– ಈ ಕ್ರಮದಲ್ಲಿ ಆವಾಹಿಸಿ, ಪೂಜಿಸಿ, ಬ್ರಾಹ್ಮಣರಿಗೆ ಗೋದಾನವನ್ನು ಕೊಟ್ಟು ಸಂತೋಷಗೊಳಿಸಿ, ಗಣಪತಿಯನ್ನು ನಮಸ್ಕರಿಸಿ, ಪ್ರಾರ್ಥಿಸಿ ವಿಸರ್ಜಿಸಿ, ಲಯಾಂಗವನ್ನು ಮಾಡಿ ಮೂಲಮಂತ್ರದಿಂದ ಪ್ರಾಣಾಯಾಮವನ್ನು ಮಾಡಿ, ಸಕಲೀಕರಣವನ್ನು ಮಾಡಿ ಪ್ರಾಸಾದದ ಬಾಗಿಲ ಬಳಿ ನಿಂತು ಅಸ್ತ್ರಮಂತ್ರವನ್ನು ಹೇಳಿ ಅಸ್ತ್ರನೋಟದಿಂದ ಪ್ರಾಸಾದವನ್ನು ನೋಡಿ ಬಲದ ಕೈಯಲ್ಲಿ (ಶಂಖ ಮೊದಲಾದುವುಗಳಿಂದ) ನೀರನ್ನು ಹಿಡಿದುಕೊಂಡು ಎಂಟಾವರ್ತಿ ಪ್ರಣವವನ್ನು ಜಪಿಸಿ ಫಡಂತ ಪ್ರಣವ (ಓಂಫಟ್) ದಿಂದ ಪ್ರೋಕ್ಷಣೆ ಮಾಡಿ ಅಲ್ಲಿ ವಾಸವಾಗಿರುವ ರಾಕ್ಷಸ ಮೊದಲಾದವರನ್ನು ಹೊರಗೋಡಿಸಬೇಕು. ಮೂರು ಬಾರಿ ಕೈಯ ಚಪ್ಪಾಳೆ ಶಬ್ದದಿಂದ ರಕ್ಷಣೆಯನ್ನು ಮಾಡಬೇಕು. ಪುನಃ ಮೂರಾವರ್ತಿತ ಸೂತ್ರ (ನೂಲು)ವನ್ನು ಹುರಿ ಮಾಡಿದ ದರ್ಭೆರಜ್ಜು ಮೂಲೆಯನ್ನು ಮಂದಿರದ ಈಶಾನ ಮೂಲೆಯಿಂದ ಆರಂಭಿಸಿ ಸೂರಿನ (ಜಂತಿಯ ಬುಡ)ಮೇಲ್ಭಾಗದಲ್ಲಿ ಈಶಾನ ಮಾಲೆಯಲ್ಲಿ ಕೊನೆಗೊಳ್ಳುವಂತೆ ಸುತ್ತಬೇಕು. ಮೊದಲನೆಯ ದರ್ಭಮುಷ್ಟಿಯನ್ನು ಹಿಡಿದು 'ಯಂ' ಎಂದು ಜಪಿಸುತ್ತಾ ಒಳಗೆ ಹಾಗೂ ಹೊರಭಾಗವನ್ನು ಗುಡಿಸಬೇಕು. ಮೊದಲನೆಯ ದರ್ಭಮುಷ್ಟಿಯನ್ನು ನೀರಿನಿಂದ ಸಿಂಪಡಿಸಬೇಕು. 'ರಂ' ಎಂದು ಸಾಸಿವೆಯನ್ನು ಚೆಲ್ಲಿ, 'ಯಂ' ಎಂದು ಎರಡನೆಯ ದರ್ಭೆಯ ಮುಷ್ಟಿಯಿಂದ ಪುನಃ ಹೊರಗೆ ಹಾಗೂ ಒಳಗೆ ಗುಡಿಸಬೇಕು. 'ವಂ' ಎಂದು ಗೋಮಯ ಜಲದಿಂದ ಪುನಃ ಸಿಂಪಡಿಸಿ, ಪಂಚತತ್ತ್ವಗಳಿಂದ ಸಿಂಪಡಿಸಬೇಕು. ಪುನಃ ಮೂಲಮಂತ್ರದಿಂದ ವಿಕಿರ ಮುಷ್ಟಿಯನ್ನು ಸಿಂಪಡಿಸಿ, ಮೂರನೆಯ ದರ್ಭಮುಷ್ಟಿಯಿಂದ 'ಯಂ'

ಎಂದು ಗುಡಿಸಿ, 'ಆಪೋ ಅಸ್ಮಾನ್ಮಾತರಃ'– ಈ ಮಂತ್ರದಿಂದ ಗಂಧದ ನೀರಿನಿಂದ ಚಿಮುಕಿಸಿ, ಮೂಲಮಂತ್ರದಿಂದ 'ಇಷೇತ್ವಾ'– ಮೊದಲಾದ ಮಂತ್ರದಿಂದಾಗಲೀ, ಅಕ್ಷತೆಗಳನ್ನು ಚೆಲ್ಲಬೇಕು. ಪುನಃ ಧೂಪದೀಪಗಳಿಂದ ಭವನದ ಸುತ್ತಲೂ ಹೊಂದಿಸಬೇಕು. ಆಮೇಲೆ ಗರ್ಭಗೃಹದ ಒಳಗೆ ಹೋಗಿ ಅಲ್ಲಿ ಆಚಾರ್ಯನು ಮೂರ್ತಿಪರಿಂದೊಡಗೂಡಿ ರಾಕ್ಷೋಘ್ನ ಸೂಕ್ತವನ್ನು ಜಪಿಸಬೇಕು. ಸಾಧ್ಯವಾದಷ್ಟು ಅಸ್ತ್ರಮಂತ್ರವನ್ನು ಜಪಿಸಬೇಕು.

* * * *

## ಅಸ್ತ್ರಕಲಶಪ್ರಕಾರಃ

ಅನಂತರ ಗರ್ಭಾಲಯದಲ್ಲಿ ಈಶಾನ್ಯಮೂಲೆ, ಆಗ್ನೇಯ ಅಥವಾ ವಾಯುವ್ಯ ಕೋಣದಲ್ಲಿ ಸ್ವಸ್ತಿಕವನ್ನು ಬರೆದು ಬತ್ತ ಮೊದಲಾದವುಗಳಿಂದ ಪೀಠವನ್ನು ಮಾಡಿ, ಎರಡು ದರ್ಭೆಯ ಕುಡಿಗಳನ್ನದರ ಮೇಲಿರಿಸಿ ಅಲ್ಲಿ ತೊಳೆದ ನೂಲು ಸುತ್ತಿದ ಚೆನ್ನಾಗಿ ಧೂಪ ಹಿಡಿದ ಕಲಶವನ್ನು ಕೆಳಮುಖನಾಗಿರಿಸಿ ಪೀಠಪೂಜೆಯನ್ನು ಮಾಡಿ ಕಲಶಕ್ಕೆ ಶೋಷಣ ದಾಹನ ಪ್ಲಾವನ ಕಾಠಿಣ್ಯ ಸುಷಿರೀಕರಣಗಳನ್ನು ಮಾಡಿ ದರ್ಭವಿನ್ಯಾಸ ಅಷ್ಟಗಂಧ ಪ್ರೋಕ್ಷಣ, ಅಕ್ಷತ ವಿಕಿರಣಗಳನ್ನು ಮಾಡಿ ಎತ್ತಿ ಮೇಲ್ಮುಖನಾಗಿರಿಸಿ ಗಂಧ ಪುಷ್ಪ ಅಕ್ಷತೆಗಳಿಂದ ಕೂಡಿದ ಕೂರ್ಚನ್ನು ಕೆಳಮುಖನಾಗಿರಿಸಿ ಹೇಳಿದ ಕ್ರಮದಂತೆ ನೀರನ್ನು ತುಂಬಿಸಿ ಚಿಗುರು ಪೂರ್ಣ ಪಾತ್ರೆ ಮೊದಲಾದುವನ್ನಿರಿಸಿ ಅಸ್ತ್ರ ಮಂತ್ರದಿಂದಾವಾಹಿಸಬೇಕು.

## ಅಘೋರಾಸ್ತ್ರಂ

**ಅಸ್ಯ ಶ್ರೀ ಅಘೋರಾಸ್ತ್ರ ಮಂತ್ರಸ್ಯ । ಅಘೋರ ಋಷಿಃ ತ್ರಿಷ್ಟುಪ್ ಛಂದಃ । ಅಘೋರ ರುದ್ರೋದೇವತಾ ॥ ಓಂ ಹ್ರೀಂ ಸ್ಫುರ ಸ್ಫುರ ಹೃದಯಾಯ । ಪ್ರಸ್ಫುರ ಪ್ರಸ್ಫುರ ಶಿರಸೇ । ಘೋರ ಘೋರ ತನುರೂಪ ಶಿಖಾಯೈ । ಚಟ ಚಟ ಪ್ರಚಟ ಪ್ರಚಟ ಕವಚಾಯ । ಕಹ ಕಹ ವಮ ವಮ ನೇತ್ರತ್ರಯಾಯ ॥ ಬಂಧ ಬಂಧ ಘಾತಯ ಘಾತಯ ಹುಂಫಟ್ ಅಸ್ತ್ರಾಯ ॥**

ಧ್ಯಾನಂ– **ಸಜಲಘನಸಮಾಭಂ ಭೀಮದಂಷ್ಟ್ರಂ ತ್ರಿಣೇತ್ರಂ**
**ಭುಜಗಧರಮಘೋರಂ ರಕ್ತವಸ್ತ್ರಾಂಗರಾಗಂ ।**
**ಪರಶುಡಮರುಖಡ್ಗಾನ್ ಖೇಟಕಂ ಬಾಣಚಾಪೌ**
**ತ್ರಿಶಿಖನರಕಪಾಲಂ ಬಿಭ್ರತಂ ಭಾವಯಾಮಿ ॥**

ಅಘೋರಾಸ್ತ್ರಧ್ಯಾನಾಂತರಂ–

**ಕಾಲಾಭ್ರಾಭಃ ಕರಾಗ್ರೈಃ ಪರಶುಡಮರುಕೌ ಖಡ್ಗಖೇಟೌ ಚ ಬಾಣೇ**
**ಷ್ವಾಸೌ ಶೂಲಂ ಕಪಾಲಂ ದಧದತಿಭಯದೋ ಭೀಷಣಾಸುಸ್ತ್ರಿಣೇತ್ರಃ ।**
**ರಕ್ತಾಕಾರಾಂಬರೋ ಹಿ ಪ್ರವರಘಟಿತಗಾಲೋಽಗ್ನಿ ನಾಗಗ್ರಹಾದೀನ್**
**ಖಾದನ್ನಿಷ್ಟಾರ್ಥದಾಯೀ ಭವದನಭಿಮತೋಚ್ಚಿತ್ರಯೇ ಸ್ಯಾದಘೋರಃ ॥**

ಮೂಲಮಂತ್ರಃ– **ಓಂ ಹ್ರೀಂ ಸ್ಫುರ ಸ್ಫುರ ಪ್ರಸ್ಫುರ ಪ್ರಸ್ಫುರ ಘೋರ ಘೋರತರ ತನುರೂಪ ಚಟ ಚಟ ಪ್ರಚಟ ಪ್ರಚಟ ಕಹ ಕಹ ವಮ ವಮ ಬಂಧ ಬಂಧ ಘಾತಯ ಘಾತಯ ಹುಂಫಟ್ ॥** ಇತ್ಯಘೋರಾಸ್ತ್ರಂ ॥

* * * *

## ಪಾಶುಪತಾಸ್ತ್ರ ಮಂತ್ರಃ

ಅಘೋರ ಋಷಿಃ । ಗಾಯತ್ರೀ ಛಂದಃ । ಪಾಶುಪತರುದ್ರೋ ದೇವತಾ । ಓಂ ಹೃದಯಾಯ । ಶ್ಲೀಂ ಶಿರಸೇ । ಪಂ ಶಿಖಾಯೈ । ಶುಂ ಕವಚಾಯ । ಹುಂ ನೇತ್ರತ್ರಯಾಯ । ಫಟ್ ಅಸ್ತ್ರಾಯ ॥

ಧ್ಯಾನಂ– **ಮಧ್ಯಾಹ್ನಾರ್ಕಸಮಪ್ರಭಂ ಶಶಿಧರಂ ಭೀಮಾಟ್ಟಹಾಸೋಜ್ಜ್ವಲಂ**
**ತ್ರ್ಯಕ್ಷಂ ಪನ್ನಗಭೂಷಣಂ ಶಿಖಿಶಿಖಾಶ್ಮಶ್ರುಸ್ಫುರನ್ಮೂರ್ಧಜಂ ।**
**ಹಸ್ತಾಬ್ಜೈಸ್ತ್ರಿಶಿಖಂ ಸಮುದ್ಗರಮಸಿಂ ಶಕ್ತಿಂ ದಧಾನಂ ವಿಭುಂ**
**ದಂಷ್ಟ್ರಾಭೀಮಚತುರ್ಮುಖಂ ಪಶುಪತಿಂ ದಿವ್ಯಾಸ್ತ್ರರೂಪಂ ಸ್ಮರೇತ್ ॥**

ಮೂಲಮಂತ್ರಃ– **ಓಂ ಶ್ಲೀಂ ಪಶು ಹುಂಫಟ್ ॥**

* * * *

## ಸುದರ್ಶನಾಸ್ತ್ರಂ

ಅಹಿರ್ಬುಧ್ನ್ಯ ಋಷಿಃ । ಅನುಷ್ಟುಪ್ ಛಂದಃ । ಸುದರ್ಶನರೂಪೀ ಶ್ರೀಮಹಾವಿಷ್ಣುರ್ದೇವತಾ । ಆಚಕ್ರಾಯ ಸ್ವಾಹಾ- ಹೃದಯಾಯ । ವಿಚಕ್ರಾಯ ಸ್ವಾಹಾ- ಶಿರಸೇ । ಸುಚಕ್ರಾಯ ಸ್ವಾಹಾ- ಶಿಖಾಯೈ । ಧೀಚಕ್ರಾಯ ಸ್ವಾಹಾ- ಕವಚಾಯ । ಸಂಚಕ್ರಾಯ ಸ್ವಾಹಾ- ನೇತ್ರಾಭ್ಯಾಂ । ಜ್ವಾಲಾ ಚಕ್ರಾಯಸ್ವಾಹಾ- ಅಸ್ತ್ರಾಯ ॥

ಧ್ಯಾನಂ- ಅವ್ಯಾದ್ಭಾಸ್ಕರ ಸುಪ್ರಭಾಭಿರಖಿಲಾಭಾಭಿರ್ದಿಶೋ ಭಾಸಯನ್
ಭೀಮಾಕ್ಷಸ್ಫುರದಟ್ಟಹಾಸವಿಲಸದ್ದಂಷ್ಟ್ರ ಪ್ರದೀಪ್ತಾನನಃ ।
ದೋರ್ಭಿಶ್ಚಕ್ರದರೌ ಗದಾಬ್ಜಮುಸಲಪ್ರಾಸಾಂ ಶ್ಚ ಪಾಶಾಂಕುಶೌ
ಬಿಭ್ರತ್ತುಂಗಶಿರೋರುಹೋಜ್ಜ್ವಲತನುಶ್ಚಕ್ರಾಭಿಧಾನೋ ಹರಿಃ ॥

ಮೂಲಮಂತ್ರಃ- ಓಂ ರಂ ಸಹಸ್ರಾರಹುಂಫಟ್ ॥

* * * *

## ದಿವ್ಯಾಸ್ತ್ರಂ (ಸುಬ್ರಹ್ಮಣ್ಯೇ)

ಅಸ್ಯ ಶ್ರೀ ಸುಬ್ರಹ್ಮಣ್ಯಾಸ್ತ್ರಮಂತ್ರಸ್ಯ । ಸನತ್ಕುಮಾರ ಋಷಿಃ । ಗಾಯತ್ರೀ ಛಂದಃ । ಸುಬ್ರಹ್ಮಣ್ಯಾಸ್ತ್ರೋದೇವತಾ । ಓಂ ಜ್ವಾಂ ಹೃದಯಾಯ । ಲಾಂ ಶಿರಸೇ । ಮಾಂ ಶಿಖಾಯೈ । ಲಿಂ ಕವಚಾಯ । ನಿಂ ನೇತ್ರಾಭ್ಯಾಂ । ಹುಂ ಅಸ್ತ್ರಾಯ ॥

ಧ್ಯಾನಂ- ಮೇಘಶ್ಯಾಮಸಮಪ್ರಭಂ ತ್ರಿನಯನಂ ಭೀಮಾಟ್ಟಹಾಸೋಜ್ವಲಂ
ಶತ್ರೂಣಾಂ ಭಯದಂ ರಣೇ ವಿಜಯದಂ ದೇವೈಃ ಸದಾ ಭಾವಿತಂ ।
ಖಡ್ಗಂ ಶಕ್ತಿಮಹಾಭಯಂ ವರಕರೈಃ ಶೂಲಂ ದಧಾನಂ ಪ್ರಭುಂ
ರಕ್ತಂ ರಕ್ತವಿಭೂಷಣಂ ಸುವಸನಂ ದಿವ್ಯಾಸ್ತ್ರರೂಪಂ ಭಜೇ ॥

ಮೂಲಮಂತ್ರಃ- ಓಂ ಜ್ವಾಲಾಮಾಲಿನಿ ಹುಂ ॥

* * * *

## ಶಾಸ್ತರಿ- ಅಸ್ತ್ರಮಂತ್ರಃ

ಅಘೋರ ಋಷಿಃ । ಗಾಯತ್ರೀ ಛಂದಃ । ಘೃಣಿಶಾಸ್ತಾದೇವತಾ । ಜ್ವಂ ಹೃದಯಾಯ । ಲಂ ಶಿರಸೇ । ಘೃಂ ಶಿಖಾಯೈ। ಣಿಂ ಕವಚಾಯ । ಹುಂ ನೇತ್ರಾಭ್ಯಾಂ । ಫಟ್ ಅಸ್ತ್ರಾಯ ॥

ಧ್ಯಾನಂ- ಸಕಲಭುವನದೇಶಂ ಪೂರಯಂತಂ ಸ್ವಭಾಸಾ
ಕನಕಮಯವಿಭೂಷೈಃ ಶೋಭಿತಂ ಶಸ್ತ್ರರಾಜಂ ।
ಅಭಯಪರಶುಖಡ್ಗಾನ್ ಖೇಟಕಂ ಚಾಪಿ ಬಿಭ್ರತ್
ಅಮರಗಣಸಮೂಹೈಃ ಸಂಸ್ತುತಂ ಭಾವಯಾಮಿ ॥

ಧ್ಯಾನಾಂತರಂ-

ಸಜಲಘನಸಮಾಭಂ ಭೀಮದಂಷ್ಟ್ರಂ ತ್ರಿಣೇತ್ರಂ
ಭುಜಗಧರಮಘೋರಂ ರಕ್ತವಸ್ತ್ರಾಂಗರಾಗಂ ।
ಪರಶುಮುಸಲಖಡ್ಗಾನ್ ಖೇಟಕಂ ಬಾಣಚಾಪೌ
ದಧದರಿಭಯದಂ ತಂ ಭಾಸಿತಂ ಭಾವಯಾಮಿ ॥

ಮೂಲಮಂತ್ರಃ- ಓಂ ಜ್ವಲಘೃಣಿ ಹುಂಫಟ್ ॥

ಆಯಾಯ ದೇವತೆಗಳ ಅಸ್ತ್ರಮಂತ್ರದಿಂದ ಆವಾಹಿಸಿ, ಸಕಲೀಕರಣವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಬ್ರಹ್ಮಾರ್ಪಣ ಮೊದಲಾದುವನ್ನು ಮಾಡಿ ಬಟ್ಟೆಯಿಂದ ಮುಚ್ಚಿ ವ್ಯಾಪನೆಯನ್ನು ಮಾಡಿ ಲಯಾಂಗವನ್ನು ಮಾಡಿ ರಕ್ಷಿಸಿಡಬೇಕು.

——— ಇತ್ಯಸ್ತ್ರ ಕಲಶಪೂಜಾ ———

* * * *

## ಮುಷ್ಟಿ ವಿಭಾಗ

ಮುಷ್ಟಿಶೋಧನ ಸಾಧನೆಯಲ್ಲಿ ಅಲೌಕಿಕವಾದ ಮುಷ್ಟಿಗಳನ್ನು ವಿವರಿಸಲಾಗಿದೆ. ಶಿವ, ಶಂಕರನಾರಾಯಣ, ಗಣಪತಿ, ಶಾಸ್ತಾರರಲ್ಲಿ ದರ್ಭೆಯಿಂದ ಕೂಡಿದ ಪಲಾಶ ರೆಂಬೆಗಳಿಂದ ಸಿದ್ಧಗೊಳಿಸಿದ ಮುಷ್ಟಿಯು. ಸ್ಕಂದನಲ್ಲಿ ಅಶ್ವತ್ಥ ಹಾಗೂ ಪಲಾಶದ ಚಿಗುರಿನಿಂದ ಕೂಡಿದ ದರ್ಭಮುಷ್ಟಿಯು. ದುರ್ಗಿ ಹಾಗೂ ವಿಷ್ಣುವಿನಲ್ಲಿ ಸಹದೇವಿಯಿಂದ ಕೂಡಿದ ದರ್ಭೆಗಳಿಂದ ಕಟ್ಟಿದ ಮುಷ್ಟಿಯು. ಶಂಕರನಾರಾಯಣನಲ್ಲಿ ಪಲಾಶ ರೆಂಬೆಯಿಂದ ಹಾಗೂ ಸಹದೇವಿಯಿಂದ ಕೂಡಿದ ದರ್ಭಮುಷ್ಟಿಯಿಂದ (ವಿಷ್ಣುವಿಗೆ ಹೇಳಿದುದು)ಲಾದರೂ ಆಗಬಹುದು.

**ಅಸ್ತ್ರಮಂತ್ರಗಳು–** ವಿಷ್ಣು ದುರ್ಗಾ ಶಂಕರನಾರಾಯಣರಲ್ಲಿ ಸುದರ್ಶನಾಸ್ತ್ರವು. ಶಿವ ಮತ್ತು ಗಣಪತಿಯರಲ್ಲಿ ಅಘೋರ ಅಥವಾ ಪಾಶುಪತಾಸ್ತ್ರವು. ಶಂಕರನಾರಾಯಣನಲ್ಲಿ ಪಾಶುಪತದಿಂದ ಕೂಡಿದ ಸುದರ್ಶನಾಸ್ತ್ರವಾದರೂ ಆಗಬಹುದು. ಸುಬ್ರಹ್ಮಣ್ಯನಲ್ಲಿ 'ಜ್ವಾಲಾಮಾಲಿನಿ ಹುಂ'– ಈ ಅಸ್ತ್ರಮಂತ್ರವು. ಶಾಸ್ತಾರನಲ್ಲಿ 'ಜ್ವಲಘೃಣಿಹುಂಫಟ್' ಎಂದು ಷಡಕ್ಷರಾಸ್ತ್ರ ಮಂತ್ರವು.

## ರಾಕ್ಷೋಘ್ನ ಹೋಮ

ಗರ್ಭಗೃಹದ ಹೊರಭಾಗದಲ್ಲಿ ಆಗ್ನೇಯ ದಿಕ್ಕಿನಲ್ಲಿ ಕುಳಿತು ಹೋಮದ ಮಂಡಲವನ್ನು ಬರೆದು ತಮ್ಮ ತಮ್ಮ ಗೃಹ್ಯದಲ್ಲಿ ಹೇಳಿದ ಕ್ರಮದಲ್ಲಿ ಅಥವಾ ಯಜುರ್ವೇದೋಕ್ತವಾದ ಅಗ್ನಿಮುಖ ಕ್ರಮದಿಂದ ರಾಕ್ಷೋಘ್ನ ಹೋಮವನ್ನು ಆಚಾರ್ಯನು ಮಾಡಬೇಕು. ರಕ್ಷೋಹಣಂ * * ನಕ್ತೋಂಶಿ ವಿಜ್ಯೋತಿಷಾ * * ವಿನಿಕ್ಷೇಸ್ವಾಹಾ– ಹೀಗೆ ಪಕ್ವವನ್ನು ಹೋಮ ಮಾಡಿ– ರಕ್ಷೋಹಾಗ್ನಯ ಇದಂ ನಮಮ– ಹೀಗೆ ಉದ್ದೇಶ ತ್ಯಾಗವನ್ನು ಮಾಡಿ, 'ಕೃಣು ಷ್ವಪಾಜಃ'– ಮೊದಲಾಗಿ ಹದಿನೆಂಟು ಮಂತ್ರಗಳಿಂದ 'ಯೇ ದೇವಾ ಪುರಃ ಸದಃ'– ಮೊದಲಾಗಿ ಐದು ಮಂತ್ರಗಳಿಂದ ಐದು ದುರ್ಗಾ ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಒಂದೊಂದು ಆಜ್ಯವನ್ನು ಹೋಮಿಸಬೇಕು. ಶಂಕರನಾರಾಯಣನಲ್ಲಿ ಪಂಚದುರ್ಗಾ ಮಂತ್ರದ ಕೊನೆಯಲ್ಲಿ ಪಂಚತತ್ತ್ವಗಳಿಂದ ಒಂದೊಂದು ಆಜ್ಯಾಹುತಿಯನ್ನು ಮಾಡಿ ವ್ಯಾಹೃತಿಗಳಿಂದ ಹೋಮಿಸಬೇಕು. ತಮ್ಮ ತಮ್ಮ ನಿಜ ಮಂತ್ರಗಳಿಂದ ಪೂರ್ಣಾಹುತಿಯು. ಎಲ್ಲಾ ದೇವತೆಗಳಲ್ಲಿಯೂ ಆಯಾಯ ದೇವತೆಗಳ ಅಸ್ತ್ರಮಂತ್ರಗಳಿಂದ ಅಪಾಮಾರ್ಗ(ಉತ್ತರಣೆ) ಸಮಿತ್ತು ತುಪ್ಪ ಚರು ತುಪ್ಪ (ನಾಲ್ಕು ದ್ರವ್ಯ)ಗಳಿಂದ ನೂರೆಂಟು ಸಂಖ್ಯೆಯಲ್ಲಿ ಪ್ರತಿ ದ್ರವ್ಯವನ್ನೂ ಹೋಮಿಸಿ, ಮಧ್ಯೆ ಮಧ್ಯೆ ಪೂರ್ಣಾಹುತಿಯನ್ನು ಮಾಡಿ ಪುನಃ ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಿ ಅಗ್ನಿಯನ್ನು ವಿಸರ್ಜಿಸಬೇಕು.

(ಅನ್ವಾಧಾನಂ– ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷ್ಯಂತ ಮುಕ್ತ್ವಾ ಪ್ರಧಾನ ದೇವತಾಂ ರಕ್ಷೋಹಣಂ– ರಕ್ಷೋಹಣಂ, ವಿಜ್ಯೋತಿಷಾ– ಇತಿದ್ವಾಭ್ಯಾಂ ಪಕ್ವೇನ, ಕೃಣುಷ್ವಾದ್ಯಷ್ಟಾದಶಮಂತ್ರೈಃ ಯೇ ದೇವಾಃ ಇತ್ಯಾದಿ ಪಂಚಭಿಃ, ಪಂಚದುರ್ಗಾಮಂತ್ರೈಶ್ಚಾಜ್ಯೇನ– ಅಸ್ತ್ರಮಂತ್ರೇಣ ಅಪಾಮಾರ್ಗಸಮಿದಾಜ್ಯ ಚರ್ವಾಜ್ಯದ್ರವ್ಯೈಃ ಯಥಾಸಂಖ್ಯಯಾ ದ್ರವ್ಯಾಂತೇವ್ಯಾಹೃತಿ ಪೂರ್ವಾಹುತಿಭಿಃ ಚರುಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋ ಯಕ್ಷ್ಯೇ ॥)

* * * *

## ರಾಕ್ಷೋಘ್ನ ಮಂತ್ರಾಃ

**ಓಂ ರಕ್ಷೋಹಣಂ ವಾಜಿನಮಾ ಜಿಘರ್ಮಿ ಮಿತ್ರಂ ಪ್ರತಿಷ್ಠ ಮುಪಯಾಮಿ ಶರ್ಮ ।**

**ಶಿಶಾನೋ ಅಗ್ನಿಃ ಕ್ರತುಭಿಃ ಸಮಿದ್ಧಃ ಸ ನೋ ದಿವಾ ಸ ರಿಷಃ ಪಾತು ನಕ್ತೋಂಶಿ**

**ವಿಜ್ಯೋತಿಷಾ ಬೃಹತಾ ಭಾತ್ಯಗ್ನಿ ರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**

**ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ಸ್ವಾಹಾ–**

ರಕ್ಷೋಹಾಗ್ನಯ ಇದಂ ॥ ಹೀಗೆ ಪಕ್ವಾಹುತಿಯನ್ನು ಹೋಮ ಮಾಡಿ, ನಂತರ ಆಜ್ಯಾಹುತಿಯನ್ನು ಹೋಮಿಸಬೇಕು.

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾಗುಂ ಇಭೇನ ।

ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಽಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥

ತವ ಭ್ರಮಾಸ ಆಶುಯಾ ಪತಂತ್ಯನುಸ್ಪೃಶ ಧೃಷತಾ ಶೋಶುಚಾನಃ ।

ತಪೋಂಗುಂಷ್ಯಗ್ನೇ ಜುಹ್ವಾಪತಂಗಾ ನ ಸಂದಿತೋ ವಿಸೃಜ ವಿಷ್ವಗುಲ್ಕಾಃ ॥

ಪ್ರತಿ ಸ್ಪಶೋ ವಿಸೃಜ ತೂರ್ಣಿತಮೋ ಭವಾಪಾಯುರ್ವಿಶೋ ಅಸ್ಯಾ ಅದಬ್ಧಃ ।

ಯೋ ನೋ ದೂರೇ ಅಘಶಗುಂ ಸೋ ಯೋ ಅಂತ್ಯಗ್ನೇ ಮಾಕಿಷ್ಟೇ

ವ್ಯಥಿರಾದಧರ್ಷೀತ್ ॥

ಉದಗ್ನೇ ತಿಷ್ಠ ಪ್ರತ್ಯಾತನುಷ್ವ ನ್ಯಮಿತ್ರಾಗುಂ ಓಷತಾ ತ್ತಿಗ್ಮಹೇತೇ ।

ಯೋ ನೋ ಅರಾತಿ ಸಮಿಧಾನ ಚಕ್ರೇ ನೀಚಾ ತಂಧಕ್ಷ್ಯತಸಂ ನ ಶುಷ್ಕಂ ॥

ಊರ್ಧ್ವೋ ಭವ ಪ್ರತಿವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ ।

ಅವಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರಮೃಣೀಹಿ ಶತ್ರೂನ್ ॥

ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ ।

ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿದುರೋ ಅಭೀದ್ಯೌತ್ ॥

ಸೇದಗ್ನೇ ಅಸ್ತು ಸುಭಗಃ ಸುದಾನು ರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।

ಪಿಪ್ರೀಷತಿ ಸ್ವಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ ॥

ಆರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ಸಂತೇ ವಾವಾತಾಜರತಾಮಿಯಂ ಗೀಃ

ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾಸ್ಮೇ ಕ್ಷತ್ರಾಣಿ ಧಾರಯೇರನುದ್ಯೂನ್ ॥

ಇಹತ್ವಾ ಭೂರ್ಯಾ ಚರೇದುಪತ್ಮನ್ದೋಷಾವಸ್ತರ್ದೀದಿವಾಗುಂ ಸಮನುದ್ಯೂನ್ ।

ಕ್ರೀಡಂತಸ್ತ್ವಾ ಸುಮನಸಃ ಸಪೇಮಾಭೀದ್ಯುಮ್ನಾ ತಸ್ಥಿವಾಗುಂ ಸೋ ಜನಾನಾಂ ॥

ಯಸ್ತ್ವಾ ಸ್ವಶ್ವಃ ಸುಹಿರಣ್ಯೋ ಅಗ್ನ ಉಪಯಾತಿ ವಸುಮತಾ ರಥೇನ ।

ತಸ್ಯ ತ್ರಾತಾ ಭವಸಿ ತಸ್ಯ ಸಖಾ ಯಸ್ತ ಆತಿಥ್ಯ ಮಾನುಷಗ್ಜುಜೋಷತ್ ॥

ಮಹೋ ರುಜಾಮಿ ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿಯಾಯ ।

ತ್ವಂ ನೋ ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ ॥

ಅಸ್ವಪ್ನಸ್ತರಣಯಃ ಸುಶೇವಾ ಅತಂದ್ರಾಸೋ ವೃಕಾ ಅಶ್ರಮಿಷ್ಠಾಃ ।

ತೇ ಪಾಯವಃ ಸಧ್ರಿಯಂಚೋ ನಿಷದ್ಯಾಽಗ್ನೇ ತವ ನಃ ಪಾಂತ್ವಮೂರ ॥

ಯೇ ಪಾಯವೋ ಮಾಮತೇಯಂ ತೇ ಅಗ್ನೇಪಶ್ಯಂತೋ ಅಂಧಂ ದುರಿತಾದರಕ್ಷನ್ ।

ರರಕ್ಷ ತಾನ್ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾಹದೇಭುಃ ॥

ತ್ವಯಾ ವಯಗುಂ ಸದನ್ಯಸ್ತ್ವೋತಾಸ್ತವ ಪ್ರಣೀತ್ಯಶ್ಯಾಮ ವಾಜಾನ್ ।

## ವಾಸ್ತು ಹೋಮಃ

ಈಶಾನ್ಯದಿಕ್ಕಿನಲ್ಲಿ ಸ್ಥಂಡಿಲವನ್ನು ಬರೆದು ರಾಕ್ಷೋಘ್ನ ಹೋಮದ ಅಗ್ನಿಯನ್ನು ಪ್ರತಿಷ್ಠಾಪಿಸಿ, ಪರಿಸ್ತರಣಕ್ಕೆ ಮೊದಲಾಗಿ ಅಗ್ನಿಯ ಪೂರ್ವಭಾಗದಲ್ಲಿ ಪೂರ್ವಪಶ್ಚಿಮ ಕ್ರಮದಿಂದ ಎರಡು ಸ್ವಸ್ತಿಕಗಳನ್ನು ಬರೆದು ಭತ್ತ, ಬಟ್ಟೆ, ಅಕ್ಕಿ, ಎಳ್ಳು, ಸಾಸಿವೆಗಳಿಂದ ಪೀಠವನ್ನು ಸಿದ್ಧಗೊಳಿಸಿ ಆ ಪೀಠದಲ್ಲಿ ದೂರ್ವಾ (ಗರಿಕೆ) ಶಮೀದಳ (ಬನ್ನಿಎಲೆ) ದರ್ಭೆ ಕೂರ್ಚಗಳನ್ನಿರಿಸಿ, ಪಶ್ಚಿಮ ಪೂರ್ವ ಕ್ರಮದಿಂದ ಎರಡು ಬಿಂದಿಗೆಗಳನ್ನು ಕೆಳಮುಖವಾಗಿರಿಸಿ, ಅಲ್ಲಿ ಪೀಠಪೂಜೆಯನ್ನು ಮಾಡಿ, ಆ ಬಿಂದಿಗೆಗಳಿಗೆ ದರ್ಭನ್ಯಾಸಾದಿ ಸಂಸ್ಕಾರಗಳನ್ನು ಮಾಡಿ, ಮೇಲ್ಮುಖನಾಗಿ ಮಾಡಿ ಇಟ್ಟು ಕೆಳಮುಖನಾಗಿ ಕೂರ್ಚನ್ನಿರಿಸಿ, ಪಶ್ಚಿಮದ ಬಿಂದಿಗೆಯಲ್ಲಿ ಅಕ್ಕಿ ಚಿನ್ನಗಳಿಂದ ತುಂಬಿಸಿ, 'ಓಂ ವಾಂ ವಾಸ್ತು ಪುರುಷಾಯ ನಮಃ' ಹೀಗೆ ಆವಾಹಿಸಿ, ಓಂ ವಾಂ ಹೃದಯಾಯ । ವೀಂ ಶಿರಸೇ । ವೂಂ ಶಿಖಾಯೈ । ವೈಂ ಕವಚಾಯ । ವೌಂ ನೇತ್ರತ್ರಯಾಯ । ವಃ ಅಸ್ತ್ರಾಯ– ಹೀಗೆ ಷಡಂಗಗಳನ್ನು ಮಾಡಿ ಧ್ಯಾನಿಸಬೇಕು. ಪುನಃ ಪೂರ್ವದಿಕ್ಕಿನ ಕಲಶದಲ್ಲಿ ಕೆಳಮುಖವಾಗಿ ಕೂರ್ಚನ್ನಿರಿಸಿ ಚಿನ್ನ ರತ್ನ ನೀರುಗಳಿಂದ ತುಂಬಿಸಿ 'ಶಂನೋ ದೇವೀರಭಿಷ್ಟಯ'– ಈ ಮಂತ್ರದಿಂದ ಶಾಂತಿಯನ್ನು ಆವಾಹಿಸಿ, ಮುದ್ರೆಗಳನ್ನು ತೋರಿಸಿ, ಶಂನೋ ದೇವೀರಭಿಷ್ಟಯ– ಹೃದಾಯಯ । ಆಪೋಭವಂತು ಪೀತಯೇ– ಶಿರಸೇ । ಶಂಯೋರಭಿಸ್ರವಂತು ನಃ– ಶಿಖಾಯೈ । ಶಂನೋ ದೇವೀರಭಿಷ್ಟಯ– ಕವಚಾಯ । ಆಪೋಭವಂತು ಪೀತಯೇ– ನೇತ್ರಾಭ್ಯಾಂ । ಶಂಯೋರಭಿಸ್ರವಂತುನಃ– ಅಸ್ತ್ರಾಯ । ಮೂಲೇನ ದೇವಮಾವಾಹ್ಯ ಸಕಲೀಕೃತ್ಯ ಪೂಜಿಸಬೇಕು. ಇಲ್ಲಿ ಅಂಗಗಳಿಂದ ಪ್ರಥಮಾವರಣ ಇಂದ್ರಾದಿ ದ್ವಿತೀಯಾವರಣ, ವಜ್ರಾದಿಗಳಿಂದ ತೃತೀಯಾವರಣ. ಕಲಶ ಪೂಜೆಯಲ್ಲಿ ಪೀಠ ಪೂಜಾದಿ ಕಲಶ ನ್ಯಾಯದಿಂದ ಪೂಜಿಸಿ, ಆಸನ ಸ್ವಾಗತ ಧೂಪದೀಪಾದಿ ನೈವೇದ್ಯಗಳನ್ನು ಮಾಡಬೇಕು. ಎರಡು ಕಲಶಗಳಲ್ಲೂ ಪೂಜೆಯನ್ನು ಮಾಡಿ ಸಕಲೀಕರಣದೊಂದಿಗೆ ಉಪಹಾರಗಳನ್ನು ಕೊಟ್ಟು ನೈವೇದ್ಯ ಮಾಡಿ ಪ್ರಸನ್ನಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ಬಟ್ಟೆಯಿಂದ ಮುಚ್ಚಿ ರಕ್ಷಿಸಬೇಕು.

**ಹೋಮಾನ್ವಾಧಾನಃ**– ಅಗ್ನೌ ಪರಿಧಿನ್ಯಾಸಾದಿ ಚಕ್ಷುಷ್ಮಂತವಾಗಿ ಮಾಡಿ– ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷೀ ಆಜ್ಯೇನ ಪ್ರಧಾನ ದೇವತಾಂ ವಾಸ್ತೋಷ್ಪತಿಂ– ವಾಸ್ತೋಷ್ಪತೇ ಪ್ರತಿಜಾನೀಹಿ– ವಾಸ್ತೋಷ್ಪತೇಶಗ್ಮಯಾ– ಇತಿ ದ್ವಾಭ್ಯಾಂಪಕ್ಷೇನ, ವಾಸ್ತೋಷ್ಪತೇ ಧ್ರುವಾಸ್ಥೂಣಾಂ– ಇತಿ ಷಣ್ಮಂತ್ರೈರಾಜ್ಯೇನ ಪಂಚದುರ್ಗಾಭಿರಾಜ್ಯೇನ, ಶಂ ನ ಇಂದ್ರಾಗ್ನೀ– ಇತ್ಯಾದಿ ಪಂಚದಶಭಿಃ ಭೂರಾದಿವ್ಯಾಹೃತಿಭಿಶ್ಚ ಸಕೃತ್ಸಕೃದಾಜ್ಯೇನ ಶಂ ನೋ ದೇವೀತಿ ಮಂತ್ರೇಣ ಶಮೀ ಸಮಿದಾಜ್ಯ ಚರ್ವಾಜ್ಯ ದ್ರವ್ಯೈ, ಗವ್ಯಾಪ್ಲುತದೂರ್ವಾಭಿಶ್ಚಪೃಥಗಷ್ಟೋತ್ತರ ಶತ ಸಂಖ್ಯಯಾ ದ್ರವ್ಯಭೇದೇ ಮಂತ್ರಭೇದೇ ಚ ವ್ಯಾಹೃತಿ ಪೂರ್ಣಾಹುತಿಭಿಃ ಚರುಶೇಷೇಣಾಗ್ನಿಂ ಸ್ವಿಷ್ಟಕೃತಂ– ಇತ್ಯಾದಿ ಸದ್ಯೋ ಯಕ್ಷ್ಯೇ ॥—॥ ಶಿವನಲ್ಲಿ ಪಂಚದುರ್ಗಾ ಸ್ಥಾನದಲ್ಲಿ ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳಿಂದ ಆಜ್ಯವನ್ನು ಹೋಮಿಸಬೇಕು. ಶಂಕರನಾರಾಯಣನಲ್ಲಿ **'ಅಮೀವಹಾವಾಸ್ತೋಷ್ಪತೇ'**– ಈ ಮಂತ್ರಾಂತದವರೆಗೆ ಹೋಮಿಸಿ, ಪಂಚತತ್ತ್ವಗಳಿಂದ ಹೋಮಿಸಿ ಪಂಚದುರ್ಗಾಮಂತ್ರಗಳಿಂದ ಹೋಮಿಸಬೇಕು. ಗುಹನಲ್ಲಿ ಪೃತನಾ ಜಿತಗುಂ– ಪರ್ಯಂತ ಹೋಮಿಸಿ ಷಣ್ಮಂತ್ರ (ಆರುಮಂತ್ರ)ಗಳಿಂದ ಹೋಮ ಮಾಡಿ ಶನ್ನಇಂದ್ರಾಗ್ನಿ– ಮೊದಲಾದವುಗಳಿಂದ ಹೋಮಿಸಬೇಕು. ಪುನಃ ಎಲ್ಲಾ ದೇವತೆಗಳಲ್ಲಿಯೂ **'ಶಂನೋ ದೇವೀರಭಿಷ್ಟಯ'**– ಎಂಬ ಮಂತ್ರದಿಂದ ಶಮೀ ಸಮಿತ್ತು, ತುಪ್ಪ, ಚರು, ತುಪ್ಪಗಳನ್ನು ಪ್ರತ್ಯೇಕವಾಗಿ ನೂರೆಂಟರ ಸಂಖ್ಯೆಯಲ್ಲಿ ಪಂಚಗವ್ಯದಿಂದ ತೊಯ್ದ ಗರಿಕೆಯನ್ನು ನೂರೆಂಟರ ಸಂಖ್ಯೆಯಲ್ಲಿ ನಿಜನಿಜ ಪೂರ್ಣಾಹುತಿಯೊಂದಿಗೆ ಹೋಮಿಸಬೇಕು. ದುರ್ಗಿಯಲ್ಲಿ **'ಜಾತವೇದಸೇ'**– ಈ ಮಂತ್ರದಿಂದ ಸಮಿಧ ಮೊದಲಾಗಿ ನಾಲ್ಕು ದ್ರವ್ಯಗಳನ್ನು ಹೋಮಿಸಿ **'ಶಂನೋದೇವೀ'**– ಮಂತ್ರದಿಂದ ದೂರ್ವೆಯಿಂದ ಹೋಮಿಸಬೇಕು. ವಿಷ್ಣುವಿನಲ್ಲಿ ಮೂಲಮಂತ್ರದಿಂದ ದೂರ್ವೆಗಳನ್ನು ಹೋಮಿಸಬೇಕೆನ್ನುವುದು ವಿಶೇಷವು. ಶಾಸ್ತಾರ, ಸುಬ್ರಹ್ಮಣ್ಯರಲ್ಲಿ ಸಮಿಧ ಮೊದಲಾದ ಐದು ದ್ರವ್ಯಗಳನ್ನು ತಮ್ಮ ತಮ್ಮ ಗಾಯತ್ರಿಯಿಂದಲಾದರೂ (ವಿಕಲ್ಪವಾಗಿ) ಹೋಮಿಸಬಹುದು. ಇದು ವಿಶೇಷವು. ಪುನಃ ಎಲ್ಲಾ ದೇವತೆಗಳಲ್ಲೂ ಪೂರ್ಣಾಹುತಿಯನ್ನು ಹೋಮಿಸಿ ಸ್ವಿಷ್ಟಕೃತ್ ಹೋಮಕ್ಕೆ ಮೊದಲಾಗಿ ಕುಂಭಾಜ್ಯದಿಂದ ಉಪಸ್ತರಣ ಮಾಡಿ, ಬೇರೊಂದು ಪಾತ್ರೆಯಲ್ಲಿ ಹವಿಸ್ಸನ್ನು ಪ್ರತ್ಯೇಕಿಸಿ, ಸ್ವಿಷ್ಟಕೃತ್ ಮೊದಲಾಗಿ ಹೋಮಶೇಷವನ್ನು ಪೂರ್ತಿಗೊಳಿಸಿ ಅಗ್ನಿಯ ಪೂರ್ವಭಾಗದಲ್ಲಿ ಕಲಶದ ಪಶ್ಚಿಮದಲ್ಲಿ ಮಂಡಲವನ್ನು ಬರೆದು, ದರ್ಭೆಯನ್ನಿರಿಸಿ– **'ನಮೋ ರುದ್ರಾಯ ವಾಸ್ತೋಷ್ಪತಯೇ ಆಯನೇವಿದ್ರವಣೇ ಉದ್ಯಾನೇ ಯತ್ಪರಾಯಣೇ ಆವರ್ತನೇ ವಿವರ್ತನೇ ಯೋ ಗೋಪಾಯತಿ ತಗುಂ ಹುವೇ ನಮಃ'**– ಈ ಮಂತ್ರದಿಂದ ನೀರು ತುಪ್ಪದಿಂದ ಕೂಡಿದ ಹೋಮ ಮಾಡಿ ಉಳಿದ ಹವಿಸ್ಸಿನಿಂದ ಬಲಿಯನ್ನು ಚೆಲ್ಲಿ ಪರಿಸಮೂಹನ ಮೊದಲಾಗಿ ಗಂಧಹೂವುಗಳಿಂದ ಪೂಜಿಸಿ ಅಗ್ನಿಯನ್ನು ವಿಸರ್ಜಿಸಬೇಕು.

**ಓಂ ವಾಸ್ತೋಷ್ಪತೇ ಪ್ರತಿಜಾನೀ ಹ್ಯಸ್ಮಾನ್ತ್ಸ್ವಾ ವೇಶೋ ಅನಮೀ ವೋ ಭವಾ ನಃ ।**
**ಯತ್ತ್ವೇಮಹೇ ಪ್ರತಿತನ್ನೋ ಜುಷಸ್ವ ಶಂನ ಏಧಿ ದ್ವಿಪದೇ ಶಂ ಚತುಷ್ಪದೇ ॥**
**ವಾಸ್ತೋಷ್ಪತೇ ಶಗ್ಮಯಾ ಸಗುಂಸದಾ ತೇ ಸಕ್ಷೀಮಹಿರಣ್ವಯಾ ಗಾತು ಮತ್ಯಾ ।**
**ಆವಃ ಕ್ಷೇಮ ಉತಯೋಗೇ ವರಂ ನೋಯೂಯಂ ಪಾತ ಸ್ವಸ್ತಿಭಿಃ ಸದಾ ನಃ ಸ್ವಾಹಾ ॥**

ಹೀಗೆ ಪಕ್ವವನ್ನು ಹೋಮಿಸಿ– ವಾಸ್ತೋಷ್ಪತಯ ಇದಂ ನಮಮ– ಹೀಗೆ ತ್ಯಾಗವು. ಆಮೇಲೆ ಆಜ್ಯಾಹುತಿಯನ್ನು ಹೋಮಿಸುತ್ತಾನೆ.–

ಓಂ ವಾಸ್ತೋಷ್ಪತೇ ಧ್ರುವಾ ಸ್ಥೂಣಾಗುಂ ಸತ್ರ ಸೋಮ್ಯಾನಾಂ ।
ದ್ರಪ್ಸೋ ಭೇತ್ತಾ ಪುರಾಂ ಶಶ್ವತೀನಾ ಮಿಂದ್ರೋ ಮುನೀನಾಂ ಸಖಾ ಸ್ವಾಹಾ– ವಾಸ್ತೋಷ್ಪಯ ಇದಂ ॥ ೧ ॥

ಓಂ ಗೃಹ್ಯಂ ಭಯಂ ಯಚ್ಚೇದ್ವಿಪಾತ್ತು ಯದುಚೇಚ್ಚತುಷ್ಪಾತ್ತು ಭಯಂಯದಸ್ತಿ ।
ಅಗ್ನಿರ್ಯವಿಷ್ಠ್ಯಃ ಪ್ರಣುದತು ತದ್ಭಯಗುಂ ಶಂನಃ ಪ್ರಜಾಭ್ಯಃ ಶಮುನಃ ಪಶುಭ್ಯಃ ಸ್ವಾಹಾ–
ಅಗ್ನಯೇ ಯವಿಷ್ಠ್ಯಾಯೇದಂ * * ॥ ೨ ॥

ಓಂ ಅಕ್ಷಿಸ್ಪಂದೇಽಙ್ಗ ಚಲನೇ ಚ ಯದ್ಭಯಂ ಯದ್ವಾ ಕ್ಷಿತೇ ಯದು ಚೇದ್ದುರುಕ್ತೇ।
ಅಗ್ನಿರ್ಯವಿಷ್ಠ್ಯಃ ಪ್ರಣುದತು ತದ್ಭಯಗುಂ ಶಂ ನಃ ಪ್ರಜಾಭ್ಯಃ ಶಮು ನಃ ಪಶುಭ್ಯಃ ಸ್ವಾಹಾ–
ಅಗ್ನಯೇ ಯವಿಷ್ಠ್ಯಾಯೇದಂ ॥ ೩ ॥

ಓಂ ದುಃಸ್ವಪ್ನೇ ಪಾಪಸ್ವಪ್ನೇ ಚ ಯುದ್ಭಯಗುಂ ಸ್ವಪ್ನಾಶನೇ ಯದಮೇಧ್ಯದರ್ಶನೇ । ಅಗ್ನಿರ್ಯವಿಷ್ಠ್ಯಃ
ಪ್ರಣುದತು ತದ್ಭಯಗುಂ ಶಂನಃ ಪ್ರಜಾಭ್ಯಃ ಶಮುನಃ ಪಶುಭ್ಯಃ ಸ್ವಾಹಾ– ಅಗ್ನಯೇ ಯವಿಷ್ಠ್ಯಾಯೇದಂ ॥ ೪ ॥

ಓಂ ವಾಸ್ತೋಷ್ಪತೇ ಪ್ರತರಣೋ ನ ಏಧಿ ಗಯಸ್ಫಾನೋ ಗೋಭಿರಶ್ವೇಭಿರಿಂದೋ । ಅಜರಾಸಸ್ತೇ ಸಖ್ಯೇ
ಸ್ಯಾಮ ಪಿತೇವಪುತ್ರಾನ್ಪ್ರತಿನೋ ಜುಷಸ್ವ ಸ್ವಾಹಾ– ವಾಸ್ತೋಷ್ಪತಯೇ ಇದಂ ॥ ೫ ॥

ಓಂ ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ಸ್ವಾಹಾ–
ವಾಸ್ತೋಷ್ಪತಯೇ ಇದಂ ನಮಮ ॥ ೬ ॥

ಓಂ ಜಾತವೇದಸೇ * * * ದುರಿತಾತ್ಯಗ್ನಿಃ ॥ ದುರ್ಗಾಯಾ ಇದಂ ॥ ೧ ॥

ತಾಮಗ್ನಿವರ್ಣಾಂ * * * ತರಸೇ ನಮಃ ॥ ದುರ್ಗಾಯಾ ಇದಂ ॥ ೨ ॥

ಅಗ್ನೇ ತ್ವಂಪಾರಯಾ * * * ಯಾಯ ಶಂಯೋಃ ॥ ದುರ್ಗಾಯಾ ಇದಂ ॥ ೩ ॥

ವಿಶ್ವಾನಿ ನೋ * * * ವಿತಾತ ನೂನಾಂ ॥ ದುರ್ಗಾಯಾ ಇದಂ ॥ ೪ ॥

ಪೃತನಾಜಿತ * * * ದುರಿತಾತ್ಯಗ್ನಿಃ ॥ ದುರ್ಗಾಯಾ ಇದಂ ॥ ೫ ॥

ಓಂ ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾ ವರುಣಾ ರಾತಹವ್ಯಾ ।
ಶಮಿಂದ್ರಾ ಸೋಮಾ ಸುವಿತಾಯ ಶಂಯೋಃ ಶಂ ನ ಇಂದ್ರಾ ಪೂಷಣಾ ವಾಜಸಾತೌ ॥ ೧ ॥

ಓಂ ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।
ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂನೋ ಅರ್ಯಮಾ ಪುರುಜಾತೋ ಅಸ್ತು ॥ ೨ ॥

ಓಂ ಶಂ ನೋ ಧಾತಾ ಶಮು ಧರ್ತಾ ನೋ ಅಸ್ತು ಶಂ ನ ಉರೂಚೀ ಭವತು ಸ್ವಧಾಭಿಃ ।
ಶಂ ರೋದಸೀ ಬೃಹತೀ ಶಂ ನೋ ಅದ್ರಿಃ ಶಂ ನೋ ದೇವಾನಾಂ ಸುಹವಾನಿ ಸಂತು ॥ ೩ ॥

ಓಂ ಶಂ ನೋ ಅಗ್ನಿರ್ಜ್ಯೋತಿರನೀಕೋ ಅಸ್ತು ಶಂ ನೋ ಮಿತ್ರಾವರುಣಾವಶ್ವಿನಾ ಶಂ ।
ಶಂ ನಃ ಸುಕೃತಾಂ ಸುಕೃತಾನಿ ಸಂತು ಶಂ ನ ಇಷಿರೋ ಅಭಿವಾತು ವಾತಃ ॥ ೪ ॥

ಓಂ ಶಂ ನೋ ದ್ಯಾವಾಪೃಥಿವೀ ಪೂರ್ವಹೂತೌ ಶಮಂತರಿಕ್ಷಂ ದೃಶಯೇ ನೋ ಅಸ್ತು ।
ಶಂ ನ ಓಷಧೀರ್ವನಿನೋ ಭವಂತು ಶಂ ನೋ ರಜಸಸ್ಪತಿರಸ್ತು ಜಿಷ್ಣುಃ ॥ ೫ ॥

ಓಂ ಶಂ ನ ಇಂದ್ರೋ ವಸುಭಿರ್ದೇವೋ ಅಸ್ತು ಶಮಾದಿತ್ಯೇಭಿರ್ವರುಣಃ ಸುಶಂಸಃ ।
ಶಂ ನೋ ರುದ್ರೋ ರುದ್ರೇಭಿ ರ್ಜಲಾಷಃ ಶಂ ನಃ ತ್ವಷ್ಟಾಗ್ನಾಭಿರಿಹ ಶೃಣೋತು ॥ ೬ ॥

ಓಂ ಶಂ ನಃ ಸೋಮೋ ಭವತು ಬ್ರಹ್ಮ ಶಂ ನಃ ಶಂ ನೋ ಗ್ರಾವಾಣಃ ಶಮು ಸಂತು ಯಜ್ಞಾಃ ।
ಶಂ ನಃ ಸ್ವರೂಣಾಂ ಮಿತಯೋ ಭವಂತು ಶಂ ನಃ ಪ್ರಸ್ವರುಂ ಶಂ ವಸ್ತುವೇದಿಃ ॥ ೭ ॥

ಓಂ ಶಂ ನಃ ಸೂರ್ಯ ಉರುಚಕ್ಷಾ ಉದೇತು ಶಂ ನ ಶ್ಚತಸ್ರಃ ಪ್ರದಿಶೋ ಭವಂತು ।
ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸಂತ್ವಾಪಃ ॥ ೮ ॥

ಓಂ ಶಂ ನೋ ಅದಿತಿರ್ಭವತು ವ್ರತೇಭಿಃ ಶಂ ನೋ ಭವಂತು ಮರುತಃ ಸ್ವರ್ಕಾಃ ।
ಶಂ ನೋ ವಿಷ್ಣುಃ ಶಮು ಪೂಷಾನೋ ಅಸ್ತು ಶಂ ನೋ ಭವಿತ್ರಂ ಶಂ ವಸ್ತು ವಾಯುಃ ॥ ೯ ॥

ಓಂ ಶಂ ನೋ ದೇವಃ ಸವಿತಾ ತ್ರಾಯಮಾಣಃ ಶಂ ನೋ ಭವಂತೂಷಸೋ ವಿಭಾತೀಃ ।
ಶಂ ನಃ ಪರ್ಜನ್ಯೋ ಭವತು ಪ್ರಜಾಭ್ಯಃ ಶಂ ನಃ ಕ್ಷೇತ್ರಸ್ಯ ಪತಿರಸ್ತು ಶಂಭುಃ ॥ ೧೦ ॥

ಓಂ ಶಂ ನೋ ದೇವಾ ವಿಶ್ವದೇವಾ ಭವಂತು ಶಂ ಸರಸ್ವತೀ ಸಹ ದೀಭಿರಸ್ತು ।
ಶಮಭಿಷಾಚಃ ಶಮುರಾತಿಷಾಚಃ ಶಂ ನೋ ದಿವ್ಯಾಃ ಪಾರ್ಥಿವಾಃ ಶಂ ನೋ ಅಪ್ಯಾಃ ॥ ೧೧ ॥

ಓಂ ಶಂ ನಃ ಸತ್ಯಸ್ಯ ಪತಯೋ ಭವಂತು ಶಂ ನೋ ಅರ್ವಂತಃ ಶಮು ಸಂತು ಗಾವಃ ।
ಶಂ ನ ಋಭವಃ ಸುಕೃತಃ ಸುಹಸ್ತಾಃ ಶಂ ನೋ ಭವಂತು ಪಿತರೋ ಹವೇಷು ॥ ೧೨ ॥

ಓಂ ಶಂ ನೋ ಅಜ ಏಕಪಾದ್ದೇವೋ ಅಸ್ತು ಶಂ ನೋಹಿರ್ಬುಧ್ನ್ಯಃ ಶಂ ಸಮುದ್ರಃ ।
ಶಂ ನೋ ಅಪಾಂನಪಾತ್ಪೇರು ರಸ್ತು ಶಂ ನಃ ಪ್ರಶ್ನಿ ರ್ಭವತು ದೇವಗೋಪಾ ॥ ೧೩ ॥

ಓಂ ಆದಿತ್ಯಾ ರುದ್ರಾ ವಸವೋ ಜುಷಚಿತೇದಂ ಬ್ರಹ್ಮ ಕ್ರಿಯಮಾಣಂ ನವೀಯಃ ।
ಶೃಣ್ವಂತು ನೋ ದಿವ್ಯಾಃ ಪಾರ್ಥಿವಾಸೋ ಗೋಜಾತಾ ಉತ ಯೇ ಯಜ್ಞಿಯಾಸಃ ॥ ೧೪ ॥

ಓಂ ಯೇ ದೇವಾನಾಂ ಯಜ್ಞಿಯಾ ಯಜ್ಞಿಯಾನಾಂ ಮನೋರ್ಯಜತ್ರಾ ಅಮೃತಾ ಋತಜ್ಞಾಃ ।
ತೇ ನೋ ರಾಸಂತಾ ಮುರುಗಾಯ ಮದ್ಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೫ ॥

(ವಿಶ್ವೇಭ್ಯೋ ದೇವೇಭ್ಯ ಇದಂ ನಮಮ- ಇತಿ ಸರ್ವತ್ರ ತ್ಯಾಗಃ) ಅನಂತರ ಭೂರಾದಿ ವ್ಯಾಹೃತಿಗಳಿಂದ ಹೋಮಿಸಿ ಹೇಳಿದ ಕ್ರಮದಲ್ಲಿ ದ್ರವ್ಯಹೋಮವನ್ನು ಮಾಡಿ ಸ್ವಿಷ್ಟಕೃದಾದಿ ಪೂರ್ಣಾಹುತಿಯೊಂದಿಗೆ ಬ್ರಹ್ಮಾರ್ಪಣ ಮಾಡಿ ಹೋಮ ಸಮಾಪ್ತಿಗೊಳಿಸಬೇಕು.

* * * *

## ವಾಸ್ತು ಪೂಜಾ

ಪೃಷ್ಠ ಹನ್ನೊಂದರ ಕೊನೆಯಿಂದಾರಂಭಿಸಿ ಹದಿಮೂರನೆಯ ಪೇಜಿನ ಪರ್ಯಂತ ಪೂಜೆ ಹಾಗೂ ಬಲಿಯನ್ನು ಕ್ರಮದೊಂದಿಗೆ ವಿವರಿಸಿದೆ. ವಾಸ್ತುಹೋಮದ ಈಶಾನ್ಯ ಭಾಗದಲ್ಲಿ ಮಂಡಲವನ್ನು ಬರೆದು ಬಲಿಪ್ರಧಾನವನ್ನು ಮಾಡಬೇಕು.

## ಬಲಿಯ ವಿಧಾನ

ಹವಿಸ್ಸಿನ ಸಂಸ್ಕಾರವನ್ನು ಮಾಡಿ ದರ್ಭೆಯ ತುಂಡು, ಹೂವು, ಅಕ್ಷತೆ, ನೀರುಗಳನ್ನು ಹವಿಸ್ಸಿನಲ್ಲಿ ಸೇರಿಸಿ ವಾಸ್ತು ಪುರುಷ ಹಾಗೂ ಬ್ರಹ್ಮನಿಗೆ ಮೂರಾವರ್ತಿ ಬಲಿಯನ್ನು ಕೊಟ್ಟು ಆರ್ಯಕ ಮೊದಲಾದ ಅಥವಾ ಈಶಾನಾದಿ ದೇವತೆಗಳಿಗೆ ಒಂದೊಂದಾವರ್ತಿಯಲ್ಲಿಯೂ ದೇವಗ್ರಹಾದಿಗಳಿಗೆ ಪಂಚಕ್ರೂರಸಹಿತವಾಗಿ ಒಂದೊಂದಾವರ್ತಿ ಬಲಿಯನ್ನು ಹಾಕಬೇಕು. ಪಂಚ ಕ್ರೂರಗಳಾವುದೆಂದರೆ–

ಪಲಲಂ ರಜನೀಚೂರ್ಣಂ ಸಲಾಜಂ ದಧಿಸಕ್ತುಕಂ ।
ಭೂತಕ್ರೂರ ಬಲಿಂ ಹದ್ಯಾತ್ ಪೂರ್ವಂ ಭೂತ ಪ್ರಹರ್ಷಣಂ ॥

ಈಶಾನ್ಯದಲ್ಲಿ ಸರ್ವಗ್ರಹೇಭ್ಯಃ ಸ್ವಾಹಾ- ಎಂದು ಬಲಿಯನ್ನು ಹಾಕಿ, ಕೈಕಾಲುಗಳನ್ನು ತೊಳೆದುಕೊಂಡು, ಆಚಮನವನ್ನು ಮಾಡಿ, ಬ್ರಹ್ಮನಿಗೆ ಪುನಃ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ಪರಿಧಿಯ (ಪ್ರಾಸಾದದ) ಒಳಭಾಗವು ವಾಸ್ತು ದೇವತೆಗಳಿಂದ ನೆಲೆಸಿರುವಂತೆ ಭಾವಿಸಿ ರಕ್ಷಣೆಯನ್ನು ಮಾಡಬೇಕು. ಈ ಬಲಿಯನ್ನು ಹೋಮದ ಪೂರ್ವಭಾಗದಲ್ಲೂ

ಮಾಡಬಹುದು. **ತ್ವಂ ವಿಪ್ರ ಸ್ತ್ವಂ ಕವಿರ್ವಿಶ್ವಾ ರೂಪಾಣಿ ಧಾರಯನ್ । ಅಪಜನ್ಯಂ ಭಯಂ ನುದ ॥ ಅಪಚಕ್ರಾಣಿ ವರ್ತಯ । ಗ್ರಹಗುಂ ಸೋಮಸ್ಯಗಚ್ಛತಂ–** ಎಂದು ಜಪಿಸುತ್ತಾ ಶಮೀ (ಬನ್ನಿ) ಚಿಗುರುಗಳಿಂದ ಭಸ್ಮ ಪ್ರಣೀತಾ ಜಲದಿಂದ ಕೂಡಿದ ಸಂಪಾತಾಜ್ಯವನ್ನು ಪ್ರಾಸಾದದಲ್ಲಿ ಸಮರ್ಪಿಸಿ, ಗರ್ಭಗೃಹದಲ್ಲಿ ಹೋಗಿ ಅಲ್ಲಿ ಕುಳಿತು ದೇವರ ಮುಂಭಾಗ (ಇದಿರಿನಲ್ಲಿ) ಸ್ವಚ್ಛಗೊಳಿಸಿ ದರ್ಭೆಯನ್ನಿರಿಸಿ ಪೀಠಪೂಜೆಯನ್ನು ಮಾಡಿ ಶಿವನಲ್ಲಿ ಪ್ರಾಸಾದ ಮಂತ್ರದಿಂದ ಬೇರೆ ಬೇರೆ ದೇವತೆಗಳಲ್ಲಿ ಮೂಲಮಂತ್ರದಿಂದಲೂ ಆವಾಹಿಸಿ ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ನೀರಾಜನವನ್ನು ಮಾಡಿ, ಶನ್ನೋದೇವೀರಭಿಷ್ಟಯೇ– ಮಂತ್ರವನ್ನು ಜಪಿಸುತ್ತಾ ಅಕ್ಕಿಯಿಂದ ತುಂಬಿದ ಕಲಶದಿಂದ ಅಭಿಷೇಕ ಮಾಡಿ, ಪುನಃ ಮೂಲ ಮಂತ್ರದಿಂದ ಚಿನ್ನರತ್ನೋದಕದಿಂದ ತುಂಬಿದ ಕಲಶದಿಂದಭಿಷೇಕಿಸಿ ನೈವೇದ್ಯ ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ ನೀರಾಜನವನ್ನು ಮಾಡಿ ಪೂಜಿಸಿ ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ರಕ್ಷಿಸಬೇಕು. ಪುನಃ ಗರ್ಭಗೃಹವನ್ನು ಸ್ವಚ್ಛಗೊಳಿಸಿ ಪುಣ್ಯಾಹ ಪಾತ್ರದಲ್ಲಿ ನೀರನ್ನು ತುಂಬಿಸಿ, ದರ್ಭೆ, ಹೂವು, ಚಂದನಗಳನ್ನು ಹಾಕಿ, ಸ್ವರ್ಣಫಲವನ್ನಿರಿಸಿ, ಬಟ್ಟೆ ಹೊದಿಸಿ, ಅಲಂಕರಿಸಿ ಅಲ್ಲಿ ಇದುರಿನಲ್ಲಿ ವಾಸ್ತು ಪುರುಷನನ್ನು ಭಾವಿಸಿ, ಪವಿತ್ರ ದರ್ಭಾದಿಗಳನ್ನು ಕೊಟ್ಟು– **ಓಂ ಮನಃ ಸಮಾಧೀಯತಾಂ** – ಹೀಗೆ ಮೊದಲಾಗಿ ಮೂರ್ತಿಪರಿಂದ ಕೂಡಿ– **ಓಂ ವಾಸ್ತು ದೇವತಾಃ ಪ್ರೀಯತಾಂ – ಓಂ ಪ್ರೀಯಂತಾಂ ವಾಸ್ತುದೇವತಾಃ** – ಹೀಗೆ ಪುಣ್ಯಾಹವನ್ನು ಮಾಡಿ **'ಶಿವಂ ವಾಸ್ತು'** ಎನ್ನುವುದಾಗಿ ಹೇಳಬೇಕು.

——— ಇತಿ ಪ್ರಾಸಾದ ಶುದ್ಧಿಃ ———

## ಬಿಂಬಶುದ್ಧಿಕಲಶಃ

ಪ್ರಾಸಾದದ ಉತ್ತರಭಾಗದಲ್ಲಿ ಗೊತ್ತು ಪಡಿಸಿದ ಸ್ಥಳದಲ್ಲಿ ಮಾರ್ಜನೆ ಮೊದಲಾದುವುಗಳಿಂದ ಪರಿಶುದ್ಧಗೊಂಡ ಮಂಟಪದಲ್ಲಿ ಹದಿನೇಳು ದ್ರವ್ಯದ ಕ್ರಮದಲ್ಲಿ ಮಂಡಲವನ್ನು ಬರದು ಒಳಗೆ ಹಾಗೂ ಹೊರಭಾಗದಲ್ಲಿ ಒಂಭತ್ತು ಕಲಶಗಳನ್ನು ಸರಿಯಾದ ಹೊಂದಿಗೆಯೊಂದಿಗೆ ಕಲ್ಪಿಸಿ, ಮಧ್ಯದಿಗ್ವಿ ದಿಕ್ಕು ಕ್ರಮದಿಂದ ಒಂಭತ್ತು ದ್ರವ್ಯಗಳನ್ನು ತುಂಬಿಸಬೇಕು. ವಿಷ್ಣು ಮತ್ತು ಶಂಕರನಾರಾಯಣರಲ್ಲಿ ಹದಿನೇಳು ದ್ರವ್ಯಗಳೆಂದೂ, ಶಿವ ಮೊದಲಾದ ದೇವತೆಗಳಲ್ಲಿ ಒಂಭತ್ತು ದ್ರವ್ಯಗಳೆಂದು ವಿವರಣಕಾರನು ಹೇಳಿರುತ್ತಾನೆ. ವಿಷ್ಣುವಿನಲ್ಲಿ ಒಳಗಿನ ಒಂಭತ್ತರಲ್ಲಿ ಅಂಕುರ ಮೊದಲಾಗಿ ಒಂಭತ್ತು ದ್ರವ್ಯಗಳನ್ನೂ, ದ್ವೈವಿಕಾವರಣದಲ್ಲಿ ದಿಕ್ಕು ವಿದಿಕ್ಕು ಖಂಡಗಳ ಒಳಗಿರುವ ಕಲಶಗಳಲ್ಲಿ ಗಂಧೋದಕದಿಂದ ಉಳಿದವುಗಳಲ್ಲಿ ಶುದ್ಧೋದಕದಿಂದ ತುಂಬಿಸಬೇಕು. ಶಿವ ಮತ್ತು ಶಾಸ್ತಾರರಲ್ಲಿ ದಿಕ್ಕು ವಿದಿಕ್ಕು ಮಧ್ಯವೇ ಕೊನೆಯಾಗುವಂತೆ ಕ್ರಮವಾಗಿ ದ್ರವ್ಯಗಳನ್ನಿರಿಸಬೇಕು. ದುರ್ಗಾ ಗಣಪತಿಯರಲ್ಲಿ ಪ್ರದಕ್ಷಿಣಾಕಾರದಲ್ಲಿ ಹೊರಭಾಗದಲ್ಲಿ ಮಧ್ಯದಲ್ಲಿಯೂ, ಷಣ್ಮುಖನಲ್ಲಿ ಮಧ್ಯದಿಗ್ವಿದಿಕ್ಕ್ರಮದಿಂದಲೂ, ಶಂಕರನಾರಾಯಣನಲ್ಲಿ ಮಧ್ಯದಿಗ್ವಿದಿಕ್ಕ್ರಮಗಳಿಂದಲೂ ಒಂಭತ್ತು ದ್ರವ್ಯಗಳನ್ನು ತುಂಬಬೇಕು. ಹೊರಗಿನ ಖಂಡಗಳ ಒಳಗಿರುವ ಖಂಡಗಳಲ್ಲಿ ಸ್ವರ್ಣೋದಕವನ್ನು ತುಂಬಬೇಕು. ಅಲ್ಲಿ ವಿಷ್ಣುವಿನಲ್ಲಿ ಮಧ್ಯದಲ್ಲಿರುವ ಕಮಲದ ಆಗ್ನೇಯ ದಳದಲ್ಲಿ– (ಕ್ಷೀರಿಶ್ರೀ) ಗೋಳಿ, ಆಲ ಹಾಲುಮರದ ಕುಡಿ, ಬಿಲ್ವ, ಬಕುಳ, ಮಾವು, ಸಂಪಿಗೆ, ಮುತ್ತುಗ, ಅಶೋಕ, ಕದಂಬ ಕೆಂಪುಮತ್ತಿಗಿಡ– ಇವುಗಳ ಚಿಗುರು (ಕಡಿ)ಗಳನ್ನು ಹಾಕಬೇಕು. ನೈರುತ್ಯ ದಿಕ್ಕಿನ ದಳದಲ್ಲಿ ತಾವರೆ, ಗಂಧ, ರಕ್ತಚಂದನ, ಮಾಲತಿ ಹೂವು, ಜಾಜಿ, ಪತ್ರೆ, ಆರ್ತವದರ್ಭ ಮೂಲಿ, ಕೋಲುಮಲ್ಲಿಗೆ, ನಂದಿಬಟ್ಲು, ಗರಿಕೆ, ಗೋರೋಚನ, ಸಾಸಿವೆಯನ್ನೂ ಹಾಕಬೇಕು. ವಾಯುವ್ಯ ಕೋಣದ ಕಲಶದಲ್ಲಿ ಜವೆಗೋಧಿ, ಭತ್ತ, ಚಿನ್ನ, ಬೆಳ್ಳಿ, ಎಳ್ಳು, ನದಿಯ ಎರಡು ದಡದ ಮಣ್ಣುಗಳು, ಗೋಮಯಗಳನ್ನು ಹಾಕಬೇಕು. ಈಶಾನ್ಯ ಕೋಣದ ಕಲಶದಲ್ಲಿ– ಸಹದೇವೀ (ಮುಳ್ಳು ಸೇವಂತಿಗೆ) ವಿಷ್ಣುಕ್ರಾಂತಿ (ಬಿಳಿಯ ಗಿರಿಕರ್ಣಿಕೆ) ಸಿಹಿಲಿಂಬೆ, ಗುಳೂಚಿ, ಖಾರ ಗೆಣಸು (ಶೃಂಗವೇರ), ಬನ್ನಿ, ಶತಾವರೀ, ನವಣೆ ಧಾನ್ಯಗಳನ್ನು ಹಾಕಬೇಕು. ಪಶ್ಚಿಮದ ಕಲಶದಲ್ಲಿ ಫಲೋದಕವನ್ನು, ದಕ್ಷಿಣದ ಕಲಶದಲ್ಲಿ ಪಂಚಗವ್ಯವನ್ನೂ, ಪೂರ್ವದ ಕಲಶದಲ್ಲಿ ಕಷಾಯೊದಕವನ್ನೂ, ಉತ್ತರದ ಕಲಶದಲ್ಲಿ ಆಷಾಡಿಬೇರು, ಅಮೃತಬಳ್ಳಿ, ಗೋರಂಟಿ, ಹೆಗ್ಗುಳ್ಳ, ಬಜೆ, ಶತಾವರೀ, ಸಹದೇವೀ, ಆಡುಸೋಗೆ– ಇವುಗಳನ್ನೂ, ಮಧ್ಯಕಲಶದಲ್ಲಿ ಹುತ್ತವೇ ಮೊದಲಾದ ಏಳು ಸ್ಥಳಗಳಿಂದ ಸಂಗ್ರಹಿಸಿದ ಮಣ್ಣುಗಳನ್ನು ತುಂಬಿಸಬೇಕು. **'ಓಂ ಸೋಮಾಯ ವನಸ್ಪತ್ಯಂತರ್ಗತಯೇ ನಮಃ'–** ಇದು ಪಲ್ಲವಾದಿ ಮಣ್ಣು ಪರ್ಯಂತ ದ್ರವ್ಯಗಳ ತುಂಬುವಿಕೆಯ ಮಂತ್ರವು. ಗಂಧೋದಕದಲ್ಲಿ (ತುಂಬಿಸಲು) ಅಷ್ಟಾಕ್ಷರ ಮಂತ್ರವು. ಶುದ್ಧೋದಕದಲ್ಲಿ ದ್ವಾದಶಾಕ್ಷರ ಮಂತ್ರವು. **ಶಿವನಲ್ಲಿ–** ಹಿಂದೆ ಹೇಳಿದ ಕ್ರಮದಿಂದ– ಕಷಾಯ, ಪಂಚಗವ್ಯ, ಭಸ್ಮಜಲ, ಮೃಜ್ಜಲ, ಗೋಮೂತ್ರ, ಕ್ಷೀರ, ದಧಿ, ಕುಶೋದಕ ಗಂಧೋದಕಗಳನ್ನು ತುಂಬಿಸಬೇಕು. **ಶಾಸ್ತಾರನಲ್ಲಿ–** ಹಿಂದೆ ಹೇಳಿದ ಕ್ರಮದಂತೆ– ಮೃಜ್ಜಲ, ಕಷಾಯ, ವ್ಯಸ್ತವಾದ ಪಂಚಗವ್ಯ, ಸಮಸ್ತ (ಪಂಚಗವ್ಯ) ಗಂಧಜಲ– ಇವುಗಳನ್ನು ತುಂಬಬೇಕು. **ದುರ್ಗಿಯಲ್ಲಿ–** ಹಿಂದೆ ಹೇಳಿದ ಕ್ರಮದಿಂದ– ವ್ಯಸ್ತವಾದ ಪಂಚಗವ್ಯ, ಮೃಜ್ಜಲ, ಕಷಾಯ, ರತ್ನಜಲ, ಗಂಧೋದಕ– ಇವುಗಳನ್ನು ತುಂಬಿಸಬೇಕು. **ಗಣಪತಿಯಲ್ಲಿ–** ಪಾದ್ಯ, ಅರ್ಘ್ಯ, ಗವ್ಯ, ಕ್ಷೀರ, ದಧಿ, ಕಷಾಯ, ಮೃಜ್ಜಲ, ಕುಶಜಲ, ಗಂಧೋದಕಗಳನ್ನು ಹಿಂದೆ ಹೇಳಿದ

ಕ್ರಮದಂತೆ ತುಂಬಿಸಬೇಕು. (ಪಾದ್ಯ- ಮೃತ್, ದೂರ್ವಾ, ಸರ್ಷಪ, ತಿಲ) (ಅರ್ಘ್ಯ- ದಧಿಕ್ಷೀರ, ಅಕ್ಷತ, ಯವ, ತಿಲ, ಸರ್ಷಪ, ಕುಶಾಗ್ರ) (ಗವ್ಯ- ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ) **ಸ್ಕಂದನಲ್ಲಿ**- ಹಿಂದೆ ಹೇಳಿದ ಕ್ರಮದಂತೆ ಕುಶೋದಕ, ಗವ್ಯ, ಕಷಾಯ, ದೂರ್ವೋದಕ, ಸರ್ಷಪೋದಕ, ಮೃಜ್ಜಲ, ರತ್ನಜಲ, ಶುದ್ಧಜಲ, ಗಂಧಜಲಗಳನ್ನು ತುಂಬಿಸಬೇಕು. **ಶಂಕರನಾರಾಯಣನಲ್ಲಿ**- ಮೃಜ್ಜಲ, ಕಷಾಯ, ವ್ಯಸ್ತಪಂಚಗವ್ಯ, ಫಲೋದಕ, ಅಖಿಲ ಔಷಧಗಳನ್ನು ಹಿಂದೆ ಹೇಳಿದ ಕ್ರಮದಂತೆ ತುಂಬಿಸಬೇಕು.

ಇಲ್ಲಿ ಶಿವನಲ್ಲಿ ದ್ರವ್ಯಪೂರಣವು ದಿಕ್ಕುಗಳಲ್ಲಿ ತತ್ಪುರುಷ ಮೊದಲಾದ ಮಂತ್ರಗಳಿಂದ, ವಿದಿಕ್ಕುಗಳಲ್ಲಿ ಹೃದಯ ಶಿಖಾ ಕವಚ ಶಿರೋ ಮಂತ್ರಗಳಿಂದಲೂ, ನಡುವೆ ಈಶಾನ ಮಂತ್ರದಿಂದಲೂ ಮಾಡಲ್ಪಡಬೇಕು. ಉಳಿದ ದೇವತೆಗಳಲ್ಲಿ ಮೂಲಮಂತ್ರದಿಂದ ದ್ರವ್ಯಗಳನ್ನು ತುಂಬಬೇಕು. **ಶಿವನಲ್ಲಿ**- ಹುತ್ತ, ಎತ್ತಿನ ಕೊಂಬಿಗೆ ಹಿಡಿದದ್ದು, ಆನೆಯದಂತದ್ದು, ತೀರ್ಥದ್ದು, ಬೆಟ್ಟದ ತುದಿಯದು, ಹೊಳೆಯದು, ಯಜ್ಞ ವೇದಿಕೆಯದ್ದು, ಮಡುವು ಇವುಗಳಿಂದ ಸಂಗ್ರಹಿಸಿದ ಮಣ್ಣುಗಳು. **ಗಣಪತಿಯಲ್ಲಿ**- ಇಲ್ಲಿ ಹಿಂದೆ ಹೇಳಿದ ಮಡು ಹಾಗೂ ನದಿಯ ಮಣ್ಣುಗಳನ್ನು ಬಿಟ್ಟು ಉಳಗದ್ದೆ, ಇಲಿಯ ಬಿಲದ ಮಣ್ಣುಗಳನ್ನು ಸೇರಿಸಬೇಕು. **ದುರ್ಗಿಯಲ್ಲಿ**- ಹಿಂದೆ ಹೇಳಿದ ಮಣ್ಣುಗಳಲ್ಲಿ ಹುತ್ತ ಹಾಗೂ ಮಡುವಿನ ಮಣ್ಣಿನ ಹೊರತಾಗಿ ಹಂದಿಕೆರೆದ ಮಣ್ಣಿನಿಂದ ಕೂಡಿದ ಉಳಿದ ಮಣ್ಣುಗಳು. **ಶಂಕರನಾರಾಯಣನಲ್ಲಿ**- ಹೊಳೆಯ ಎರಡು ದಡದ, ಉಳಗದ್ದೆ, ಹುತ್ತದ ಮಣ್ಣುಗಳು, ಎತ್ತಿನ ಕೊಂಬಿಗೆ ಹಿಡಿದುದು- ಈ ಮಣ್ಣುಗಳು. **ಶಾಸ್ತಾರನಲ್ಲಿ**- ಆನೆ, ಹಂದಿ, ಎತ್ತಿನಕೊಂಬಿನದು, ಹುತ್ತ, ಹೊಳೆ, ಸಮುದ್ರದ ಮಣ್ಣುಗಳು. **ದುರ್ಗಿಯಲ್ಲಿ**- ಹಾಲು ಸೊನೆಯ ಆಲ, ಗೋಳಿ ಮುತ್ತುಗ ಬನ್ನಿ ಕಗ್ಗಲಿ- ಈ ಮರದ ತೊಪ್ಪೆಯ ಕಷಾಯ. **ಶಂಕರನಾರಾಯಣನಲ್ಲಿ**- ಕಗ್ಗಲಿ ತೊಪ್ಪೆಯ ಹೊರತಾಗಿ ಉಳಿದ ಈ ಹಿಂದೆ ಹೇಳಿದ ತೊಪ್ಪೆಯ ಕಷಾಯ. **ಗಣಪತಿಯಲ್ಲಿ**- ಆಲ, ಗೋಳಿ, ಬೇಲ, ಹಿಪ್ಪಲಿ, ಬಿಲ್ವಮರದ ತೊಪ್ಪೆಯ ಕಷಾಯ. **ಶಂಕರನಾರಾಯಣನಲ್ಲಿ**- ಎಳ್ಳು, ಉದ್ದು, ಯವ, ಪ್ರಿಯಂಗು, ಗೋಧಿ ಬತ್ತ, ಅಣೆ- ಈ ಗ್ರಾಮೀಣವಾದ ಏಳು, ನೀವಾರ, ಗಾರ್ಮುಖ, ಗವೀಧುಕ, ಜರ್ತಿಲ, ಶ್ಯಾಮಾಕ ವೇಣುಫಲ ವಾಸ್ತುಕಗಳಿಂದ ಕೂಡಿದ ಆರಣ್ಯಕಗಳಾದ ಏಳು ಸರ್ವೌಷಧಗಳು. ಉಳಿದ ದ್ರವ್ಯಗಳನ್ನು ಕಲಶ ಸ್ನಪನದಲ್ಲಿ ಹೇಳಿದುದನ್ನು ತೆಗೆದುಕೊಳ್ಳಬೇಕು. ಹೀಗೆ ಹೇಳಿದ ಕ್ರಮದಿಂದ ಕಲಶಗಳನ್ನು ತುಂಬಿಸಿ, ಪೂಜಿಸಿ, ಮೂಲಮಂತ್ರದಿಂದ ನೂರೆಂಟಾವರ್ತಿ ತುಪ್ಪವನ್ನು ಹೋಮಿಸಿ, ಆ ಸಂಪಾತವನ್ನು ಕಲಶಗಳಲ್ಲಿ ಸಮರ್ಪಿಸಿ, ವಿಷ್ಣುವಿನಲ್ಲಿ ಮಧ್ಯ ಖಂಡದ ಕಲಶಗಳಲ್ಲಿ 'ಹಿರಣ್ಯವರ್ಣಾಂ'- ಮಂತ್ರವನ್ನು, ಬೇರೆ ಖಂಡದಲ್ಲಿರುವ ಕಲಶಗಳಲ್ಲಿ ಒಳಗೂ ಹೊರಗೂ ತಮ್ಮ ನಿಜಮೂಲಮಂತ್ರವೇ, ಉಳಿದವುಗಳಲ್ಲಿ ಎಲ್ಲೆಡೆಯೂ ತಮ್ಮ ನಿಜಮೂಲ ಮಂತ್ರವನ್ನೇ ಜಪ ಮಾಡಿ ಹೊಸ ಬಟ್ಟೆಗಳಿಂದ ಮುಚ್ಚಿಟ್ಟು ರಕ್ಷಿಸಬೇಕು. ಆಮೇಲೆ ಅಧಿವಾಸ ದಿನ ಬೆಳಿಗ್ಗೆ ಪ್ರೋಕ್ಷಣ ಬಳಿಯುವಿಕೆಯಿಂದ ಶುದ್ಧ ಮಾಡಿ ಮಂಟಪ ಸಂಸ್ಕಾರವನ್ನು ಮಾಡಿ ಅಗ್ನಿಜನನವನ್ನು ಮಾಡಬೇಕು.

* * * *

## ಬಿಂಬಶುದ್ಧಿ ಕಲಶದ್ರವ್ಯಗಳು

### ಗಣಪತಿಯಲ್ಲಿ- ಬಿಂಬಶುದ್ಧಿ ಕಲಶದ್ರವ್ಯಗಳು

**ಪಾದ್ಯ** – ಮಣ್ಣು (ಪರ್ವತದ್ದು), ಗರಿಕೆ, ಸಾಸಿವೆ, ಎಳ್ಳು

**ಅರ್ಘ್ಯ** – ಮೊಸರು, ನೀರು, ಹಾಲು, ಅಕ್ಷತೆ, ಯವ, ಎಳ್ಳು, ಸಾಸಿವೆ, ಕುಶಾಗ್ರ

**ಗವ್ಯ** – ಗೋಮೂತ್ರ, ಗೋಮಯ, ಹಾಲು, ತುಪ್ಪ, ಮೊಸರು (ಪಂಚಗವ್ಯ) ಹಾಲು (ನೈಋತ್ಯದಲ್ಲಿ) ಮೊಸರು (ಪಶ್ಚಿಮದಲ್ಲಿ)

**ಕಷಾಯ** – ಹಾಲು(ಸೊನೆ)ಮರ, ಬೇಲದ ಮರ, ಹಿಪ್ಪೆ ಮರ(ಅತಿಮಧುರ) ಬಿಲ್ವಪತ್ರೆ ಮರ- ಇವುಗಳ ತೊಪ್ಪೆಗಳಿಂದ ಸಿದ್ಧಗೊಳಿಸಿದ ಕಷಾಯ

**ಮಣ್ಣು** – ಹುತ್ತದ್ದು, ಎತ್ತಿನಕೊಂಬಿನದು, ತೀರ್ಥದ್ದು, ಆನೆಯ ಕೊಂಬಿನದು, ಬೆಟ್ಟದ್ದು, ಉಳಗದ್ದೆ, ಯಜ್ಞವೇದಿಕೆ, ಇಲಿಯ ಬಿಲದ್ದು- ಈ ಮಣ್ಣುಗಳು. ಕುಶಜಲ (ಈಶಾನ್ಯದಲ್ಲಿ)

**ಗಂಧ ದ್ರವ್ಯ** – ಚಂದನ, ಕುಂಕುಮ, ಸೇವ್ಯ, ಅಂಬ್ವಗರು(ಲವಂಚ, ಮಡಿವಾಳ) ಕುಷ್ಠ, ಮುರಾ, ಜಟಾಮಾಂಸೀ- ಅಷ್ಟಗಂಧ ದ್ರವ್ಯಗಳು.

### ಗಣಪತಿಯಲ್ಲಿ – ರತ್ನನ್ಯಾಸಾದಿ ದ್ರವ್ಯಗಳು

**ರತ್ನ** – ವಜ್ರ, ಮುತ್ತು, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗ- ಈ ಒಂಭತ್ತು ರತ್ನಗಳು.

**ಬೀಜ**– ಯವ, ವ್ರೀಹಿ(ಬತ್ತ), ನಿಷ್ಪಾವ(ಅವರೆ), ಪ್ರಿಯಂಗು(ನವಣೆ), ಶ್ಯಾಮಾಕಂ(ಶಾಮೆ ಅಕ್ಕಿ), ಮಾಷಂ(ಉದ್ದು), ನೀವಾರಂ, ಶಾಲಿ(ಬತ್ತ ಸಣ್ಣಕ್ಕಿಯದು), ಸರ್ಷಪ(ಸಾಸಿವೆ)– ಈ ಧಾನ್ಯಗಳು

**ಧಾತು**– ಮನಶ್ಶಿಲಾ, ಹರಿತಾಳ, ಅಂಜನ, ಶ್ಯಾಮ, ಸೀಸ, ಸೌರಾಷ್ಟ್ರೀ, ಗೋರೋಚನ, ಗೈರಿಕಪಾರದ(ಪಾದರಸ)– ಈ ಧಾತುಗಳು

**ಲೋಹ**– ಚಿನ್ನ(ಸುವರ್ಣ), ರಜತ(ಬೆಳ್ಳಿ), ಅಯಃ(ಕಬ್ಬಿಣ), ತ್ರಪು(ತವರ), ಆರಕೂಟ(ಹಿತ್ತಾಳೆ), ಪಿತ್ತಲಂ(ಲೋಹ), ಕಾಂಸ್ಯ(ಕಂಚು)

## ಗಣಪತಿಯಲ್ಲಿ– ಗರ್ಭನ್ಯಾಸ ದ್ರವ್ಯಗಳು

**ಮೃತ್ತಿಕೆ** – ಪರ್ವತ, ತೀರ್ಥ, ನದಿ, ಹ್ರದ(ನೀರಿನ ಮಡು), ಕರ್ಕಟಾಲಯ(ಏಡಿಯು ಕೊರೆದದ್ದು), ಗುಹೆ, ವಲ್ಮೀಕ(ಹುತ್ತ) ಧಾನ್ಯಾಗಾರ, ಭೂಖಿಲ(ವಸಡು (ಧೂಳು) ನೆಲ), ಆನೆಯ ಕೊಂಬಿನದು, ಎತ್ತಿನ ಕೊಂಬಿನದು– ಮಣ್ಣುಗಳು

**ಗಡ್ಡೆಗಳು**– ಪದ್ಮ(ತಾವರೆ), ಉತ್ಪಲ(ಕೋಳೆ), ಕುಮುದ(ಬಿಳಿನೈದಿಲೆ), ಕೈರವ(ಕಿರುಕೋಳೆ), ಕುವಲಯ, ರಕ್ತೋತ್ಪಲ– ಈ ಗಡ್ಡೆಗಳು.

**ಧಾತು**– ಮಣಿಶಿಲೆ, ಅರಿದಳ, ಅಂಜನ(ಮಸಿ) ಶ್ಯಾಮಾಂಜನ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ(ಕಾವಿಮಣ್ಣು) ಪಾರದ– ಈ ಧಾತುಗಳು.

**ರತ್ನ**– ವಜ್ರ, ಮೌಕ್ತಿಕ, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗ– ಈ ರತ್ನಗಳು.

**ಧಾನ್ಯಗಳು**– ಶಾಲಿ, ನೀವಾರ, ಶ್ಯಾಮಾಕ, ಕಂಗು, ಮಾಷ, ಕುಲಿತ್ಥ(ಹುರುಳಿ) ನಿಷ್ಪಾವ, ತಿಲ, ಮುದ್ಗ(ಹೆಸರು)– ಈ ಬೀಜಗಳು.

**ಲೋಹ**– ಸುವರ್ಣ, ರಜತ, ತಾಮ್ರ, ಆಯಸ, ತ್ರಪು–ಕೂರ್ಮ ಪದ್ಮ ಶೂಲ– ಚಿನ್ನದಿಂದ ಶುದ್ಧಗೊಳಿಸಿದ ಮೂಷಕ(ಇಲಿ) ಸ್ವದಂತ, ಪದ್ಮ, ಅಂಕುಶ ಹಾಗೂ ಚಿನ್ನದ ಗಜ(ಆನೆ)

## ಗಣಪತಿಯಲ್ಲಿ– ಕಲಶಾಭಿಷೇಕ ದ್ರವ್ಯಗಳು

**ಬ್ರಹ್ಮ ಕಲಶದಲ್ಲಿ**– ಮುಕ್ತಾಫಲ, ವಜ್ರ, ವಿದ್ರುಮ, ಅಬ್ಜರಾಗ, ಪುಷ್ಯರಾಗ, ಬ್ರಹ್ಮರಾಗ, ಚಂದ್ರಕಾಂತ, ಸೂರ್ಯಕಾಂತ, ವೈಡೂರ್ಯ, ಗರುಡಮಣಿ, ಇಂದ್ರನೀಲ, ಅಯಸ್ಕಾಂತ

**ದೈವಿಕಾವರಣದಲ್ಲಿ**– (೧) ದೂರ್ವಾ, ಸರ್ಷಪ, ತಿಲ (೨) ಮೊಸರು, ಹಾಲು, ಅಕ್ಷತ, ಯವ, ತಿಲ, ಸರ್ಷಪ ಕುಶಾಗ್ರ (೩) ತಕ್ಕೋಲ, ಜಾತೀ ಏಲಾ ಲವಂಗ (೪) ಹಾಲು (೫) ಮೊಸರು (೬) ತುಪ್ಪ (೭) ಜೇನುತುಪ್ಪ (೮) ಪಂಚಗವ್ಯ ಮಾನುಷಾವರಣದಲ್ಲಿ– (೯) ಭವ್ಯ ಶ್ರೀಫಲ ಬೀಜಾಪೂರ ಆಮಲಕ ಪನಸ, ಕದಳೀಫಲ ನಾಳೀಕೇರ ಮಾವು ಈ ಫಲಗಳು (೧೦) ಪೃಥುಕ, ಲಡ್ಡುಕ, ಅಪೂಪ, ಶಷ್ಕುಲೀ– ಭಕ್ಷ್ಯ ದ್ರವ್ಯ (೧೧) ಯವೋದಕ (೧೨) ಶಾಲ್ಯುದಕ (೧೩) ತಿಲೋದಕ (೧೪) ರತ್ನಜಲ (೧೫) ಸ್ವರ್ಣಜಲ (೧೬) ವಿದ್ರುಮಜಲ (೧೭) ಬೆಲ್ಲ (೧೮) ನಂಜಬಟ್ಟಲು, ಮಲ್ಲಿಗೆ, ಸಂಪಿಗೆ, ಬಕುಳ(ರಂಜದ) ಸೌಗಂಧಿಕಾ– ಈ ಹೂವುಗಳು. (೧೯) ದೂರ್ವಾಜಲ (೨೦) ಶ್ಯಾಮ, ಪಾದರಸ, ಹರಿತಾಳ, ಅಂಜನ, ಗೋರೋಚನ, ಸೌರಾಷ್ಟ್ರ, ಗೈರಿಕ, ಸೀಸ, ಮಣಿಶಿಲಾ– ಧಾತುಜಲ (೨೧) ಮೃಜ್ಜಲ (೨೨) ಕುಶಜಲ (೨೩) ಮುಕ್ತಾರತ್ನ ಜಲ (೨೪) ಕಾಯಿಹಾಲು.

* * * *

## ಶಿವನಲ್ಲಿ– ಬಿಂಬಶುದ್ಧಿ ಕಲಶದ್ರವ್ಯಗಳು

**ಕಷಾಯ**– ಅಶ್ವತ್ಥ, ಉದುಂಬರ, ವಟ, ಶಿರೀಷ(ಬಾಗೆಮರ), ಹಲಸು, ಮಧೂಕ(ಹಿಪ್ಪೆ), ದ್ವಿಜ, ಮಾವು– ಇವುಗಳ ತೊಪ್ಪೆಗಳಿಂದ ಸಿದ್ಧಗೊಳಿಸಿದ ಕಷಾಯ.

**ಗವ್ಯ**– ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ– ಇವುಗಳು ಪ್ರಮಾಣದಂತೆ ಸೇರಿಸಲ್ಪಟ್ಟ ಪಂಚಗವ್ಯ.

**ಭಸ್ಮೋದಕ**– ಯಾಗ ಮೊದಲಾದುವುಗಳಲ್ಲಿ ಉಪಯೋಗಿಸಲ್ಪಡುವ ಅಶ್ವತ್ಥ, ಪಲಾಶ, ಅತ್ತಿ, ಗೋಳಿ ಮೊದಲಾದ ಕಟ್ಟಿಗೆಗಳಿಂದ ಸಿದ್ಧಗೊಳಿಸಿದ ಭಸ್ಮ, ನೀರು(ಯಾಗ ಭಸ್ಮ)

**ಮೃದಂಭ**– ವಲ್ಮೀಕ, ಎತ್ತಿನಕೊಂಬಿನದ್ದು, ತೀರ್ಥದ್ದು, ಆನೆಯ ಕೊಂಬಿಗೆ ಹಿಡಿದದ್ದು, ಪರ್ವತಸ್ಥ, ನದಿಯ ಮಣ್ಣು, ಯಜ್ಞವೇದಿಯದು, ಜನನಿಬಿಡ ಪ್ರದೇಶ(ಚತ್ವರ) ಈ ಮಣ್ಣುಗಳು.

**ಇತರೆ**– ಗೋಮೂತ್ರ– ಹಾಲು– ಮೊಸರು– ಕುಶೋದಕ– ಪ್ರತ್ಯೇಕವಾದ ಕಲಶಗಳಲ್ಲಿ ಮಧ್ಯದಲ್ಲಿ– ಗಂಧೋದಕ– ಚಂದನ, ಕುಂಕುಮಕೇಸರಿ, ಲವಂಚಬೇರು, ಅಂಬು, ಅಗರು(ಮಡಿವಾಳ) ಕಂಕುಷ್ಠ, ಮುರಾ, ಜಟಾಮಾಂಸಿ– ಈ ಅಷ್ಟಗಂಧದ ಹಿಟ್ಟು ಬಳಸಿದ ನೀರು.

## ಶಿವನಲ್ಲಿ – ಗರ್ಭನ್ಯಾಸ ದ್ರವ್ಯಗಳು

**ಮಣ್ಣುಗಳು**– ಪರ್ವತ, ನದೀ, ತೀರ್ಥ, ಮಡು, ಏಡಿಯ ವಾಸಸ್ಥಳದ್ದು, ಗುಹೆ, ಹುತ್ತ, ಗೋಡೌನು, ಉಸುಬುನೆಲ, ಆನೆಯ ದಂತಗೆ ಹಿಡಿದದ್ದು, ಎತ್ತಿನ ಕೊಂಬಿಗೆ ಹಿಡಿದದ್ದು– ಈ ಬಗೆಯ ಮಣ್ಣುಗಳು.

**ಗಡ್ಡೆಗಳು**– ತಾವರೆ, ಕೋಳೆ, ಉತ್ಪಲ, ಕಿರುಕೋಳೆ, ಕೆಂಪುಕೋಳೆ, ಕೈರವ– ಇವುಗಳ ಗಡ್ಡೆಗಳು

**ಧಾತುದ್ರವ್ಯ**– ಮಣಿಶಿಲೆ, ಅರಿದಳ, ಅಂಜನ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ, ಪಾರದ– ಈ ಧಾತು ದ್ರವ್ಯಗಳು.

**ರತ್ನಗಳು**– ವಜ್ರ, ಮೌಕ್ತಿಕ, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗ– ಈ ರತ್ನಗಳು.

**ಬೀಜಗಳು**– ಶಾಲಿ, ನೀವಾರ, ಶ್ಯಾಮಾಕ, ಕಂಗು(ನವಣೆ), ಮಾಷ(ಉದ್ದು), ಕುಲಿತ್ಥ(ಹುರುಳಿ), ನಿಷ್ಪಾವ(ಅವರೆ), ತಿಲ, ಮುದ್ಗ– ಬೀಜಗಳು

**ಲೋಹದ್ರವ್ಯ**– ಸುವರ್ಣ, ರಜತ, ತಾಮ್ರ, ಕಬ್ಬಿಣ, ತವರ, ಚಿನ್ನದಿಂದ ಸಿದ್ಧಗೊಳಿಸಿದ ಕೂರ್ಮ(ಆಮೆ), ತಾವರೆ, ಶೂಲ, ಚಿನ್ನದ ತ್ರಿಶೂಲ, ಅರ್ಧಚಂದ್ರ, ವೃಷಭ, ಬಿಲ್ಲು, ಕೊಡಲಿ ಎಲ್ಲವೂ ಚಿನ್ನದಿಂದ ಸಿದ್ಧಗೊಳಿಸಿದವುಗಳು.

## ಶಿವನಲ್ಲಿ – ರತ್ನನ್ಯಾಸ ದ್ರವ್ಯಗಳು

**ರತ್ನಗಳು**– ವಜ್ರ, ಮುತ್ತು, ಪುಷ್ಯರಾಗ, ಇಂದ್ರನೀಲ, ಸ್ಫಟಿಕ, ವೈಡೂರ್ಯ, ಮರಕತ(ಪಚ್ಚೆ), ನೀಲ, ಪದ್ಮರಾಗ– ಈ ರತ್ನಗಳು.

**ಧಾತುದ್ರವ್ಯ**– ಮನೋಹ್ವಾ, ಹರಿತಾಳ, ಸೌರಾಷ್ಟ್ರಿ, ವಿದ್ರುಮ, ಗೋರೋಚನ, ಪ್ರವಾಳ, ಅಂಜನಶಿಲೆ, ಜೇನು, ಪಾದರಸ

**ಬೀಜಗಳು**– ಶಾಲಿ, ಯವ, ಗೋಧಿ, ಪ್ರಿಯಂಗು(ಕರಿಸಾಸಿವೆ ಅಥವಾ ನವಣೆ) ಮಾಷ, ತಿಲ, ನೀವಾರ, ನಿಷ್ಪಾವ, ಸಾಸಿವೆ– ಈ ಬೀಜಗಳು.

**ವಾಹನ, ಆಯುಧ, ಭೂಷಣಗಳು**– ಚಿನ್ನದ ವೃಷಭ, ಚಿನ್ನದ ಕೊಡಲಿ, ರುದ್ರಾಕ್ಷಿ ಸರ(ಮಾಲೆ), ಚಿನ್ನದ ತ್ರಿಶೂಲ, ಚಿನ್ನದ ತಾವರೆ(ದಿಕ್ಕು– ಮಧ್ಯದಲ್ಲಿ)

**ಲೋಹಗಳು**– ಬೆಳ್ಳಿ, ಕಬ್ಬಿಣ, ತವರ, ತಾಮ್ರ, ಚಿನ್ನ

## ಶಿವನಲ್ಲಿ ಕಲಶದ್ರವ್ಯಗಳು

(೧) ಸ್ವರ್ಣ ರತ್ನ ಗಂಧ ಜಲ(ಶಾಂತಿಜಲ) **ದೈವಿಕಾವರಣ** (೨) ಮೃದ್ದೂರ್ವಾಸರ್ಷಪ ತಿಲ(ಪಾದ್ಯ) (೩) ತಕ್ಕೋಲ ಜಾತೀ ಏಲಾ ಲವಂಗ(ಆಚಮನ) (೪) ದಧಿ ಜಲ ಕ್ಷೀರಾಕ್ಷತ ಯವ ತಿಲ ಸರ್ಷಪ ಕುಶಾಗ್ರ(ಅರ್ಘ್ಯ) (೫) ಗೋಮೂತ್ರಾದಿ ಪಂಚಗವ್ಯ (೬) ತುಪ್ಪ (೭) ಜೇನು (೮) ಹಾಲು (೯) ಮೊಸರು **ಮಾನುಷಾವರಣ** (೧೦) ಇಕ್ಷುಜಲ (೧೧) ಭವ್ಯಶ್ರೀ ಬೀಜಾಪೂರಾಮಲಕಪನಸ ಕದಲೀ ತೆಂಗು ಆಮ್ರ (೧೨) ಅಶ್ವತ್ಥೌದುಂಬರ ವಟ ಶಿರೀಷ ಪನಸ ಮಧೂಕದ್ವಿಜಾಮ್ರ- ಇವುಗಳ ತೊಪ್ಪೆಯ ಕಷಾಯ (೧೩) ಅರಳುಹಿಟ್ಟಿನ ನೀರು (೧೪) ಚಂದನ ಮೊದಲಾಗಿ ಅಷ್ಟಗಂಧ ದ್ರವ್ಯಜಲ (೧೫) ಜಾತೀನಂದ್ಯಾವರ್ತದ್ವಯ ಮಲ್ಲಿಗೆ ಸಂಪಿಗೆ, ಬಕುಳ(ರಂಜ) ಸೌಗಂಧಿಕಾ ಈ ಹೂವುಗಳು– ಪುಷ್ಪಜಲ (೧೬) ಸುವರ್ಣಜಲ (೧೭)ಮುಕ್ತಾ ವೈಡೂರ್ಯ ವಜ್ರಮಣಿ ಮರಕತ ಗೋಮೇದ ಪುಷ್ಯರಾಗ ಇಂದ್ರನೀಲ– ಈ ರತ್ನಜಲ (೧೮) ಮುಕ್ತಾರತ್ನಜಲ (೧೯) ಪ್ರವಾಳಜಲ (೨೦) ಯವೋದಕ (೨೧) ತಿಲೋದಕ (೨೨) ದೂರ್ವೋದಕ (೨೩) ಉತ್ಪಲೋದಕ (೨೪) ಕುಶೋದಕ (೨೫) ಶಾಲ್ಯುದಕ

* * * *

## ಶಂಕರನಾರಾಯಣನಲ್ಲಿ– ಬಿಂಬಶುದ್ಧಿ ದ್ರವ್ಯಗಳು

**ಮೃಜ್ಜಲ**– ನದಿಯ ಎರಡು ದಡದ್ದು, ಉಳಗದ್ದೆಯದು ಹುತ್ತದ್ದು ಎತ್ತಿನ ಕೊಂಬಿನದು.

**ಕಷಾಯ–** ಅಶ್ವತ್ಥ, ವಟ, ಉದುಂಬರ, ಶಿರೀಷ, ಮಧೂಕ, ಮಾವು ಇವುಗಳ ತೊಗಟೆಗಳಿಂದ ಸಿದ್ಧಗೊಳಿಸಿದ ಕಷಾಯ.

**ಗವ್ಯ–** (ದಕ್ಷಿಣದಲ್ಲಿ) ಗೋಮೂತ್ರ, (ಪಶ್ಚಿಮದಲ್ಲಿ) ಗೋಮಯ, (ಉತ್ತರದಲ್ಲಿ) ಹಾಲು, (ಆಗ್ನೇಯದಲ್ಲಿ) ಮೊಸರು, (ನೈಋತ್ಯದಲ್ಲಿ) ತುಪ್ಪ, (ವಾಯವ್ಯದಲ್ಲಿ) ಫಲೋದಕ.

**ಫಲಗಳು–** ಧಾತ್ರೀ, ಆಮ್ರ, ಬಿಲ್ವ, ನಾಳಿಕೇರ, ಪನಸ, ದಾಡಿಮ, ಭವ್ಯ, ರಂಭಾ, ಕುಟಜ, ಬದರೀ, ಮಾತುಳಂಗ, ಕಪಿತ್ಥ– ಈ ಹಣ್ಣುಗಳು

**ಸರ್ವೌಷಧಿ–** ತಿಲ, ಮಾಷ, ಯವ, ಪ್ರಿಯಂಗು, ಗೋಧೂಮ, ಶಾಲಿ, ಅಣು(ಗ್ರಾಮ್ಯಗಳು) ನೀವಾರ, ಗಾರ್ಮುಕ, ಗವೀಧುಕ, ಜತಿಲ, ಶ್ಯಾಮಾಕ ವೇಣುಫಲ ವಾಸ್ತುಕ– ಈ ಏಳು ಆರಣ್ಯಕಗಳು. ಹೀಗೆ ೧೪.

## ಶಂಕರನಾರಾಯಣನಲ್ಲಿ – ಗರ್ಭನ್ಯಾಸ ದ್ರವ್ಯಗಳು

**ಮಣ್ಣುಗಳು–** ಪರ್ವತ, ತೀರ್ಥ, ನದಿಹ್ರದ ಕರ್ಕಟಾಲಯ ಗುಹಾ, ವಲ್ಮೀಕ, ಧಾನ್ಯಾಗಾರ, ಭೂಖಿಲ, ಗಜದಂತಜ, ಉಕ್ಷಶೃಂಗಜ

**ಗಡ್ಡೆಗಳು–** ಪದ್ಮ ಉತ್ಪಲ(ಕುವಲಯ ಕೈರವ) ಕುಮುದ ರಕ್ತೋತ್ಪಲ ಕುಂದಾನಿ

**ಧಾತುದ್ರವ್ಯಗಳು–** ಮಣಿಶಿಲಾ, ಅರಿದಳ, ಅಂಜನ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ ಪಾರದ– ಈ ಧಾತುದ್ರವ್ಯಗಳು.

**ರತ್ನಗಳು–** ವಜ್ರ, ಮೌಕ್ತಿಕ, ವೈಡೂರ್ಯ, ಶಂಖ ಸ್ಫಟಿಕ ಪುಷ್ಯರಾಗ, ಚಂದ್ರಕಾಂತ ಮಹಾನೀಲ ಪದ್ಮರಾಗ– ಈ ರತ್ನಮಣಿಗಳು

**ಬೀಜಗಳು–** ವ್ರೀಹಿ, ನೀವಾರ, ಕುಂಕು, ಮಾಷ, ಕುಲಿತ್ಥ ನಿಷ್ಪಾವ, ತಿಲ, ಮುದ್ಗ, ಸಿದ್ಧಾರ್ಥ– ಈ ಬೀಜಗಳು.

**ಲೋಹಗಳು–** ಸುವರ್ಣ, ರಜತ, ಆಯಸ, ತ್ರಪು ಶೂಲ ಕುಠಾರ ಶಂಖ, ಚಕ್ರ

**ಆಯುಧಗಳು–** ಚಿನ್ನದಿಂದ ಸಿದ್ಧಗೊಳಿಸಿದ ಖಟ್ವಾಂಗ, ಅರ್ಧಚಂದ್ರ ಋಷಭ ಗರುಡ ಕೂರ್ಮ ಅಕ್ಷಮಾಲಾ ಗದಾ ಪದ್ಮ ಧನಸ್ಸುಗಳು–

## ಶಂಕರನಾರಾಯಣನಲ್ಲಿ– ರತ್ನನ್ಯಾಸ (ಮಾತ್ರ)

ಇಂದ್ರನೀಲ, ಮಾಣಿಕ್ಯ, ಗರುಡಶಿಲಾ, ವೈಡೂರ್ಯ, ಮೌಕ್ತಿಕ, ವಿದ್ರುವ, ವಜ್ರ, ಪುಷ್ಯರಾಗ(ಮಧ್ಯದಲ್ಲಿ) ಸುವರ್ಣ (ಬೀಜಾದಿಗಳ ನ್ಯಾಸ ಇರುವುದಿಲ್ಲ)

## ಶಂಕರನಾರಾಯಣನಲ್ಲಿ– ಕಲಶ ದ್ರವ್ಯಗಳು

ಮಧ್ಯ(ಬ್ರಹ್ಮಕಲಶ) ಆಜ್ಯ(ದ್ವೈವಿಕಾವರಣ) (೧) ಉಷ್ಣೋದಕ (೨) ರತ್ನೋದಕ–ಅಬ್ಜರಾಗ, ಮುಕ್ತಾ, ಚಂದ್ರಕಾಂತ, ವಿದ್ರುವ, ವಜ್ರ, ಪುಷ್ಯರಾಗ, ಬ್ರಹ್ಮರಾಗ, ಅಯಸ್ಕಾಂತ, ವೈಡೂರ್ಯ, ಸೂರ್ಯಕಾಂತ, ಇಂದ್ರನೀಲ, ಸ್ಫಟಿಕ, ಗರುಡಮಣಿ– ಈ ಹದಿಮೂರು ರತ್ನಗಳು (೩) ಫಲೋದಕ– ಧಾತ್ರೀ, ಆಮ್ರ, ಬಿಲ್ವ, ನಾಳಿಕೇರ, ಪನಸ, ದಾಳಿಮ ಭವ್ಯ, ಕದಳೀ, ಕುಟಜ, ಬದರೀ, ಮಾತುಲಂಗ, ಕಪಿತ್ಥ– ಹೀಗೆ ಹನ್ನೆರಡು ಹಣ್ಣುಗಳು (೪) ಲೋಹೋದಕ– ಸುವರ್ಣ, ರಜತ, ತಾಮ್ರ, ಕಬ್ಬಿಣ, ತವರ, ಸೀಸ, ಕಂಚು, ಹಿತ್ತಾಳೆ, ಆರಕೂಟ– ಹೀಗೆ ಒಂಭತ್ತು ಲೋಹಗಳು. (೫) ಮಾರ್ಜನದ್ರವ್ಯ– ರಾತ್ರೀ, ಸಹದೇವೀ, ಶಿರೀಷ, ಕುಶ, ಭದ್ರಮುಷ್ಟಿಮುಸ್ತಾ ಸೂರ್ಯವರ್ತಿನೀ, ಭೂಸ್ತೃಣ, ಗಂಧ, ತುಲಸೀದ್ವಯ, ಪನಸ– ಹೀಗೆ ಹನ್ನೊಂದು ದ್ರವ್ಯಗಳು. (೬) ಗಂಧೋದಕ– ಕುಷ್ಠ, ಮುರ, ವಾಲ, ಸೇವ್ಯ, ಕುಂಕುಮ ಕೇಸರಿ, ಜಟಾಮಾಂಸೀ, ಕೃಷ್ಣಾಗರು, ಪಟೀರ, ದೇವದಾರು, ಕರ್ಪೂರ, ನಾಗಕೇಸರ ಭದ್ರಮುಷ್ಟಿ– ಹೀಗೆ ಹನ್ನೆರಡು ಗಂಧ ದ್ರವ್ಯಗಳು. (೭) ಅಕ್ಷತೋದಕ– ನೀವಾರ, ಶಾಲಿ, ಯವ, ತಂಡುಲ, ವೇಣುಮಾಷಿ, ಸಿದ್ಧಾರ್ಥಕಂಕು– ಹೀಗೆ ಎಂಟು ಅಕ್ಷತದ್ರವ್ಯಗಳು. (೮) ಯವೋದಕಂ

**ಮಾನುಷಾವರಣ–**ಪಾದದ್ರವ್ಯ (೧) ವಿಷ್ಣುಕ್ರಾಂತಿ, ಶ್ಯಾಮಾಕ, ಪದ್ಮಾರ್ತವಕುಶ, ತುಲಸೀ, ಬಿಲ್ವಫಲ, ಗಂಧಾಕ್ಷತ ಹೀಗೆ ಒಂಭತ್ತು ಪಾದ್ಯ ದ್ರವ್ಯಗಳು (೨) ಅರ್ಘ್ಯದ್ರವ್ಯಂ– ಕ್ಷೀರ, ರಾಜ, ಪುಷ್ಪ, ತಿಲ ಕುಶ ಗಂಧಾಕ್ಷತ ದಧಿ ಯವ ಫಲ ವಚಾ ಹೀಗೆ ಹನ್ನೊಂದು ಅರ್ಘ್ಯದ್ರವ್ಯ (೩)ಆಚಮನೀಯ ದ್ರವ್ಯ– ತಕ್ಕೋಲ, ಜಾತೀ, ಲವಂಗ, ಕರ್ಪೂರ ಗಂಧ, ಪುಷ್ಪ ಹೀಗೆ ಆರು ದ್ರವ್ಯಗಳು (೪) ಪಂಚಗವ್ಯಂ– ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ ಹೀಗೆ ಸೇರಿಸಿದ ಐದು ದ್ರವ್ಯಗಳು. (೫) ದಧಿ (೬) ದುಗ್ಧಂ (೭) ಜೇನುತುಪ್ಪ (೮) ಕಷಾಯಂ– ಬಿಲ್ವ, ಪಲಾಶ, ವೈಕಂಕತ ಶಮೀ ಜಂಬೂ ನೀಪಾಮ್ರಾರಗ್ವಧಪನಸ ಪ್ಲಕ್ಷ ರಹಿತ ತೋರಣದ ತ್ವಕ್ಕುಗಳಿಂದ ಸಿದ್ಧಗೊಳಿಸಿದ ಕಷಾಯ ಹೀಗೆ ಹದಿನೇಳು ದ್ರವ್ಯಗಳು– ಇದು ಅಧಮಾಧಮಗಳಲ್ಲಿ ಕ್ರಮ.

## ಮಧ್ಯಮತ್ರಯಗಳಲ್ಲಿ ೨೫ ದ್ರವ್ಯಗಳು

ಹದಿನೇಳು ದ್ರವ್ಯಗಳು ಅಧಮತ್ರಯದಲ್ಲಿ ಹೇಳಿದವುಗಳೇ. ಹೆಚ್ಚಿನದಾದ ಉಳಿದ ದ್ರವ್ಯಗಳನ್ನು ಇಲ್ಲಿ ಸಂಗ್ರಹಿಸಲಾಗುವುದು.
(೧) ಗುಡಂ (೨) ಕಬ್ಬಿನಹಾಲು(ಇಕ್ಷೂದಕ) (೩) ನಾಳಿಕೇರೋದಕ (೪) ತೈಲ(ತಿಲ) (೫) ಶಾಂತಿ ಜಲ– ತಿಲ ಸರ್ಷಪ
ಯವ ವ್ರೈಣವ ನೀವಾರ ತುಲಸೀದಳ, ಅಂಬುಜಪತ್ರಂ– ಇವುಗಳಿಂದ ಕೂಡಿದ ನೀರು (೬) ಮಂಗಲಾಂಭಃ ಬ್ರಹ್ಮ, ಅಶೋಕ,
ಕುಶ, ಅರ್ಜುನ, ಇಂದ್ರಲತಿಕಾ, ಬೋಧ್ಯಂಕುರ, ಏಕಂಪದ್ಮಂ– ಇವುಗಳಿಂದ ಕೂಡಿದ ನೀರು (೭) ಮೃಜ್ಜಲ ವೇದಿಜ ಕ್ಷೇತ್ರಜ,
ಗಜಶೃಂಗಜ ವೃಷಶೃಂಗಜ ಗಿರಿಜ, ವಲ್ಮೀಕೋದ್ಭವ, ವರಾಹದಂತೋದ್ಭವ, ನದಿಯ ಎರಡು ದಡದ್ದು, ನದಿಯ ಒಳಗಿನ
(ಮಧ್ಯದ) ಮಣ್ಣು ಕೆರೆಯ ಮಧ್ಯದ ಮಣ್ಣು– ಇವುಗಳೊಡನೆ ಕೂಡಿದ ನೀರು (೮) ಭಸ್ಮಜಲ– ಹಿಂದೆ ಕಷಾಯಕ್ಕೆ ಹೇಳಿದ
ತೊಗಟೆಯನ್ನು ಸಿದ್ಧಗೊಳಿಸಿದ ಹಾಗೂ ಸುಟ್ಟ ಸಗಣಿಯ ಭಸ್ಮ– ನೀರಿನಿಂದ ಕೂಡಿದುದು.

## ಉತ್ತಮತ್ರಯದಲ್ಲಿ ದ್ರವ್ಯಗಳು

ಮಧ್ಯದಲ್ಲಿ ಆಜ್ಯಾದಿ ಕಷಾಯಾಂತವಾಗಿ ಪೂರಣ ಮಾಡಿ ಅಲ್ಲಿ ಅಂತರಾಳದಲ್ಲಿರುವವುಗಳಲ್ಲಿ ಬಲಾ ಮೊದಲದುವುಗಳಿಂದ
ಪೂರಣವು. (೧) ಬಲಾ (೨) ವಚಾ (೩) ಅತಿಬಲಾ (೪) ಶಂಖಪುಷ್ಪೀ (೫) ಸಕ್ತೂದಕ (೬) ಸಿಂಹಿಕಾ (೭) ವ್ಯಾಘ್ರೀ (೮)
ಕುಶೋದಕ– ಹೀಗೆ ಎಂಟು ದ್ರವ್ಯಗಳು. ಇದರ ಹೊರ ಆವರಣದಲ್ಲಿ ಹಿಂದೆ ಹೇಳಿದ ಗುಡದಿಂದಾರಂಭಿಸಿ, ಕಷಾಯಾಂತ
ದ್ರವ್ಯಗಳಿಂದ ತುಂಬಿಸಬೇಕು. ನದೀ, ಸಮುದ್ರ ವಾಪೀ ಅಂಧು ವರ್ಷ ಹಿಮತೀರ್ಥ ನಿರ್ಝರ– ಈ ನೀರುಗಳನ್ನು
(ಭೃಶಾದಿ) ಪೂರ್ವಾಗ್ನೇಯದಲ್ಲಿ ತುಂಬಿಸಬೇಕು. (ಅಂತರಿಕ್ಷ) ಅದರ ಹೊರಭಾಗದಲ್ಲಿ– ನೀವಾರ ಶಾಲಿ ಯವ ತಂಡುಲ
ವೇಣು ಬೀಜ ಮಾಷ ಸಿದ್ಧಾರ್ಥ, ಕಂಕುಗಳೆಂಬ ಬೀಜಗಳಿಂದ ತುಂಬಬೇಕು. ಸ್ವರ್ಣ ತಿಲ ದೂರ್ವಾ ಶಾಲೀ ತಂಡುಲ ಕ್ಷಪ
ಮಂಜೂಷ ಪುಷ್ಪಾಣಿ ಚ.

* * * *

## ಸುಬ್ರಹ್ಮಣ್ಯನಲ್ಲಿ– ಗರ್ಭನ್ಯಾಸ ದ್ರವ್ಯಗಳು

**ಆಯುಧಗಳು**– ಚಿನ್ನದಿಂದ ಸಿದ್ಧಗೊಳಿಸಿದ ಮಯೂರ(ನವಿಲು) ಶಕ್ತ್ಯಾಯುಧ, ಕುಕ್ಕುಟ(ಕೋಳಿ) ವಜ್ರಾಯುಧ ಆನೆ.

**ರತ್ನಗಳು**– ಪದ್ಮರಾಗ, ವಜ್ರ, ಮೌಕ್ತಿಕ. ವೈಡೂರ್ಯ, ಸ್ಫಟಿಕ, ಶಂಖ, ನೀಲ, ಪುಷ್ಯರಾಗ, ಪ್ರವಾಳ– ಈ ರತ್ನಗಳು.

**ಲೋಹಗಳು**– ಸುವರ್ಣ, ರಜತ, ತಾಮ್ರ, ಕಬ್ಬಿಣ, ತವರ, ನಾಗಪಿತ್ತಲ, ಕೌಂಸ್ಯ– ಹೀಗೆ ಲೋಹದ್ರವ್ಯಗಳು.

**ಧಾತುದ್ರವ್ಯ**– ಪಾದರಸ ಮನಃಶಿಲಾ ಹರಿತಾಳ ಅಂಜನ ಮಾಕ್ಷಿಕ ಶ್ಯಾಮ ಸೌರಾಷ್ಟ್ರಿ ರಾಜಾವರ್ತ ಗೈರಿಕ– ಈ ಧಾತುದ್ರವ್ಯಗಳು.

**ಬೀಜಗಳು**– ಸಿದ್ಧಾರ್ಥ ಶಾಲಿ ಯವ ಗೋಧೂಮ ತಿಲ, ಮಾಷ, ಪ್ರಿಯಂಗು ಮುದ್ಗ ನೀವಾರ– ಈ ಬೀಜಗಳು.

**ಮೃತ್ತಿಕೆಗಳು**– ಸಾಗರ ಶೈಲ ನದೀ ತೀರ್ಥ ಹ್ರದ ಕೇದಾರ ದಂತಿ ಖಿಲ– ಇವು

**ಗಡ್ಡೆಗಳು**– ನೀಲೋತ್ಪಲ, ರಕ್ತೋತ್ಪಲ ಕಮಲಕೈರವ– ಈ ಮೂಲಗಳು

## ಸುಬ್ರಹ್ಮಣ್ಯನಲ್ಲಿ– ಬಿಂಬಶುದ್ಧಿ ದ್ರವ್ಯಗಳು

(೧) ಕುಶೋದಕ (೨) ಪಂಚಗವ್ಯ

(೩) **ಕಷಾಯ**– ವಟ, ಉದುಂಬರ, ಅಶ್ವತ್ಥ ಪ್ಲಕ್ಷ ಆಮ್ರ ಪಲಾಶ ಶಿರೀಷ ಮಧುಕ ಹೀಗೆ ಎಂಟು ಮರದ ತೊಗಟೆಗಳಿಂದ ಕಷಾಯ

(೪) ದೂರ್ವೋದಕ (೫) ಸರ್ಷಪೋದಕ

(೬) **ಮೃತ್ತಿಕೆಗಳು**– ಯಜ್ಞವೇದಿ ಕ್ಷೇತ್ರ (ಉಳಗದ್ದೆ), ಗಜಶೃಂಗ ವೃಷಶೃಂಗ ಗಿರಿ ವಲ್ಮೀಕ(ಹುತ್ತ) ನದೀ ಸಮುದ್ರ ಈ ಮಣ್ಣುಗಳು

(೭) **ರತ್ನಗಳು**– ಪದ್ಮರಾಗ ನೀಲ ಮುಕ್ತಾ ಚಂದ್ರಕಾಂತ, ಕುರವಿಂದ ವೈಡೂರ್ಯ ಪ್ರವಾಳ ವಜ್ರ– ಹೀಗೆ ಎಂಟು ರತ್ನಗಳು.

(೮) ಶುದ್ಧ ಜಲ

(೯) **ಅಷ್ಟಗಂಧ**– ಕುಂಕುಮಾಯಶ್ಶಶಿ(ಕರ್ಪೂರ) ಕುಷ್ಠಕೇಶ ಪಾಥೋಮುರ ಮಲಯಜ– ಈ ಎಂಟು ಅಷ್ಟಗಂಧ ಜಲಕ್ಕೆ

## ಸುಬ್ರಹ್ಮಣ್ಯನಲ್ಲಿ– ರತ್ನನ್ಯಾಸ ದ್ರವ್ಯಗಳು

**ರತ್ನಗಳು–** ವಜ್ರ, ವೈಡೂರ್ಯ, ಇಂದ್ರನೀಲ, ಶಂಖಿಸ್ಫಟಿಕ, ಪುಷ್ಯರಾಗ, ಮೌಕ್ತಿಕ, ವಿದ್ರುಮ, ಪದ್ಮರಾಗ– ಈ ರತ್ನಗಳು

**ಧಾತುಗಳು–** ಮನಶ್ಶಿಲಾ, ಹರಿತಾಳ ಅಂಜನ ಶ್ಯಾಮ ಸೌರಾಷ್ಟ್ರಿ ಗೋರೋಚನ, ಮಾಕ್ಷಿಕ ಗೈರಿಕ ಪಾದರಸ– ಈ ಧಾತುದ್ರವ್ಯ

**ಲೋಹಗಳು–** ಚಿನ್ನ ಬೆಳ್ಳಿ ತಾಮ್ರ, ಹಿತ್ತಾಳೆ, ತವರ, ಸೀಸ, ಕಬ್ಬಿಣ, ಕಂಚು ಮಧ್ಯದಲ್ಲಿ– ಈ ಎಂಟನ್ನು ಇಡಬೇಕು.

**ಧಾನ್ಯಗಳು–** ಯವ, ಗೋಧಿ, ಉದ್ದು, ಎಳ್ಳು, ಹೆಸರು, ನವಣೆ, ಸಾಸಿವೆ, ಶಾಲಿ– ಮಧ್ಯದಲ್ಲಿ ಈ ಎಂಟೂ ಬೀಜಗಳನ್ನಿಡಬೇಕು.

**ಆಯುಧಗಳು–** ಚಿನ್ನದಿಂದ ಸಿದ್ಧಗೊಳಿಸಿದ ಪದ್ಮ ಗಜ ಮಯೂರ ಶಕ್ತಿ ವಜ್ರ, ಕುಕ್ಕುಟ– ಈ ಆಯುಧ ಮತ್ತು ವಾಹನಗಳು

## ಸುಬ್ರಹ್ಮಣ್ಯನಲ್ಲಿ – ಕಲಾಶಾಭಿಷೇಕ ದ್ರವ್ಯಗಳು

**ಬ್ರಾಹ್ಮೇ–** (೧) ಪಂಚಗವ್ಯ (೧) ಪದ್ಮರಾಗ (೨) ನೀಲ (೩) ಮುಕ್ತಾ (೪) ಚಂದ್ರಕಾಂತ (೫) ಕುರವಿಂದ (೬) ವೈಡೂರ್ಯ (೭) ಪ್ರವಾಳ (೮) ವಜ್ರ ॥ ದೈವಿಕಾವರಣ– (೧) ಆಜ್ಯ (೧) ಯವ (೨) ತಿಲ (೩) ಗೋಧೂಮ (೪) ಸರ್ಷಪ (೫) ಶಾಲಿ (೬) ಮುದ್ಗ (೭) ಮಾಷ (೮) ನೀವಾರ

**ದಕ್ಷಿಣಖಂಡೇ–** (೧) ಕ್ಷೀರ (೧) ವಟ (೨) ಔದುಂಬರ (೩) ಅಶ್ವತ್ಥ (೪) ಪ್ಲಕ್ಷ (೫) ಆಮ್ರ (೬) ಪಲಾಶ (೭) ಶಿರೀಷ (೮) ಮಧೂಕ– ಇವುಗಳ ತೊಪ್ಪೆಯ ಕಷಾಯ

**ಪಶ್ಚಿಮಖಂಡೇ–** (೧) ದಧಿ (೧) ಉತ್ಪಲ (೨) ಕಲ್ಹಾರ (೩) ಅಂಬುಜ (೪) ಕುಮುದ (೫) ಸೌಗಂಧಿಕ (೬) ಕಶೇರುಕ (೭) ರಕ್ತೋತ್ಪಲ (೮) ನೀಲೋತ್ಪಲ

**ಉತ್ತರಖಂಡೇ–** (೧) ಮಧು (೧) ಮಾತುಲಂಗ (೨) ಆಮ್ರ (೩) ಬಿಲ್ವ (೪) ಜಂಬೂಕ (೫) ಪನಸ (೬) ದಾಡಿಮ (೭) ಭವ್ಯ (೮) ಕದಳೀ– ಈ ಫಲಗಳಿಂದ ಪೂರಣ

**ಆಗ್ನೇಯಖಂಡ–** (೧) ತೈಲ (೧) ಕುಂಕುಮ (೨) ಅಯಃ (೩) ಶಶಿ (೪) ಕುಷ್ಠ (೫) ಕೇಶ (೬) ಪಾಠ (೭) ಮುರ (೮) ಮಲಯಜ

**ನೈರುತ್ಯಖಂಡ–** (೧) ಗುಳ (೧) ಸುವರ್ಣ (೨) ರಜತ (೩) ತಾಮ್ರ (೪) ಅಯಃ (೫) ತ್ರಪು (೬) ಸೀಸ (೭) ಕಾಂಸ್ಯ (೮) ಪಿತ್ತಲ

**ವಾಯುವ್ಯಖಂಡ–** (೧) ಇಕ್ಷುಜಲ (೧) ಸುವರ್ಚಲಾ (೨) ಸಹದೇವೀ (೩) ವಚಾ (೪) ಬ್ರಾಹ್ಮೀ (೫) ಶಂಖಪುಷ್ಪೀ (೬) ಶತಾವರೀ (೭) ವಿಷ್ಣುಕ್ರಾಂತೀ (೮) ಲಕ್ಷ್ಮೀ– ಹೀಗೆ ಔಷಧಾಷ್ಟಕಗಳು

**ಈಶಖಂಡ–** (೧) ತೀರ್ಥಜಲ (೧) ಸಾಗರ ಜಲ (೨) ನದೀಜ (೩) ನಿರ್ಝರಜ (೪) ವಾಪೀಜ (೫) ತಟಾಕ (೬) ಹ್ರದ (೭) ಕೂಪ (೮) ಸೇತು

**ಮಾನುಷಕೋಣೆ–** (೧೦) ಧಾತ್ರೀ ಜಲ (೧೧) ರಾತ್ರೀ ಜಲ (೧೨) ತಕ್ಕೋಲ, ಜಾತೀ, ಲವಂಗ (ಆಚಾಮಕ) (೧೩) ಕ್ಷೀರ ರಾಜೀ ಯವ ತಿಲ ಕುಶ ದಧ್ಯಕ್ಷತ (ಅರ್ಘ್ಯ ದ್ರವ್ಯ) ॥ ಏವಂ ಪೂರ್ವಾದಿ ದಿಕ್ಷು ॥ ತತಃ ಆಗ್ನೇಯಾದಿ ವಿದಿಕ್ಷು (೧೪) ಕುಶೋದಕ (೧೫) ಕಾಶೋದಕ (೧೬) ಸೇವ್ಯ (೧೭)ದೂರ್ವಾಜಲ

**ಈಶಾನೇಂದ್ರಹೋರಂತರಾಳದಲ್ಲಿ–** (೧೮) ನ್ಯಗ್ರೋಧ ಪಲ್ಲವ – ಹೀಗೆ ಎಲ್ಲಾ ದಿಕ್ಕುಗಳ ಅಂತರಾಳಗಳಲ್ಲಿ (೧೯) ಔದುಂಬರ ಪಲ್ಲವ (೨೦) ಅಶ್ವತ್ಥ ಪಲ್ಲವ (೨೧) ಪ್ಲಕ್ಷ ಪಲ್ಲವ (೨೨) ಬಿಲ್ವ ಪಲ್ಲವ (೨೩) ಪಲಾಶ ಪಲ್ಲವ (೨೪) ಶಮೀ ಪಲ್ಲವ (೨೫) ಅಪಾಮಾರ್ಗ ಪಲ್ಲವ– ಈ ರೀತಿಯಾಗಿ ಪೂರಣ. ಇದು ಪಂಚ ಶತಕಲಶ ಕ್ರಮ. ಉಳಿದ ಕಲಶ ಪ್ರಕಾರಗಳಲ್ಲಿ ಈ ದ್ರವ್ಯಗಳಿಂದಲೇ ಆದರೂ ಕ್ರಮವನ್ನು ಮೂಲದಿಂದ ತಿಳಿಯಬೇಕು.

* * * *

## ವಿಷ್ಣುವಿನಲ್ಲಿ– ಗರ್ಭನ್ಯಾಸ ದ್ರವ್ಯಗಳು

**ಮಣ್ಣುಗಳು–** ಪರ್ವತ, ತೀರ್ಥ, ನದೀ, ಹ್ರದ, ಕರ್ಕಟಗುಹಾ, ವಲ್ಮೀಕ, ಭೂಖಲ, ಗಜಶೃಂಗ, ವೃಷಶೃಂಗ– ಈ ಮಣ್ಣುಗಳು

**ಗಡ್ಡೆಗಳು–** ಪದ್ಮ ಕುವಲಯ ಕೈರವ ಕುಮುದ (ನೀಲೋತ್ಪಲ, ರಕ್ತೋತ್ಪಲ) (ದಿಕ್ಕುಗಳಲ್ಲಿ) ಈ ಗಡ್ಡೆಗಳು.

**ಧಾತುಗಳು**– ಮನಃ ಶಿಲಾ ಹರಿತಾಳ ಅಂಜನ, ಶ್ಯಾಮ ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ, ಪಾದರಸ

**ರತ್ನಗಳು**– ವಜ್ರ, ಮುತ್ತು, ವೈಡೂರ್ಯ ಶಂಖ ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಮಹಾನೀಲ ಪದ್ಮರಾಗ

**ಧಾನ್ಯಗಳು**– ವ್ರೀಹಿ, ನೀವಾರ, ಕಂಕು, ಮಾಷ, ಕುಲಿತ್ಥ, ನಿಷ್ಪಾವ, ತಿಲ ಮುದ್ಗ, ಸಿದ್ಧಾರ್ಥ– ಈ ಬೀಜಗಳು

**ಲೋಹಗಳು**– ಸುವರ್ಣ, ರಜತ, ಆಯಸ, ತ್ರಪು, ಚಿನ್ನದಿಂದ ಸಿದ್ಧಗೊಳಿಸಿದ ಗರುಡ, ಕೂರ್ಮ, ಶಂಖ, ಚಕ್ರ– ಚಿನ್ನದ ಬಿಲ್ಲು, ಗದೆ, ಪದ್ಮ (ದಿಕ್ಕು– ವಿದಿಕ್ಕು– ಮಧ್ಯ)

## ವಿಷ್ಣುವಿನಲ್ಲಿ– ಬಿಂಬಶುದ್ಧಿ ಕಲಶದ್ರವ್ಯಗಳು

**ಆಗ್ನೇಯದಲ್ಲಿ**– ಅಶ್ವತ್ಥ, ಉದುಂಬರ, ವಟ, ಪ್ಲಕ್ಷ, ವಿಲ್ವ, ಬಕುಳ, ಆಮ್ರ, ಚಂಪಕ, ಪಲಾಶ, ಅಶೋಕ, ನೀಪಾ(ಕಚಲ) ಅರ್ಜುನ(ಮತ್ತಿ)– ಇವುಗಳ ಚಿಗುರಿನಿಂದ ಪೂರಣ

**ನೈಋತ್ಯದಲ್ಲಿ**– ಪದ್ಮ, ಶ್ರೀಗಂಧ, ರಕ್ತಚಂದನ, ಜಾತೀಪುಷ್ಪ, ದರ್ಭಸ್ತಂಬ, ಕುಂದ ನಂದೀ ದೂರ್ವಾ ಗೋರೋಚನ, ಸರ್ಷಪ–

**ವಾಯವ್ಯದಲ್ಲಿ**– ಯವ, ವ್ರೀಹಿ, ಸುವರ್ಣ, ರಜತ, ತಿಲ, ನದಿಯ ಎರಡು ದಡದ ಮಣ್ಣು, ಗೋಮಯ– ಇವುಗಳನ್ನು ತುಂಬಬೇಕು.

**ಈಶಾನದಲ್ಲಿ**– ಸಹದೇವೀ ವಿಷ್ಣುಕ್ರಾಂತಿ ಮಧುಕರ(ಇಪ್ಪೆ) ಗುಡೂಚೀ(ಅಮೃತಬಳ್ಳಿ) ಆರ್ದ್ರಕ(ಹಸಿಶುಂಠಿ) ಶಮೀ ಶತಾವರೀ ಶ್ಯಾಮಾಕ– ಇವುಗಳಿಂದ ತುಂಬಿಸಬೇಕು.

**ಪಶ್ಚಿಮದಲ್ಲಿ**– ಫಲೋದಕ(ಆಮ್ರ ಬಿಲ್ವ ಧಾತ್ರೀ ದಾಡಿಮ ಮಾತುಲಂಗ ನಾಳಿಕೇರ ಭವ್ಯ ಪನಸ ಕದಲೀಫಲ)

**ದಕ್ಷಿಣದಲ್ಲಿ**– ಪಂಚಗವ್ಯ (ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ– ಈ ಐದು ಪ್ರಮಾಣದಂತೆ)

**ಪೂರ್ವದಲ್ಲಿ**– ಕಷಾಯೋದಕ (ಅಶ್ವತ್ಥ ಉದುಂಬರ ಖದಿರ ಶಮೀ ಬಿಲ್ವ ಪಲಾಶ ವೈಕಂಕತ ಗ್ರಂಥಿಲ– ತೊಪ್ಪೆಯ ಕಷಾಯ)

**ಉತ್ತರದಲ್ಲಿ**– ಶತಮೂಲೀ ಅಮೃತಾ ಕುಮಾರೀ(ನೋಳಿಸರ) ವ್ಯಾಘ್ರೀ(ನ್ಯಗ್ಗುಳ್ಳ) ವಚಾ ಬಹುಸುತಾ ಸಹಾ, ಸಿಂಬೀ(ಆಡುಸೋಗೆ)– ಇವುಗಳಿಂದ ಪೂರಣ

**ಮಧ್ಯಕಲಶದಲ್ಲಿ**– ವಲ್ಮೀಕ, ಪರ್ವತ, ತೀರ್ಥ ಹ್ರದ ವಿಡಿವಾಸದ ಮಣ್ಣು, ಭೂಖಿಲ ಗಜಶೃಂಗ, ವೃಷಶೃಂಗ– ಈ ಮೃತ್ತಿಕೆಗಳ ಜಲ

ಉಳಿದ ಹೊರಗಿನ ಕಲಶಗಳಲ್ಲಿ ಅಷ್ಟಗಂಧೋದಕ

## ವಿಷ್ಣುವಿನಲ್ಲಿ– ರತ್ನನ್ಯಾಸ ದ್ರವ್ಯಗಳು

**ಬೀಜಗಳು**– ಯವ, ವ್ರೀಹಿ, ನಿಷ್ಪಾವ, ಪ್ರಿಯಂಗು(ತೆನೆ) ತಿಲ, ಮಾಷ, ನೀವಾರ(ನೆರೆ) ಶಾಲಿ, ಸರ್ಷಪ

**ರತ್ನಗಳು**– ವಜ್ರ, ಮುಕ್ತಾ ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ ಚಂದ್ರಕಾಂತ, ಇಂದ್ರನೀಲ, ಪದ್ಮರಾಗ

**ಧಾತುಗಳು**– ಮನಃಶಿಲಾ, ಹರಿತಾಳ, ಅಂಜನ, ಶ್ಯಾಮಾಂಜನ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ, ಪಾದರಸ– ಈ ದ್ರವ್ಯಗಳು

**ಲೋಹಗಳು**– ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ತವರ, ಸೀಸ, ಚಿನ್ನದಿಂದ ಸಿದ್ಧಗೊಳಿಸಿದ ಕೂರ್ಮ, ಚಿನ್ನದಿಂದ ಸಿದ್ಧಗೊಳಿಸಿದ ಶಂಖ, ಚಿನ್ನದ ಕಮಲ

## ವಿಷ್ಣುವಿನಲ್ಲಿ– ಕಲಶಾಭಿಷೇಕಕ್ಕೆ ದ್ರವ್ಯಗಳು

**ಮಾನುಷಾವರಣ**– ಶ್ಯಾಮಾಕ, ಅಂಬುಜ, ವಿಷ್ಣುಕ್ರಾಂತಿ, ದೂರ್ವಾ– ಇದು ಪಾದ್ಯ ದ್ರವ್ಯ(ಪೂರ್ವೇ)

**ದಕ್ಷಿಣದಲ್ಲಿ**– ಸರ್ಷಪ, ಕಟುಕಪುಷ್ಪ ಜಂಬೀರಫಲ, ಅಕ್ಷತ ಯವ ಗಂಧ ತಿಲ ಕುಶ– ಇದು ಅರ್ಘ್ಯ ದ್ರವ್ಯ

**ಪಶ್ಚಿಮದಲ್ಲಿ**– ತಕ್ಕೋಲ ಕರ್ಪೂರ ಲವಂಗ ಜಾತೀ ಫಲ(ಆಚಮನ)

**ಉತ್ತರದಲ್ಲಿ–** ಪಂಚಗವ್ಯದಿಂದ(ಗೋಮೂತ್ರ, ಗೋಮಯ, ಹಾಲು, ದಧಿ, ತುಪ್ಪ) (೪)

**ಆಗ್ನೇಯಾದಿ ವಿದಿಕ್ಕುಗಳಲ್ಲಿ–** (೫) ಆಜ್ಯ (೬) ದಧಿ (೭) ಕ್ಷೀರ (೮) ಮಧು

**ಅಂತರಾಳಗಳಲ್ಲಿ–** (೯) ಉಷ್ಣೋದಕ (೧೦) ಕಷಾಯ(ಅಶ್ವತ್ಥ ಉದುಂಬರ ವಟ ಬದಿರ ಶಮೀ ಬಿಲ್ವ ಪಲಾಶ ವೈಕಂಕತ ಗ್ರಂಥಿಲ– ಈ ತೊಪ್ಪೆಗಳಿಂದ) (೧೧) ಮಾರ್ಜನ ದ್ರವ್ಯ (ನಿಶಾಚೂರ್ಣ ಸಹದೇವಿ ಶಿರೀಷ ಭದ್ರ ಮುಸ್ತ ಕುಶ ಸೂರ್ಯ ವರ್ತಿನೀ– ಈ ದ್ರವ್ಯಗಳಿಂದ) (೧೨) ಆಮ್ರ ಬಿಲ್ವ ಧಾತ್ರೀ ದಾಡಿಮ ಮಾತುಳಂಗ ನಾಳಿಕೇರ ಭವ್ಯ ಪನಸ ಕದಳಿ– ಇವುಗಳಿಂದ ಫಲೋದಕ. (೧೩) ಯವೋದಕ (೧೪) ರತ್ನೋದಕ(ಮುಕ್ತಾ ಪದ್ಮರಾಗ ವಿದ್ರುಮ ವಜ್ರ ವೈಡೂರ್ಯ ತ್ರಪು– ಈ ಲೋಹಗಳಿಂದ. (೧೬) ಕುಶಜಲ

**ದ್ವೈವಿಕಾವರಣದಲ್ಲಿ–** ದಿಕ್ಕುಗಳಲ್ಲಿ– (೧೭) ಅಷ್ಟಗಂಧ ಜಲ (ಚಂದನಾ ಗರುಕುಷ್ಠ ಕೇಸರೀ ಪಚ್ಚಕರ್ಪೂರ ಮುರಾ ಸೇವ್ಯ ಲವಂಗ ವಾರಿ(ಮುಡಿವಾಳ)– ಈ ದ್ರವ್ಯಗಳಿಂದ) (೧೮) ಪುಷ್ಪಜಲ (ಮಲ್ಲಿಕಾ ಚಂಪಕಾ ಜಾತೀ ನಂದ್ಯಾವರ್ತ ಬಕುಳ ಕುಂದ ಯೂಥಿಕಾ ಪದ್ಮ– ಈ ಹೂವುಗಳಿಂದ) (೧೯) ಔಪಮಾನ ದ್ರವ್ಯ (ಚಿನ್ನದಿಂದ ಸಿದ್ಧಗೊಳಿಸಿದ ಗರುಡ ಶಂಖ ಚಕ್ರ ಕಮಠ– ಈ ಆಯುಧಗಳು) (೨೦) ಧಾತ್ರೀ ರಸ (ಜಟಾಮಾಂಸಿ ಮುರಾರ್ಚ ಧಾತ್ರೀ ರಸದಿಂದ ಅರೆದ ನೀರು) (೨೧) ಅಕ್ಷತ ದ್ರವ್ಯ (ಯವ ತಂಡುಲ ಮಾಷ ನೀವಾರ ಶಾಲಿ ಬಿದಿರು ಅಕ್ಕಿ(ವೈಣವ) ಈ ದ್ರವ್ಯಗಳಿಂದ) (೨೨) ನಾಳಿಕೇರಜಲ (೨೩) ಇಕ್ಷುಜಲ(ಕಬ್ಬಿನ ಹಾಲು) (೨೪) ತಂಡುಲೋದಕ (೨೫) ಬ್ರಹ್ಮಕಲಶದಲ್ಲಿ– ಶಾಲೀಪಿಷ್ಟ ಸುವರ್ಣ ನವರತ್ನ ರಜನೀ ಚೂರ್ಣ(ಅರಿಸಿನ ಪುಡಿ) ಈ ರೀತಿ ತುಂಬಿಸಬೇಕು.

* * * *

## ದುರ್ಗಿಯಲ್ಲಿ– ಗರ್ಭನ್ಯಾಸ ದ್ರವ್ಯಗಳು

**ಮೃತ್ತಿಕೆಗಳು–** ಪರ್ವತ ತೀರ್ಥ ನದೀ ಹ್ರದ ಕರ್ಕಟಾಲಯ, ಗುಹಾ ವಲ್ಮೀಕ ಧಾನ್ಯಾಗಾರ ಭೂಖಲ ಗಜಶೃಂಗಸ್ಥ, ವೃಷಶೃಂಗಸ್ಥ– ಈ ಮಣ್ಣುಗಳು.

**ಗಡ್ಡೆಗಳು–** ಪದ್ಮ ಉತ್ಪಲ(ಕುಮಲಯ, ಕೈರವ) ಕುಮುದ ರಕ್ತೋತ್ಪಲ– ಇವುಗಳ ಗಡ್ಡೆಗಳು.

**ಧಾತುದ್ರವ್ಯ–** ಮಣಿಶಿಲಾ ಅರಿದಳ ಅಂಜನ ಶ್ಯಾಮಾಂಜನ ಸೀಸ, ಸೌರಾಷ್ಟ್ರಿ ಗೋರೋಚನ ಗೈರಿಕ ಪಾದರಸ

**ರತ್ನಗಳು–** ವಜ್ರ ಮೌಕ್ತಿಕ ವೈಡೂರ್ಯ ಶಂಖ ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಮಹಾನೀಲ ಪದ್ಮರಾಗ– ಈ ರತ್ನಗಳು

**ಬೀಜಗಳು–** ಶಾಲಿ ನೀವಾರ ಕಂಕು(ನವಣೆಯಂತಿರುವ ಧಾನ್ಯ) ಮಾಷ ಕುಲಿತ್ಥ ನಿಷ್ಪಾವ ತಿಲ ಮುದ್ಗ ಸಿದ್ಧಾರ್ಥ– ಈ ಬೀಜಗಳು

**ಲೋಹಾದಿ–** ಸುವರ್ಣ ರಜತ ಆಯಸ ತ್ರಪು– ಚಿನ್ನದಿಂದ ಸಿದ್ಧಗೊಳಿಸಿದ ಸಿಂಹ ಕೂರ್ಮ ಶಂಖ ಚಕ್ರಗಳು ಚಿನ್ನದ ಬಿಲ್ಲು ಗದೆ ಮತ್ತು ಪದ್ಮಗಳು

## ದುರ್ಗಿಯಲ್ಲಿ– ಬಿಂಬಶುದ್ಧಿ ಕಲಶದ್ರವ್ಯಗಳು

**ಪೂರ್ವಾದಿಯಾಗಿ–** ಗೋಮೂತ್ರ, ಗೋಮಯ, ಕ್ಷೀರ, ದಧಿ, ಆಜ್ಯ

**ಮೃಜ್ಜಲ–** ಪರ್ವತ ತೀರ್ಥ ನದೀ ಹ್ರದ ಕರ್ಕಟಾಲಯ, ವಲ್ಮೀಕ, ಭೂಖಲ, ಗಜದಂತ, ವೃಷಶೃಂಗ– ಈ ಮಣ್ಣುಗಳು.

**ಕಷಾಯೋದಕ–** ಅಶ್ವತ್ಥ ಉದುಂಬರ ಖದಿರ ಶಮೀ ಬಿಲ್ವ ಪಲಾಶ ವೈಕಂಕತ ಗ್ರಂಥಿಲ– ಇವುಗಳ ತೊಪ್ಪೆಯ ಕಷಾಯ

**ರತ್ನಜಲ–** ವಜ್ರ ಮುತ್ತು ವೈಡೂರ್ಯ ಶಂಖಮಣಿ, ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಮಹಾಸೀಲ ಪದ್ಮರಾಗ– ಈ ರತ್ನಗಳು

**ಗಂಧೋದಕ–** ಪಟೀರ ಅಸ್ರ ಅಯಃ ಕಪಿ ಜಟಾ ಗೋರೋಚನ ಇಂದು(ಪಚ್ಚೆಕರ್ಪೂರ) ಕಚೋರ– ಈ ದ್ರವ್ಯಗಳಿಂದ

## ದುರ್ಗಿಯಲ್ಲಿ– ರತ್ನನ್ಯಾಸ ದ್ರವ್ಯಗಳು

**ಬೀಜಗಳು–** ಯವ ವ್ರೀಹಿ ನಿಷ್ಪಾವ ಪ್ರಿಯಂಗು ತಿಲ ಮಾಷ ನೀವಾರ ಶಾಲ ಸರ್ಷಪ– ಈ ಬೀಜಗಳು– ದಿಕ್ಕು ಹಾಗೂ ಮಧ್ಯದಲ್ಲಿ

**ರತ್ನಗಳು–** ವಜ್ರ, ಮುಕ್ತಾ ವೈಡೂರ್ಯ ಶಂಖ ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಇಂದ್ರನೀಲ ಪದ್ಮರಾಗ– ಈ ರತ್ನಗಳು

**ಧಾತುದ್ರವ್ಯ–** ಪುಳಕ ವಿದ್ರುಮ ಅಂಜನ ಶ್ಯಾಮಾಂಜನ ಸೀಸ ಮನಃಶಿಲಾ ಹರಿತಾಳಗೈರಿಕ ಪಾದರಸ– ಈ ಧಾತುದ್ರವ್ಯಗಳು

**ಲೋಹಗಳು–** ಚಿನ್ನ ಬೆಳ್ಳಿ ತಾಮ್ರ ಕಬ್ಬಿಣ ತವರ ಸೀಸ ಗರುಡಶಿಲೆ ಪಿತ್ತಳ(ಹಿತ್ತಾಳೆ)– ಇವುಗಳು ಹಾಗೂ ಮಧ್ಯದಲ್ಲಿ ಚಿನ್ನದಿಂದ ತಯಾರಿಸಿದ ಶಂಖ, ಚಕ್ರ, ಬಾಣ, ಚಾಪ ಖಡ್ಗ ಶೂಲ ಪಾಶ ದಂಡಗಳು.

## ದೇವಿಯಲ್ಲಿ ಕಲಶಾಭಿಷೇಕ ದ್ರವ್ಯಗಳು

(೧) **ಬ್ರಹ್ಮಕಲಶದಲ್ಲಿ–** ಗಂಧ ಪುಷ್ಪ ಔಷಧಿ ಪಂಚವರ್ಣ ಸ್ವರ್ಣ ಜಲ **ದೈವಿಕಾವರಣ– ಈಶಾನಾದಿ–** (೨) ಸಕ್ತುಜಲ (೩) ಭಸ್ಮಜಲ (೪) ಮಧು (೫) ತೈಲ (೬) ಗುಳಂ (೭) ಅಶ್ವತ್ಥೋದಕ (೮) ದೂರ್ವಾಜಲ (೯) ರಜತ **ಮಾನುಷಾವರಣ– ದಿಕ್ಕು ವಿದಿಕ್ಕು ಅಂತರಾಳ–** (೧೦) ಪಾದದ್ರವ್ಯ (ದೂರ್ವಾ ಸಿಂಹಿ ಕುಶ ಶತಗುಣ ವ್ಯಾಘ್ರೀ ರಾಜಿ ಶ್ಯಾಮಾಕ) (೧೧) ಅರ್ಘ್ಯ ದ್ರವ್ಯ (ಕುಶಾಗ್ರ ರಾಜಿ ಕ್ಷೀರ ಅಕ್ಷತ ತಿಲ ಗಂಧ ಪುಷ್ಪ) (೧೨) ಪಂಚಗವ್ಯ (ಗೋಮೂತ್ರ ಗೋಮಯ ಕ್ಷೀರ ದಧಿ ಘೃತ) (೧೩) ಗೋಮೂತ್ರ (೧೪) ಗೋಮಯ (೧೫) ಕ್ಷೀರ (೧೬) ದಧಿ (೧೭) ಸರ್ಪಿಃ (೧೮) ಕುಶೋದಕ (೧೯) ಖದಿರಕ್ಷೀರತ್ವಕ್ಕು ಕಷಾಯೋದಕ (೨೦) ವಜ್ರ ಮುಕ್ತಾ ವೈಡೂರ್ಯ ವಿದ್ರುಮಮಣಿ ಮಾಣಿಕ್ಯ ಮಹಾನೀಲ ನೀಲ ಬ್ರಹ್ಮರಾಗ– ಎಂಟು ರತ್ನಗಳಿಂದ ರತ್ನೋದಕ (೨೧) ಸ್ವರ್ಣಜಲ (೨೨) ಶ್ಯಾಮರಸ ಹರಿತಾಲ ಅಂಜನ ಗೋರೋಚನ ಸೌರಾಷ್ಟ್ರಿ ಗೈರಿಕ ಸೀಸ ಮನೋಹ್ವಾ– ಈ ಧಾತುಜಲ (೨೩) ಅಷ್ಟಗಂಧ ಜಲ (ಪಟೀರ ಅಸ್ರ ಅಯಃ ಕಪಿ ಜಟಾರೋಚನ ಇಂದು ಚೋರ) (೨೪) ನಂದ್ಯಾವರ್ತ ಬಕುಲ ಚಂಪಕ ಅಶೋಕ ನಾಗಮಲ್ಲಿಕಾ ಜಾತೀ ಹೀಗೆ ಏಳು ಬಗೆಯ ಪುಷ್ಪೋದಕ (೨೫) ಫಲೋದಕ (ನಾಳಿಕೇರ ನಾರಂಗ ಬದರೀ ಕದಲೀ ಬೀಜಾಪೂರ ಮಾತುಲಂಗ)

* * * *

## ಶಾಸ್ತಾರನಲ್ಲಿ ಗರ್ಭನ್ಯಾಸ ದ್ರವ್ಯಗಳು

**ಮೃತ್ತಿಕೆಗಳು–** ಪರ್ವತ ತೀರ್ಥ ನದೀ ಹ್ರದ ಕರ್ಕಟಾಲಯ ಗುಹಾ ವಲ್ಮೀಕ ಧಾನ್ಯಾಗಾರ ಭೂಖಿಲ ಗಜದಂತ, ವೃಷಶೃಂಗ– ಈ ಮಣ್ಣುಗಳು

**ಗಡ್ಡೆಗಳು–** ಪದ್ಮ ಉತ್ಪಲ ಕುಮುದ ರಕ್ತೋತ್ಪಲ– ಈ ಗಡ್ಡೆಗಳು

**ಧಾತುಗಳು–** ಮನಃ ಶಿಲಾ ಹರಿತಾಳ ಅಂಜನ ಶ್ಯಾಮಾಂಜನ ಸೀಸ ಸೌರಾಷ್ಟ್ರಿ ಗೋರೋಚನ ಗೈರಿಕ ಪಾದರಸ– ಈ ದ್ರವ್ಯಗಳು.

**ರತ್ನಗಳು–** ವಜ್ರ ಮೌಕ್ತಿಕ ವೈಡೂರ್ಯ ಶಂಖಮಣಿ ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಮಹಾನೀಲ ಪದ್ಮರಾಗ– ಈ ರತ್ನಗಳು

**ಬೀಜಗಳು–** ವ್ರೀಹಿ ನೀವಾರ ಕಂಕು(ಹುಲ್ಲು ಬೀಜ) ಮಾಷ ಕುಲಿತ್ಥ ನಿಷ್ಪಾವ ತಿಲ ಮುದ್ಗ ಸಿದ್ಧಾರ್ಥ– ಈ ಬೀಜಗಳು.

**ಲೋಹಗಳು–** ಸುವರ್ಣ ರಜತ ಆಯಸತ್ರಪು ಚಿನ್ನದಿಂದ ತಯಾರಿಸಿದ ಶೂಲ ಕುಠಾರ ಶಂಖ ಚಕ್ರ– ಈ ಆಯುಧಗಳು. ತೋಮರ ಶರ ಪದ್ಮಗಳು(ಆಯುಧಗಳು ಕೂಡಾ)

## ಶಾಸ್ತಾರನಲ್ಲಿ– ಬಿಂಬಶುದ್ಧಿ ಕಲಶದ್ರವ್ಯಗಳು

**ಮೃತ್ತಿಕೆಗಳು–** ಗಜ ವರಾಹ ದಂತ, ವೃಷಶೃಂಗ ವಲ್ಮೀಕ ನದಿಯ ಎರಡು ದಡ, ವೃಶ್ಚಿಕಾಲಯ– ಇವುಗಳಿಂದ ಹೊಂದಿದ ಮಣ್ಣುಗಳು

**ಕಷಾಯೋದಕ–** ಅಶ್ವತ್ಥ ಉದುಂಬರ ಖದಿರ ಶಮೀ ಪಲಾಶ ವೈಕಂಕತ, ಗ್ರಂಥಿಲ (ಹಾಲುಸೊನೆ ಇರುವ) ಮರದ ತೊಪ್ಪೆಯ ಕಷಾಯ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ– ಪಂಚಗವ್ಯ

**ಗಂಧಜಲ–** ಚಂದನ, ಕುಂಕುಮಕೇಸರಿ, ಸೇವ್ಯ(ಲವಂಚ) ಮಡಿವಾಳ ಜಟಾಮಾಂಸಿ, ಮುರಾ, ಪಚ್ಚೆಕರ್ಪೂರ, ಕಂಕುಷ್ಠ

## ಶಾಸ್ತಾರನಲ್ಲಿ– ರತ್ನನ್ಯಾಸ ದ್ರವ್ಯಗಳು

**ಬೀಜಗಳು–** ಯವ ವ್ರೀಹಿ ನಿಷ್ಪಾವ ಪ್ರಿಯಂಗು ತಿಲ ಮಾಷ ನೀವಾರ ವೇಣುಬೀಜ– ಈ ಎಂಟು ಬಗೆಯ ಬೀಜಗಳು.

**ರತ್ನಗಳು–** ವಜ್ರ ಮುತ್ತು ವೈಡೂರ್ಯ ಶಂಖ ಸ್ಫಟಿಕ ಪುಷ್ಯರಾಗ ಚಂದ್ರಕಾಂತ ಮಹಾನೀಲ ಪದ್ಮರಾಗ– ಈ ರತ್ನಗಳು.

**ಧಾತುದ್ರವ್ಯಗಳು**– ಪುಲಕ ವಿದ್ರುಮ ಅಂಜನ ಶ್ಯಾಮಾಂಜನ, ಸೀಸ ಮನಃಶಿಲಾ, ಹರಿತಾಳ ಗೈರಿಕ ಪಾದರಸ– ಈ ಧಾತುಗಳು

**ಲೋಹಗಳು**– ಸುವರ್ಣ ರಜತ ತಾಮ್ರ ಅಯಃ ತ್ರಪು ಸೀಸ ಪಿತ್ತಲ(ಆರಕೂಟ) ಕಂಸ್ಯ ಸ್ವರ್ಣ– ಈ ಲೋಹಗಳು

## ಶಾಸ್ತಾರನಲ್ಲಿ– ಕಲಶಾಭಿಷೇಕ ದ್ರವ್ಯಗಳು

**ಬ್ರಹ್ಮಕಲಶದಲ್ಲಿ** (೧) ಅಷ್ಟಗಂಧ ನಿಶಾಚೂರ್ಣ ಅಕ್ಷತ ಪುಷ್ಪ ತಿಲ(ಪಾದ್ಯದ್ರವ್ಯ) (೨) **ದೈವಿಕಾವರಣ**(ದಿಗ್ವಿದಿಕ್ಕು) ಅರ್ಘ್ಯದ್ರವ್ಯ (ಸರ್ಷಪ ತಿಲ ಕ್ಷೀರ ಕುಶಾಷ್ಟ ಗಂಧ ಪುಷ್ಪ) (೩) ಆಚಮನದ್ರವ್ಯ (ಲವಂಗ ಪದ್ಮಾಷ್ಟ ಗಂಧ ಜಲ) (೪) ಪಂಚಗವ್ಯ (ಗೋಮೂತ್ರ, ಗೋಮಯ ಹಾಲು ಮೊಸರು ತುಪ್ಪ) (೫) ಗೋಮೂತ್ರ (೬) ಹಾಲು (೭) ಮೊಸರು (೮) ಆಜ್ಯ (೯) ಮಧು

**ಮಾನುಷಾವರಣದಲ್ಲಿ** (೧೦) ಕಷಾಯ (ಹಾಲುಸೊನೆಯ ಮರದ ತೊಗಟೆಯಿಂದ ಸಿದ್ಧಗೊಂಡದು) (೧೧) ಪನಸ ಕದಳೀ ಆಮಲಕ ಭವ್ಯ ಆಮ್ರ ನಾಳಿಕೇರಾದಿ ಫಲಗಳು. (೧೨) ಮಾರ್ಜನ ದ್ರವ್ಯ(ಐಂದ್ರೀ ಅಕ್ಷತ ಗಂಧ ಪುಷ್ಪ ಸದಾಭದ್ರ ಕುಶಾಗ್ರ) (೧೩) ಮೃಜ್ಜಲ (ಅದ್ರಿವೇದಿ ವೃಷಶೃಂಗ ನದಿಯ ಎರಡು ತೀರ) (೧೪) ಸಕ್ತುಜಲ (೧೫) ಗಂಧಜಲ (೧೬) ಪುಷ್ಪಜಲ (೧೭) ಯವೋದಕ (೧೮) ಗುಳ (೧೯) ಇಕ್ಷುಜಲ (೨೦) ನಾಳಿಕೇರಕ್ಷೀರ (ಕಾಯಿಹಾಲು) (೨೧) ನಾಳಿಕೇರ ಜಲ(ಕಾಯಿನೀರು) (೨೨) ಮುಕ್ತಾ ವೈಡೂರ್ಯ ವಜ್ರಮಣಿ ಮರಕತ ಗೋಮೇಧ ಪುಷ್ಯರಾಗ ಇಂದ್ರನೀಲ(ರತ್ನಜನ) (೨೩) ಕಾಂಚನ ರೂಪ್ಯತಾಮ್ರ ಅಯಃ ತ್ರಪು(ಲೋಹಜಲ) (೨೪) ತೀರ್ಥಜಲ (೨೫) ಅಕ್ಷತಜಲ.

* * * *

# ಮಂಟಪಸಂಸ್ಕಾರಃ

ಹೇಳಲ್ಪಟ್ಟ ಲಕ್ಷಣವನ್ನನುಸರಿಸಿ ಮಂಟಪವನ್ನು ಮಾಡಿ, ಆಮೇಲೆ ಆಚಾರ್ಯನು ಹೊಸ ಬಟ್ಟೆಯನ್ನು ತೊಟ್ಟು ಉತ್ತರೀಯವನ್ನು ಉಪವೀತದಂತೆ (ಬ್ರಹ್ಮವಸ್ತ್ರದಂತೆ) ಧರಿಸಿ, ಕೈಕಾಲುಗಳನ್ನು ತೊಳೆದು ಆಚಮನವನ್ನು ಮಾಡಿ **'ಬಂಧೋತ್ಸವಾಂಗ ಕಲಶ ಸ್ಥಾಪನ ಹೋಮಾದಿ ಕರ್ಮಸಾದ್ಗುಣ್ಯಾರ್ಥಂ ಮಂಟಪ ಸಂಸ್ಕಾರಂ ಕರಿಷ್ಯೇ'**– ಹೀಗೆ ಸಂಕಲ್ಪ ಮಾಡಿ, ಪ್ರಧಾನ ಬಾಗಿಲಿನಲ್ಲಿ ನಿಂತು ಅಸ್ತ್ರ ಮಂತ್ರವನ್ನು ಹೇಳುತ್ತಾ ಅಸ್ತ್ರದೃಷ್ಟಿಯಿಂದ ಮಂಟಪವನ್ನು ದೃಷ್ಟಿಸಿ ನೋಡಿ (ಒಳಭಾಗದಲ್ಲಿ) ಪ್ರದಕ್ಷಿಣವಾಗಿ ತಿರುಗಿ ಬಂದು ನೈಋತ್ಯ ದಿಕ್ಕಿನಲ್ಲಿ ಕುಳಿತುಕೊಂಡು, ದೇಹಶುದ್ಧಿಯನ್ನು, ಶಂಖಪೂರಣ, ಆತ್ಮಾರಾಧನೆಯನ್ನೂ ಮಾಡಿ ಗುರುವಂದನ, ಗಣಪತಿ ಪೂಜೆಯನ್ನೂ ಮಾಡಿ– ತ್ರಿಗುಣೀಕೃತ ಸೂತ್ರ– ದರ್ಭೆಯ ಹಗ್ಗ– ದರ್ಭಮುಷ್ಟಿ– ಗೋಮಯಜಲ– ಸಾಸಿವೆ– ದರ್ಭಮುಷ್ಟಿ– ಗೋಮಯ ಜಲ– ಪಂಚಗವ್ಯ– ವಿಕಿರಮುಷ್ಟಿ– ಗಂಧಾಂಬು– ದರ್ಭೆ ಹೂಗಳಿಂದ ಕೂಡಿದ ಅಕ್ಷತೆ– ಧ್ವಜತೋರಣ ಪತಾಕೆ ಮೊದಲಾದವುಗಳನ್ನು ಹೊಂದಿಸಿಕೊಂಡು ಶೋಷಣ, ದಾಹನ ಮೊದಲಾದವುಗಳನ್ನು ಮಾಡಿ– ಸೂತ್ರದಲ್ಲಿ ಪ್ರಣವಾಕ್ಷರಗಳು– ದರ್ಭೆಯ ಹಗ್ಗದಲ್ಲಿ ಪ್ರಣವ– ಮೂರು ದರ್ಭ ಮುಷ್ಟಿಗಳಲ್ಲಿ ವಾಯುಬೀಜ– ಗೋಮಯ ಜಲದಲ್ಲಿ ಅಮೃತಬೀಜ– ಸಾಸಿವೆಯಲ್ಲಿ ಅಗ್ನಿಬೀಜ– ಪಂಚಗವ್ಯದಲ್ಲಿ ಪಂಚತತ್ತ್ವಗಳು– ವಿಕಿರದಲ್ಲಿ– ಉಳಿದ ದ್ರವ್ಯಗಳಲ್ಲಿಯೂ– ಮೂಲ ಮಂತ್ರವು– ಹೀಗೆ ಜಪಿಸಬೇಕು, ಪೂಜಿಸಬೇಕು.

ಆಮೇಲೆ ಮಂಟಪದಿಂದ ಹೊರಗೆ ಬಂದು ಗೋದಾನ ಮೊದಲಾದುವನ್ನು ಮಾಡಿ ಅಸ್ತ್ರಮಂತ್ರವನ್ನು ಉಚ್ಚರಿಸಿ ಸುತ್ತಲೂ ನೋಡಿ ಬಲದ ಕೈಯ ತಳದಲ್ಲಿ ನೀರನ್ನು ಹಿಡಿದುಕೊಂಡು ಎಂಟಾವರ್ತಿ ಪ್ರಣವ (ಓಂ)ವನ್ನು ಜಪಿಸಿ, ಓಂ **ಹುಂಫಟ್**– ಈ ಮಂತ್ರದಿಂದ ಪ್ರೋಕ್ಷಿಸಬೇಕು. ಅಂಗೈಯನ್ನು ಒಂದಕ್ಕೊಂದು ಹೊಡೆದು ಮೂರಾವರ್ತಿ (ತಾಳತ್ರಯ) ಹೊಡೆದು ಶಬ್ದ ಮಾಡಬೇಕು. ಅಲ್ಲಿ ನೆಲೆಸಿರುವ ರಾಕ್ಷಸ ಮೊದಲಾದವರನ್ನು ಹೊರಗಟ್ಟಬೇಕು. ದಾರದೊಂದಿಗೆ ದರ್ಭೆಯ ಹಗ್ಗವನ್ನು ಹಿಡಿದು ಪ್ರಣವಾಕ್ಷರಗಳನ್ನು ಹಾಗೂ ಪ್ರಣವವನ್ನು ಜಪಿಸುತ್ತಾ, ನೊಪ್ರ (ಗೋಡೆ ಹಾಗೂ ಮೇಲ್ಭಾಗದ ಸೂರಲಿನ ಒಳಭಾಗ)ದ ಮೇಲ್ಭಾಗದಲ್ಲಿ ಈಶಾನ್ಯಮೂಲೆಯಿಂದಾರಂಭಿಸಿ ಈಶಾನ್ಯ ಮೂಲೆಯ ಪರ್ಯಂತ ಸುತ್ತಲೂ ಸುತ್ತಬೇಕು. ಪುನಃ ಎಲ್ಲಾ ದೇವತೆಗಳಲ್ಲಿಯೂ ತೋರಣ ಹಾಗೂ ಧ್ವಜಗಳನ್ನು ತೊಳೆದು ದರ್ಭೆ ಚಿಗುರು ಮೊದಲಾದವುಗಳನ್ನು ಕಟ್ಟಿ ಧ್ವಜದಲ್ಲಿ ಪತಾಕೆಗಳನ್ನು ಕಟ್ಟಿ ಪೂರ್ವವೇ ಮೊದಲಾದ ನಾಲ್ಕು ದಿಕ್ಕುಗಳಲ್ಲಿ ತೋರಣಗಳನ್ನು ಸ್ಥಾಪಿಸಬೇಕು. ವಿಷ್ಣು ಸುಬ್ರಹ್ಮಣ್ಯ, ಗಣಪತಿ, ಶಾಸ್ತಾರ, ಶಿವ ಈ ದೇವತೆಗಳಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಗೋಡೆ ಮತ್ತು ತೋರಣಗಳ ನಡುವೆ ಎಂಟು ಧ್ವಜಗಳನ್ನು ಸ್ಥಾಪಿಸಬೇಕು. ಶಿವನಲ್ಲಿ ಮೇಲ್ಭಾಗವನ್ನು ಭಾವಿಸಿ, ಈಶಾನ್ಯ ಮೂಲೆಯಲ್ಲಿ– ಹೀಗೆ ಒಂಭತ್ತು ಧ್ವಜಗಳನ್ನು ಸ್ಥಾಪಿಸಬೇಕು. ಶಂಕರನಾರಾಯಣ, ದುರ್ಗಿಯರಲ್ಲಿ ನಾಲ್ಕು ಬಾಗಿಲುಗಳಲ್ಲಿ ತೋರಣದ ಒಳಭಾಗದಲ್ಲಿ ಎರಡೆರಡು ಪತಾಕೆಗಳನ್ನಾದರೂ ಸ್ಥಾಪಿಸಬಹುದು. **ಶಿವ ಮತ್ತು ಶಾಸ್ತಾರನಲ್ಲಿ**– ಪ್ಲಕ್ಷ (ಅರಳಿ) ಉದುಂಬರ (ಅತ್ತಿ), ವಟ (ಆಲ), ಅಶ್ವತ್ಥ (ಅರಳಿ) ದ ತೋರಣಗಳು. **ಸುಬ್ರಹ್ಮಣ್ಯ, ಗಣಪತಿಯರಲ್ಲಿ**– ಪ್ಲಕ್ಷ, ಉದುಂಬರ, ಅಶ್ವತ್ಥ, ವಟಗಳು– ತೋರಣಗಳು.

**ಶಂಕರನಾರಾಯಣ, ವಿಷ್ಣುವಿನಲ್ಲಿ**– ಅಶ್ವತ್ಥ, ಉದುಂಬರ, ಪ್ಲಕ್ಷಗಳ ತೋರಣಗಳು. ದುರ್ಗಿಯಲ್ಲಿ– ಅಶ್ವತ್ಥ, ವಟ, ಉದುಂಬರ, ಪ್ಲಕ್ಷಗಳ ತೋರಣಗಳು ಕ್ರಮವಾಗಿ ಪೂರ್ವಾದಿ ದಿಕ್ಕುಗಳಲ್ಲಿ ಎಲ್ಲಾ ದೇವತೆಗಳಲ್ಲಿ ಬಿದಿರಿನ ಧ್ವಜದ ದಂಡಗಳಾಗಿವೆ. ದಾರ ಮತ್ತು ದರ್ಭೆಯ ಸುತ್ತಿದ ನಂತರ ಮಂಟಪದ ಪೂರ್ವದ ಬಾಗಿಲಲ್ಲಿ ಕುಳಿತು ಬಾಗಿಲಿನ ಎರಡು ಪಕ್ಕಗಳಲ್ಲಿ ಅಸ್ತ್ರಮಂತ್ರದಿಂದ ಕುಳಿ ತೋಡಿ (ಯಂ) ವಾಯುಬೀಜದಿಂದ ಮಣ್ಣನ್ನು ಹೊರಗೆ ಹಾಕಿ, ಗೋಮಯದ ನೀರಿನಿಂದ ತೋಯಿಸಿ, ಪ್ರಣವದಿಂದ ಗಂಧ, ಹೂವು, ಅಕ್ಷತೆ, ದರ್ಭೆಗಳನ್ನು ಕುಳಿಯಲ್ಲಿ ಹಾಕಿ, ಪದ್ಮಾಂತವಾಗಿ ಪೀಠವನ್ನು ಪೂಜಿಸಿ, ಪಲ್ಲವ ಮೊದಲಾದವುಗಳಿಂದ ಅಲಂಕರಿಸಿದ ತೋರಣವನ್ನು ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ, ಶೋಷಣ ಮೊದಲಾದುವನ್ನು ಮಾಡಿ ತಮ್ಮ ಮಂತ್ರದಿಂದ ಪ್ರಾಣಾಯಾಮವನ್ನು ಮಾಡಿ, ವ್ಯಾಪನೆ ಮಾಡಿ ಪ್ರಣವದಿಂದ ಅಂಗವನ್ನು ಮಾಡಿ ಪೂಜಿಸಬೇಕು. ಪುನಃ– **ಯೋಗೇ ಯೋಗೇ ತವಸ್ತರಂ ವಾಜೇ ವಾಜೇ ಹವಾಮಹೇ । ಸಖಾಯ ಇಂದ್ರ ಮೂರ್ತಯೇ**– ಈ ಮಂತ್ರದಿಂದ ಎರಡು ಪಾದಗಳಿಂದ ಮೇಲಿನ ಪಟ್ಟಿಯನ್ನು ಜೋಡಿಸಬೇಕು. **ದೇವಸ್ಯತ್ವಾ ಸವಿತುಃ ಪ್ರಸವೇಽಶ್ವಿನೋರ್ಭಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ**– ಈ ಮಂತ್ರದಿಂದ ಮೇಲಿನ ಪಟ್ಟಿಯಲ್ಲಿ ಶೂಲವನ್ನಿರಿಸಿ, ಸೇರಿಸಿ ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ ಶೋಷಣ ಮೊದಲಾದುವನ್ನು ಮಾಡಬೇಕು. **ಓಂ ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ । ಉಪ ಪ್ರಯಂತು ಮರುತಃ ಸುದಾನವ ಇಂದ್ರಪ್ರಾಶೂರ್ಭವ ಸಚಾ ॥ ಪ್ರಮೋದಾಯ ನಮಃ**– ಹೀಗೆ ಕುಳಿಯಲ್ಲಿಟ್ಟು ಹೊಂಡವನ್ನು ತುಂಬಿ– **ಪ್ರಮೋದಾಯ** ನಮಃ– **ಪ್ರಮೋದಮಾವಾಹಯಾಮಿ**– ಹೀಗೆ ಆವಾಹಿಸಿ ಪ್ರಣವದಿಂದ ಅಂಗವನ್ನು ಮಾಡಿ ಉಪಹಾರಗಳನ್ನು ಸಮರ್ಪಿಸಿ ಪೂಜಿಸಿ ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ಸಂರಕ್ಷಿಸಬೇಕು.

ಪುನಃ ಹೀಗೆಯೇ ದಕ್ಷಿಣದ ಬಾಗಿಲಿನಲ್ಲಿ ಈ ಕ್ರಮದಂತೆ ಮಾಡಿ **ಅಭಯಾಯ** ನಮಃ– **ಅಭಯಮಾವಾಹಯಾಮಿ**– ಇದೇ ಮೊದಲಾಗಿ ಹಿಂದಿನ ದ್ವಾರದಲ್ಲಿ ಮಾಡಿದಂತೆ ಎಲ್ಲವನ್ನೂ ಮಾಡಬೇಕು.

ಹೀಗೆ ಪಶ್ಚಿಮದ ಬಾಗಿಲಿನಲ್ಲಿಯೂ ಎಲ್ಲವನ್ನೂ ಮಾಡಿ **ಶಾಂತಾಯ** ನಮಃ– **ಶಾಂತಮಾವಾಹಯಾಮಿ**– ಹೀಗೆ ಎಲ್ಲವನ್ನೂ ಮಾಡಬೇಕು.

ಹೀಗೆಯೇ ಉತ್ತರದ ಬಾಗಿಲಿನಲ್ಲಿಯೂ ಹಿಂದೆ ಹೇಳಿದಂತೆ ಎಲ್ಲವನ್ನೂ ಮಾಡಿ, ಅಶ್ವತ್ಥ ತೋರಣವನ್ನಿರಿಸಿ, **ಮಹತೇ ನಮಃ– ಮಹಾಂತಮಾವಾಹಯಾಮಿ**– ಎಲ್ಲವನ್ನೂ ಮಾಡಿ ಪುಷ್ಪಾಂಜಲಿಯ ನಂತರ ಸಂರಕ್ಷಿಸಬೇಕು.

**ಸುಬ್ರಹ್ಮಣ್ಯನಲ್ಲಿ**– ಹೀಗೆಯೇ ಪೂರ್ವ ಮೊದಲಾಗಿ ನಾಲ್ಕು ಬಾಗಿಲುಗಳಲ್ಲಿ ಅಸ್ತಖನನ ಮೊದಲಾಗಿ ನಿಜಮಂತ್ರ ಪೂಜೆ ಪರ್ಯಂತವಾಗಿ ಮಾಡಿ– ಪೂರ್ವದಲ್ಲಿ– ವರದಾಯ ನಮಃ– ಎಂದು, ದಕ್ಷಿಣದಲ್ಲಿ– ಯಶೋದಾಯ ನಮಃ– ಎಂದೂ, ಪಶ್ಚಿಮದಲ್ಲಿ– ಪುಷ್ಟಿದಾಯ ನಮಃ– ಎಂದೂ, ಉತ್ತರದಲ್ಲಿ– ಶ್ರೀಪ್ರದಾಯ ನಮಃ– ಎಂದು ತೋರಣಗಳನ್ನು ಸ್ಥಾಪಿಸಿ, ಆಯಾಯ ಮಂತ್ರಗಳಿಂದ ಆವಾಹನೆ ಮಾಡಿ ಪೂಜಿಸಿ, ಅರ್ಘ್ಯವನ್ನು ಬಿಟ್ಟು ಪುಷ್ಪಾಂಜಲಿಯನ್ನು ಮಾಡಿ ರಕ್ಷಣೆಯನ್ನು ಮಾಡಬೇಕು. (ಇದು ಶಿವನಲ್ಲಿ)

**ವಿಷ್ಣುವಿನಲ್ಲಿ**– ಪೂರ್ವಾದಿಯಾಗಿ– **ಓಂ ರಾಂ ಸಹಸ್ರಾಹುಂಫಟ್**– ಹೀಗೆ ಅಸ್ತ್ರಖನನಾದಿ ನಿಜಮಂತ್ರ ಪೂಜಾಪರ್ಯಂತವಾಗಿ ಮಾಡಿ **ಸ್ಯೋನಾಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ**– **ಶೋಭನಾಯ** ನಮಃ– ಹೀಗೆ ಪೂರ್ವದಿಕ್ಕಿನಲ್ಲೂ, ದಕ್ಷಿಣದಲ್ಲಿ– ಮಂತ್ರದೊಂದಿಗೆ ಸುಭದ್ರಾಯ ನಮಃ– ಎಂದು, ಪಶ್ಚಿಮದಲ್ಲಿ– (ಸ್ಯೋನಾ) ಸುಕರ್ಮಣೇ ನಮಃ– ಎಂದೂ, ಉತ್ತರದಲ್ಲಿ– (ಸ್ಯೋನಾ) ಸುಹೋತ್ರಾಯ ನಮಃ– ಎಂದು ತೋರಣಗಳನ್ನು ಸ್ಥಾಪಿಸಿ, ಆಯಾಯ ಸ್ಥಾನದಲ್ಲಿ ಆಯಾಯ ಮಂತ್ರದಿಂದಾವಾಹಿಸಿ, ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿ ಮಾಡಿ ರಕ್ಷಿಸಬೇಕು.

ಪುನಃ **ದುರ್ಗಾ, ಶಾಸ್ತಾರ, ಗಣಪತಿಯರಲ್ಲಿ**– ಅಸ್ತ್ರಖನನ ಮೊದಲುಗೊಂಡು, * * ಪ್ರಾಶೂರ್ಭವಾಸಚಾ– ಈ ಮಂತ್ರದ ಅನಂತರ– ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವ ಮೃತ್ವಿಜಂ । ಹೋತಾರಂ ರತ್ನಧಾತಮಂ ॥ ದುರ್ಗಿಯಲ್ಲಿ ಯಜ್ಞೇಶಾಯ ನಮಃ– ಎಂದು ಶಾಸ್ತಾರನಲ್ಲಿ– ಆರ್ಯಾಯ ನಮಃ– ಎಂದು, ಗಣಪತಿಯಲ್ಲಿ– ಸುಪೂರ್ಣಾಯ ನಮಃ– ತೋರಣಗಳನ್ನು ಸ್ಥಾಪಿಸಿ, ಆವಾಹಿಸಿ, ಪೂಜಿಸಿ ಅರ್ಘ್ಯವನ್ನಿತ್ತು ಪುಷ್ಪಾಂಜಲಿಯನ್ನು ಮಾಡಿ ರಕ್ಷಿಸಬೇಕು.

ದಕ್ಷಿಣದಿಕ್ಕಿನಲ್ಲಿ ಹಿಂದಿನಂತೆ ಮಾಡಿ ಉತ್ತಿಷ್ಠ ಮಂತ್ರಾನಂತರದಲ್ಲಿ– **ಇಷೇತ್ವೋರ್ಜೇತ್ವಾವಾಯವಸ್ಥೋಪಾಯವಸ್ಥ ದೇವೋವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯಕರ್ಮಣೇ** ॥ ದುರ್ಗಿಯಲ್ಲಿ– ಪ್ರಭಾಕರಾಯ ನಮಃ– ಶಾಸ್ತಾರನಲ್ಲಿ– ಶಾಸ್ತ್ರೇನಮಃ– ಗಣಪತಿಯಲ್ಲಿ– ಪೂರ್ಣಭದ್ರಾಯ ನಮಃ– ಎಂದು ತೋರಣಗಳನ್ನು ಸ್ಥಾಪಿಸಿ, ಆವಾಹನ ಪೂಜೆ ಅರ್ಘ್ಯಗಳನ್ನು ಮಾಡಿ ಪುಷ್ಪಾಂಜಲಿಯನ್ನು ಮಾಡಿ ಸಂರಕ್ಷಿಸಬೇಕು.

ಪಶ್ಚಿಮದಿಕ್ಕಿನಲ್ಲಿ ಹಿಂದಿನಂತೆ ಮಾಡಿ **ಅಗ್ನ ಆಯಾಹಿ ವೀತಯೇ ಗೃಣಾನೋಹವ್ಯದಾತಯೇ । ನಿಹೋತಾಸತ್ಸಿಬರ್ಹಿಷಿ ॥** ದುರ್ಗಿಯಲ್ಲಿ– ಮಂಗಲಾಯ ನಮಃ । ಶಾಸ್ತಾರನಲ್ಲಿ– ಗುಹಾಸನಾಯ ನಮಃ । ಗಣಪತಿಯಲ್ಲಿ– ಪ್ರಶಾಂತಾಯ ನಮಃ– ಹೀಗೆ ತೋರಣ ಕಂಬವನ್ನು ಕುಳಿಯಲ್ಲಿಟ್ಟು ಕುಳಿಯನ್ನು ತುಂಬಿ ಆವಾಹನಾದಿಗಳನ್ನು ಹಿಂದಿನಂತೆ ಮಾಡಿ ಅರ್ಘ್ಯ ಪ್ರಧಾನಾ ನಂತರ ಪುಷ್ಪಾಂಜಲಿಯನ್ನು ಮಾಡಿ ರಕ್ಷಿಸಬೇಕು. ಹೀಗೆಯೇ ಉತ್ತರದ ಬಾಗಿಲಿನಲ್ಲಿ ಹಿಂದಿನಂತೆ ಎಲ್ಲವನ್ನೂ ಮಾಡಿ **ಓಂ ಶಂನೋ ದೇವೀರಭಿಷ್ಟಯ ಆಪೋಭವಂತು ಪೀತಯೇ । ಶಂ ಯೋ ರಭಿಸ್ರವಂತು ನಃ ॥** ದುರ್ಗಿಯಲ್ಲಿ– ಸುಪ್ರಭಾಯ ನಮಃ । ಶಾಸ್ತಾರನಲ್ಲಿ– ಸೇನಾನ್ಯೈನಮಃ । ಗಣಪತಿಯಲ್ಲಿ– ವಿಜಯಾಯ ನಮಃ– ಹೀಗೆ ತೋರಣದೇವತೆಗಳ ನಾಮಮಂತ್ರದೊಡನೆ ತೋರಣದ ಕಂಬಗಳನ್ನು ಕುಳಿಯಲ್ಲಿರಿಸಿ, ನಿಜತೋರಣ ಮಂತ್ರಗಳಿಂದಾವಾಹಿಸಿ ಪ್ರಣವದಿಂದ ಸಕಲೀಕರಣವನ್ನು ಮಾಡಿ, ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ರಕ್ಷಣೆಯನ್ನು ಮಾಡಬೇಕು.

**ಶಂಕರನಾರಾಯಣನಲ್ಲಿ**– ಹಿಂದಿನಂತೆಯೇ **ಓಂ ಶ್ಲೀಂ ಪಶು ಹುಂಫಟ್** ಎಂದು ಅಸ್ತ್ರಖನನ ಮೊದಲುಗೊಂಡು ಅಶ್ವತ್ಥತೋರಣವನ್ನು ಪ್ರೋಕ್ಷಣೆ ಮೊದಲಾದ ಸಂಸ್ಕಾರವನ್ನು ಮಾಡಿ ಸುಮಂಗಲಾಯ ನಮಃ– ನಾಮ ಮಂತ್ರದೊಡನೆ ಕುಳಿಯಲ್ಲಿರಿಸಿ, ಆವಾಹನಾದಿಗಳನ್ನು ಮಾಡಿ, ಪುಷ್ಪಾಂಜಲಿಯನ್ನು ಮಾಡಿ ಸಂರಕ್ಷಣೆ ಮಾಡಬೇಕು. (ಇದು ಪೂರ್ವದಲ್ಲಿ) ದಕ್ಷಿಣಾದಿ ದಿಕ್ಕುಗಳಲ್ಲಿ ಹಿಂದಿನಂತೆಯೇ ಎಲ್ಲಾ ಮಾಡಿ– ತೋರಣ ಉದುಂಬರ, ಆವಾಹನ ಮಂತ್ರ– ಸುಹೋತ್ರಾಯ ॥ ಪಶ್ಚಿಮದಲ್ಲಿ ವಟ ತೋರಣ, ಆವಾಹನ ಮಂತ್ರ– ಕಲ್ಯಾಣಾಯ ॥ ಉತ್ತರದಲ್ಲಿ– ಪ್ಲಕ್ಷ ತೋರಣ, ಆವಾಹನ ಮಂತ್ರ– ಭದ್ರಕಾಯ ನಮಃ ॥ ಪ್ರತಿದಿಕ್ಕಿನಲ್ಲಿಯೂ (ದ್ವಾರದಲ್ಲಿ) ಅಸ್ತ್ರಖನನ, ತೋರಣ ಸಂಸ್ಕಾರ ಮೊದಲಾಗಿ ಆವಾಹನ ಪುಷ್ಪಾಂಜಲಿ ಪರ್ಯಂತ ಮಾಡಿ ಸಂರಕ್ಷಣೆ ಮಾಡಬೇಕು. ಆಮೇಲೆ ಪೂರ್ವಾದಿ ಎಂಟುದಿಕ್ಕುಗಳಲ್ಲಿ ಧ್ವಜಗಳನ್ನು ಸ್ಥಾಪಿಸಬೇಕು. ಪುನಃ ಪೂರ್ವದ ಬಾಗಿಲಿನ ಹತ್ತಿರ ಕುಳಿತು ಆ ಬಾಗಿಲಿನ ದಕ್ಷಿಣದ ಪಕ್ಕದಲ್ಲಿ ಗೋಡೆ ತೋರಣಗಳ ನಡುವೆ ಅಸ್ತ್ರಖನನಾದಿ ಎಲ್ಲವನ್ನೂ ಮಾಡಿ ಧ್ವಜಕ್ಕೆ ಸಂಸ್ಕಾರವನ್ನು ಮಾಡಿ ನಿಜಮಂತ್ರದಿಂದ ಪೂಜಿಸಿ, ನಿಜಮಂತ್ರದಿಂದಲೇ ಸ್ಥಾಪನೆ ಮಾಡಿ ಆವಾಹಿಸಿ, ಪ್ರಣವದಿಂದ ಸಕಲೀಕರಣವನ್ನು ಮಾಡಿ ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ಸಂರಕ್ಷಿಸಬೇಕು. ಹೀಗೆ ಆಗ್ನೇಯ ಮೊದಲಾದ ದಿಕ್ಕಿನಲ್ಲಿ ಧ್ವಜಗಳನ್ನು ಸ್ಥಾಪಿಸಬೇಕು. ಅಲ್ಲಿ ದಕ್ಷಿಣದ ಬಾಗಿಲಿನಲ್ಲಿ ಪಶ್ಚಿಮದ ಪಕ್ಕದಲ್ಲಿ, ಪಶ್ಚಿಮದ ಬಾಗಿಲಿನಲ್ಲಿ ಉತ್ತರ ಭಾಗದಲ್ಲಿ, ಉತ್ತರದ ಬಾಗಿಲಿನಲ್ಲಿ ಪೂರ್ವಭಾಗದಲ್ಲಿ ಧ್ವಜವಿರಿಸಬೇಕೆಂದು ನಿಯಮವು. ಹೀಗೆ ವಿಷ್ಣು, ಶಿವ, ಸುಬ್ರಹ್ಮಣ್ಯ, ಗಣಪತಿ, ಶಾಸ್ತಾರನಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಧ್ವಜವನ್ನು ಸ್ಥಾಪಿಸಬೇಕು. ಶಿವನಲ್ಲಿ ಈಶಾನ್ಯದಿಕ್ಕಿನಲ್ಲಿ ಇನ್ನೊಂದು ಧ್ವಜವನ್ನು ಸ್ಥಾಪಿಸಬೇಕು. ಶಂಕರನಾರಾಯಣ, ದುರ್ಗಿಯರಲ್ಲಿ ಪೂರ್ವವೇ ಮೊದಲಾಗಿ ನಾಲ್ಕು ಬಾಗಿಲುಗಳಲ್ಲಿ ಬಲ ಎಡ ಪಕ್ಕಗಳಲ್ಲಿ ಎರಡೆರಡು ಧ್ವಜಗಳನ್ನು ಸ್ಥಾಪಸಿಬೇಕು.

**ಧ್ವಜಮಂತ್ರಗಳು– ವಿಷ್ಣುವಿನಲ್ಲಿ**– ಕುಮುದಾಯ ನಮಃ । ಕುಮುದಾಕ್ಷಾಯ । ಪುಂಡರೀಕಾಯ । ವಾಮನಾಯ । ಶಂಕುಕರ್ಣಾಯ । ಸರ್ವನೇತ್ರಾಯ । ಸುಮುಖಾಯ । ಸುಪ್ರತಿಷ್ಠಿತಾಯ ನಮಃ ॥

**ಶಿವನಲ್ಲಿ**– ಭೃಂಗೀಶಾಯ ನಮಃ । ಕಾರ್ತಿಕೇಯಾಯ । ವೃಷಾಯ । ನಂದೀಶಾಯ । ಮಹಾಕಾಲಾಯ । ಕುಂಭೋದರಾಯ ಮಹೋದರಾಯ । ವೀರಭದ್ರಾಯ ನಮಃ । ಬ್ರಹ್ಮಣೇ ನಮಃ ॥

**ಶಂಕರನಾರಾಯಣನಲ್ಲಿ**– ನಂದಿನೇ ಕುಮುದಾತ್ಮನೇ ನಮಃ । ಮಹಾಕಾಲಾಯ ಕುಮುದಾಕ್ಷಾತ್ಮನೇ । ಭೂತನಾಥಾಯ ಪುಂಡರೀಕಾತ್ಮನೇ । ಮಹೀಧರಾಯ ವಾಮನಾತ್ಮನೇ । ಪರ್ವತೇಶಾಯ ಶಂಕುಕರ್ಣಾತ್ಮನೇ । ಗುಹೇಶಾಯ ಸರ್ವನೇತ್ರಾತ್ಮನೇ ಕಾಲಪಾಶಾಯ ಸುಮುಖಾತ್ಮನೇ ನಮಃ । ಕಪಾಲಿನೇ ಸುಪ್ರತಿಷ್ಠಿತಾತ್ಮನೇ ನಮಃ ॥ (ಅಥವಾ ಭೃಂಗೀಶಾಯ ಕುಮುದಾತ್ಮನೇ ಕಾರ್ತಿಕೇಯಾಯ ಕುಮುದಾಕ್ಷಾತ್ಮನೇ । ವೃಷಾಯ ಪುಂಡರೀಕಾತ್ಮನೇ । ನಂದೀಶಾಯ ವಾಮನಾತ್ಮನೇ । ಮಹಾಕಾಲಾಯ ಶಂಕುಕರ್ಣಾತ್ಮನೇ । ಕುಂಭೋದರಾಯ ಸರ್ವನೇತ್ರಾತ್ಮನೇ । ಮಹೋದರಾಯ ಸಮುಖಾತ್ಮನೇ ನಮಃ । ವೀರಭದ್ರಾಯ ಸುಪ್ರತಿಷ್ಠಾತ್ಮನೇ ನಮಃ । ಬ್ರಹ್ಮಣೇ ನಮಃ ॥)

**ದುರ್ಗಿಯಲ್ಲಿ**– ಕಾಳ್ಯೈ ನಮಃ । ಕರಾಳ್ಯೈ । ವಿರಜಾಯೈ ಮಂದರಾಯೈ । ವಿಂಧ್ಯವಾಸಿನ್ಯೈ । ಸುಪ್ರಭಾಯೈ । ಸಿಂಹವಕ್ತ್ರಾಯೈ । ದೈತ್ಯಮರ್ದಿನ್ಯೈ ನಮಃ ॥

**ಶಾಸ್ತಾರನಲ್ಲಿ**– ಗೋಪ್ತ್ರೇ । ಪಿಂಗಲಾಕ್ಷಾಯ । ವೀರಸೇನಾಯ । ಶಾಂಭವಾಯ । ತ್ರಿಣೇತ್ರಾಯ । ಶೂಲಿನೇ । ದಕ್ಷಾಯ ನಮಃ । ಭೀಮರೂಪಾಯ ನಮಃ ॥

**ಸುಬ್ರಹ್ಮಣ್ಯ ಮತ್ತು ಗಣಪತಿಯರಲ್ಲಿ**– ಇಂದ್ರಾಯ ನಮಃ ಮೊದಲುಗೊಂಡು ಎಂಟು ದಿಕ್ಪಾಲಕರು. ಹೀಗೆ ಎಲ್ಲಾ ದೇವತೆಗಳಲ್ಲಿಯೂ ಧ್ವಜದೇವತೆಗಳು ಹೇಳಲ್ಪಟ್ಟರು. ಹೀಗೆ ಮೂರು ಪ್ರದಕ್ಷಿಣೆಯೊಂದಿಗೆ ದಾರಸುತ್ತುವಿಕೆಯೇ ಮೊದಲಾಗಿ

ಧ್ವಜಸ್ಥಾಪನೆಯೇ ಕೊನೆಯಾಗಿ, ಮಾಡಿ ಪುನಃ ತಮ್ಮ ನಿಜ ಮಂತ್ರಗಳಿಂದ ತೋರಣಗಳನ್ನು ಪೂಜಿಸಿ, ಬಲಿಯನ್ನು ಹಾಕಬೇಕು. ಪುನಃ ಧ್ವಜಗಳನ್ನು ತಮ್ಮ ಹೆಸರುಗಳಿಂದ ಪೂಜಿಸಿ ಬಲಿಯನ್ನು ಮಾಡಬೇಕು. ಇದೆಲ್ಲವನ್ನೂ ವಾದ್ಯ ಘೋಷದೊಂದಿಗೆ ಮಾಡಬೇಕು. ಆಮೇಲೆ ಕೈಕಾಲು ತೊಳೆದು ಆಚಮನ ಮಾಡಿ ಮಂಟಪದ ಒಳಗೆ ಬಂದು ದ್ವಾರಕಲಶ ಪೂಜಾದಿಗಳನ್ನು ಮಾಡಬೇಕು. ವಿಷ್ಣು, ಸುಬ್ರಹ್ಮಣ್ಯ, ಗಣಪತಿ, ಶಾಸ್ತಾರ ಮತ್ತು ಶಿವನಲ್ಲಿ ಮಂಟಪದ ಪೂರ್ವ ಮೊದಲಾದ ದ್ವಾರದ ಪಕ್ಕಗಳಲ್ಲಿಯೂ ಬಲ ಎಡದ ಕ್ರಮದಿಂದ ತುಂಬಿದ ಎಲ್ಲಾ ಕಲಶಗಳಲ್ಲಿ ಎರಡೆರಡು ದ್ವಾರ ದೇವತೆಗಳನ್ನು ಪೂಜಿಸಬೇಕು. ಇದು ಇಲ್ಲಿ ಆಚರಣೆಯ ಕ್ರಮವು. ಮಂಟಪದ ಪೂರ್ವದ ಬಾಗಿಲಲ್ಲಿ ದಕ್ಷಿಣ ಉತ್ತರ ಕ್ರಮದಿಂದ, ದಕ್ಷಿಣದ ದ್ವಾರದಲ್ಲಿ ಪಶ್ಚಿಮ ಪೂರ್ವ ಕ್ರಮದಿಂದ, ಪಶ್ಚಿಮ ದ್ವಾರದಲ್ಲಿ ಉತ್ತರ ದಕ್ಷಿಣ ಕ್ರಮದಿಂದ ಉತ್ತರದ ಬಾಗಿಲಿನಲ್ಲಿ ಪೂರ್ವ ಪಶ್ಚಿಮ ಕ್ರಮದಿಂದ– ಹೀಗೆ ಎಂಟು ಸ್ವಸ್ತಿಕವನ್ನು ಬರೆದು, ತಿರುಗಿ ತೋರಣ ಕಲಶಕ್ಕಾಗಿ ಅರ್ಗಳ (ಕೀಲಿ) ದಲ್ಲಿನ ಸ್ವಸ್ತಿಕಗಳ ಪಶ್ಚಿಮೋತ್ತರ, ಪೂರ್ವದ ದಕ್ಷಿಣ ಭಾಗಗಳಲ್ಲಿ ಒಂದೊಂದು ಸ್ವಸ್ತಿಕ ಬರೆದು ಹೀಗೆ ಹನ್ನೆರಡು ಸ್ವಸ್ತಿಕಗಳಲ್ಲಿ ಬತ್ತಗಳಿಂದ ಪೀಠವನ್ನು ರಚಿಸಿ ದರ್ಭೆಗಳನ್ನಿರಿಸಿ ಹನ್ನೆರಡು ಕಲಶಗಳನ್ನು ತೊಳೆದು ನೂಲುಗಳಿಂದ ಸುತ್ತಿ ಕೆಳಮುಖನಾಗಿ ಇಡಬೇಕು. ಪುನಃ ಅಲ್ಲಿ ಕುಳಿತುಕೊಂಡು ಸಕಲೀಕರಣ ಮೊದಲಾದುವುಗಳನ್ನು ಮಾಡಿ ಪದ್ಮಪರ್ಯಂತ ಪೀಠಪೂಜೆಯನ್ನು ಮಾಡಿ ಶೋಷಣ ಮೊದಲಾದುವುಗಳನ್ನು ಮಾಡಿ, ದರ್ಭನ್ಯಾಸಾದಿ ಕುಂಭಸಂಸ್ಕಾರಗಳನ್ನು ಮಾಡಿ, ಮೇಲ್ಮುಖನಾಗಿಸಿ, ಪೀಠದಲ್ಲಿರಿಸಿ ಕೂರ್ಚನ್ನಿರಿಸಿ ಆಯಾಯ ನಿಜಮಂತ್ರಗಳಿಂದ ನೀರನ್ನು ತುಂಬಿಸಿ ಪಲ್ಲವ (ಚಿಗುರುಕೊಡಿ) ಚಕ್ರಿಕೆ ಮೊದಲಾದುವನ್ನಿರಿಸಿ ಆಯಾಯ ನಿಜಮಂತ್ರಗಳಿಂದ ಆವಾಹಿಸಿ ಪ್ರಣವದಿಂದ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ಬಟ್ಟೆಯಿಂದ ಮುಚ್ಚಿ ಕಾಪಾಡಬೇಕು. ಹೀಗೆ ವಿಷ್ಣುವಿನಲ್ಲಿ ದ್ವಾರಕಲಶಗಳನ್ನು ತೋರಣಕಲಶಗಳನ್ನೂ ಪೂಜಿಸಬೇಕು. ಶಿವನಲ್ಲಿ ಹೀಗೆ ದ್ವಾರಕಲಶಗಳನ್ನೂ ತೋರಣಕಲಶಗಳನ್ನೂ ಪೂಜಿಸಿ, ಪೂರ್ವ ಮೊದಲಾದ ಬಾಗಿಲಿನಲ್ಲಿ ಮಧ್ಯದಲ್ಲಿ ಮಂಡಲವನ್ನು ಬರೆದು ದರ್ಭೆಗಳನ್ನಿರಿಸಿ ಅಲ್ಲಿ ದೇವತೆಗಳನ್ನು ಪೂಜಿಸಬೇಕು. ಗುಹನಲ್ಲಿ ಹೀಗೆ ಎಂಟು ದ್ವಾರ ಕಲಶಗಳನ್ನು ಪೂಜಿಸಿ ದ್ವಾರದ ನಡುವೆ ದ್ವಾರದೇವತೆಗಳನ್ನು ಪೂಜಿಸಿದರೂ ಪೂಜಿಸಬಹುದು. ಗಣಪತಿ ಹಾಗೂ ಶಾಸ್ತಾರನಲ್ಲಿ ಹೀಗೆ ಎಂಟು ದ್ವಾರ ಕಲಶಗಳನ್ನು ಮಾತ್ರ ಪೂಜಿಸಬೇಕು. ಶಂಕರನಾರಾಯಣನಲ್ಲಿ ಪೂರ್ವಾದಿ ದ್ವಾರಶಾಖೆಗಳಲ್ಲಿ ಹೀಗೆ ಎಂಟು ದ್ವಾರದೇವತೆಗಳನ್ನು ಪೂಜಿಸಬೇಕು.  ಪುನಃ ಪೂರ್ವ ಮೊದಲಾದ ಎಂಟು ದಿಕ್ಕುಗಳಲ್ಲಿ ಸ್ವಸ್ತಿಕ ಮೊದಲಾಗಿ ಬರೆದು ಕಲಶಗಳನ್ನು ಅಳವಡಿಸಿ (ಆಸಾದನ ಮಾಡಿ) ಪೀಠವನ್ನು ಪೂಜಿಸಿ ಕಲಶದ ಸಂಸ್ಕಾರಗಳನ್ನು ಮಾಡಿ, ಕೂರ್ಚವನ್ನಿರಿಸಿ, ಇಂದ್ರ ಮೊದಲಾದ ಮಂತ್ರಗಳಿಂದ ನೀರು ತುಂಬಿಸಿ ಪಲ್ಲವ ಮೊದಲಾದವನ್ನಿರಿಸಿ ಇಂದ್ರ ಮೊದಲಾದ ಲೋಕಪಾಲರನ್ನು ಮಂತ್ರಗಳಿಂದಾವಾಹಿಸಿ ಓಂಕಾರದಿಂದ ಸಕಲೀಕರಣವನ್ನು ಮಾಡಿ ಪೂಜಿಸಿ, ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವಸ್ತ್ರದಿಂದ ಮುಚ್ಚಿಟ್ಟು ಸಂರಕ್ಷಿಸಬೇಕು. ಅಲ್ಲಿ ದಿಕ್ಕುಗಳಲ್ಲಿ ಅರ್ಗಲ ಸ್ಥಾನದಲ್ಲಿ ಕಲಶ ಸ್ಥಾನವು. ಬಾಗಿಲಿನ ಮಧ್ಯದಲ್ಲಿ ದ್ವಾರ ದೇವತೆಗಳನ್ನು ಪೂಜಿಸಬೇಕು. ದುರ್ಗೆಯಲ್ಲಿ– ಹೀಗೆಯೇ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಕಲಶಗಳಲ್ಲಿ ಇಂದ್ರನೇ ಮೊದಲಾಗಿ ಎಂಟು ಲೋಕಪಾಲಕರನ್ನೇ ಪೂಜಿಸಬೇಕು. ಮಂತ್ರಗಳು ಬರೆಯಲ್ಪಡುತ್ತವೆ. ಪೂರ್ಣಾಯ । ಪುಷ್ಕರಾಯ– ಹೀಗೆ ಪೂರ್ವದ್ವಾರದಲ್ಲಿ ದಕ್ಷಿಣೋತ್ತರ ಕ್ರಮದಿಂದ, ಆನಂದಾಯ । ನಂದನಾಯ– ಹೀಗೆ ದಕ್ಷಿಣದ್ವಾರದಲ್ಲಿ ಪಶ್ಚಿಮ ಪೂರ್ವ ಕ್ರಮದಿಂದ, ವೀರ ಸೇನಾಯ । ಸುಷೇಣಾಯ– ಹೀಗೆ ಪಶ್ಚಿಮದ್ವಾರದಲ್ಲಿ ಉತ್ತರ ದಕ್ಷಿಣ ಕ್ರಮದಿಂದ– ಸಂಭವಾಯ । ಪ್ರಭವಾಯ– ಹೀಗೆ ಉತ್ತರ ದ್ವಾರದಲ್ಲಿ ಪೂರ್ವ ಪಶ್ಚಿಮ ಕ್ರಮದಿಂದ– ಹೀಗೆ ವಿಷ್ಣುವಿನಲ್ಲಿ– ದ್ವಾರಪಾಲಕರು. ಮಹೋದರಾಯ । ಮಹಾಕಾಲಾಯ ಹೀಗೆ ಪೂರ್ವದ್ವಾರದಲ್ಲಿ ದಕ್ಷಿಣೋತ್ತರ ಕ್ರಮದಿಂದ ಮಹಾಕಂಠಾಯ । ಮಹೋರಸ್ಕಾಯ– ಹೀಗೆ ದಕ್ಷಿಣದ್ವಾರದಲ್ಲಿ ಪಶ್ಚಿಮ ಪೂರ್ವಕ್ರಮದಿಂದ– ಅಗ್ನಿಜಿಹ್ವಾಯ । ಅಗ್ನಿನೇತ್ರಾಯ– ಹೀಗೆ ಪಶ್ಚಿಮದ ದ್ವಾರದಲ್ಲಿ ಉತ್ತರ ದಕ್ಷಿಣ ಕ್ರಮದಿಂದ ವಿರೂಪಾಕ್ಷಾಯ ವಿಶಾಲಾಕ್ಷಾಯ । ಹೀಗೆ ಉತ್ತರದ ಬಾಗಿಲಲ್ಲಿ ಪೂರ್ವಪಶ್ಚಿಮ ಕ್ರಮದಿಂದ– ಹೀಗೆ ಶಿವನಲ್ಲಿ ದ್ವಾರಪಾಲಕರು. ವೀರಸೇನಾಯ। ಮಹಾಸೇನಾಯ ॥ ೧ ॥ ಸುಸೇನಾಯ । ಭದ್ರಸೇನಾಯ ॥ ೨ ॥ ಚಾರುಸೇನಾಯ । ಸುಷೇಣಾಯ ॥ ೩ ॥ ಪೂರ್ಣಸೇನಾಯ। ಚಿತ್ರಸೇನಾಯ ॥ ೪ ॥ –ಹೀಗೆ ಗುಹನಲ್ಲಿ ದ್ವಾರಪಾಲಕರು. ವಜ್ರದಂತಾಯ । ಗಜಾಸ್ಯಾಯ ॥ ೧ ॥ ಭೀಮಾಯ । ಮಹಿಷಾಸ್ಯಾಯ ॥ ೨ ॥ ಮೇಘನಾದಾಯ । ವಿರೂಪಾಕ್ಷಾಯ ॥ ೩ ॥ ವರದಾಯ । ಸರ್ವಭಕ್ಷಕಾಯ ॥ ೪ ॥ –ಹೀಗೆ ಗಣಪತಿಯಲ್ಲಿ ದ್ವಾರದೇವತೆಗಳು. ವೀರಬಾಹವೇ । ಮಹಾವೀರಾಯ ॥ ೧ ॥ ವಿದ್ಯುದ್ದಂತಾಯ । ವಿಲಾಸಿನೇ ॥ ೨ ॥ ತೀಕ್ಷ್ಣಾಯ । ತೀಕ್ಷ್ಣದಂತಾಯ ॥ ೩ ॥ ತಾರಾಕ್ಷಾಯ । ಭವೋದ್ಭವಾಯ ॥ ೪ ॥ –ಹೀಗೆ ಶಾಸ್ತಾರನಲ್ಲಿ ದ್ವಾರಪಾಲಕರು. ಮಹೋದರಾಯ ಪೂರ್ಣಾತ್ಮನೇ । ಮಹಾಕಾಯಾಯ ಪುಷ್ಕರಾತ್ಮನೇ ॥ ೧ ॥ ಮಹಾಕಂಠಾಯಾನಂದಾತ್ಮನೇ । ಮಹೋರಸ್ಕಾಯ ನಂದಾತ್ಮನೇ ॥ ೨ ॥ ಅಗ್ನಿಜಿಹ್ವಾಯ ವೀರಸೇನಾತ್ಮನೇ । ಅಗ್ನಿನೇತ್ರಾಯ ಸುಷೇಣಾತ್ಮನೇ ॥ ೩ ॥ ವಿರೂಪಾಕ್ಷಾಯ ಸಂಭವಾತ್ಮನೇ ವಿಶಾಲಾಕ್ಷಾಯ ಪ್ರಭವಾತ್ಮನೇ ॥ ೪ ॥ –ಹೀಗೆ ಶಂಕರನಾರಾಯಣನಲ್ಲಿ ದ್ವಾರಪಾಲಕರು.

## ತೋರಣ ಕಲಶಮಂತ್ರಗಳು

ಶಿವನಲ್ಲಿ- ಸಹಸ್ರವೀಚ್ಯೈ । ವಿಮಲಾಯ್ಯೈ । ಶತಧಾರಾಯ್ಯೈ । ಪ್ರಮೋದಿನ್ಯೈ ನಮಃ ॥ * ॥ ಇಂದ್ರಾಯ ಸುರಾಧಿಪತಯೇ ಸಾಯುಧ ಸವಾಹನ ಸಪರಿವಾರಾಯ ನಮಃ । ಯಮಾಯ ಪ್ರೇತಾಧಿಪತಯೇ ಸಾಯುಧಾಯ ಸವಾಹನ ಸಪರಿವಾರಾಯ ನಮಃ । ವರುಣಾಯ ಜಲಾಧಿಪಾಯ ಸಾಯುಧವಾಹನಾಯ ಸಪರಿವಾರಾಯ ನಮಃ । ಸೋಮಾಯ ನಕ್ಷತ್ರಾಧಿಪತಯೇ ಸಾಯುಧವಾಹನಪರಿವಾರಾಯ ನಮಃ- ಇದು ವಿಷ್ಣುವಿನಲ್ಲಿ ತೋರಣ ಕಲಶಮಂತ್ರವು ॥ * ॥ ಕುಂಭಕರ್ಣಾಯ । ಭದ್ರಕರ್ಣಾಯ । ಶ್ವೇತಕರ್ಣಾಯ । ಗೋಕರ್ಣಾಯ –ಹೀಗೆ ಶಂಕರನಾರಾಯಣನಲ್ಲಿ ತೋರಣ ಕಲಶ ಮಂತ್ರಗಳು. ದ್ವಾರ ದೇವತೆಗಳೆಂದು ಮೂಲದಲ್ಲಿ ಈ ದೇವತೆಗಳನ್ನು ಹೇಳಲಾಗಿದೆ. ಸುಬ್ರಮ್ಹಣ್ಯನಲ್ಲಿ ದ್ವಾರಕಲಶವು ವಿಕಲ್ಪವು.

* * * *

## ಮಂಟಪಸಂಸ್ಕಾರ

ಮಂಟಪದ ವೇದಿಕೆಯಲ್ಲಿ ಜನರ ಅತ್ತಿತ್ತ ಓಡಾಟವನ್ನು ನಿಲ್ಲಿಸಿ ದರ್ಭೆ ಮೊದಲಾದುವನ್ನು ತೆಗೆದುಹಾಕಿ ಸ್ವಲ್ಪ ಗುಡಿಸಿ, ಸಾಧಾರಣ ಶುದ್ಧಿಗಾಗಿ ಸ್ವನೀರಿನಿಂದ ಚಿಮುಕಿಸಿ ಪ್ರಾಸಾದ ಶುದ್ಧಿಯಲ್ಲಿ ಹೇಳಿದ ಕ್ರಮದಂತೆ ಹರಡಿಸಿಟ್ಟ ದರ್ಭಮುಷ್ಟಿ ಮೊದಲಾದ ದ್ರವ್ಯಗಳಿಂದ ಆಗ್ನೇಯ ಮೂಲೆಯಿಂದ ಈಶಾನ್ಯ ಕೋಣ ಪರ್ಯಂತವಾಗಿ ಆಯಾಯ ಸಂದರ್ಭದಲ್ಲಿ ಅಧಿವಾಸ ಕುಂಡಗಳನ್ನು ಕುಂಭೇಶ ಸ್ಥಳವನ್ನೂ ಶುದ್ಧೀಕರಿಸಬೇಕು. 'ಯಂ' ಎಂದು ಮುಷ್ಟಿಯಿಂದ ಗುಡಿಸಿ, 'ವಂ' ಎಂದು ಗೋಮಯ ಜಲದಿಂದ ಸಿಂಪಡಿಸಿ, 'ರಂ' ಎಂದು ಸಾಸಿವೆಯನ್ನು ಚೆಲ್ಲಿ, 'ಯಂ' ಎಂದು ಪುನಃ ದರ್ಭೆ ಮುಷ್ಟಿಯಿಂದ ಗುಡಿಸಿ ಸಾಸಿವೆಯನ್ನು ಸಂಗ್ರಹಿಸಿ ಈಶಾನ್ಯ ಮೂಲೆಯಲ್ಲಿರಿಸಬೇಕು. 'ವಂ' ಎಂದು ಪುನಃ ಗೋಮಯೋದಕದಿಂದ ಸಿಂಪಡಿಸಬೇಕು. ಪಂಚತತ್ತ್ವಗಳಿಂದ ಮಂಟಪವನ್ನು ಸಿಂಪಡಿಸಿ, ಮೂಲದಿಂದ ವಿಕಿರವನ್ನು– ಪೂರ್ವಾಭಿಮುಖವಾಗಿ ನಿಂತುಕೊಂಡು, ಮಂಟಪವನ್ನು ಶಕ್ತ್ಯಾತ್ಮಕವೆಂದು ಭಾವಿಸಿ, ಮೇಲ್ಮುಖವಾದ ಅಂಗೈಯಿಂದ– ಮಂಟಪದ ಮಧ್ಯದಲ್ಲಿ ದಕ್ಷಿಣದ ಭಾಗದಲ್ಲಿ, ಉತ್ತರ ಭಾಗದಲ್ಲಿ ಪಶ್ಚಿಮಾದಿ ಪೂರ್ವಾಂತವಾಗಿ ಮೂರಾವರ್ತಿ (ವಿಕಿರವನ್ನು) ಚೆಲ್ಲಿ, ಅದನ್ನು ಸಂಗ್ರಹಿಸಿ ಈಶಾನ್ಯದಲ್ಲಿರಿಸಬೇಕು. (ಮೂಲದಿಂದ ಗಂಧಜಲವನ್ನು ದರ್ಭಪುಷ್ಪಾಕ್ಷತೆಗಳನ್ನು ಸಿಂಪಡಿಸಬೇಕು) ಅನಂತರ ಸುತ್ತಲೂ ಧೂಪ ದೀಪಗಳನ್ನು ಪ್ರದರ್ಶಿಸಬೇಕು.

**ಸಪ್ರಾಕಾರಂ, ಚತುರ್ದ್ವಾರಂ ಸೌವರ್ಣಂ ಮಂಟಪಂ ಸ್ಮರೇತ್ ।**

ಸುತ್ತು ಗೋಡೆಯಿಂದ ಕೂಡಿದ ನಾಲ್ಕು ಬಾಗಿಲಿನಿಂದ ಕೂಡಿದ ಚಿನ್ನದ ಮಂಟಪವನ್ನು ಭಾವಿಸಬೇಕು.

**ಉತ್ತಪ್ತೋಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ**
**ಶುದ್ಧಸ್ಫಾಟಿಕಭಿತ್ತಿಕಾವಿರಚಿತೈಸ್ತಂಭೈಶ್ಚ ಹೈಮೈಃ ಶುಭೈಃ ।**
**ದ್ವಾರೈಃ ಶ್ಚಾ(ಶ್ಯಾ)ಮರರತ್ನರಾಜಖಚಿತೈಃ ಶೋಭಾವಹೈರ್ಮಂಟಪೈಃ**
**ತತ್ರಾನ್ಯೈರಪಿ ಶಂಖಚಕ್ರಧವಲೈಃ ಪ್ರೋದ್ಭಾಸಿತಂ ಸ್ವಸ್ತಿಕೈಃ ॥**

**ಮುಕ್ತಾಜಾಲವಿಲಂಬಿಮಂಟಪಯುತೈರ್ವಜ್ರೈಶ್ಚ ಸೋಪಾನಕೈಃ**
**ನಾನಾರತ್ನವಿನಿರ್ಮಿತೈಶ್ಚ ಕಲಶೈರತ್ಯಂತಶೋಭಾವಹಂ ।**
**ಮಾಣಿಕ್ಯೋಜ್ವಲದೀಪದೀಪ್ತಿರಚಿತಂ ಲಕ್ಷ್ಮೀವಿಲಾಸಾಸ್ಪದಂ**
**ಧ್ಯಾಯೇನ್ಮಂಟಪಮರ್ಚನೇಷು ಸಕಲೇಷ್ವೇವಂವಿಧಂ ಸಾಧಕಃ ॥**

ಹೀಗೆ ಮಂಟಪವನ್ನು ಧ್ಯಾನಿಸಿ, ಪುನಃ ಮಂಟಪದ ವೇದಿ ಮಧ್ಯದಲ್ಲಿ ಪೀಠವನ್ನು ಪೂಜಿಸಿ ಆಯಾಯ ದೇವತಾ ಬೀಜಮಂತ್ರದಿಂದ ಶಕ್ತಿಯನ್ನಾವಾಹಿಸಿ ಪೂಜಿಸಿ ಪುನಃ ತಮ್ಮ ನಿಜ ಮೂಲ ಮಂತ್ರದಿಂದ ಸಕಲೀಕರಣವನ್ನು ಮಾಡಿ ಪೂಜಿಸಿ, ಏನನ್ನಾದರೂ ನೈವೇದ್ಯ ಮಾಡಿ ಪ್ರಸನ್ನಪೂಜೆಯನ್ನು ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ, ಮಂಟಪವನ್ನು ಆ ಚೈತನ್ಯದಿಂದ ಆವರಿಸಲ್ಪಟ್ಟದ್ದಾಗಿ ಭಾವಿಸಿ, ಆಯಾಯ ದಿಕ್ಕುಗಳಲ್ಲಿ ಇಂದ್ರಾದಿ ಲೋಕಪಾಲಕರನ್ನು ಪೂಜಿಸಿ, ಆಯಾಯ ಅಸ್ತ್ರಮಂತ್ರದಿಂದ ಎಲ್ಲಾ ದಿಕ್ಕುಗಳಲ್ಲಿಯೂ ಹೂವನ್ನು ಚೆಲ್ಲಿ **'ಗುರುಭ್ಯೋ ನಮಃ'**– ಮೊದಲಾಗಿ ಪೀಠ ಮಂತ್ರಗಳನ್ನು ಭೂಮಿಯಲ್ಲಿ ನ್ಯಾಸ ಮಾಡಿ **'ಧರ್ಮಾಯ ನಮಃ'**– ಮೊದಲಾಗಿ ಮಂತ್ರಗಳ ಆಗ್ನೇಯ ಮೊದಲಾದ ಕುಂಭಗಳಲ್ಲಿ ನ್ಯಾಸ

ಮಾಡಿ. ಅಧರ್ಮ ಮೊದಲಾದುವನ್ನು ಪೂರ್ವಾದಿ ಬಿದಿರಿನಲ್ಲಿರಿಸಿ. ಸತ್ವ ಮೊದಲಾದುವನ್ನು ಸೂತ್ರಗಳಲ್ಲಿರಿಸಿ. ವಸ್ತ್ರದಲ್ಲಿ ಮಾಯೆಯನ್ನೂ ವಿದ್ಯೆಯನ್ನೂ ನ್ಯಾಸ ಮಾಡಿ. ಪದ್ಮ ಮೊದಲಾಗಿ ಉಳಿದುದನ್ನು ಭೂಮಿಯಲ್ಲಿ ನ್ಯಾಸ ಮಾಡಬೇಕು. ವಿಷ್ಣುವಿನಲ್ಲಿ ಅನಂತಾದಿ– ಉಳಿದುವನ್ನು ನೆಲದಲ್ಲಿರಿಸಬೇಕು. ಪುನಃ ಸಮಷ್ಟಿಯಿಂದ ವ್ಯಾಪನೆಯನ್ನು ಮಾಡಿ ಅಂಗನ್ಯಾಸವನ್ನು ಮಾಡಿ ತಾಲತ್ರಯಗಳಿಂದ ರಕ್ಷಣೆಯನ್ನು ಮಾಡಿ ಮಂಟಪವನ್ನು ವಿರಾಡಾಕೃತಿಯನ್ನಾಗಿ ಭಾವಿಸಬೇಕು. ದುರ್ಗಿಯಲ್ಲಿ ಪೀಠ ಮಂತ್ರದ ನ್ಯಾಸದಲ್ಲಿ ಅದಕ್ಕೆ ಸರಿಯಾಗುವಂತೆ ಊಹಿಸಿಕೊಳ್ಳಬೇಕು. ಪುನಃ ಧೂಪ ದೀಪಾದಿಗಳಿಂದ ಅಲಂಕರಿಸಬೇಕು.

* * * *

## ಕುಂಭೇಶಪೂಜಾ

ಆ ಮಂಟಪದ ಈಶಾನ್ಯ ಕೋಣದಲ್ಲಿ ಎಂಟುದಳದ ಪದ್ಮವನ್ನು ಬರೆದು ವಸ್ತ್ರದಲ್ಲಿ ಗಂಟು ಕಟ್ಟಿದ ಬತ್ತ, ಅಕ್ಕಿ, ಎಳ್ಳು ಸಾಸಿವೆಗಳಿಂದ ಪೀಠವನ್ನು ಸಿದ್ಧಗೊಳಿಸಿ. ಅದರ ಮೇಲೆ ಕೂರ್ಚನ್ನಿರಿಸಿ. ಅಲ್ಲಿ ತೊಳೆದು ಕ್ರಮದಂತೆ ನೂಲನ್ನು ಸುತ್ತಿದ ಚಿನ್ನವೇ ಮೊದಲಾದ ಲೋಹಗಳಿಂದ ಸಿದ್ಧಗೊಳಿಸಿದ ಬಿಂದಿಗೆಯನ್ನು ಕೆಳಮುಖವಾಗಿರಿಸಬೇಕು. ಅದರ ದಕ್ಷಿಣದಲ್ಲಿ ಸ್ವಸ್ತಿಕವನ್ನು ಬರೆದು ಧಾನ್ಯಗಳನ್ನಿರಿಸಿ ಎರಡು ದರ್ಭಾಗ್ರಗಳನ್ನಿರಿಸಿ, ಪೀಠವನ್ನು ಭಾವಿಸಿ ಅಲ್ಲಿ ತೊಳೆದು ನೂಲು ಸುತ್ತಿದ ಕರಕ (ಕಲಶ)ವನ್ನು ಕೆಳಮುಖವಾಗಿರಿಸಿ. ಆಚಾರ್ಯನು ಕುಂಭದ ಹತ್ತಿರ ಕುಳಿತು ದೇಹಶುದ್ಧಿಯನ್ನು ಆಯಾಯ ದೇವತೆಗೆ ಸಂಬಂಧಿಸಿದ ಷಡಧ್ವನ್ಯಾಸಾದಿಗಳನ್ನು ಶಂಖಪೂರಣ, ಆತ್ಮಾರಾಧನೆಗಳನ್ನು ಮಾಡಿ. ಗುರುಗಳನ್ನು ಗಣಪತಿಯನ್ನು ಪೂಜಿಸಿ. ಗುರುಗಳಿಗೆ ಅರ್ಘ್ಯವನ್ನು ಕೊಟ್ಟು, ಪುಷ್ಪಾಂಜಲಿಯನ್ನು ಮಾಡಿ ಗಣಪತಿಗೆ ನೈವೇದ್ಯ ಮಾಡಿ, ಪುಷ್ಪಾಂಜಲಿಯನ್ನು ಮಾಡಬೇಕು. ಪುನಃ ಆಧಾರಶಕ್ತ್ಯಾದಿ ಪೀಠಪೂಜೆಯನ್ನು ಮಾಡಿ ಆಯಾಯ ಬೀಜದಿಂದ ಪ್ರಕೃತಿಯನ್ನಾವಾಹಿಸಿ, ಬೀಜಾಂಗಗಳಿಂದ ಅಂಗವನ್ನು ಮಾಡಿ ಸಕಲೀಕರಣ ಮಾಡಿ ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ಪದ್ಮ ಮುದ್ರೆಯನ್ನು ತೋರಿಸಬೇಕು. ಪುನಃ ಬಿಂದಿಗೆಯನ್ನು ತೆಗೆದುಕೊಂಡು ನಿಜಾಸ್ತ್ರದಿಂದ ಬಿಂದಿಗೆಯನ್ನು ಪ್ರೋಕ್ಷಣೆ ಮಾಡಿ ಕವಚ ಮಂತ್ರದಿಂದ ನೂಲನ್ನು ಸುತ್ತಿ ಆಯಾಯ ಮೂಲಮಂತ್ರಗಳಿಂದ ಒಳಗೂ ಹೊರಗೂ ಅಷ್ಟಗಂಧವನ್ನು ಲೇಪಿಸಿ ಪ್ರಣವದಿಂದ ಧೂಪ ಹಿಡಿದು ಮೂಲ ಮಂತ್ರದಿಂದ ಪೀಠದಲ್ಲಿ ಕೆಳಮುಖವಾಗಿರಿಸಬೇಕು. ಆಯಾಯ ಬೀಜಗಳಿಂದ ಶೋಷಣ ದಾಹನ ಪ್ಲಾವನ ಕಾಠಿನ್ಯ ಸುಷರೀಕರಣಗಳನ್ನು ಮಾಡಬೇಕು. ಆಯಾಯ ದೇವತೆಯ ಪಂಚತತ್ತ್ವಗಳಲ್ಲಿ ಮೊದಲನೆಯ ತತ್ತ್ವದಿಂದ ದರ್ಭವಿನ್ಯಾಸವನ್ನೂ, ಎರಡನೆಯ ತತ್ತ್ವದಿಂದ ಅಷ್ಟಗಂಧದಿಂದ ಸಿಂಪಡಿಸುವಿಕೆಯನ್ನೂ, ಮೂರನೆಯ ತತ್ತ್ವದಿಂದ ಅಕ್ಷತೆ ಚೆಲ್ಲುವುದನ್ನೂ ಮಾಡಿ ಮೂಲಮಂತ್ರದಿಂದ ಕಲಶವನ್ನು ಪೂಜಿಸಿ, ನಾಲ್ಕನೆಯ ತತ್ತ್ವದಿಂದ ಮೇಲುಮುಖವಾಗಿಸಿ ಮೂಲಮಂತ್ರದಿಂದ ಕೊನೆಗೊಳ್ಳುವ ಐದನೆಯ ತತ್ತ್ವದಿಂದ ಪೀಠದಲ್ಲಿರಿಸಬೇಕು. ಪ್ರಣವದಿಂದ ಕುಂಭಮುಖವನ್ನು ಪ್ರೋಕ್ಷಿಸಿ, ಕುಂಭದ ತಲದಲ್ಲಿ ದಶ ದಳ ಕಮಲವನ್ನು, ಮಧ್ಯದಲ್ಲಿ ಹನ್ನೆರಡು ದಳವನ್ನು, ಮುಖದಲ್ಲಿ ಹದಿನಾರು ದಳವನ್ನು ಹೊಂದಿದ ಪದ್ಮವನ್ನು ಭಾವಿಸಿ, ಅಗ್ನಿ, ಸೂರ್ಯ, ಸೋಮ ಕಲೆಗಳನ್ನೂ ಆಯಾಯ ಋಕ್ ಸಮಷ್ಟಿ ಮಂತ್ರಗಳನ್ನು ನ್ಯಾಸ ಮಾಡಿ ಪೂಜಿಸಿ ಪುನಃ ಹೂವು ಅಕ್ಷತೆಗಳಿಂದ ಪೂಜಿಸಬೇಕು. ಪುನಃ **'ಓಂ ಹ್ರೀಂ ಹಂಸಃ'**– ಈ ಮಂತ್ರದಿಂದ ಕಲಶದಲ್ಲಿ ಆವಾಹನೆಯನ್ನು ಮಾಡಿ. ಹ್ರಾಂ-ಹ್ರೀಂ ಮೊದಲಾಗಿ ಅಂಗವನ್ನು ಮಾಡಿ. ಕಲಶಮುಖದಲ್ಲಿ ಬಿಂದು ಕಲೆಗಳನ್ನು ನ್ಯಾಸ ಮಾಡಿ ಆ ಮಂತ್ರ (ಸಮಷ್ಟಿ)ದಿಂದ ಪೂಜಿಸಿ. ಕುಂಭಮುದ್ರೆಯನ್ನು ತೋರಿಸಿ. ಪುನಃ ಇಪ್ಪತ್ತೈದು ದರ್ಭೆಗಳಿಂದ ಕೂರ್ಚವನ್ನು ಕಟ್ಟಿ ತೊಳೆದು ಅಷ್ಟಗಂಧವನ್ನು ಲೇಪಿಸಿ. ಶೋಷಣ ದಾಹನ ಪ್ಲಾವನಗಳನ್ನು ಮಾಡಿ ಎಂಟು ಆವರ್ತಿ ಪ್ರಣವವನ್ನು ಜಪಿಸಿ ಕೂರ್ಚನ್ನು ಕುಂಭದಲ್ಲಿ ಕೆಳಮುಖವಾಗಿ ಇಡಬೇಕು. ಪ್ರಣವದಿಂದ ಪೂಜಿಸಿ. ಚಿನ್ನ, ರತ್ನ, ಗಂಧಾಕ್ಷತೆಗಳಿಂದ ಕೂಡಿ **ಓಂ ಹ್ರೀಂ ಹಂಸಃ ಸೋಽಹಂ ಸ್ವಾಹಾ** ಎಂದು ಆತ್ಮಾಷ್ಟಾಕ್ಷರವನ್ನು ನಿಜ ಮೂಲಮಂತ್ರವನ್ನೂ ಹೇಳಿ. ಕುಂಭಕ್ಕೆ ಆ ಮಂತ್ರದಿಂದ ಪೂಜಿಸಿ. ಪುನಃ ಕೈಯಲ್ಲಿ ಅಮೃತಬೀಜ (ವಂ)ವನ್ನು ಬರೆದು ಆ ಕೈಯಿಂದ ಕುಂಭದ ಬಾಯಿಯನ್ನು ಮುಚ್ಚಿ ಎರಡು ಪ್ರಣವದೊಂದಿಗೆ ಪ್ರತಿಲೋಮವಾಗಿ ಲಿಪಿಯನ್ನೂ ಶಿರೋಮಂತ್ರವನ್ನೂ ಹೇಳಿ ಜಪಿಸಿ (ಓಂ ಓಂ ಕ್ಷಂ ಳಂ ಹಂ ಸಂ ಷಂ ಶಂ ವಂ ಲಂ ರಂ ಯಂ ಮಂ ಭಂ ಬಂ ಫಂ ಪಂ ನಂ ಧಂ ದಂ ಥಂ ತಂ ಣಂ ಢಂ ಡಂ ಠಂ ಟಂ ಞಂ ಝಂ ಜಂ ಛಂ ಚಂ ಙಂ ಘಂ ಗಂ ಖಂ ಕಂ ಅಃ ಅಂ ಔಂ ಓಂ ಐಂ ಏಂ ೡಂ ಌಂ ೠಂ ಋಂ ಊಂ ಉಂ ಈಂ ಇಂ ಆಂ ಅಂ–ಶಿರಸೇ ಸ್ವಾಹಾ) ಮಾನಸಪೂರಣವನ್ನು ಮಾಡಿ ಯಾವುದಾದರೂ ಎಲೆಯಿಂದ ಕುಂಭದ ಬಾಯಿಯನ್ನು ಮುಚ್ಚಿ ಇನ್ನೊಂದು ಪಾತ್ರೆಯಲ್ಲಿ ಗಾಳಿಸಿದ ನೀರನ್ನು ಹೊಂದಿಸಿಕೊಂಡು ಅಲ್ಲಿ 'ಪಂ ಪದ್ಮಾಯ ನಮಃ' ಎಂದು ಪೀಠವನ್ನು ಪೂಜಿಸಿ, 'ವಂ ವರುಣಾಯ ನಮಃ' ಎಂದು ವರುಣನನ್ನು **'ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ಸನ್ನಿಧಿಂ ಕುರು'**- ತೀರ್ಥಗಳನ್ನು ಆವಾಹಿಸಿ, ಪೂಜಿಸಿ ಮೂಲಮಂತ್ರದಿಂದಾವಾಹಿಸಿ ಪೂಜಿಸಿ. ಪಂಚವಾರುಣ ಮೊದಲಾದುವನ್ನು ಜಪಿಸಿ.

**ಅವತೇ ಹೇಡೋ ವರುಣ ನಮೋಭಿ ರವಯಜ್ಞೇಭಿರೀಮಹೇ ಹವಿರ್ಭಿಃ ।**

**ಕ್ಷಯನ್ನಸ್ಮಭ್ಯಮಸುರಪ್ರಚೇತೋ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ॥ ೧ ॥**

ಓಂ ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿಮಧ್ಯಮಗ್ಗುಂ ಶ್ರಥಾಯ ।
ಅಥಾವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥ ೨ ॥

ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ॥ ೩ ॥

ಓಂ ತತ್ತ್ವಾಯಾಮಿ ಬ್ರಹ್ಮಣಾ ವಂದ ಮಾನಸ್ತದಾ ಶಾಸ್ತೆ ಯಜಮಾನೋ ಹವಿರ್ಭಿಃ ।
ಅಹೇಡಮಾನೋ ವರುಣೇಃ ಬೋಧ್ಯುರುಶಗುಂಸ ಮಾನ ಆಯುಃ ಪ್ರಮೋಷೀಃ ॥ ೪ ॥

ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಡೋ ವಯಾಸಿ ಸೀಷ್ಠಾಃ ।
ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಗುಂಸಿ ಪ್ರಮುಮುಗ್ಧ್ಯಸ್ಮತ್

ಹೀಗೆ ಜಪಿಸಿ– 'ಗಂಗಾಯೈ ವಿಶ್ವತೋ ಮುಖ್ಯೈ ಶಿವಾಮೃತಾಯೈ ನಾರಾಯಣ್ಯೈ ನಮೋ ನಮಃ ॥' 'ಗಂಗೇಚ ಯಮುನೇ * * * ಸನ್ನಿಧಿಂ ಕುರು'– ಹೀಗೆ ಜಪಿಸಿ ಸಂರಕ್ಷಿಸಬೇಕು.

ಆ ನೀರನ್ನು ಶಂಖದಲ್ಲಿ ತೆಗೆದುಕೊಂಡು ಅಷ್ಟಗಂಧದೊಡನೆ ಬೆರಸಿ ಪದ್ಮ ಹಾಗೂ ಮೂರ್ತಿಯನ್ನು ಭಾವಿಸಿ ಮೂಲಮಂತ್ರದಿಂದಾವಾಹಿಸಿ, ಪಂಚೋಪಚಾರ ಪೂಜೆಯನ್ನು ಮಾಡಿ, ಆ ನೀರನ್ನು ಕಲಶದಲ್ಲಿ ಹಾಕಿ, ಉಳಿದ ನೀರಿನಿಂದ ಕಲಶವನ್ನು ಅರ್ಧಕ್ಕೂ ಮಿಕ್ಕಿ ತುಂಬಿಸಿ ಲಿಪಿ ಪಂಕಜವನ್ನು ಪೂಜಿಸಿ 'ಓಂ ವಿದ್ಯಾಮೂರ್ತಯೇ ನಮಃ'– ಹೀಗೆ ವಿದ್ಯಾಮೂರ್ತಿಯನ್ನಾವಾಹಿಸಿ, ಆವಾಹನಾದಿ ಮುದ್ರೆಯನ್ನು ತೋರಿಸಿ, ಆ ಮಂತ್ರದಿಂದಲೇ ವ್ಯಾಪಿಸಿ, ಮೂಲ ಮಂತ್ರಾಕ್ಷರದಿಂದ ಅಂಗನ್ಯಾಸವನ್ನು ಮಾಡಿ ಸಕಲೀಕರಣದೊಂದಿಗೆ ಪೂಜಿಸಿ, ಪುಷ್ಪಾಂಜಲಿಯನ್ನು ಮಾಡಬೇಕು. ಪುನಃ ಶಂಖದಲ್ಲಿ ನೀರನ್ನು ತೆಗೆದುಕೊಂಡು ಅಷ್ಟಗಂಧವನ್ನು ಸೇರಿಸಿ ಪ್ರಣವದಿಂದ ಪೂಜಿಸಿ ತೊಂಭತ್ತನಾಲ್ಕು ಕಲೆಗಳನ್ನು ಆಯಾಯ ಋಕ್ ಸಮಷ್ಟಿ ಮಂತ್ರಗಳನ್ನು ಆವಾಹಿಸಿ ಆಯಾಯ ಪ್ರಾಣಪ್ರತಿಷ್ಠೆ ಮಾಡಿ ಕಲಾನ್ಯಾಸವನ್ನು ಮಾಡಬೇಕು. ಪುನಃ ಶಂಖದಲ್ಲಿ ಹಿಂದಿನಂತೆ ನೀರನ್ನು ತೆಗೆದು ಅಷ್ಟಗಂಧವನ್ನು ಮಿಶ್ರ ಮಾಡಿ ಪ್ರಣವದಿಂದ ಪೂಜಿಸಿ, (ಪ್ರಣವಾಕ್ಷರಗಳಿಂದಲೂ ಪೂಜಿಸಿ) ಎಲ್ಲಾ ತತ್ತ್ವಗಳನ್ನು ಆವಾಹನೆ ಮಾಡಿ ಕೊನೆಯಲ್ಲಿ ಮೂಲದಿಂದಲೂ ಆವಾಹಿಸಿ ಸ್ವಲ್ಪ ಪೂಜಿಸಿ ಆ ನೀರನ್ನು ಕಲಶದಲ್ಲಿ ಸೇರಿಸಿ ತತ್ತ್ವನ್ಯಾಸ ಮೊದಲಾದುವುಗಳಿಂದ ಸಕಲೀಕರಣ ಮಾಡಿ ಪೂಜಿಸಿ ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಬೇಕು. ಪುನಃ ಮೂಲಾಧಾರ ಹೃದಯ ದ್ವಾದಶಾಂತಗಳಲ್ಲಿ (ಕಲಶದಲ್ಲಿ) ಪದ್ಮವನ್ನು ಭಾವಿಸಿ ಮೂಲಾಧಾರ ಪದ್ಮದಲ್ಲಿ 'ಅಂ ನಮಃ ಪರಾಯಾತ್ಮ ತತ್ತ್ವಾತ್ಮನೇ ನಮಃ'– ಹೀಗೆ ಆವಾಹಿಸಿ ಪ್ರಣವದಿಂದ ಅಂಗ ಮಾಡಿ ಪೂಜಿಸಿ, ಹೃದಯಪದ್ಮದಲ್ಲಿ 'ಉಂ ನಮಃ ಪರಾಯ ವಿದ್ಯಾತತ್ತ್ವಾತ್ಮನೇ ನಮಃ'– ಹೀಗೆ ಆವಾಹಿಸಿ ಪ್ರಣವದಿಂದ ಸಕಲೀಕರಣವನ್ನು ಮಾಡಿ ಪೂಜಿಸಿ ಪುನಃ ದ್ವಾದಶಾಂತ ಪದ್ಮದಲ್ಲಿ 'ಮಂ ನಮಃ ಪರಾಯ ಪರತತ್ತ್ವಾತ್ಮನೇ ನಮಃ'– ಎಂದು ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಬೇಕು. **ಶಿವನಲ್ಲಿ**– 'ಅಂ ನಮಃ ಶಿವಾಯ ಆತ್ಮ ತತ್ತ್ವಾತ್ಮನೇ ನಮಃ– ಉಂ ನಮಃ ಶಿವಾಯ ವಿದ್ಯಾತತ್ತ್ವಾತ್ಮನೇ ನಮಃ– ಮಂ ನಮಃ ಶಿವಾಯ ಶಿವತತ್ತ್ವಾತ್ಮನೇ ನಮಃ'– ಈ ಮಂತ್ರಗಳಿಂದ ಪ್ರತ್ಯೇಕವಾಗಿ ಆವಾಹಿಸಿ ಪೂಜಿಸಬೇಕು. ಪುನಃ ಎಲ್ಲಾ ದೇವತೆಗಳಲ್ಲಿಯೂ ಉಳಿದ ನೀರಿನಿಂದ ಕ್ರಮವಾಗಿ ತುಂಬಿಸಿ ಪಲ್ಲವ ಚಕ್ರಿಕೆಗಳನ್ನಿರಿಸಿ ಮೇಲೆ ದರ್ಭೆಗಳನ್ನಿರಿಸಿ ಪ್ರಣವ, ಉಪಚಾರ ಮಂತ್ರಗಳಿಂದೊಡಗೂಡಿದ ಆಯಾಯ ದೇವರ ಮೂಲಮಂತ್ರಗಳಿಂದ ದೇವರನ್ನು ಕಲಶದಲ್ಲಿ ಆವಾಹಿಸಿ, ಮುದ್ರೆಗಳನ್ನು ತೋರಿಸಿ, ವ್ಯಾಪಿಸಿ, ಲಿಪಿನ್ಯಾಸ, ತತ್ತ್ವನ್ಯಾಸ, ಮೂಲಾಕ್ಷರನ್ಯಾಸ, ಅಂಗನ್ಯಾಸವನ್ನು ಮಾಡಿ ಆಯಾಯ ದೇವತೆಗಳಿಗೆ ಹೇಳಿದ ಕ್ರಮದಿಂದ ಉಪಹಾರಗಳನ್ನು ಕೊಟ್ಟು ಕ್ರಮದಂತೆ ಪೂಜಿಸಿ ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ, ಲಯಾಂಗವನ್ನು ಮಾಡಿ ರಕ್ಷಿಸಬೇಕು.

* * * *

## ಕರ್ಕರೀಪೂಜಾ

ಪುನಃ ಕರ್ಕರಿಯ ಪೀಠವನ್ನು ಪೂಜಿಸಿ, ಕರಕಕ್ಕೆ ಅಸ್ತ್ರಕ್ಷಾಲನಾದಿ ಎಲ್ಲವನ್ನೂ ಮಾಡಿ ಮೇಲಕ್ಕೆತ್ತಿ ಮೇಲ್ಮುಖನಾಗಿ ಮಾಡಿ ಪೀಠದಲ್ಲಿರಿಸಿ ಮೇಲೆ ಕೂರ್ಚನ್ನಿರಿಸಿ ಮೊದಲು ಶಂಖದಿಂದ ಸ್ವಲ್ಪ ನೀರನ್ನು ತುಂಬಿಸಿ ಗಾಳಿಸಲ್ಪಟ್ಟ ನೀರಿನಿಂದ ಕ್ರಮದಂತೆ ತುಂಬಿಸಿ ಪಲ್ಲವ ಚಕ್ರಿಕೆ ಮೊದಲಾದುವನ್ನಿರಿಸಿ ಆಯಾಯ ದೇವತೆಯ ಅಸ್ತ್ರ ಮಂತ್ರದಿಂದಾವಾಹಿಸಿ ಅಸ್ತ್ರಮಂತ್ರದ ಅಂಗಗಳಿಂದ ಸಕಲೀಕರಣವನ್ನು ಮಾಡಿ ಪೂಜಿಸಿ, ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ ಲಯಾಂಗವನ್ನು ಮಾಡಿ ರಕ್ಷಿಸಬೇಕು. ಪುನಃ ಕರಕವನ್ನು ಕುಂಭೇಶನನ್ನು ಎತ್ತಿಕೊಂಡು ಕುಂಭೇಶನನ್ನು ಹಿಂದುಗಡೆ

ಮಾಡಿಕೊಂಡು ಅಸ್ತ್ರಮಂತ್ರದಿಂದ ಆ ಸ್ಥಳದಿಂದಾರಂಭಿಸಿ ಕರಕದ ಧಾರೆಯಿಂದ (ಸಣ್ಣದಾಗಿ ನೀರು ಬಿಡುವಿಕೆಯಿಂದ) ಗೋಡೆಯ ಬುಡವನ್ನು ಎರೆಯುತ್ತಾ ಕುಂಭೇಶನಿಂದ ಕೂಡಿ ಪ್ರದಕ್ಷಿಣೆಯಾಗಿ ಮೊದಲಿನ ಸ್ಥಳಕ್ಕೇ ಬಂದು ಕರ್ಕರಿಯ ಪೀಠದಲ್ಲಿ ಹಿಂದೆ ಸಂಗ್ರಹಿಸಿದ ಸಾಸಿವೆಯನ್ನಿರಿಸಿ. ಅದರ ಮೇಲೆ ಕರ್ಕರಿನ್ನಿಡಬೇಕು. ಕುಂಭೇಶ ಪೀಠದಲ್ಲಿ ಮೊದಲು ಸಂಗ್ರಹಿಸಿದ ವಿಕಿರವನ್ನಿರಿಸಿ ಅಲ್ಲಿ ಕುಂಭೇಶನನ್ನಿರಿಸಬೇಕು. ಪುನಃ ಹಿಂದಿನಂತೆ ಆಧಾರತ್ರಯದಲ್ಲಿ ಮೂರು ತತ್ತ್ವಗಳನ್ನು ಪೂಜಿಸಿ ಮೂಲಮಂತ್ರದಿಂದ ದೇವರನ್ನು ಆವಾಹಿಸಿ ಸಕಲೀಕರಣವನ್ನು ಮಾಡಿ ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ ಲಯಾಂಗವನ್ನು ಮಾಡಿ ಎರಡು ಬಟ್ಟೆಗಳಿಂದ ಸುತ್ತಿ ರಕ್ಷಿಸಬೇಕು. ಪುನಃ ಕರ್ಕರಿಯನ್ನು ನೀರಿನಿಂದ ತುಂಬಿಸಿ ಅಸ್ತ್ರಮಂತ್ರದಿಂದಾವಾಹಿಸಿ. ಸಕಲೀಕರಣ ಮಾಡಿ ಪೂಜಿಸಿ. ನೈವೇದ್ಯವನ್ನು ಮಾಡಿ ಪ್ರಸನ್ನಪೂಜೆಯನ್ನು ಮಾಡಿ. ಪೂಜೆಯನ್ನು ಮುಗಿಸಿ. ವ್ಯಾಪಿಸಿ. ಲಯಾಂಗವನ್ನು ಮಾಡಿ ವಸ್ತ್ರದಿಂದ ಹೊದಿಸಿ ರಕ್ಷಿಸಬೇಕು. ಹೀಗೆ ಕುಂಭೇಶ ಕರ್ಕರೀ ಪೂಜಾಕ್ರಮವು.

—— ಇತಿ ಮಂಟಪ ಸಂಸ್ಕಾರ ವಿಧಿಃ ——

ಅನಂತರ ಆಚಾರ್ಯ ಕುಂಡದಲ್ಲಿ ಆಯಾಯ ದೇವತೆಗಳಿಗೆ ಹೇಳಿದ ಕ್ರಮದಲ್ಲಿ ಅಗ್ನಿಜನನವನ್ನು ಮಾಡಬೇಕು.

* * * *

## ಅಗ್ನಿಜನನಂ

ಆಚಾರ್ಯನು ಸಕಲೀಕರಣ ಶಂಖಪೂರಣ, ಆತ್ಮಾರಾಧನಗಳನ್ನು ಮಾಡಿ ಗುರುಗಣೇಶರನ್ನು ಪೂಜಿಸಿ, ಕುಂಡದಲ್ಲಿ 'ಯಂ' ಎಂದು ದರ್ಭಮುಷ್ಟಿಯಿಂದ ಗುಡಿಸಿ, 'ವಂ' ಎಂದು ಗೋಮಯದ ನೀರಿನಿಂದ ಸಿಂಪಡಿಸಿ, 'ರಂ' ಎಂದು ಸಾಸಿವೆಯನ್ನು ಚೆಲ್ಲಿ 'ಯಂ' ಮುಷ್ಟಿಯಿಂದ ಗುಡಿಸಿ, 'ವಂ' ಎಂದು ಪುನಃ ಗೋಮಯ ಜಲದಿಂದ ಸಿಂಪಡಿಸಬೇಕು. ಪಂಚತತ್ತ್ವಗಳಿಂದ ಪಂಚಗವ್ಯದಿಂದ ಪ್ರೋಕ್ಷಿಸಿ, ಮೂಲದಿಂದ ವಿಕಿರವನ್ನು ಚೆಲ್ಲಿ, ಪುನಃ ಮೂಲದಿಂದ ಗಂಧ ಜಲದಿಂದ ಸಿಂಪಡಿಸಬೇಕು. ಮೂಲದಿಂದ ದರ್ಭೆ, ಹೂವು, ಅಕ್ಷತೆಗಳನ್ನು ಚೆಲ್ಲಿ ಧೂಪದೀಪಗಳನ್ನು ತೋರಿಸಬೇಕು. 'ಓಂ ಹುಂಪಟ್' ಎಂದು ಕುಂಡವನ್ನು ಪ್ರೋಕ್ಷಣೆ ಮಾಡಿ ಎರಡು ದರ್ಭೆಗಳಿಂದ ಕುಂಡವನ್ನು ಮುಟ್ಟಿಕೊಂಡು ಇಪ್ಪತ್ತೈದು ಸಂಖ್ಯೆಯಿಂದ ಪ್ರತ್ಯೇಕವಾಗಿ ಜಪಿಸಲ್ಪಟ್ಟ ಯಂ ರಂ ವಂ ಲಂ ಹಂ ರಂ– ಈ ಬೀಜಗಳಿಂದ (ಪ್ರಾಣಾಯಾಮ ಮಾಡಿ) ಶೋಷಣ, ದಾಹನ ಪ್ಲಾವನಗಳನ್ನು ಕಾಠಿನ್ಯ ಸುಷರೀಕರಣ ದಾಹಾತ್ಮಕವಾದ ವಿಶೇಷ ಶೋಧನೆಯನ್ನು ಮಾಡಿ ಮಳಲಿನಿಂದ ಕುಂಡವನ್ನು ಬಳಿದು ಪ್ರಣವದಿಂದ ಬರೆಯಬೇಕು. ಯಜ್ಞಸಾಧನವಾದ ಸಮಿಧಗಳಿಂದ ಪಶ್ಚಿಮದಲ್ಲಿ ದಕ್ಷಿಣದಿಂದಾರಂಭಿಸಿ, ಉತ್ತರಾಗ್ರವಾಗಿ ರೇಖೆಯನ್ನೆಳೆದು ಅದರ ಪಕ್ಕದಲ್ಲಿ ಹಾಗೂ ಮಧ್ಯದಲ್ಲಿ ಪೂರ್ವಾಗ್ರವಾಗಿ ದಕ್ಷಿಣದಿಂದ ಕ್ರಮವಾಗಿ ಮೂರು ರೇಖೆಗಳು ಮೊದಲು ಎಳೆದ ರೇಖೆಯನ್ನು ಸ್ಪರ್ಶಿಸದಂತೆ ಬರೆದು, ಪುನಃ ಸಿಂಪಡಿಸಿ ಆ ಕಡ್ಡಿಯನ್ನು ಆಗ್ನೇಯದಲ್ಲಿ ಬಿಸುಟು ನೀರನ್ನು ಮುಟ್ಟಿ ಪ್ರಣವದಿಂದ ಪ್ರೋಕ್ಷಿಸಿ ಗಂಧದಿಂದ ಕೂಡಿ ಹೂವು ಅಕ್ಷತೆ ನೀರು ಕೂರ್ಚಗಳಿಂದ ಓಂಕಾರದಿಂದ ಆಸನದಲ್ಲಿರಿಸಿ ಪೀಠಪೂಜೆಯನ್ನು ಮಾಡಬೇಕು.



ವಿಷ್ಣುವಿನಲ್ಲಿ 'ಶ್ರೀಂ' ಬೀಜದಿಂದಲೂ, ಉಳಿದ ದೇವತೆಗಳಲ್ಲಿ 'ಹ್ರೀಂ' ಬೀಜದಿಂದ ಶಕ್ತಿಯನ್ನು (ಮಾಹೇಶ್ವರಿ) ಆವಾಹಿಸಿ. ಮುದ್ರೆಗಳನ್ನು ತೋರಿಸಿ. ವಿಷ್ಣುವಿನಲ್ಲಿ ಶ್ರಾಂ ಹೃದಯಾಯ ಮೊದಲಾಗಿ, ಉಳಿದ ದೇವತೆಗಳಲ್ಲಿ– ಹ್ರಾಂ ಹೃದಯಾಯ । ಹ್ರೀಂ ಶಿರಸೇ । ಹ್ರೂಂ ಶಿಖಾಯೈ । ಹ್ರೈಂ ಕವಚಾಯ । ಹ್ರೌಂ ನೇತ್ರತ್ರಯಾಯ । ಹ್ರಃ ಅಸ್ತ್ರಾಯ– ಹೀಗೆ ಅಂಗಗಳನ್ನು ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ ಕುಂಡ ಶಕ್ತಿಯನ್ನು ಹೀಗೆ ಧ್ಯಾನಿಸಬೇಕು.

ಋತುಸ್ನಾನ ಮಾಡಿದ ಪರಿಶುದ್ಧಳಾದ ಪೂರ್ವದಲ್ಲಿ ತಲೆ ಪಶ್ಚಿಮದಲ್ಲಿ ಎರಡು ಕಾಲುಗಳು ದಕ್ಷಿಣೋತ್ತರಗಳಲ್ಲಿ ತೋಳುಗಳು ಹೀಗೆ ಅಂಗಾತವಾಗಿ ಮಲಗಿದ ತನಗೆ ಮಗನನ್ನು ಬಯಸುವ ರತಿ ಕ್ರೀಡೆಯನ್ನು ಬಯಕೆ ಹೊಂದಿದ ಹೊಟ್ಟೆಯ ತೂತನ್ನು (ಹೊಕ್ಕಳನ್ನು) ಹೊಂದಿದ ಸಿದ್ಧಗೊಂಡ ಹೋಮಕುಂಡವನ್ನು ಭಾವಿಸಬೇಕು.

**ಮಾಹೇಶ್ವರೀಮೃತುಸ್ನಾತಾಂ ನೀಲೇಂದೀವರಸನ್ನಿಭಾಂ ।**
**ಮಾಹೇಶ್ವರೇಣ ಸಹಿತಾಮುಪಚಾರೈಃ ಪ್ರಪೂಜಯೇತ್ ॥**
**ಸಂಚಿಂತಯೇದೃತುಸ್ನಾತಾಂ ಧ್ಯಾಯಂತೀಂ ಪತಿಮೀಶ್ವರಂ ।**
**ಕಾರ್ತಸ್ವರಾಭಾಂ ಕಾಮಾಕ್ಷೀಂ ಚಿತ್ಸ್ವರೂಪಾಂ ವಿಚಿಂತಯೇ ॥**
**ತತೋಽನುರಕ್ತೌ ಮದಮತ್ತಚಿತ್ತಾ ಸ್ವಿನ್ನಾಂಗರಾಗೌ ಪರಿರಂಭಿತಾಂಗೌ।**
**ಆರೂಢಯಂತೌ ಮದಮುದ್ವಹಂತೌ ಸ್ಮರೇತ್ಸ್ಮರಾಂತೌ ಗಿರಿಜಾಗಿರೀಶೌ ॥**

ಸ್ಫಟಿಕ ಶಿಲೆಯ ತಿಕ್ಕುವಿಕೆಯಿಂದುಂಟಾದ, ಅರಣಿಯನ್ನು ಮಥಿಸಿ ಸಿದ್ಧಗೊಳಿಸಿದ, ಶ್ರೋತ್ರಿಯರ ಮನೆಯಿಂದ ಗುಪ್ತವಾಗಿ ತಂದ, ಅಗ್ನಿಯನ್ನು ತೆಗೆದುಕೊಂಡು ಮಧ್ಯದಲ್ಲಿರಿಸಿ ರಾಕ್ಷಸ ಭಾಗವನ್ನು ನೈಋತ್ಯ ದಿಕ್ಕಿನಲ್ಲಿ ಎಸೆದು ಅಗ್ನಿಚೈತನ್ಯವನ್ನು ತನ್ನಲ್ಲಿ ವಿಲಯನಗೊಳಿಸಿ ಅಗ್ನಿಯಲ್ಲಿ ಓಂಕಾರದಿಂದ ಅಂಗವನ್ನು ಮಾಡಿ, ಅಗ್ನಿಯಲ್ಲಿ ಶೋಷಣ ದಾಹನವನ್ನು ಆಯಾಯ ಬೀಜ (ಯಂ ರಂ)ಗಳಿಂದ ಮಾಡಿ **'ಓಂ ಪಂ ಪದ್ಮಾಯ ನಮಃ'**– ಹೀಗೆ ಪೀಠವನ್ನು ಪೂಜಿಸಿ ತನ್ನ ಹೃದಯದಿಂದ ಅಗ್ನಿಚೈತನ್ಯವನ್ನು ಅಲ್ಲಿ ಆವಾಹಿಸಿ ಪ್ರಣವದಿಂದ ಅಂಗವನ್ನು ಮಾಡಿ **'ಓಂ ರಂ ಓಂ ನಮಃ'**– ಎಂದು ಪೂಜಿಸಬೇಕು. ಇದೆಲ್ಲವನ್ನೂ ಬೇಗನೇ ಮಾಡಬೇಕು. ಪಾತ್ರೆಗಳನ್ನು ಹೊಡೆದು ಜ್ವಲಿಸುವಂತೆ ಮಾಡಿ ಮುಚ್ಚಳವನ್ನು ತೆಗೆದು ಮಂಡಿಯನ್ನು ನೆಲದಲ್ಲಿರಿಸಿ ಅಗ್ನಿಯನ್ನು ಎತ್ತಿ ಕುಂಡದ ಮೇಲ್ಭಾಗದಲ್ಲಿ ಮೂರಾವರ್ತಿ ತಿರುಗಿಸಿ ದೇವರ ಬೀಜ ಸ್ವರೂಪದಂತಿರುವ ಅಗ್ನಿಯನ್ನು ಧ್ರುವ (ಓಂ)ದಿಂದ ಪ್ರಕೃತಿಯ ಯೋನಿ ಸ್ವರೂಪದ ಕುಂಡದಲ್ಲಿ ಇರಿಸಬೇಕು. ಕಟ್ಟಿಗೆಯ ತುಂಡುಗಳಿಂದ ಹೊಂದಿಸಿ, **'ಓಂ ಚಿತ್ಪಿಂಗಲ ಹನ ಹನ ದಹ ದಹ ಪಚ ಪಚ ಸರ್ವಜ್ಞಾಜ್ಞಾಪಯ ಸ್ವಾಹಾ'**– ಈ ಮಂತ್ರದಿಂದ ಜ್ವಲನೆಯನ್ನು ಮಾಡಬೇಕು. **ಓಂ ಚತ್ವಾರಿ ಶೃಂಗಾತ್ರಯೋ ಅಸ್ಯ ಪಾದಾದ್ವೇ ಶೀರ್ಷೇಸಪ್ತಹಸ್ತಾಸೋ ಅಸ್ಯ ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋದೇವೋ ಮರ್ತ್ಯಾಂ ಆವಿವೇಶ**– ಹೀಗೆ ಪ್ರಾರ್ಥಿಸಿ ತಮ್ಮ ವೇದಭಾಗದಲ್ಲಿ ಹೇಳೀದಂತೆ ಪರಿಸಮೂಹನ ಪರಿಸ್ತರಣ ಪರ್ಯುಕ್ಷಣಗಳನ್ನು, ಆಜ್ಯ ಸಂಸ್ಕಾರಗಳನ್ನು ಮಾಡಿ ಸ್ರುವ, ಜುಹೂವನ್ನು ಸಂಸ್ಕರಿಸಿ ಗಂಧ ಹೂವು ಮೊದಲಾದುವುಗಳಿಂದ ಅಗ್ನಿಯನ್ನಲಂಕರಿಸಿ, ಗರ್ಭಾಧಾನ ಮೊದಲಾಗಿ ಸಂಸ್ಕಾರ ಕ್ರಿಯೆಗಳನ್ನು ಮಾಡಬೇಕು.

ವ್ಯಾಹೃತಿಗಳಿಂದ ಹೋಮಿಸಿ, 'ಓಂ ನಮಃ' ಎಂದು ಪೂಜಿಸಿ, **ಅಗ್ನಯೇ ಗರ್ಭಾಧಾನಾಖ್ಯಂ ಕರ್ಮ ಸಂಪಾದಯಾಮಿ ನಮಃ ಸ್ವಾಹಾ**– ಹೀಗೆ ಮೆಲ್ಲನೆ ಹೇಳಿ ಒಂದು ಸಮಿಧವನ್ನು ಹೋಮಿಸಿ ಆಯಾಯ ದೇವತಾ ಮಂತ್ರಗಳಿಂದ ಎಂಟು ಆವರ್ತಿ ಹೋಮಿಸಿ, ಸ್ರುವದಿಂದ ಜಿಹ್ವಾದಲ್ಲಿ ನಾಲ್ಕು ಆವರ್ತಿ ಅವದಾನ ಮಾಡಿ (ತುಪ್ಪದಿಂದ ತುಂಬಿಸಿ) ಸ್ರುವವನ್ನು ಜಿಹ್ವೆಯ ಮೇಲಿರಿಸಿ ನಿಂತು ಆಯಾಯ ಪೂರ್ಣಾಹುತಿ ಮಂತ್ರದಿಂದ ಪೂರ್ಣಾಹುತಿಯನ್ನು ಮಾಡಬೇಕು. ಕುಳಿತುಕೊಂಡು. **'ಗರ್ಭಾಧಾನಾಖ್ಯಂ ಕರ್ಮ ಕೃತಂ'** ಹೀಗೆ ಮೆಲ್ಲಗೆ ಹೇಳಿ ಓಂ ನಮಃ' ಹೀಗೆ ಪ್ರಣವದಿಂದ ಪೂಜಿಸಬೇಕು. ಹೀಗೆ ಎಲ್ಲೆಡೆಯಲ್ಲೂ ಅಗ್ನಿಸಂಸ್ಕಾರ ಕ್ರಿಯೆಗಳು. **ಶಿವನಲ್ಲಿ** ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಉಪನಯನ, ಮಹಾನಾಮ್ನಿ, ಮಹಾವ್ರತ, ಉಪನಿಷದ್ವ್ರತ, ಗೋದಾನ, ಸಮಾವರ್ತನ, ವಿವಾಹ, ಅಗ್ನ್ಯಾದಾನ ಹೀಗೆ ಹದಿನಾರು ಕ್ರಿಯೆಗಳು. ॥ – ॥ ವಿಷ್ಣು, ಗುಹ, ವಿಘ್ನ, ಆರ್ಯ, **ಶಂಕರನಾರಾಯಣರಲ್ಲಿ**– ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ– ಹೀಗೆ ಎಂಟು ಕ್ರಿಯೆಗಳು. **ದುರ್ಗಿಯಲ್ಲಿ**– ಗರ್ಭಾಧಾನ ಮೊದಲಾಗಿ ಚೌಲಾಂತವಾಗಿ ಏಳು ಕ್ರಿಯೆಗಳು. **ಶಿವನಲ್ಲಿ** ಸದ್ಯೋಜಾತ ವಾಮದೇವ, ಅಘೋರ, ತತ್ಪುರುಷ, ಈಶಾನ, ತತ್ಪುರುಷ ಈಶಾನ ಸದ್ಯೋಜಾತ, ವಾಮದೇವ, ಅಘೋರ, ತತ್ರಪುರುಷ ಈಶಾನ ವ್ಯೋಮವ್ಯಾಪಿ ದಶಾಕ್ಷರ, ಪ್ರಾಸಾದ ಮಂತ್ರಗಳಿಂದ ಹದಿನಾರು ಕ್ರಿಯೆಗಳನ್ನು ಮಾಡಬೇಕು. ಶಾಸ್ತಾರನಲ್ಲಿ– ಷಣ್ಮಂತ್ರ, ಮೂಲ ಪ್ರಣವಗಳಿಂದ ಎಂಟು ಕ್ರಿಯೆಗಳನ್ನು ಮಾಡಬೇಕು. ಗುಹನಲ್ಲಿ– ಷಣ್ಮಂತ್ರ ಮೂಲಮಂತ್ರಗಳೆರಡರಿಂದ ಮಾಡಬೇಕು. **ಶಂಕರನಾರಾಯಣನಲ್ಲಿ**– ಏಳು ವ್ಯಾಹೃತಿಗಳಿಂದ ಚೌಲ, ಉಪನಯನವನ್ನು ಸತ್ಯದಿಂದ (ಎಂಟನೆಯದನ್ನು ಕೊನೆಯ ಮಂತ್ರದಿಂದ) ಮಾಡಬೇಕು. ಗಣಪತಿಯಲ್ಲಿ– ತನ್ನ ಬೀಜಮಂತ್ರಗಳಿಂದ ಅನ್ನಪ್ರಾಶನ, ಚೌಲ, ಉಪನಯನವನ್ನು ಅಸ್ತ್ರಬೀಜ ಮಂತ್ರದಿಂದ ಮಾಡಬೇಕು. ವಿಷ್ಣು ಮತ್ತು ದುರ್ಗಿಯರಲ್ಲಿ ಮೂಲಾಕ್ಷರಗಳಿಂದ ಮಾಡಬೇಕು. ಎಲ್ಲಾ ದೇವತೆಗಳಲ್ಲೂ ಹೀಗೆ ಕ್ರಿಯೆಗಳನ್ನು ಮಾಡಿ ಉಪಹಾರಗಳನ್ನಿತ್ತು ಪರಿವಾರ ಸಹಿತವಾಗಿ ಪೂಜಿಸಬೇಕು.

**ಅಗ್ನಿಯ ನವಶಕ್ತ್ಯಾದಿಗಳು**– ಓಂ ಪೀತಾಯೈ । ಶ್ವೇತಾಯೈ । ಅರುಣಾಯೈ । ಕೃಷ್ಣಾಯೈ । ಧೂಮ್ರಾಯೈ । ತೀವ್ರಾಯೈ । ವಿಸ್ಫುಲಿಂಗಿನ್ಯೈ । ರುಚಿರಾಯೈ । ಜ್ವಾಲಿನ್ಯೈ ।

ಓಂ ನಮೋ ಭಗವತೇ ಸಕಲ ಯಜ್ಞಸಾಧನಭೂತಾಯ ರಂ ಯಜ್ಞೇಶ್ವರಾಯ ನಮಃ– ಸುವರ್ಣ ಪೀಠಂ ಕಲ್ಪಯಾಮಿ।

ಸ್ವಾತ್ಮ ಸಂಸ್ಥಮಜಂ ಶುದ್ಧಂ ತ್ವಾಮದ್ಯ ಹವ್ಯವಾಹನ ।

ಅರಣ್ಯಾಮಿವ ಹವ್ಯಾಶಂ ಅಗ್ನಾವಾವಾಹಯಾಮ್ಯಹಂ ॥

ಇತ್ಯಾದಿ ಅತ್ರೈವಾಗಚ್ಛಾಗಚ್ಛ ಆವಾಹಯಿಷ್ಯೇ ಆವಾಹನಾದಿ ಸಪ್ತ ಮುದ್ರಾಂ ಪ್ರದರ್ಶ್ಯ– ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ । ತನ್ನೋ ವನ್ಹಿಃ ಪ್ರಚೋದಯಾತ್ ॥ ಇತಿ ತ್ರಿವಾರಮರ್ಘ್ಯಂ ॥ ಭೃಗುಋಷಿಃ । ಗಾಯತ್ರೀ ಛಂದಃ । ಜಾತವೇದಾಗ್ನಿರ್ದೇವತಾ ॥ ॥ ರಾಂ ಸಹಸ್ರಾರ್ಚಿಷೇ ಹೃದಯಾಯ । ರೀಂ ಸ್ವಸ್ತಿ ಪೂರ್ಣಾಯ ಶಿರಸೇ । ರೂಂ ಉತ್ತಿಷ್ಠ ಪುರುಷಾಯ ಶಿಖಾಯೈ । ರೈಂ ಧೂಮವ್ಯಾಪಿನೇ ಕವಚಾಯ । ರೌಂ ಸಪ್ತಜಿಹ್ವಾಯ ನೇತ್ರತ್ರಯಾಯ । ರಃ ಧನುರ್ಧರಾಯ ಅಸ್ತ್ರಾಯ ॥

**ಧ್ಯಾನಂ–**

ತ್ರಿಣಯನಮರುಣಾಪ್ತಂಬದ್ಧಮೌಲಿಂ ಸುಶುಕ್ಲಾಂ–

ಶುಕಮರುಣಮನೇಕಾ ಕಲ್ಪಮಂಭೋಜಸಂಸ್ಥಂ ।

ಅಭಿಹಿತ ನವಶಕ್ತಿಂ ಸ್ವಸ್ತಿ ಕಾಭೀತಿಹಸ್ತಂ

ನಮತ ಕನಕಮಾಲಾಲಂಕೃತಂ ತಂ ಕೃಶಾನುಂ ॥

ಇಷ್ಟಂ ಶಕ್ತಿಃ ಸ್ವಸ್ತಿಕಾಭೀತಿ ಹೇತೀಃ ದೀರ್ಘೈರ್ದೋರ್ಭಿಃ ಧಾರಯಂತಂ ಜಟಾಭಂ ।

ಹೇಮಾಕಲ್ಪಂ ಪದ್ಮಸಂಸ್ಥಂ ತ್ರಿಣೇತ್ರಂ ಧ್ಯಾಯೇದ್ವನ್ಹಿಂ ಬದ್ಧಮೌಲಿಂ ಜಟಾಭಿಃ ॥

ಓಂ ವೈಶ್ವಾನರ ಜಾತವೇದ ಇಹಾವಹ ಲೋಹಿತಾಕ್ಷ ಸರ್ವಕರ್ಮಾಣಿ ಸಾಧಯ ಸ್ವಾಹಾ– ಇತಿ ಮೂಲಮಂತ್ರಃ. ಅಷ್ಟವಾರಂ ಜಪ್ತ್ವಾ, ಪಂಚಪೋಚಾರೈಃ ಷೋಡಶೋಪಚಾರೈರ್ವಾಸಂ ಪೂಜ್ಯ, ಧೂಪ ದೀಪೌ ಕೃತ್ವಾ ಪುಷ್ಪಾಂಜಲಿಂ ಕುರ್ಯಾತ್ ।

ತತಃ ಜಿಹ್ವಾಂಗ ಮೂರ್ತಿ ಮಂತ್ರೈಃ ಸಕೃತ್ಸಕೃದಾಜ್ಯಂ ಜು ಹುಯಾತ್– ಓಂ ಸ್ರ್ಯೂಂ ಹಿರಣ್ಯಾಯೈ ನಮಃ ಸ್ವಾಹಾ । ಷ್ರ್ಯೂಂ ಗಗನಾಯೈ । ಶ್ರ್ಯೂಂ ರಕ್ತಾಯೈ । ವ್ರ್ಯೂಂ ಕೃಷ್ಣಾಯೈ ನಮಃ ಸ್ವಾಹಾ । ಲ್ರ್ಯೂಂ ಸುಪ್ರಭಾಯೈ । ರ್ರ್ಯೂಂ ಬಹುರೂಪಾಯೈ । ಓಂ ಯ್ರ್ಯೂಂ ಅತಿಕ್ತಾಯೈ ನಮಃ ಸ್ವಾಹಾ (ಯಥಾಲಿಂಗಂ ತ್ಯಾಗಃ)

ಓಂ ರಾಂ ಸಹಸ್ರಾರ್ಚಿಷೇ– ಹೃದಯಾಯ । ಓಂ ರೀಂ ಸ್ವಸ್ತಿಪೂರ್ಣಾಯ–ಶಿರಸೇ । ಓಂ ರೂಂ ಉತ್ತಿಷ್ಠಪುರುಷಾಯ – ಶಿಖಾಯೈ । ಓಂ ರೈಂ ಧೂಮವ್ಯಾಪಿನೇ– ಕವಚಾಯ । ಓಂ ರೌಂ ಸಪ್ತಜಿಹ್ವಾಯ– ನೇತ್ರತ್ರಯಾಯ । ಓಂ ರಃ ಧನುರ್ಧರಾಯ– ಅಸ್ತ್ರಾಯ ಫಟ್ ॥

ಓಂ ಅಗ್ನಯೇ ಜಾತವೇದಸೇ । ಓಂ ಅಗ್ನಯೇ ಸಪ್ತ ಜಿಹ್ವಾಯ । ಓಂ ಅಗ್ನಯೇ ಹವ್ಯವಾಹನಾಯ । ಓಂ ಅಗ್ನಯೇ ಅಶ್ವೋದರಾಯ । ಓಂ ಅಗ್ನಯೇ ವೈಶ್ವಾನರಾಯ । ಓಂ ಅಗ್ನಯೇ ಕೌಮಾರತೇಜಸೇ । ಓಂ ಅಗ್ನಯೇ ವಿಶ್ವಮುಖಾಯ । ಓಂ ಅಗ್ನಯೇ ದೇವಮುಖಾಯ ನಮಃ ಸ್ವಾಹಾ– ಯಥಾ ಲಿಂಗಂ ತ್ಯಾಗಃ– ಇತಿ ಹುತ್ವಾ ಮಹಾಗಣಪತಿ ಮೂಲದಿಂದ ಹತ್ತು ಬಗೆಯಾಗಿ ವಿಭಾಗಿಸಿ, ಹಿಂದಿನ ವಿಭಾಗದಿಂದ ಕೂಡಿ ಹೋಮಿಸಬೇಕು. ಓಂ ಓಂ ಸ್ವಾಹಾ । ಓಂ ಓಂ ಶ್ರೀಂ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರವರದ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರವರದ ಸರ್ವಜನಂ ಮೇ ಸ್ವಾಹಾ । ಓಂ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರವರದ ಸರ್ವಜನಂ ಮೇ ವಶಮಾನಯ ಸ್ವಾಹಾ । ಪುನಃ ಪೂರ್ತಿಯಾದ ಗಣಪತಿಯ ಮೂಲದಿಂದ ನಾಲ್ಕು ಆವರ್ತಿ ತುಪ್ಪವನ್ನು ಹೋಮಿಸಿ ಸಾಧ್ಯಮಂತ್ರದಿಂದ ನೂರೆಂಟರ ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಿ, ಮಹಾವ್ಯಾಹೃತಿಗಳಿಂದ ಭೂರಾದಿ ವ್ಯಾಹೃತಿಗಳಿಂದಲೂ ಹೋಮಿಸಬೇಕು.

## ಮಹಾವ್ಯಾಹೃತಿಗಳು

ಓಂ ಭೂರಗ್ನಯೇ ಚ ಪೃಥಿವ್ಯೈ ಚ ಮಹತೇ ಚ ಸ್ವಾಹಾ– ಅಗ್ನಯೇ ಪೃಥಿವ್ಯೈ ಮಹತ ಇದಂ । ಓಂ ಭುವೋ ವಾಯವೇಚಾಂತರಿಕ್ಷಾಯ ದಿವೇ ಚ ಮಹತೇ ಚ ಸ್ವಾಹಾ– ವಾಯವೇ ಅಂತರಿಕ್ಷಾಯ ದಿವೇ ಮಹತ ಇದಂ । ಓಂ ಸುವರಾದಿತ್ಯಾಯ ದಿವೇಚ ಮಹತೇಚ ಸ್ವಾಹಾ– ಆದಿತ್ಯಾಯ ಮಹತ ಇದಂ । ಓಂ ಭೂರ್ಭುವಃ ಸುವಶ್ಚಂದ್ರಮಸೇ ಚ ನಕ್ಷತ್ರೇಭ್ಯಶ್ಚ ದಿಗ್ಭ್ಯಶ್ಚ ಮಹತೇ ಚ ಸ್ವಾಹಾ– ಚಂದ್ರಮಸೇ ನಕ್ಷತ್ರೇಭ್ಯೋ ದಿಗ್ಭ್ಯೋ ಮಹದ್ಭ್ಯ ಇದಂ ॥ * ॥ **ವ್ಯಾಹೃತಯಃ–** ಓಂ ಭೂಃ ಸ್ವಾಹಾ– ಅಗ್ನಯ ಇದಂ । ಓಂ ಭುವಃ ಸ್ವಾಹಾ– ವಾಯವ ಇದಂ । ಓಂ ಸ್ವಃ ಸ್ವಾಹಾ– ಸೂರ್ಯಾಯೇಂದಂ । ಓಂ ಭೂರ್ಭುವಃ ಸ್ವಃ ಸ್ವಾಹಾ– ಪ್ರಜಾಪತಯ ಇದಂ ॥

ಆಮೇಲೆ ಬ್ರಮ್ಹಾರ್ಪಣ ಮಂತ್ರದಿಂದ ಎಂಟಾವರ್ತಿ ಆಜ್ಯಾಹುತಿಯನ್ನು ಹೋಮಿಸಬೇಕು.– ಓಂ ಇತಃ ಪೂರ್ವಂ ಪ್ರಾಣಬುದ್ಧಿ ದೇಹ ಧರ್ಮಾಧಿಕಾರತಃ । ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಸುಮನಸಾ ವಾಚಾ ಕರ್ಮಣಾ ಹಸ್ತಾಭ್ಯಾಂ ಪದ್ಭ್ಯಾಮುದರೇಣ ಶಿಶ್ನಾಯತ್ಸ್ಮೃತಂ ಯದುಕ್ತಂ ಯತ್ಕೃತಂ ತತ್ಸರ್ವಂ ಬ್ರಹ್ಮಾರ್ಪಣಂ ಭವತು ಸ್ವಾಹಾ– ಪರಮಾತ್ಮನ ಇದಂ ॥ ಆಮೇಲೆ **ಪೂರ್ಣಾಹುತಿಯನ್ನು** ಹೋಮಿಸಬೇಕು. ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾ ನ್ಯಾಸನ್ । ತೇಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ಯಜ್ಞಾಯ ಪರಮಾತ್ಮನ ಇದಂ ॥ ಓಂ ಸಪ್ತತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಸಪ್ತ ಋಷಯಃ ಸಪ್ತ ಧಾಮ ಪ್ರಿಯಾಣಿ । ಸಪ್ತ ಹೋತ್ರಾಸಃ ಸಪ್ತ ಧಾತ್ವಾ ಯಜಂತಿ ಸ್ತಪ್ತ ಯೋನೀ ರಾಪೃಣಸ್ವಾಘೃತೇನ ಸ್ವಾಹಾ– ಸಪ್ತವತೇ ಅಗ್ನಯ ಇದಂ ॥ ಹೋಮವನ್ನು ಪೂರ್ತಿಗೊಳಿಸಿ ಪ್ರಸನ್ನ ಪೂಜೆಯನ್ನುಮಾಡಿ ಪರಿಶುದ್ಧತೆಯಿಂದ ಸಂರಕ್ಷಿಸಬೇಕು.

* * * *

## ಹೋಮಸಾಮಾನ್ಯ ಕ್ರಮ

ಕುಂಡದಲ್ಲಿ ಪರಿಸ್ತರಣಾದಿಯಾಗಿ ಮಾಡಿ ಉಪಲೇಪನ ಮಾಡಿ– ಅಗ್ನಿಃ ಸೋಮಃ ಆಜ್ಯಭಾಗೌ ವಿಷ್ಣುಃ ಮೊದಲಾಗಿ ಆಯಾಯ ದೇವತೆಗಳ ಕೊನೆಯಲ್ಲಿ ಅಗ್ನಿಃ ಸ್ವಿಷ್ಟಕೃತ್ ಎಂದು ಮೊದಲಾಗಿ ಅನ್ವಾಧಾನವನ್ನು ಮಾಡಿ ದರ್ಭಮುಷ್ಟಿ, ಸಮಿಧಗಳನ್ನು ಕಟ್ಟಿ ಉತ್ತರ ಭಾಗದಲ್ಲಿರಿಸಿ ಪರಿಸಮೂಹನ ಮಾಡಿ ಪರಿಸ್ತರಣವನ್ನು ಹಾಕಿ ಪ್ರಣೀತಾದಲ್ಲಿ ದರ್ಭೆಯನ್ನಿರಿಸಿ, ಪ್ರಾದೇಶ ಮಾತ್ರದ ದರ್ಭೆಗಳೆರಡನ್ನು ಕತ್ತರಿಸಿ ಪ್ರಣೀತಾ ಪಾತ್ರವನ್ನು ಎತ್ತಿ ಹಿಡಿದು ತನ್ನ ಇದಿರಿನಲ್ಲಿರಿಸಿ ಬಲದ ಕೈಯಿಂದ ಆ ಪವಿತ್ರವನ್ನು ಆ ಪಾತ್ರೆಯ ಮೇಲಿರಿಸಿ ಎಡಗೈಯಿಂದ ಹಿಡಿದು, ಬಲಗೈಯಿಂದ ನೀರನ್ನು ಹಾಕಿ, ಪರ್ಯುಕ್ಷಣ ಮಾಡಿ, ದರ್ಭೆಯ ಮೇಲಿರಿಸಿ (ಉತ್ತರದಲ್ಲಿ) ಪವಿತ್ರವನ್ನು ಅದರಿಂದ ತೆಗೆದು ಬೇರೆ ದರ್ಭೆಗಳಿಂದ ಮುಚ್ಚಬೇಕು. ಪುನಃ ಆಜ್ಯಸ್ಥಾಲಿಯನ್ನು ತನ್ನ ಇದುರಿನಲ್ಲಿರಿಸಿ, ಬಲಗೈಯಿಂದ ಪವಿತ್ರವನ್ನಿರಿಸಿ ಎಡಗೈಯಿಂದ ಹಿಡಿದುಕೊಂಡು ಬಲಗೈಯಿಂದ ತುಪ್ಪವನ್ನು ಹಾಕಿ ಕುಂಡದ ಮೇಖಲೆಯ ಮೇಲೆ ಮೂರು ಕೆಂಡಗಳನ್ನಿರಿಸಿ, ಅದರಲ್ಲಿ ಆಜ್ಯಸ್ಥಾಲಿಯನ್ನಿರಿಸಿ, ಎರಡು ದರ್ಭೆಗಳನ್ನು ಬೆಂಕಿಯಲ್ಲಿ ಹೊತ್ತಿಸಿ, ಅದರ ಮೇಲಿರಿಸಿ, ಅಂಗುಷ್ಠಪರ್ವ ಮಾತ್ರದ ಎರಡು ದರ್ಭಾಗ್ರವನ್ನು ಕತ್ತರಿಸಿ ಆಜ್ಯಸ್ಥಾಲಿಯಲ್ಲಿ (ತೊಳೆದು) ಹಾಕಿ ಹವಿಸ್ಸಿನಿಂದ ಕೂಡಿ ಪರ್ಯಗ್ನಿಕರಣವನ್ನು ಮಾಡಿ ಆಜ್ಯಸ್ಥಾಲಿಯನ್ನು ಉತ್ತರಭಾಗದಲ್ಲಿ ಎಳೆದು ಕೆಳಗಿರಿಸಿ, ಇದುರಿನಲ್ಲಿರಿಸಿ, ಕೆಂಡಗಳನ್ನು ಅಗ್ನಿಯಲ್ಲಿ ಸೇರಿಸಿ, ಕೈತೊಳೆದುಕೊಂಡು, ಉತ್ತರದಲ್ಲಿ ತುದಿಯಾಗಿ ಎರಡು ಕೈಗಳ ಹೆಬ್ಬೆರಳು ಮತ್ತು ಅನಾಮಿಕೆಗಳಿಂದ ಹಿಡಿದುಕೊಂಡು **'ಸವಿತುಷ್ಟ್ವಾಪ್ರಸವ ಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ'** ಒಮ್ಮೆ ಮಂತ್ರವನ್ನು ಹೇಳಿ ಮೂರಾವರ್ತಿ ಉತ್ಪವನವನ್ನು (ಗಾಳಿಸಿ)ಮಾಡಿ ಈ ಎರಡು ಪವಿತ್ರ (ದರ್ಭೆಯ ತುಂಡನ್ನು) ವನ್ನು ತೊಳೆದು ಬೆಂಕಿಯಲ್ಲಿ ಹಾಕಿ, ಇದುರಿನಲ್ಲಿ ದರ್ಭೆಯನ್ನು ಹರಡಿ ಆಜ್ಯಸ್ಥಾಲಿಯ್ನನಿರಿಸಿ ಸ್ರುವ ಹಾಗೂ ಜುಹುವನ್ನು ದರ್ಭೆಗಳಿಂದ ಉಜ್ಜಿ ಬಿಟ್ಟು ಅಗ್ನಿಯಲ್ಲಿ ಕಾಯಿಸಿ ಆಜ್ಯಸ್ಥಾಲಿಯಲ್ಲಿರಿಸಿ (ದರ್ಭೆಗಳನ್ನು ಅಗ್ನಿಯಲ್ಲಿ ಹಾಕಬೇಕು) – ಪುನಃ ಹವಿಸ್ಸಿನಲ್ಲಿ ಉಪಸ್ತರಣ ಮಾಡಿ (ಅಭಿಘಾರ ಮಾಡಿ) ಉತ್ತರದಲ್ಲಿ ಇಳಿಸಿ ಪುನಃ ಅಭಿಘಾರವನ್ನು ಮಾಡಿ ದಕ್ಷಿಣದಲ್ಲಿ ಇಡಬೇಕು. ಆಮೇಲೆ ದಕ್ಷಿಣ ಹಾಗೂ ಉತ್ತರವೆಂಬ ಕ್ರಮದಿಂದ ಪರಿಧಿಗಳನ್ನಿರಿಸಿ ಪೂರ್ವದಲ್ಲಿ ಆದಿತ್ಯನನ್ನು ಭಾವಿಸಿ ಹೂವಿನಿಂದ ಪೂಜಿಸಿ, ಮೇಲಿನ ಸಮಿಧವನ್ನು ಹೋಮಿಸಿ, ಪರ್ಯುಕ್ಷಣವನ್ನು ಮಾಡಿ ಗಂಧ ಹೂವುಗಳಿಂದ ಪೂಜಿಸಿ, ಪರ್ಯುಕ್ಷಣ ಮಾಡಿ ಪೀಠಪೂಜೆಯನ್ನು ಮಾಡಿ, ಮೂಲಮಂತ್ರದಿಂದಾವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ, ನೈವೇದ್ಯ ಕಾಲದಲ್ಲಿ ಸಮಿಧವನ್ನು ಹಿಡಿದುಕೊಂಡು ಅದರ ಕಟ್ಟನ್ನು ಬಿಡಿಸಿ ಹೇಳಿದ ಮಂತ್ರದಿಂದ ಹೋಮಿಸಿ (ಅಯಂತ ಇಧ್ಮ ಆತ್ಮಾ * * ) ಆಘಾರಗಳನ್ನೂ ಚಕ್ಷುಷ್ಪನ್ನೂ

ಹೋಮಿಸಬೇಕು. ಚಕ್ಷುಸ್ಸುಗಳ ಹೋಮದ ಕೊನೆಯಲ್ಲಿ ಪೀಠವನ್ನು ಪೂಜಿಸಿ ಮೂಲ ಮಂತ್ರದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಬೇಕು. ಪ್ರಣವ, ವ್ಯಾಹೃತಿ ಪೀಠ ಮಂತ್ರಗಳಿಂದ ಒಂದೊಂದಾವೃತ್ತಿಯಲ್ಲಿ ತುಪ್ಪವನ್ನು ಹೋಮಿಸಿ, ಶಿವನಲ್ಲಿ ತತ್ಪುರುಷದಿಂದ, ದುರ್ಗಿಯಲ್ಲಿ ಜಾತವೇದಸೇ– ಮೊದಲಾದುವುಗಳಿಂದ. ವಿಷ್ಣು, ಶಂಕರನಾರಾಯಣ, ಸುಬ್ರಮ್ಹಣ್ಯ, ಗಣಪತಿಯರಲ್ಲಿ ಆಯಾಯ ದೇವತೆಯ ನಿಜಗಾಯತ್ರಿಯಿಂದಲೂ ಶಾಸ್ತಾರನಲ್ಲಿ ವ್ಯಾಹೃತಿಯಿಂದ ಕೂಡಿದ ಗಾಯತ್ರಿಯಿಂದ ಪಕ್ವಾಹುತಿಯನ್ನು ಹೋಮಿಸಬೇಕು. ಪುನಃ ಪೂಜಾ ಮಂತ್ರಗಳಿಂದ ಒಂದೊಂದು ಆಜ್ಯಾಹುತಿಯನ್ನು ಹೋಮಿಸಬೇಕು.

**ಪೂರ್ಣಾಹುತಿ ಮಂತ್ರಗಳು**– ಶಿವನಲ್ಲಿ ವ್ಯೋಮವ್ಯಾಪಿ, ದಶಾಕ್ಷರ ಮಂತ್ರದಿಂದ (ಓಂ ಆಂ ಈಂ ಓಂ ವ್ಯೋಮ ವ್ಯಾಪಿನೇ ಓಂ ವೌಷಟ್ (ವ್ಯೋಮವ್ಯಾಪಿನ ಇದಂ), ವಿಷ್ಣುವಿನಲ್ಲಿ ಹನ್ನೆರಡಕ್ಷರದ ಮಂತ್ರದಿಂದ (ಓಂ ನಮೋ ಭಗವತೇ ವಾಸುದೇವಾಯ), ಶಾಸ್ತಾರನಲ್ಲಿ– ಓಂ ಭೂರ್ಭುವಃ ಸುವಃ ಎಂದು, ಶಂಕರನಾರಾಯಣ, ದುರ್ಗಾ, ಸುಬ್ರಮ್ಹಣ್ಯ, ಗಣಪತಿಯರಲ್ಲಿ– ವೌಷಡಂತವಾದ ಮೂಲಮಂತ್ರದಿಂದ ಪೂರ್ಣಾಹುತಿಯು. ದ್ರವ್ಯಭೇದ, ಮಂತ್ರಭೇದ ಕೊನೆಯಲ್ಲಿ ಪೂರ್ಣಾಹುತಿಯನ್ನು ಮಾಡಬೇಕು. ಇದು ಹೋಮ ಸಾಮಾನ್ಯ ನಿಯಮವು.

**ಗಾಯತ್ರಿ ಮಂತ್ರಗಳು**– ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹೀ । ತನ್ನೋ ವಿಷ್ಣುಃ ಪ್ರಚೋದಯಾತ್– ಇದು ವಿಷ್ಣುವಿನಲ್ಲಿ. ಶಂಕರಾಯ ವಿದ್ಮಹೇ ನಾರಾಯಣಾಯ ಧೀಮಹೇ । ತನ್ನಃ ಪುರುಷಃ ಪ್ರಚೋದಯಾತ್– ಇದು ಶಂಕರನಾರಾಯಣನಲ್ಲಿ ॥ * ॥ ಶಕ್ತಿ ಹಸ್ತಾಯ ವಿದ್ಮಹೇ ಷಡಾನನಾಯ ಧೀಮಹೀ ತನ್ನ ಸ್ಕಂದಃ ಪ್ರಚೋದಯಾತ್– ಇದು ಗುಹನಲ್ಲಿ ॥ * ॥ ವಿನಾಯಕಾಯ ವಿದ್ಮಹೇ ಗಜವಕ್ತ್ರಾಯ ಧೀಮಹೀ ತನ್ನೋ ವಿಘ್ನಃ ಪ್ರಚೋದಯಾತ್– ಹೀಗೆ ವಿಘ್ನೇಶನಲ್ಲಿ ॥ * ॥ ಭೂತನಾಥಾಯ ವಿದ್ಮಹೇ ಭವಪುತ್ರಾಯ ಧೀಮಹೀ । ತನ್ನಃ ಶಾಸ್ತಾ ಪ್ರಚೋದಯಾತ್– ಹೀಗೆ ಶಾಸ್ತಾರನಲ್ಲಿ ॥ * ॥ ಕಾತ್ಯಾಯನ್ಯೈ ಚ ವಿದ್ಮಹೇ ಕನ್ಯಾಕುಮಾರ್ಯೈ ಧೀಮಹೀ । ತನ್ನೋ ದುರ್ಗಾ ಪ್ರಚೋದಯಾತ್– ಹೀಗೆ ದುರ್ಗಿಯಲ್ಲಿ ॥ * ॥ ತನ್ಮಹೇಶಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹೀ । ತನ್ನಃ ಶಿವಃ ಪ್ರಚೋದಯಾತ್– ಇದು ಮಹೇಶ ಗಾಯತ್ರೀ ॥

**ಪಕ್ವಮಂತ್ರಗಳು**– ಶಿವನಲ್ಲಿ– ತತ್ಪುರುಷಾಯ– ಎಂದು; ದುರ್ಗಿಯಲ್ಲಿ– ಜಾತವೇದಸೇ ಸುನವಾಮ ಸೋಮಮರಾತೀ ಯತೋ ನಿದಹಾತಿ ವೇದಃ । ಸನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ಬೇರೆ ಎಡೆಯಲ್ಲಿ ಗಾಯತ್ರಿ ಮಂತ್ರವು– (ಶಿವನಲ್ಲಿ– ಓಂ ಆಂ ಈಂ ಊಂ ವ್ಯೋಮವ್ಯಾಪಿನೇ ಓಂ ವೌಷಟ್; ವಿಷ್ಣುವಿನಲ್ಲಿ– ಅಂ ಓಂ ನಮೋ ಭಗವತೇ ವಾಸುದೇವಾಯ ಅಃ ವೌಷಟ್; ಶಾಸ್ತಾರನಲ್ಲಿ– ಭೂರ್ಭುವಸ್ವಃ ವೌಷಟ್ । ಪೂರ್ಣಾಹುತಿ ಮಂತ್ರಗಳು.)

* * * *

## ಶಯ್ಯಾ ಕಲ್ಪನೆ

ಅಗ್ನಿಜನನದ ಅನಂತರದಲ್ಲಿ ಪರಿಶುದ್ಧವಾದ ಮಂಟಪದ ವೇದಿಯ ದಕ್ಷಿಣದ ಅರ್ಧದಲ್ಲಿ ಮೂಲ ಪ್ರಾಸಾದದ ಎದುರಾಗಿ (ಪೂರ್ವ ಬಾಗಿಲಾದರೆ ಪೂರ್ವಕ್ಕೆ ತಲೆಯಾಗಿ, ಪಶ್ಚಿಮ ಬಾಗಿಲಾದರೆ ಪಶ್ಚಿಮಕ್ಕೆ ತಲೆಯಾಗಿ) ಶಯ್ಯಾಸ್ಥಾನವನ್ನು ಕಲ್ಪಿಸಿ, ಅಲ್ಲಿ ದೊಡ್ಡದಾಗಿ ಸ್ವಸ್ತಿಕವನ್ನು ಬರೆದು ಅಲ್ಲಿ ಎಂಟು ಕೊಳಗ (೩೨ಸೇರು) ಬತ್ತವನ್ನು, ಅದರ ಅರ್ಧ ಅಕ್ಕಿಯನ್ನೂ, ಎಳ್ಳು ಮತ್ತು ಸಾಸಿವೆಗಳನ್ನು ದರ್ಭೆ ಮೊದಲಾದವುಗಳಿಂದ ಮೂಲದಿಂದ ಸಿದ್ಧಗೊಳಿಸಿ, ಕಂಬಳಿಯ ಬಟ್ಟೆ ಮೊದಲಾದವುಗಳಿಂದ ಸಿದ್ಧಗೊಳಿಸಿದ(ತಯಾರಿಸಿದ) ಹಾಸಿಗೆಯನ್ನು **ವಿಷ್ಣುವಿನಲ್ಲಿ**– ದ್ವಾದಶಾಕ್ಷರ ಮಂತ್ರದಿಂದ, **ಬೇರೆ ದೇವತೆಗಳಲ್ಲಿ** ಮೂಲಮಂತ್ರದಿಂದ ಹರಡಿ (ಹಾಸಿ) ಮೇಲುಹೊದಿಕೆ, ತಲೆದಿಂಬಿನಿಂದ ಕೂಡಿದ ಹಾಸಿಗೆಯಲ್ಲಿ ಸದಾಸ್ಥಿರವಾಗಿ ನೆಲೆಸಿರುವ ರಮಾ, ಉಮಾ ಮೊದಲಾದವರನ್ನು, **ವಿಷ್ಣುವಿನಲ್ಲಿ**– ಶ್ರೀಂ ಬೀಜದಿಂದ **ಉಳಿದ ದೇವತೆಗಳಲ್ಲಿ** ಹ್ರೀಂ ಬೀಜದಿಂದಲೂ ಆವಾಹಿಸಿ, ಪೀಠಪೂಜೆಯನ್ನು ಮಾಡಿ ಪೂಜಿಸಬೇಕು. ಅನಂತರ ಎಲ್ಲಾ ದೇವತೆಗಳಲ್ಲಿಯೂ ಹಾಸಿಗೆಯ ತಲೆಯ ಭಾಗದಲ್ಲಿ **ಶಾಸ್ತಾರನಲ್ಲಿ**– ಈಶಾನ್ಯ ದಿಕ್ಕಿನಲ್ಲಾಗಲೀ, **ಶಿವನಲ್ಲಿ**– ಆಪೋಹಿಷ್ಠಾ ಮೊದಲಾದ ಮಂತ್ರಗಳಿಂದ, **ಕುಮಾರನಲ್ಲಿ**– ಆಪೋದೇವೀಃ– ಈ ಮಂತ್ರದಿಂದ ಉಳಿದ ದೇವತೆಗಳಲ್ಲಿ ಮೂಲಮಂತ್ರದಿಂದ ನಿದ್ರಾಕಲಶವನ್ನು ಗಂಧೋದಕದಿಂದ ತುಂಬಿಸಿ ಕಲಾ, ತತ್ತ್ವಾವಾಹನ ಮೊದಲಾದುವುಗಳಿಂದ ಪೂಜಿಸಬೇಕು. ಹಾಸಿಗೆಯ ಪಕ್ಕದಲ್ಲಿ ಸುತ್ತಲೂ ಎಂಟು ದಿಕ್ಕುಗಳಲ್ಲಿ ವಿದ್ಯೇಶ ಕಲಶಗಳನ್ನು ಸ್ಥಾಪಿಸಿ ಪೂಜಿಸಬೇಕು. **ವಿಷ್ಣುವಿನಲ್ಲಿ**– ಮೂಲಮಂತ್ರಾಕ್ಷರಗಳಿಂದ ಕೂಡಿದ ಚಕ್ರಪೂಜೆಯಲ್ಲಿ ಹೇಳಿದ ವಿಷ್ಣು ಮಧುಸೂದನ ಮೊದಲಾದವರನ್ನು ಪೂರ್ವಾದಿ ದಿಕ್ಕು ವಿದಿಕ್ಕುಗಳಲ್ಲಿ ಪೂಜಿಸಬೇಕು. **ಶಿವನಲ್ಲಿ** ಅನಂತ ಸೂಕ್ಷ್ಮ ಮೊದಲಾಗಿ ಪೂಜಿಸಬೇಕು. **ಶಂಕರನಾರಾಯಣನಲ್ಲಿ** ಆ ಎರಡು ಮಂತ್ರಗಳಿಂದಲೂ– ಅನಂತಾಯ ವಿಶ್ವಾತ್ಮನೇ ನಮಃ ಇವೇ ಮೊದಲಾಗಿ ಪೂಜಿಸಬೇಕು. **ಶಾಸ್ತಾರನಲ್ಲಿ**– ಮಂಟಪ ಸಂಸ್ಕಾರದಲ್ಲಿ ಹೇಳಿದ ಗೋಪ್ತಾದಿಗಳು. **ದುರ್ಗಿಯಲ್ಲಿ**– ಜಯಾದಿ ಶಕ್ತಿಗಳು. **ಸ್ಕಂದನಲ್ಲಿ**– ಸನತ್ಕುಮಾರ ಮೊದಲಾದ ಮೂರ್ತಿಗಳು. **ಗಣಪತಿಯಲ್ಲಿ** ಗಣಂಜಯಾದಿ ಮೂರ್ತಿಗಳು. **ಷಣ್ಮುಖನಲ್ಲಿ** ನಾಲ್ಕು ದಿಕ್ಕುಗಳಲ್ಲಿ ಮೂಲದಿಂದಲೇ ಆವಾಹಿಸಿದರೂ ಆವಾಹಿಸಬಹುದು. **ಗುಹನಲ್ಲಿ** ವೇದಿ ಮಧ್ಯದಲ್ಲಿ ಕ್ರಮದಂತೆ ಷಡ್ದಲದ ಮಂಡಲದಲ್ಲಿ ಕುಮಾರ ದೇವತಾಕವಾದ

ಕಲಶವನ್ನು ಪ್ರತಿಷ್ಠಾಪಿಸಿ ಪೂಜಿಸಿ ಅದರ ಪೂರ್ವಭಾಗದಲ್ಲಿ ದಕ್ಷಿಣೋತ್ತರಕ್ಕೆ ಉದ್ದವಾಗಿರುವ ನಿದ್ರಾಕಲಶ ವಿದ್ಯೇಶ ಕಲಶಗಳಿಂದ ಕೂಡಿದ ಹಾಸಿಗೆಯನ್ನು ಕಲ್ಪಿಸಬೇಕು. ಗುಹನಿಗೆ ಸಂಬಂಧಿಸಿದ ಮಂಡಲದಲ್ಲಿ ಪೀಠಪೂಜೆ ಮಾಡಿದ ನಂತರ ಪೂರ್ವದಿಕ್ಕಿನ ದಲದಿಂದಾರಂಭಿಸಿ ಬ್ರಹ್ಮ, ಮಹಾಕಾಳೀ, ಗಣೇಶ, ವಿಷ್ಣು, ಈಶ್ವರ, ಶಾಸ್ತಾರರನ್ನು ನಮಃ ಶಬ್ದದಿಂದ ಚತುರ್ಥ್ಯಂತವಾಗಿ ಪೂಜಿಸಬೇಕು. ಚಿನ್ನದ್ದಾದ ಪದ್ಮ, ಗಜ, ಮಯೂರ, ಶಕ್ತಿ, ವಜ್ರಗಳನ್ನಿರಿಸಿ ಕಲಶದಲ್ಲಿ ಲಿಪಿ ಪಂಕಜವನ್ನು ಪೂಜಿಸಿ, ಗುಹನನ್ನು ಆವಾಹಿಸಿ ಪರಿವಾರಗಳೊಂದಿಗೆ ಪೂಜಿಸಬೇಕು. ವಜ್ರಾದಿ ಆವರಣಕ್ಕೆ ಮೊದಲು ದಿಕ್ಪಾಲರ ಅನಂತರದಲ್ಲಿ ಈಶ ಇಂದ್ರರ ಮಧ್ಯಾದಿ ಅಂತರಾಳಗಳಲ್ಲಿ, ಓಂ– ಆದಿತ್ಯೇಭ್ಯೋ ನಮಃ, ಅಶ್ವಿಭ್ಯಾಂ, ಪಿತೃಭ್ಯೋ , ಗಣಪತಯೇ, ಮಾತೃಭ್ಯೋ, ಅಪ್ಸರೋಭ್ಯೋ ವಸುಭ್ಯೋ ರುದ್ರೇಭ್ಯೋ ನಮಃ– ಹೀಗೆ ಕ್ರಮವಾಗಿ ಪೂಜಿಸಿ ಸಂತೋಷಗೊಳಿಸಬೇಕು. **ವಿಷ್ಣುವಿನಲ್ಲಿ**– ತಲೆಯ ಭಾಗದಲ್ಲಿ ಕಾಲುಗಳ ಸಮೀಪದಲ್ಲಿ ಪಕ್ಕಗಳೆರಡರಲ್ಲಿ ಇದಿರು ಭಾಗದಲ್ಲಿ– ತುಪ್ಪ, ಜೇನು, ಹಾಲು, ಶಾಂತಿಜಲ ಪಂಚಗವ್ಯಗಳಿಂದ ತುಂಬಿಸಲ್ಪಟ್ಟ ಕ್ರಮವಾಗಿ ಚಿನ್ನ, ಬೆಳ್ಳಿ, ತಾಮ್ರ, ಕಂಚು, ಮಣ್ಣುಗಳಿಂದ ಸಿದ್ಧವಾದ ಪಾತ್ರೆಗಳನ್ನು ಆಯಾಯ ಪಂಚತತ್ತ್ವಗಳಿಂದ ಕ್ರಮವಾಗಿ ಇರಿಸಿ ಅದನ್ನು ಮುಟ್ಟಿಕೊಂಡು ಜಪಿಸಬೇಕು. **ಶಿವನಲ್ಲಿ**– ಹಾಗೆಯೇ ಕಾಲುಗಳ ಸಮೀಪದಲ್ಲಿ ಎರಡು ಪಾತ್ರೆಗಳಲ್ಲಿ ಅರ್ಘ್ಯ, ಪಾದ್ಯಗಳನ್ನು ಎರಡು ಪಕ್ಕದ ಪಾತ್ರೆಗಳಲ್ಲಿ ಹಾಲು, ಜೇನುಗಳನ್ನು ಮೂಲಮಂತ್ರದಿಂದ ಇಡಬೇಕು. **ಶಾಸ್ತಾರನಲ್ಲಿ**– ತಲೆಯ ಸಮೀಪದಲ್ಲಿ ಪಾದಗಳ ಪಕ್ಕದಲ್ಲಿಯೂ ಮೂಲಮಂತ್ರದಿಂದ ತುಪ್ಪ, ಜೇನುಗಳನ್ನೂ **ಗುಹನಲ್ಲಿ**– ಕಾಲ್ಗಳೆರಡರ ಹತ್ತಿರ ಬೆಳ್ಳಿಯ ಪಾತ್ರೆಗಳಲ್ಲಿ– ಓಂ ನಮಃ ಷಣ್ಮುಖಾಯ– ಈ ಮಂತ್ರದಿಂದ ಅರ್ಘ್ಯಪಾದ್ಯಗಳನ್ನಿರಿಸಬೇಕು. ಇಲ್ಲಿ ವಿಶೇಷವಾದ ದ್ರವ್ಯಗಳನ್ನು ಕಲಶಪಟಲದಿಂದ ತಿಳಿದುಕೊಳ್ಳಬೇಕು. **ದುರ್ಗಿಯಲ್ಲಿ**– ತಲೆಯ ಸಮೀಪದಲ್ಲಿ ಚಿನ್ನದ ಪಾತ್ರೆಯಲ್ಲಿ ಇಷೇತ್ವಾ– ಮಂತ್ರದಿಂದ ತುಪ್ಪವನ್ನೂ, ಪಾದ ಸಮೀಪದಲ್ಲಿ ಬೆಳ್ಳಿಯ ಪಾತ್ರೆಯಲ್ಲಿ ಮಧುವಾತಾ– ಮಂತ್ರದಿಂದ ಜೇನನ್ನೂ ಇಡಬೇಕು. ಪಕ್ಕಗಳೆರಡರಲ್ಲಿ ಕಂಚು ಹಾಗೂ ತಾಮ್ರದ ಪಾತ್ರೆಗಳಲ್ಲಿ ಅರ್ಘ್ಯ ಮತ್ತು ಪಾದ್ಯಗಳನ್ನು ಮೂಲಮಂತ್ರದಿಂದ ಇಡಬೇಕು. **ಶಂಕರನಾರಾಯಣನಲ್ಲಿ**– ವಿಷ್ಣುವಿನಲ್ಲಿ ಹೇಳಿದುದನ್ನು ಪರಿಗ್ರಹಿಸಬೇಕು. **ಗಣಪತಿಯಲ್ಲಿ**– ಶಿವನಲ್ಲಿ ಹೇಳಿದುದನ್ನು ಸ್ವೀಕರಿಸಬೇಕು. ಅಷ್ಟಮಂಗಲಗಳು, ಮಂಗಲಪಾಲಿಕೆ, ಪ್ರದೀಪ ಮೊದಲಾದುವನ್ನು ಸುತ್ತಲೂ ಇರಿಸಿ, ಮಂಟಪದ ಮಧ್ಯಭಾಗವನ್ನು ಅಲಂಕರಿಸಬೇಕು. **ಶಿವನಲ್ಲಿ**– ದಿಕ್ಕುಗಳಲ್ಲಿ ಶಂಖ, ಚಕ್ರ, ಧ್ವಜ, ಕನ್ನಡಿ, ವೃಷಭ, ಅಂಕುಶ, ಚಾಮರ, ಯಾಜ್ಞೀಯ ವೃಕ್ಷದಿಂದ ತಯಾರಿಸಿದ ಮತ್ಸ್ಯಯುಗ್ಮ ಸ್ವಸ್ತಿಕದಲ್ಲಿಡಬೇಕು. **ವಿಷ್ಣುವಿನಲ್ಲಿ**– ಶಂಖ, ಚಕ್ರ, ಧ್ವಜ, ಶ್ರೀವತ್ಸ, ಆದರ್ಶ, ವೃಷಭ, ಮತ್ಸ್ಯದ್ವಂದ್ವ, ಪೂರ್ಣಕುಂಭಗಳನ್ನು ಇರಿಸಬೇಕು. **ಶಂಕರನಾರಾಯಣನಲ್ಲಿ**– ಸ್ವಸ್ತಿಕ, ಪದ್ಮ, ಶಂಖ, ಪೂರ್ಣಕುಂಭ, ಆದರ್ಶ(ಕನ್ನಡಿ), ಉತ್ಪಲ, ನಂದ್ಯಾವರ್ತ, ಶ್ರೀವತ್ಸ– ಇವುಗಳನ್ನಿಡಬೇಕು. **ದುರ್ಗಿಯಲ್ಲಿ**– ಶ್ರೀವತ್ಸ, ಕುಂಭ, ಭೇರಿ, ಆದರ್ಶ, ಮತ್ಸ್ಯಯುಗ್ಮ, ಅಂಕುಶ, ಶಂಖ, ನಂದ್ಯಾವರ್ತ– ಇವುಗಳನ್ನಿಡಬೇಕು. **ಸ್ಕಂದನಲ್ಲಿ** ಪೂರ್ಣಘಟ, ಧ್ವಜ, ವಜ್ರ, ಸ್ವಸ್ತಿಕ, ಶಕ್ತಿ, ಚಾಮರ ದ್ವಿತಯ, ಗಜ, ಮಯೂರಗಳನ್ನಿರಿಸಬೇಕು. **ಗಣಪತಿ ಮತ್ತು ಶಾಸ್ತಾರನಲ್ಲಿ**– ದರ್ಪಣ, ಪೂರ್ಣಕುಂಭ, ವೃಷಣ, ಚಾಮರದ್ವಯ, ಶ್ರೀವತ್ಸ, ಸ್ವಸ್ತಿಕ, ಶಂಖ, ದೀಪ ಇವುಗಳನ್ನಿರಿಸಬೇಕು. ಹೀಗೆ ಮಂಟಪವನ್ನು ಸಿದ್ಧಗೊಳಿಸಿ, ಅದರ ಹೊರಭಾಗದಲ್ಲಿ ಈಶಾನ್ಯಭಾಗದ ಇನ್ನೊಂದು ಮಂಟಪದಲ್ಲಿ ಭದ್ರ ಪೀಠವನ್ನಿರಿಸಿ ಪೀಠಪೂಜೆಯನ್ನು ಮಾಡಿ, ದರ್ಭೆ, ಹೂವು, ಬಟ್ಟೆಗಂಟು ಮೊದಲಾದವುಗಳಿಂದ ಕೂಡಿ ಭದ್ರ ಪೀಠ ಪ್ರತಿಮೆಯನ್ನು ತರಲು ತೀರ್ಥಕ್ಕೆ ಹೋಗಬೇಕು. ಪ್ರತಿಮೆಯ ರಕ್ಷಣೆಗಾಗಿ ಈ ಮೊದಲು ಇರಿಸಿದ ದೇವತೆಗಳ ಗುಂಪುಗಳನ್ನು ನೀರಿನಲ್ಲಿರುವ ಬಿಂಬದಲ್ಲಿ ವಿಲಯನಗೊಳಿಸಿ ಪ್ರತಿಮೆಯನ್ನು ನೀರಿನಿಂದ ಮೇಲಕ್ಕೆತ್ತಿ ಹಿಂದೆ ಸುತ್ತಿದ ಬಟ್ಟೆಯನ್ನು ತೆಗೆದು ಹಾಕಿ, ದರ್ಭೆಗಳಿಂದ ಸರಿಯಾಗಿ ಉಜ್ಜಿ, ನೀರನ್ನು ಹಾಕಿ ಸ್ವಚ್ಛಗೊಳಿಸಬೇಕು. ಪ್ಲಾವನ, ಕಾಠಿನ್ಯ, ಸುಷರೀಕರಣಗಳನ್ನು ಮಾಡಿ **ಭೂತಸೃಷ್ಟಿಯನ್ನು** ಮಾಡಬೇಕು.– ಓಂ ಪರಮಾತ್ಮನೇ ನಮಃ, ಓಂ ಹ್ಲಾಂ ನಮಃ ಪರಾಯ ಆಕಾಶಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ, ಹ್ಲೌಂ ನಮಃ ಪರಾಯಾಕಾಶಾತ್ಮನೇ ನಮಃ– ಶಬ್ದ ಶ್ರೋತ್ರಸಹಿತಂ ಆಕಾಶ ಭೂತಂ ಪರಮಾತ್ಮನಃ ಸೃಜಾಮಿ– ಬ್ರಹ್ಮರಂಧ್ರಾತ್ತಾಲ್ವಂತಂವ್ಯಾಪ್ಯ । ಓಂ ಹ್ಲೈಂ ನಮಃ ಪರಾಯ ವಾಯ್ವಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಎರಡು ಪ್ರಾಣಾಯಾಮಗಳನ್ನು ಮಾಡಿ ಹ್ಲೈಂ ನಮಃ ಪರಾಯ ವಾಯ್ವಾತ್ಮನೇ ನಮಃ– ಶಬ್ದಸ್ಪರ್ಶ ವಾಕ್ಪಾಣಿ ಸಹಿತ ವಾಯುಭೂತಮಾಕಾಶಾತ್ಸೃಜಾಮಿ– ತಾಲ್ವಾದಿಕಂಠಾಂತಂವ್ಯಾಪ್ಯ ॥ ಓಂ ಹ್ಲೂಂ ನಮಃ ಪರಾಯ ತೇಜ ಆತ್ಮನೇ ಹುಂಫಟ್ ಹೀಗೆ ಇಪ್ಪತ್ತೈದು ಸಂಖ್ಯೆಯ ಮೂರು ಪ್ರಾಣಾಯಾಮಗಳನ್ನು ಮಾಡಿ ಹ್ಲೂಂ ನಮಃ ಪರಾಯ ತೇಜ ಆತ್ಮನೇ ನಮಃ– ಶಬ್ದ ಸ್ಪರ್ಶರೂಪ ಚಕ್ಷುಃ ಪಾದಯುಕ್ತ ತೇಜೋಭೂತಂ ವಾಯುಭೂತಾತ್ಸೃಜಾಮಿ ॥ ಕಂಠಾದಿಹೃದಯಾಂತಂವ್ಯಾಪ್ಯ ॥ ಓಂ ಹ್ಲೀಂ ನಮಃ ಪರಾಯ ಅಬಾತ್ಮನೇ ಹುಂಫಟ್– ಇತಿ ಪಂಚ ವಿಂಶತಿ ಸಂಖ್ಯೆಯ ನಾಲ್ಕು ಪ್ರಾಣಾಯಾಮಗಳನ್ನು ಮಾಡಿ ಓಂ ಹ್ಲೀಂ ನಮಃ ಪರಾಯ ಅಬಾತ್ಮನೇ ನಮಃ– ಶಬ್ದ ಸ್ಪರ್ಶ ರೂಪ ರಸ ಜಿಹ್ವಾಪಾಯುಯುಕ್ತಮಬ್ಭೂತಂ ತೇಜೋರೂಪಾತ್ಸೃಜಾಮಿ । ಹೃದಯಾದಿ ನಾಭ್ಯಂತಂ ವ್ಯಾಪ್ಯ ॥ ಓಂ ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮಗಳನ್ನು ಮಾಡಿ ಓಂ ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ನಮಃ– ಶಬ್ದ ಸ್ಪರ್ಶ ರೂಪ ರಸಗಂಧ ಘ್ರಾಣೋಪಸ್ಥಯುತಂ ಪೃಥಿವೀಭೂತಂ ಅಭ್ದೂತಾತ್ಸಂಸೃಜಾಮಿ– ಹೀಗೆ ನಾಭಿಯಿಂದಾರಂಭಿಸಿ ಪಾದದ ಕೊನೆಯ ಪರ್ಯಂತ ವ್ಯಾಪಿಸಿ– ಹೀಗೆ ಭೂತಸೃಷ್ಟಿಯನ್ನು ಮಾಡಿ ಮೂಲಮಂತ್ರದಿಂದ

ಸಕಲೀಕರಣವನ್ನು ಮಾಡಿ ಗಂಧ ಮೊದಲಾದವುಗಳಿಂದ ಅಲಂಕರಿಸಿ, ಬಟ್ಟೆಯನ್ನು ಸುತ್ತಿ ಬ್ರಾಹ್ಮಣರಿಂದ ಸಿದ್ಧಗೊಳಿಸಿದ ರಥ ಮೊದಲಾದವುಗಳ ಮೇಲಿರಿಸಿ ವಾದ್ಯ ಮೊದಲಾದ ಮಂಗಲ ಧ್ವನಿಗಳಿಂದ ಕೂಡಿ **'ಕನಿಕ್ರದಜ್ಜನುಷಂ'** ಮೊದಲಾಗಿ ಜಪಿಸುತ್ತಾ, ಮೊದಲು ಸಿದ್ಧಗೊಳಿಸಲ್ಪಟ್ಟ ಭದ್ರ ಪೀಠದ ಹತ್ತಿರ ಕೊಂಡು ಹೋಗಿ, ಪೂಜಿಸಲ್ಪಟ್ಟ ಪೀಠದಲ್ಲಿ ಪ್ರಾಸಾದಕ್ಕಭಿಮುಖವಾಗಿ ಭದ್ರಪೀಠದಲ್ಲಿರಿಸಿ **'ಭದ್ರಂಕರ್ಣೇಭಿಃಶೃಣುಯಾಮ'** ಈ ಋಕ್ಕನ್ನು ಜಪಿಸಬೇಕು. ವಿಷ್ಣುವಿನಲ್ಲಿ ಪೂರ್ವಾಭಿಮುಖವಾಗಿ ನಿಂತು **'ಭದ್ರಂಕರ್ಣೇಭಿಃ'** ಎಂದು ಜಪಿಸಬೇಕು. ಶಿವ ಸಮ್ಮುಖದಲ್ಲಿ **'ತ್ರೀಣಿಪದಾವಿಚಕ್ರಮೇ'** ಈ ಋಕ್ಕಿನಿಂದ ಇಡಬೇಕು. ಸಮ್ಮುಖದಲ್ಲಿ ನಿಂತು ... ಮತ್ತು **ಶಂಕರನಾರಾಯಣರಲ್ಲಿ 'ಘೃತವತೀಸವಿತುಃ'** ಈ ಋಕ್ಕಿನಿಂದ ಕಾಡಿಗೆಯನ್ನು ಹಚ್ಚಿ, ತುಪ್ಪವನ್ನು ಬಳಿದು, **ಶಂಕರನಾರಾಯಣರಲ್ಲಿ** **'ನಮಸ್ತೇ ರುದ್ರಮನ್ಯವ'** ಈ ಮಂತ್ರದಿಂದ, **ವಿಷ್ಣುವಿನಲ್ಲಿ** ಮೂಲಮಂತ್ರದಿಂದ ಕಡಲೇ ಹಿಟ್ಟಿನಿಂದ ಶುದ್ಧಿಗೊಳಿಸಬೇಕು. ಅಥವಾ **ಶಿವನಲ್ಲಿ 'ತೇಜೋಽಸಿ'** ಮಂತ್ರದಿಂದ ತುಪ್ಪದ ಬಳಿಯುವಿಕೆಯು. **ಸ್ಕಂದ-ಗಣಪರಲ್ಲಿ** ಮೂಲಮಂತ್ರದಿಂದ ತುಪ್ಪ ಹಚ್ಚುವಿಕೆ ಮತ್ತು ಶುದ್ಧಿಯನ್ನು ಮಾಡಬೇಕು. ಉಳಿದವರಲ್ಲಿ ಆಯಾಯ ಕಲ್ಪದಲ್ಲಿ ಹೇಳಿ ಕ್ರಮದಂತೆ ಮಾಡಬೇಕು. ಆಮೇಲೆ **ದುರ್ಗಿಯಲ್ಲಿ** ದರ್ಭೆ ಮಣ್ಣು ತೊಪ್ಪೆಗಳಿಂದ ಕ್ರಮವಾಗಿ ತಿಕ್ಕಿ ಶುದ್ಧೀಕರಿಸಬೇಕು. **ಶಿವನಲ್ಲಿ**- ತೊಪ್ಪೆ (ಸಗಣಿ)ಗೋಮಯ, ಮಣ್ಣು, ಭಸ್ಮಗಳಿಂದಲೂ, **ಶಾಸ್ತಾರನಲ್ಲಿ**- ಮಣ್ಣು, ತೊಪ್ಪೆ, ಗೋಮಯಗಳಿಂದ, **ಗಣಪತಿಯಲ್ಲಿ** ಮಣ್ಣು ಮತ್ತು ತೊಪ್ಪೆಗಳಿಂದ, ಗುಹನಲ್ಲಿ ಅವನ ಕಲಶಕ್ಕೆ ಹೇಳಿದ ದ್ರವ್ಯಗಳಿಂದಲೂ (ಎಲ್ಲವುಗಳಿಂದಲೂ) ಎಲ್ಲಾ ಮಂತ್ರಗಳಿಂದಲೂ **ವಿಷ್ಣು ಶಂಕರನಾರಾಯಣರಲ್ಲಿ** ಅವರಿಗೆ ಹೇಳಿದ ಮಣ್ಣುಗಳಿಂದ ಹೇಳಲ್ಪಡುವ ಕ್ರಮದಂತೆ ಶೋಧಿಸಬೇಕು. **ದುರ್ಗಾ ಗಣಪತಿ ಗುಹರಲ್ಲಿ**- ಬಿಂಬ ಶುದ್ಧಿ ಸ್ನಾನಕ್ಕೆ ಮೊದಲು ಕಣ್ಣು ಬಿಡಿಸುವುದು, **ವಿಷ್ಣು ಶಂಕರನಾರಾಯಣರಲ್ಲಿ** ಬಿಂಬಶುದ್ಧಿ ಕಲಶದ ಸ್ನಾನದ ಮಧ್ಯದಲ್ಲಿ, ಶಾಸ್ತಾರನಲ್ಲಿ ಸ್ನಾನಾತ್ಪೂರ್ವದಲ್ಲಿ, ಜಲಾಧಿವಾಸಕ್ಕೆ ಮೊದಲಾಗಿಯಾಗಲೀ ಕಣ್ಣುಗಳನ್ನು ಬಿಡಿಸಬೇಕು. ಎದುರಿನಲ್ಲಿ ಬಟ್ಟೆಯನ್ನು ಹರಡಿ ನೇತ್ರೋನ್ಮೀಲನವನ್ನು ಮಾಡಬೇಕು. **ಶಾಸ್ತಾರ ಗಣಪತಿ ಗುಹರಲ್ಲಿ** ಚಿನ್ನದ ಮೂಸದಲ್ಲಿ ತುಪ್ಪ ಜೇನನ್ನು ಸೇರಿಸಿ, **'ಮಧುವಾತಾ ಋತಾಯತೇ'**- ಈ ಮಂತ್ರವನ್ನು ಜಪಿಸಿ, ಚಿನ್ನದ ಸೂಜಿಯಿಂದ ತೆಗೆದುಕೊಂಡು ನೇತ್ರ ಮಂತ್ರದಿಂದ ಕಣ್ಣನ್ನು ಬಿಡಿಸುವುದನ್ನು ಮೂಲದಿಂದ ಕಣ್ಣಿನ ಪಾಪೆಯನ್ನೂ, ಅಲ್ಲಿರುವ ತೇಜಸ್ಸನ್ನು ಓಂಕಾರದಿಂದ ಬಿಡಿಸಬೇಕು. ದುರ್ಗಿಯಲ್ಲಿ **'ಜಾತವೇದಸೇ'** ಮಂತ್ರದಿಂದ ನಯನೋನ್ಮೀಲನವನ್ನು ಮೂಲ ಮತ್ತು ಪ್ರಣವಗಳಿಂದ ಪಾಪೆ ಹಾಗೂ ತೇಜಸ್ಸನ್ನು ಬಿಡಿಸಬೇಕು. ವಿಷ್ಣುವಿನಲ್ಲಿ **'ಹಿರಣ್ಯಗರ್ಭಃ'** ಮಂತ್ರದಿಂದ ಜೇನು, ತುಪ್ಪವನ್ನು ತೆಗೆದುಕೊಂಡು **'ಚಿತ್ರಂ ದೇವಾನಾಂ'** ಮಂತ್ರದಿಂದ ಬಲದ ಕಣ್ಣನ್ನು **'ಆಪ್ಯಾಯಸ್ವ'** ಮಂತ್ರದಿಂದ ಎಡಗಣ್ಣನ್ನೂ ಬಿಡಿಸಬೇಕು. ಪಾಪೆ ಮತ್ತು ತೇಜಸ್ಸನ್ನು ಮೂಲಮಂತ್ರ ಪ್ರಣವದಿಂದ ಕೈಗೊಳ್ಳಬೇಕು. ಶಂಕರನಾರಾಯಣನಲ್ಲಿ- ಜೇನು, ಹಾಲು, ತುಪ್ಪಗಳನ್ನು **'ಹಿರಣ್ಯಗರ್ಭಃ'** ಈ ಮಂತ್ರದಿಂದ ತೆಗೆದುಕೊಂಡು, **'ಚಿತ್ರಂದೇವಾನಾಂ'** ಈ ಮಂತ್ರದಿಂದ ಎಡಗಣ್ಣನ್ನೂ, **'ವಿಶ್ವತಶ್ಚಕ್ಷುಃ'** ಮಂತ್ರದಿಂದ ಬಲಗಣ್ಣನ್ನೂ, ಹಣೆಗಣ್ಣನ್ನು **'ಹಿರಣ್ಯಗರ್ಭ'** ಈ ಮಂತ್ರದಿಂದ ಬರೆಯಬೇಕು. ಇಲ್ಲಿಂದ ಮುಂದೆ ಎಲ್ಲವೂ ಸರಿಸಮಾನವು. ಕಣ್ಣು ಬಿಡಿಸುವ ಮೊದಲು ಹರಡಿದ ಪರದೆಯನ್ನು ತೆಗೆದು ಎದುರಿನಲ್ಲಿ ಹಸುವನ್ನು ತೋರಿಸಿ (ಪ್ರದರ್ಶಿಸಿ) ಆ ಹಸುವನ್ನು ಆಚಾರ್ಯನಿಗೆ ದಾನ ಕೊಡಬೇಕು.

* * * *

## ಬಿಂಬಶುದ್ಧಿಸ್ನಪನಂ

ಗಣಪತಿ, ಶಾಸ್ತಾರ, ದುರ್ಗಾ, ಸ್ಕಂದರಲ್ಲಿ ಮೂಲಮಂತ್ರದಿಂದಾವಾಹಿಸಿ, ಸಕಲೀಕರಣ ಮೊದಲಾದುವುನ್ನು ಮಾಡಿ ಉಪಹಾರಗಳನ್ನು ಕೊಟ್ಟು ಬಿಂಬ ಶುದ್ಧಿ ಸ್ನಪನವನ್ನು ಮಾಡಬೇಕು. ಶಿವ ವಿಷ್ಣು ಶಂಕರನಾರಾಯಣರಲ್ಲಿ ಅಭಿಷೇಕವು ಮಾಡಿದ ಮೇಲೆ ಆವಾಹನೆಯನ್ನು ಮಾಡಬೇಕು. ವಿಷ್ಣುವಿನಲ್ಲಿ ಅವನಿಗೆ ಹೇಳಿದ ಏಳು ಮೃತ್ತಿಕೆಗಳಿಂದ **'ಮೂರ್ಧಾನಂ ದಿವೊ'** ಈ ಮಂತ್ರದಿಂದ ಬಳಿದು ಬಿಟ್ಟು, ಆ ಮಣ್ಣಿನಿಂದ ತುಂಬಿದ ಕಲಶದಿಂದ **'ಸಮುದ್ರ ಜ್ಯೇಷ್ಠಾಃ'** ಈ ಮಂತ್ರದಿಂದ ಅಭಿಷೇಕ ಮಾಡಬೇಕು. ಪೂರ್ವ ಮೊದಲಾದ ದಿಕ್ಕಲಶಗಳಿಂದ ಕ್ರಮವಾಗಿ **'ಯಜ್ಞಾ ಯಜ್ಞಾವಃ'** **'ಪಯಃಪೃಥಿವ್ಯಾಂ'** **'ಯಾಃ ಫಲಿನೀರ್ಯಾ'** **'ಯಾದಿವ್ಯಾ ಆಪಃ'**- ಈ ನಾಲ್ಕು ಮಂತ್ರಗಳಿಂದ ಅಭಿಷೇಕ ಮಾಡಿ, ಕಣ್ಣು ಬಿಡಿಸುವಿಕೆಯನ್ನು ಇಲ್ಲಿ ಮಾಡಿ ಅಗ್ನ್ಯಾದಿ ವಿದಿಕ್ಕಿನ ಕಲಶಗಳಿಂದ ಕ್ರಮವಾಗಿ **'ಹಂಸಃ ಶುಚಿಷತ್'**, **'ವಿಷ್ಣೋರರಾಟಮಸಿ'** **'ಸೋಮಂ ರಾಜಾನಂ'** **'ವಿಶ್ವತಶ್ಚಕ್ಷುರುತ'** ಈ ನಾಲ್ಕು ಮಂತ್ರಗಳಿಂದ ಅಭಿಷೇಕ ಮಾಡಬೇಕು. **'ದ್ರುಪದಾ ದಿವೇನ್ಮುಮುಚಾನಃ'** ಈ ಮಂತ್ರದಿಂದ ಚೆನ್ನಂಗಿಬೇಳೆಯ ಹಿಟ್ಟಿನಿಂದ ಕುತ್ತಿಗೆಯ ಪರ್ಯಂತ ದೇಹದಲ್ಲಿ ತಿಕ್ಕಿ ತಲೆಯಲ್ಲಿ ಮುರಾ, ಜಟಾಮಾಂಸಿ, ಹಾಲು, ಹಿಟ್ಟು, ನೆಲ್ಲಿಕಾಯಿಗಳಿಂದ **'ಮಾನಸ್ತೋಕೇ'** ಮಂತ್ರದಿಂದ ಬಳಿದು ಆಮೇಲೆ ಹೊರಗಿನ ಗಂಧದ ನೀರಿನಿಂದ ದಿಕ್ಕೋಣಗಳಲ್ಲಿರುವವುಗಳಿಂದ **'ವಿಷ್ಣೋರರಾಟಮಸಿ'** ಮಂತ್ರದಿಂದ, ಆಯಾಯ ದಿಕ್ಕೋಣಗಳಲ್ಲಿರುವ ಉಪಕಲಶಗಳಿಂದ **'ಇಮಾ ಆಪಃ'** ಮಂತ್ರದಿಂದ ಅಭಿಷೇಕ ಮಾಡಬೇಕು. ಹೀಗೆ ಅಭಿಷೇಕ ಮಾಡಿ

**ಏಹ್ಯೇಹಿ ಭಗವನ್ವಿಷ್ಣೋ ಲೋಕಾನುಗ್ರಹಕಾರಕ ।**
**ಯಜ್ಞಭಾಗಂ ಗೃಹಾಣೇಮಂ ವಾಸುದೇವ ನಮೋಽಸ್ತು ತೇ ॥**

ಈ ಮಂತ್ರದಿಂದ ಕೊನೆಯಲ್ಲಿ ಮೂಲವನ್ನು ಹೇಳಿ– ನಾರಾಯಣಮಾವಾಹಯಾಮಿ– ಹೀಗೆ ಆವಾಹಿಸಿ, ಮೂಲಾಂಗನ್ಯಾಸ, ವ್ಯಾಪಕನ್ಯಾಸ ಮೊದಲಾದುವನ್ನು ಮಾಡಬೇಕು. ಆ ವಿಷ್ಣುವಿಗೆ **'ಹಿರಣಂಮಯೋಃ'** ಮೊದಲಾದ ಮಂತ್ರದಿಂದ ಅರ್ಘ್ಯ, ಪಾದ್ಯವನ್ನೂ ಕೊಟ್ಟು, ಗಾಯತ್ರಿಯಿಂದ ಆಚಮನ, ಮಧುಪರ್ಕವನ್ನೂ ಕೊಟ್ಟು, **'ಬೃಹಸ್ಪತೇ ಅತಿಯದ'** ಮಂತ್ರದಿಂದ ಪಟ್ಟೆ (ರೇಶ್ಮೆ) ಬಟ್ಟೆಯನ್ನು, **'ವೇದಾಹಮೇತಂ'** ಉತ್ತರೀಯವನ್ನೂ ಪ್ರಣವದಿಂದ ಚಿನ್ನದ ಯಜ್ಞೋಪವೀತವನ್ನೂ ಕೊಟ್ಟು, **'ಇದಂ ವಿಷ್ಣುರ್ವಿಚಕ್ರಮೇ'** ಈ ಮಂತ್ರದಿಂದ ಗಂಧ, ಹೂವು, ಚಿನ್ನದ ಪವಿತ್ರವನ್ನು ಕೊಟ್ಟು **'ವಿಶ್ವತಶ್ಚಕ್ಷುರುತ'** ಈ ಮಂತ್ರದಿಂದ ಸೃಷ್ಟಿಸಂಹಾರಕ್ರಮದಿಂದ ವ್ಯಾಪಿಸಿ ತೇಜಸ್ಸಿನಿಂದ ತುಂಬಿದಂತೆ ಮಾಡಬೇಕು. **'ಓಷಧಯಃ ಸಂವದಂತೇ'** ಈ ಮಂತ್ರದಿಂದ ಹೂವುಗಳನ್ನು ಚೆಲ್ಲಿ, **'ಧೂರಸಿಧೂಃ'** ಈ ಮಂತ್ರದಿಂದ ಧೂಪವನ್ನೂ , **'ತೇಜೋಽಸಿ'** ಮಂತ್ರದಿಂದ ದೀಪವನ್ನೂ ಕೊಟ್ಟು **'ಸಮಿದ್ಧೋ ಅಂಜನ್'** ಈ ಮಂತ್ರದಿಂದ ಕಣ್ಣುಗಳೆರಡನ್ನು ಕಾಡಿಗೆಯನ್ನು ಹಚ್ಚಿ ಶೋಭಿಸುವಂತೆ ಮಾಡಿ **'ಯೇನಾಕಸ್ಯಾಥಿರೋಚನೇ'** ಈ ಮಂತ್ರವನ್ನು ಜಪಿಸುತ್ತಾ ಗೋರೋಚನದಿಂದ ತಿಲಕ (ಹಣೆ ಬಟ್ಟು)ವನ್ನಿರಿಸಿ **'ವನಸ್ಪತೇಃ ಪುಷ್ಪ'** ಈ ಮಂತ್ರದಿಂದ ಹೂವನ್ನು ಹೂವಿನ ಮಾಲೆಯನ್ನು ಸಮರ್ಪಿಸಿ ಅರ್ಘ್ಯ, ಪಾದ್ಯ, ಆಚಮನಗಳನ್ನು ಕೊಟ್ಟು ಅರ್ಘ್ಯಧಾರೆಯನ್ನು ಮೂಲದಿಂದ ಕೊಟ್ಟು, ಹೂವುಗಳಿಂದ ಚೆಲ್ಲಬೇಕು. ರಥಂತರ ವೈರಾಜ, ಗಾಯತ್ರಿಗಳಿಂದ ತನ್ನ ಮೂಲಗಳಿಂದುಂಟಾದ (ಅಭಿತ್ವಾಶೂರ, ಪಿಬಾಸೋಮಮಿಂದ್ರ, ಅಗ್ನ ಆಯೂಂಷಿ– ಇತ್ಯಾದಿಗಳಿಂದ) ಸಾಮಗಳಿಂದ ಸ್ತುತಿಸಿ ಸಂತೋಷಗೊಳಿಸಬೇಕು. ಅಕ್ಕಿಯಿಂದ ತುಂಬಿದ ಪ್ರಕಾಶಮಾನವಾದ ಲೋಹದ ಪಾತ್ರೆಯಲ್ಲಿ ತುಪ್ಪದಿಂದ ತುಂಬಿದ ಸುತ್ತಲೂ ಬೆಳಗುತ್ತಿರುವ ಬತ್ತಿಗಳಿಂದ ಕೂಡಿದ ಹಣತೆಯನ್ನು ಇರಿಸಿ, ಅದರ ದಿಕ್ಕುಗಳಲ್ಲಿ ಗೋಮಯದಿಂದ ಸಿದ್ಧಗೊಳಿಸಿದ ಬಿಳಿ ಕೆಂಪು ಮೊದಲಾದ ಪುಡಿಗಳಿಂದ ಚಿತ್ರಿಸಲ್ಪಟ್ಟ ದಿಕ್ಪಾಲಕರ ವಜ್ರ ಮೊದಲಾದ ಆಯುಧಗಳನ್ನು ರಚಿಸಿ ಗರಿಕೆ ಕುಡಿಗಳಿಂದ ಕೂಡಿದ ಅಶ್ವತ್ಥದ ಎಲೆಗಳಿಂದ ಅಲಂಕರಿಸಿ ಓಂಕಾರದಿಂದ ದೂರ್ವೆ ಹಾಗೂ ಅಕ್ಷತೆಯನ್ನು ತಲೆಯಲ್ಲಿ ಹಾಗೂ ಕಾಲುಗಳೆರಡರಲ್ಲಿ ಹಾಕಿ ಅಸ್ತ್ರದಿಂದ ಪೂಜಿಸಲ್ಪಟ್ಟ ನೀರಾಜನೀಯದಿಂದ ನಿಜಾಸ್ತ್ರವನ್ನು ಜಪಿಸುತ್ತಾ ನೀರಾಜನ ಮಾಡಬೇಕು. ಓಂ ವಿಷ್ಣುಃ ಪ್ರೀಯತಾಂ ಎಂದು ವಿಶೇಷದಿಂದ ಕೂಡಿದ ಪುಣ್ಯಾಹವನ್ನು ಮಾಡಬೇಕು. **ಶಂಕರನಾರಾಯಣನಲ್ಲಿ–** ತಲೆಯಲ್ಲಿ ಪ್ರಣವದಿಂದ ಎತ್ತಿನ ಕೊಂಬಿನ, ನದಿಯ ಎರಡು ದಡದ ಮಣ್ಣುಗಳಿಂದ ಲೇಪಿಸಿ, ಪ್ರಣವದಿಂದ ಶುದ್ಧ ನೀರಿನಿಂದ ಅಭಿಷೇಕ ಮಾಡಿ ದೇಹದಲ್ಲಿ ಪ್ರಣವದಿಂದ ಹುತ್ತ ಹಾಗೂ ಉಳಗದ್ದೆಯ ಮಣ್ಣುಗಳಿಂದ ಬಳಿದು ಓಂಕಾರದಿಂದ ಶುದ್ಧ ನೀರಿನಿಂದ ಅಭಿಷೇಕ ಮಾಡಿ ಮಧ್ಯದಲ್ಲಿರುವ ಮಣ್ಣಿನ ಕಲಶದಿಂದ **'ಮಾನಸ್ತೋಕೇ'** ಮಂತ್ರದಿಂದ ಅಭಿಷೇಕ ಮಾಡಿ, ಪೂರ್ವದಳದಲ್ಲಿರುವ ಕಷಾಯದ ಕಲಶದಿಂದ **'ಅಘೋಚಾಮ'** ಈ ಮಂತ್ರದಿಂದ ದಕ್ಷಿಣ, ಪಶ್ಚಿಮ, ಉತ್ತರ, ಆಗ್ನೇಯ, ನೈಋತ್ಯ ದಳದಲ್ಲಿರುವ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ತುಂಬಿದ ಕಲಶಗಳಿಂದ ಪ್ರಣವದಿಂದಾಗಲೀ ಮೂಲದಿಂದ ವಾಯವ್ಯದಳದಲ್ಲಿರುವ ಫಲೋದಕ ಕಲಶದಿಂದ, ನಡುನಡುವಿನಲ್ಲಿ **'ಆಪೋಹಿಷ್ಠಾ'** ಮೊದಲಾದವುಗಳಿಂದ ಶುದ್ಧನೀರಿನಿಂದ ಅಭಿಷೇಕ ಮಾಡಬೇಕು. ಆಮೇಲೆ ನೇತ್ರೋನ್ಮೀಲನವನ್ನು ಮಾಡಬೇಕು. ಆಮೇಲೆ ಈಶಾನ್ಯದಳದಲ್ಲಿರುವ ಸರ್ವೌಷಧಿಕಲಶದಿಂದ **ನಮಃ ಶಂಭವೇಚ ಇಷೇತ್ವಾ ನಮೋವಃಕಿರಿಕೇಭ್ಯಃ–** ಈ ಮಂತ್ರಗಳಿಂದ ಅಭಿಷೇಕ ಮಾಡಿ, ದಿಖ್ಖಂಡಗಳಲ್ಲಿರುವ ಕಲಶಗಳಿಂದ **ತತ್ತ್ವಾಯಾಮಿ, ಸಮುದ್ರಂಗಚ್ಛ, ಆಪೋಹಿಷ್ಠಾ, ಗಾಯತ್ರೀ** ಹೀಗೆ ನಾಲ್ಕು ಮಂತ್ರಗಳಿಂದ, ಪ್ರಣವ ಸಂಪುಟಿತವಾದ ಗಾಯತ್ರಿಯಿಂದ ವಿದಿಕ್ಕುಗಳಲ್ಲಿರುವ ಕಳಶಗಳಿಂದ ಅಭಿಷೇಕ ಮಾಡಿ ತಾರದಿಂದಾವಾಹಿಸಿ, ಅದರಿಂದಲೇ ಸಕಲೀಕರಣವನ್ನು ಮಾಡಿ **'ಸೋಮಾರುದ್ರಾವಿವೃಹತಂ'–** ಈ ಮಂತ್ರದಿಂದ ಅರ್ಘ್ಯ, ಪಾದ್ಯ, ಗಂಧ, ಪುಷ್ಪ ಪವಿತ್ರವನ್ನೂ, **'ಯುವಂವಸ್ತ್ರಾಣಿ'** ಈ ಮಂತ್ರದಿಂದ ವಸ್ತ್ರವನ್ನೂ, **'ಬೃಹಸ್ಪತೇ ಅತಿಯದ'** ಮಂತ್ರದಿಂದ ಉತ್ತರೀಯವನ್ನೂ, **'ವೇದಾಹಮೇತಂ'** ಈ ಮಂತ್ರದಿಂದ ಉಪವೀತವನ್ನೂ, ಮೂಲಮಂತ್ರದಿಂದ ಆಲಂಕಾರಗಳನ್ನೂ **'ಧೂರಸಿ'–** ಧೂಪವನ್ನೂ, **'ಉದ್ದೀಪ್ಯಸ್ವಜಾತ'–** ದೀಪವನ್ನೂ, **'ಸಮಿದ್ಧೋ ಆಂಜನ್'–** ಅಂಜನವನ್ನೂ ತಾರದಿಂದ ಗೋರೋಚನವನ್ನೂ ಕೊಟ್ಟು **'ಸೋಮಾರುದ್ರಾಯುವಂ'** ಈ ಮಂತ್ರದಿಂದ ಕನ್ನಡಿಯನ್ನು ತೋರಿಸಿ **'ಅಗ್ನಾವಿಷ್ಣೂ ಸಜೋಷಸೇ'** ಈ ಮಂತ್ರದಿಂದ ಸ್ತುತಿಸಿ, **'ಯುವಮೇತಾನಿ'** ಈ ಮಂತ್ರದಿಂದ ಪ್ರಾರ್ಥಿಸಿ **'ಓಷಧಯಃಸಂವ'** ಈ ಮಂತ್ರದಿಂದ ಹೂವುಗಳನ್ನು ಚೆಲ್ಲಿ– **'ಓಂ ಶಿವನಾರಾಯಣಃ ಪ್ರೀಯತಾಂ'–** ಹೀಗೆ ವಿಶೇಷದಿಂದ ಕೂಡಿದ ಪುಣ್ಯಾಹವನ್ನು ಮಾಡಬೇಕು. ಪ್ರಣವದಿಂದ ಪಾದುಕೆ ಚಾಮರ ಛತ್ರ ವಾಹನಗಳನ್ನೂ ಕೊಡಬೇಕು.

**ಶಿವನಲ್ಲಿ–** ಬಿಂಬ ಶುದ್ಧಿಯಲ್ಲಿ ಪುರುಷ ಅಘೋರ ಸದ್ಯೋಜಾತ, ವಾಮದೇವ ಮಂತ್ರಗಳಿಂದ ದಿಕ್ಖಂಡಗಳಲ್ಲಿರುವ ಕಲಶಗಳಿಂದ, ಹೃದಯ ಶಿಖಾ ಕವಚ ಶಿರೋಮಂತ್ರಗಳಿಂದ ವಿದಿಕ್ಕುಗಳ ಖಂಡಗಳಲ್ಲಿರುವ ಕಲಶಗಳಿಂದ, ಈಶಾನ ಮಂತ್ರದಿಂದ ಪರಿಕಲಶಸಹಿತವಾದ ಬ್ರಹ್ಮಕಲಶದಿಂದ ಅಭಿಷೇಕ ಮಾಡಬೇಕು. ಆಮೇಲೆ ದೇವರನ್ನು ಹೇಳಿದ ಕ್ರಮದಂತೆ ಧ್ಯಾನಿಸಿ, ಆವಾಹನೆ ಮಾಡಿ ಸಕಲೀಕರಣವನ್ನು ಮಾಡಿ ಪಾದ್ಯ, ಆಚಮನಗಳನ್ನು ಕೊಟ್ಟು ಅಘೋರ ಮಂತ್ರದಿಂದ ಗಂಧವನ್ನೂ ವಾಮದೇವ ಮಂತ್ರದಿಂದ, ಬಟ್ಟೆಯನ್ನೂ ಈಶಾನ ಮಂತ್ರದಿಂದ ಹೂವುಗಳನ್ನೂ ತತ್ಪುರುಷ ಮಂತ್ರದಿಂದ ಧೂಪ ದೀಪ ಅರ್ಘ್ಯವನ್ನೂ ಕೊಟ್ಟು ನಮಸ್ಕರಿಸಿ, ಸುಗಂಧ (ಅಷ್ಟಗಂಧ) ಲೇಪಿತ ಕರಗಳಿಂದ ದಿಕ್ಕುಗಳಲ್ಲಿ ಚತುರಸ್ರ (ಚಚ್ಚೌಕದ) ಭಾಗವನ್ನು ಬ್ರಹ್ಮಗಾಯತ್ರಿಯಿಂದಲೂ, ದಿಕ್ಕುಗಳಲ್ಲಿ ಅಷ್ಟಾಸ್ರ (ಎಂಟು ಪಟ್ಟಿಯ) ಭಾಗವನ್ನು ವಿಷ್ಣು ಗಾಯತ್ರಿಯಿಂದ, ದಿಕ್ಕುಗಳಲ್ಲಿ ವರ್ತುಲ

ಮೊದಲಾಗಿ ಪುಷ್ಪಾಂಜಲಿಯನ್ನು ಮಾಡಬೇಕು. ಶಿವನಲ್ಲಿ ಪಂಚಬ್ರಹ್ಮಮಂತ್ರಗಳಿಂದ ಲಲಾಟ ಮೊದಲಾದ ಐದು ಸ್ಥಾನಗಳಲ್ಲಿ ಅಷ್ಟಗಂಧದಿಂದ ಅಡ್ಡ ಗೆರೆಗಳನ್ನೆಳೆದು ಸ್ಥಾಣು ಮಂತ್ರದಿಂದ ಐದಾವರ್ತಿ ಪುಷ್ಪಾಂಜಲಿಯನ್ನು ಮಾಡಿ 'ಅಂ ಅರ್ಕದ್ವಯಂ ಕಲ್ಪಯಾಮಿ'– ಪಾದದ ತುದಿಯಿಂದ ನಾಭಿ (ಹುಕ್ಕುಳು) ಪರ್ಯಂತವಾಗಿ ಪುಷ್ಪಾಂಜಲಿಯನ್ನು ಮಾಡಿ. ಕರವೀರ ದ್ರವ್ಯಾದಿ ಎಲ್ಲವನ್ನೂ ಹಿಂದೆ ಹೇಳಿದಂತೆ ಎಲ್ಲವನ್ನೂ ಮಾಡಬೇಕು. ಪುನಃ ಎಲ್ಲಾ ದೇವತೆಗಳಲ್ಲೂ ಧೂಪ ಮುದ್ರೆಯನ್ನು ದೀಪ ಮುದ್ರೆಯನ್ನು ಪ್ರದರ್ಶಿಸಿ ನೈವೇದ್ಯಕಾರ್ಯದಲ್ಲಿ ಅರ್ಘ್ಯವನ್ನು ಕೊಟ್ಟು ಪ್ರಸನ್ನ ಪೂಜೆಯನ್ನು ಮಾಡಿ, ಪೂಜೆಯನ್ನು ಪೂರ್ತಿಗೊಳಿಸಿ, ವ್ಯಾಪನೆ ಮಾಡಿ. ಲಯಾಂಗವನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಬೇಕು.

* * * *

## ಧ್ಯಾನಾಧಿವಾಸಃ

ಆ ಸ್ಥಳದಿಂದ ನಿರ್ಮಾಲ್ಯ ಹೂ ಮೊದಲಾದುವುಗಳನ್ನು ತೆಗೆದು ಶಂಖ ಮೊದಲಾದುವುಗಳನ್ನು ತೊಳೆದು ಅಲ್ಲಿ ಇಡಬೇಕು. ಗುರುಗಳನ್ನು ಪೂಜಿಸಿ, ಅರ್ಘ್ಯ ಪ್ರದಾನವನ್ನು ಮಾಡಿ, ಗಣಪತಿಯನ್ನು ಪೂಜಿಸಿ, ನೈವೇದ್ಯ ಮಾಡಿ ಧ್ಯಾನಾಧಿವಾಸ ಪೂಜೆಯನ್ನು ಮಾಡಬೇಕು. ಆಚಾರ್ಯನು ಕೈಯ ತಳದಲ್ಲಿ ನೀರನ್ನು ತೆಗೆದುಕೊಂಡು ಎಂಟಾವರ್ತಿ ಪ್ರಣವವನ್ನು ಜಪಿಸಿ, ಫಡಂತ ಪ್ರಣವದಿಂದ (ಓಂ ಫಟ್) ಎಂದು ಬಿಂಬವನ್ನು ಪ್ರೋಕ್ಷಿಸಿ, ಅಸ್ತ್ರ ಮಂತ್ರದಿಂದ ತಾಲತ್ರಯಾದಿಗಳಿಂದ ಸಂರಕ್ಷಣೆಯನ್ನು ಮಾಡಿ ಪುನಃ ಪ್ರೋಕ್ಷಣೆಯನ್ನು ಮಾಡಿ ದರ್ಭಾಗ್ರದಿಂದ ಬಿಂಬದ ಹೃದಯವನ್ನು ಮುಟ್ಟಿ ಎಂಟಾವರ್ತಿ ಪ್ರಣವವನ್ನು ಜಪಿಸಿ ದೇಹದಲ್ಲಿ ವ್ಯಾಪಿಸಿದ ಜೀವವನ್ನು ಹೃದಯದಲ್ಲಿ ಒಂದಾಗಿಸಬೇಕು. ಗುರುಗಳು ಉಪದೇಶಿಸಿದ ಕ್ರಮದಂತೆ ತನ್ನಿಂದ ಬಿಂಬದ ನಾಡೀ ಸಂಧಾನವನ್ನು ಮಾಡಿ ಹೂಗಳಿಂದ ಕೂಡಿದ ಕೈಗಳೆರಡರಿಂದ ಪ್ಲುತ ಪ್ರಣವದಿಂದ ಬಿಂಬದ ಚೈತನ್ಯವನ್ನು ಸುಷುಮ್ನಾ ನಾಡಿಯಿಂದ ಮೇಲಕ್ಕೆ ಕೊಂಡು ಹೋಗಿ ತನ್ನಲ್ಲಿ ತೆಗೆದುಕೊಂಡು ಬಂದು ತಾರ (ಓಂಕಾರ)ದಿಂದ ಪ್ರಾಣಾಯಾಮವನ್ನು ಮಾಡಿ, ಈ ಚೈತನ್ಯವನ್ನು ತನ್ನಲ್ಲಿ ಒಂದಾಗಿದೆ (ಸೇರಿದೆ) ಎಂದು ಭಾವಿಸಿ, ಆ ಬಿಂಬದಲ್ಲಿ ತತ್ತ್ವಸಂಹಾರ ಮೊದಲಾದುವನ್ನು ಮಾಡಬೇಕು.

* * * *

## ತತ್ತ್ವಸಂಹಾರಃ

ಪೃಥಿವಿಯೇ ಮೊದಲಾದ ಆಯಾಯ ಬೀಜಗಳಿಂದ ಶೋಷಣ ದಾಹನ ಪ್ಲಾವನಗಳನ್ನು ಮಾಡಿ– ಓಂ ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ಹುಂಫಟ್– ಇತಿ ಪಂಚವಿಂಶತಿ ಸಂಖ್ಯಂ ಪಂಚಪ್ರಾಣಾಯಾಮ ಕೃತ್ವಾ, ಹ್ಲಾಂ ನಮಃ ಪರಾಯ ನಿವೃತ್ತ್ಯಾತ್ಮನೇ ನಮಃ– ಶಬ್ದ ಸ್ಪರ್ಶ ರೂಪ ರಸ ಗಂಧಯುಕ್ತಂ ಘ್ರಾಣೋ ಪಸ್ಥಯುತಂ ಪೃಥಿವೀ ಭೂತಂ ಗಂಧ ತನ್ಮಾತ್ರಾಯಾಂ ಸಂಹರಾಮಿ । ಗಂಧತನ್ಮಾತ್ರಾಂ ಅಪ್ಸುಸಂಹರಾಮಿ । ಪಾದಾಗ್ರಾದಿ ನಾಭ್ಯಂತಂ ವ್ಯಾಪ್ಯ । ಅಪಾಂ ಶೋಷಣ ದಾಹೌ ಕೃತ್ವಾ ಹ್ವೀಂ ನಮಃ ಪರಾಯ ಅಬಾತ್ಮನೇ ಹುಂಫಟ್– ಇತಿ ಪಂಚವಿಂಶತಿ ಸಂಖ್ಯಂ ಚತುಃ ಪ್ರಾಣಾಯಾಮಂ ಕೃತ್ವಾ ಹ್ವೀಂ ನಮಃ ಪರಾಯ ಪ್ರತಿಷ್ಠಾತ್ಮನೇ ನಮಃ– ಶಬ್ದ ಸ್ಪರ್ಶ ರೂಪ ರಸಯುಕ್ತಂ ಜಿಹ್ವಾ ಪಾಯುಯುತಂ ಅಪ್ತತ್ವಂ ರಸ ತನ್ಮಾತ್ರಾಯಾಂ ಸಂಹರಾಮಿ । ರಸತನ್ಮಾತ್ರಾಂ ತೇಜಸಿ ಸಂಹರಾಮಿ । ನಾಭ್ಯಾದಿ ಹೃದಯಾಂತಂ ವ್ಯಾಪ್ಯ । ತೇಜಸಃ ಶೋಷಣಂ ಕೃತ್ವಾ, ಓಂ ಹ್ರೂಂ ನಮಃ ಪರಾಯ ತೇಜ ಆತ್ಮನೇ ಹುಂಫಟ್ ಇತಿ ಪಂಚವಿಂಶತಿ ಸಂಖ್ಯಂ ತ್ರಿಃ ಪ್ರಾಣಾಯಾಮಂ ಕೃತ್ವಾ, ಓಂ ಹ್ರೂಂ ನಮಃ ಪರಾಯ ವಿದ್ಯಾತ್ಮನೇ ನಮಃ– ಶಬ್ದ ಸ್ಪರ್ಶ ರೂಪ ಚಕ್ಷುಃ ಪಾದಯುತಂ ತೇಜಸ್ತತ್ತ್ವಂ ರೂಪತನ್ಮಾತ್ರಾಯಾಂ ಸಂಹರಾಮಿ । ರೂಪತನ್ಮಾತ್ರಾಂ ವಾಯುತತ್ತ್ವೇ ಸಂಹರಾಮಿ । ಹೃದಯಾದಿ ಕಂಠಾಂತಂ ವ್ಯಾಪ್ಯ । ವಾಯೋಃ ಸುಷರೀಕರಣಂ ಕೃತ್ವಾ । ಓಂ ಹೈಂ ನಮಃ ಪರಾಯ ವಾಯ್ವಾತ್ಮನೇ ಹುಂಫಟ್– ಪಂಚವಿಂಶತಿ ಸಂಖ್ಯಂ ದ್ವಿಃ ಪ್ರಾಣಾಯಾಮಂ ಕೃತ್ವಾ । ಓಂ ಹೈಂ ನಮಃ ಪರಾಯ ಶಾಂತ್ಯಾತ್ಮನೇ ನಮಃ– ಶಬ್ದ ಸ್ಪರ್ಶತ್ವಕ್ಪಾಣಿ ಸಹಿತಂ ವಾಯು ತತ್ತ್ವಂ ಸ್ಪರ್ಶ ತನ್ಮಾತ್ರಾಯಾಂ ಸಂಹರಾಮಿ– ಕಂಠಾದಿ ತಾಲ್ವಂತಂ ವ್ಯಾಪ್ಯ (ಆಕಾಶಾದೀನಾಂ ಪ್ರಣವ ಪ್ರಾಣಾಯಾಮೇನ ಸ್ವಕಾರಣೇ ಐಕ್ಯಂ ಭಾವಯೇತ್) ಓಂ ಹೌಂ ನಮಃ ಪರಾಯ ಆಕಾಶಾತ್ಮನೇ ಹುಂಫಟ್ ಪಂಚವಿಂಶತಿ ಸಂಖ್ಯಂ ಸಕೃತ್ಪ್ರಾಣಾಯಾಮಂ ಕೃತ್ವಾ– ಓಂ ಹೌಂ ನಮಃ ಪರಾಯ ಶಾಂತ್ಯತೀತಾತ್ಮನೇ ನಮಃ– ಶಬ್ದ ಶ್ರೋತ್ರವಾಕ್ಸಹಿತಮಾಕಾಶ ತತ್ತ್ವಂ ಶಬ್ದತನ್ಮಾತ್ರಾಯಾಂ ಸಂಹರಾಮಿ । ಶಬ್ದತನ್ಮಾತ್ರಾಂ ಮನಸ್ತತ್ತ್ವೇ ಸಂಹರಾಮಿ । ತಾಲು ನಕ್ಷತುರಂಗುಲ ಪರ್ಯಂತಂ ವ್ಯಾಪ್ಯ ಓಂ ಪಂ ನಮಃ ಪರಾಯ ಮನ ಆತ್ಮನೇ ಹುಂಫಟ್– ಸಕೃತ್ಪ್ರಾಣಾಯಾಮಂ ಕೃತ್ವಾ– ಓಂ ನಮಃ– ಇತಿ ವ್ಯಾಪ್ಯ– ತಾಲುನ ಉಪರಿ ಏಕೈಕಾಂಗುಲಂ ಊರ್ಧ್ವೋರ್ಧ್ವಂ ವ್ಯಾಪಯೇತ್ । ಮನಸ್ತತ್ವಂ ಅಹಂಕಾರ ತತ್ತ್ವೇ ಅಹಂಕಾರ ತತ್ತ್ವೇ ಸಂಹರಾಮಿ । ಓಂ ಫಂ ನಮಃ ಪರಾಯ ಅಹಂಕಾರಾತ್ಮನೇ ಹುಂಫಟ್– ಸಕೃತ್ಪ್ರಾಣಾಯಾಮಂ ಕೃತ್ವಾ– ಓಂ ನಮಃ– ಇತಿ ವ್ಯಾಪ್ಯ ಅಹಂಕಾರತತ್ತ್ವಂ ಬುದ್ಧಿತತ್ತ್ವೇ ಸಂಹರಾಮಿ । ಓಂ ಬಂ ನಮಃ ಪರಾಯ ಬುದ್ಧಿತತ್ತ್ವಾತ್ಮನೇ ಹುಂಫಟ್– ಸಕೃತ್ಪ್ರಾಣಾಯಾಮಂ ಕೃತ್ವಾ– ಓಂ ನಮಃ– ಇತಿ ವ್ಯಾಪ್ಯ, ಬುದ್ಧಿತತ್ತ್ವಂ ಪ್ರಾಣತತ್ತ್ವೇ ಸಂಹರಾಮಿ । ಓಂ ಭಂ ನಮಃ ಪರಾಯ ಪ್ರಾಣತತ್ತ್ವಾತ್ಮನೇ ಹುಂಫಟ್– ಸಕೃತ್ಪ್ರಾಣಾಯಾಮಂ ಕೃತ್ವಾ–

ಓಂ ನಮಃ- ಇತಿ ವ್ಯಾಪ್ಯ ಪ್ರಾಣತತ್ತ್ವಂ ಜೀವತತ್ತ್ವೇ ಸಂಹರಾಮಿ । ಇತ್ಥಂ ಜೀವತತ್ತ್ವಾಂತಂ ಸಂಹೃತ್ಯ ಪ್ರಣವೇನ ಪ್ರಾಣಾಯಾಮ ತ್ರಯಂ ಕ್ರಿಯಾ ಜ್ಞಾನೇಚ್ಛಾ ಶಕ್ತಿ ಸಂಹಾರೇ ಕುರ್ಯಾತ್ । ಕ್ರಿಯಾ ಶಕ್ತಿಂ ಜ್ಞಾನಶಕ್ತೌ ಜ್ಞಾನ ಶಕ್ತಿಂ ಇಚ್ಛಾಶಕ್ತೌ, ಇಚ್ಛಾಶಕ್ತಿಂ ವಿಶ್ವೋತ್ತೀರ್ಣೇ ಪ್ರಶಾಂತರೂಪೇ ನಿರ್ವಿಕಾರೇ ಕೇವಲಾನಂದ ರೂಪೇ ಜೀವೇ (ಪುರುಷೇ) ಸಂಹರಾಮಿ. ಇತ್ಥಸಂಹೃತ್ಯತಂ ಪುರುಷಾಖ್ಯಂ ಜೀವಂ ವಿಶ್ವೋತ್ತೀರ್ಣಂ ಪ್ರಶಾಂತಂ ನಿರ್ವಿಕಾರಂ ಕೇವಲಾನಂದಂ ಧ್ಯಾಯೇತ್ ॥ ಇತಿ ತತ್ತ್ವಸಂಹಾರಃ ॥

ಏವಂ ತತ್ತ್ವಾನಿ ಸಂಹರಿಸಿ ಬಿಂಬದಲ್ಲಿ ವಾಯು (ಯಂ) ಅಗ್ನಿ(ರಂ) ಅಮೃತ (ವಂ) ಬೀಜಗಳಿಂದ ಪ್ರಾಣಾಯಾಮವನ್ನು ಮಾಡಿ ಶೋಷಣ ದಾಹನ ಪ್ಲಾವನಗಳನ್ನು ಮಾಡಬೇಕು.

## ತತ್ತ್ವಸೃಷ್ಟಿಃ

ಓಂ ನಮಃ- ಹೀಗೆ ಒಂದು ಪ್ರಾಣಾಯಾಮವನ್ನು ಮಾಡಿ- ಪರಮಾತ್ಮನಃ ಇಚ್ಛಾಶಕ್ತಿಂ ಸೃಜಾಮಿ । ಓಂ ನಮಃ- ಒಮ್ಮೆ ಪ್ರಾಣಾಯಾಮವನ್ನು ಮಾಡಿ, ಇಚ್ಛಾಶಕ್ತೇಃ ಜ್ಞಾನಶಕ್ತಿಂ ಸೃಜಾಮಿ । ಓಂ ನಮಃ- ಒಂದಾವರ್ತಿ ಪ್ರಾಣಾಯಾಮವನ್ನು ಮಾಡಿ ಜ್ಞಾನಶಕ್ತೇಃ ಕ್ರಿಯಾಶಕ್ತಿಂ ಸೃಜಾಮಿ । ಓಂ ಹ್ಲಾಂ ನಮಃ ಪರಾಯ ಶಾಂತ್ಯತೀತಾತ್ಮನೇ ನಮಃ- ಹೀಗೆ ಒಂದು ಪ್ರಾಣಾಯಾಮವನ್ನು ಮಾಡಿ- ಕ್ರಿಯಾಶಕ್ತೇಃ ಶಾಂತ್ಯತೀತಾತ್ಮತತ್ತ್ವಂ ಸೃಜಾಮಿ । ಓಂ ಹ್ಯೇಂ ನಮಃ ಪರಾಯ ಶಾಂತ್ಯಾತ್ಮನೇ ನಮಃ- ಹೀಗೆ ಪಂಚವಿಂಶತಿ ಸಂಖ್ಯೆಯ ಎರಡು ಪ್ರಾಣಾಯಾಮಗಳನ್ನು ಮಾಡಿ, ಕ್ರಿಯಾಶಕ್ತೇಃ ಶಾಂತ್ಯಾತ್ಮತತ್ತ್ವಂ ಸೃಜಾಮಿ । ಓಂ ಹ್ರೂಂ ನಮಃ ಪರಾಯ ವಿದ್ಯಾತ್ಮನೇ ನಮಃ- ಹೀಗೆ ಇಪ್ಪತ್ತೈದು ಸಂಖ್ಯೆಯ ಮೂರು ಪ್ರಾಣಾಯಾಮಗಳನ್ನು ಮಾಡಿ ಕ್ರಿಯಾಶಕ್ತೇಃ ವಿದ್ಯಾತತ್ತ್ವಂ ಸೃಜಾಮಿ । ಓಂ ಹ್ವೀಂ ನಮಃ ಪರಾಯ ಪ್ರತಿಷ್ಠಾತ್ಮನೇ ನಮಃ- ಹೀಗೆ ಇಪ್ಪತ್ತೈದು ಸಂಖ್ಯೆಯ ನಾಲ್ಕು ಪ್ರಾಣಾಯಾಮವನ್ನು ಮಾಡಿ ಕ್ರಿಯಾಶಕ್ತೇಃ ಪ್ರತಿಷ್ಠಾತತ್ತ್ವಂ ಸೃಜಾಮಿ । ಓಂ ಹ್ಲಾಂ ನಮಃ ಪರಾಯ ನಿವೃತ್ತ್ಯಾತ್ಮನೇ ನಮಃ- ಹೀಗೆ ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮಗಳನ್ನು ಮಾಡಿ- ಕ್ರಿಯಾಶಕ್ತೇಃ ನಿವೃತ್ತ್ಯಾತ್ಮತತ್ತ್ವಂ ಸೃಜಾಮಿ । ಓಂ ಲಂ ನಮಃ- ಎಂದು ಒಂದು ಪ್ರಾಣಾಯಾಮವನ್ನು ಮಾಡಿ ಪೂರ್ಣಜ್ಞಾನಕೃತಃ ಪ್ರಜಾಪತಿ ಸಮಾಖ್ಯಾನಾತ್ ಅಂಭಃ ಸೃಜಾಮಿ । ಪ್ರಣವ ಪ್ರಾಣಾಯಾಮದಿಂದ ಅಪೂರ್ವಾಂಭಸಿತದ್ಬುದ್ಬುದಾಭಂ ಭೂತಾತ್ಮಕಂ ದ್ಯುತಿಮತ್ ಹಿರಣ್ಮಯಂ ಜಗದಂಡಂ ಭಾವಯಾಮಿ । ಪ್ರಣವ ಪ್ರಾಣಾಯಾಮದಿಂದ ಆ ಜಗದಂಡವನ್ನೇ ಬಿಂಬವೆನ್ನುವುದಾಗಿ ಭಾವಿಸಿ, ಪ್ಲುತ ಪ್ರಣವದಿಂದ ಆಚಾರ್ಯನು ತನ್ನ ಆತ್ಮದಲ್ಲಿ ಮೊದಲು ಇರಿಸಲ್ಪಟ್ಟ ಜೀವಶಕ್ತಿಯನ್ನು ಬಿಂಬದ ಜೀವಶಕ್ತಿಯ ಕೂಡ ಒಂದು ಗೂಡಿಸಿ- ಓಂ ಹ್ರೀಂ ಹಂಸಃ- ಎಂದು ಪ್ರಾಣಾಯಾಮದಿಂದ ಬಿಂಬದಲ್ಲಿ ಐಕ್ಯ (ಲೀನ)ಗೊಳಿಸಬೇಕು. ಓಂ ಮಂ ನಮಃ ಪರಾಯ ಜೀವತತ್ತ್ವಾತ್ಮನೇ ನಮಃ- ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ (ಇಲ್ಲಿ ಎಲ್ಲೆಡೆಯೂ ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವು) ಓಂ ಭಂ ನಮಃ ಪರಾಯ ಪ್ರಾಣಾತ್ಮನೇ- ಜೀವತತ್ತ್ವಾತ್ಪ್ರಾಣತತ್ತ್ವಂ ಸೃಜಾಮಿ । ಓಂ ಬಂ ನಮಃ ಪರಾಯ ಬುದ್ಧ್ಯಾತ್ಮನೇ ನಮಃ- ಪ್ರಾಣತತ್ತ್ವಾದ್ಬುದ್ಧಿತತ್ತ್ವಂ ಸೃಜಾಮಿ । ಓಂ ಫಂ ನಮಃ ಪರಾಯ ಅಹಂಕಾರ ತತ್ತ್ವಾತ್ಮನೇ ನಮಃ- ಬುದ್ಧಿ ತತ್ತ್ವಾದಹಂಕಾರತತ್ತ್ವಂ ಸೃಜಾಮಿ । ಓಂ ಪಂ ನಮಃ ಪರಾಯ ಮನ ಆತ್ಮನೇ ನಮಃ- ಅಹಂಕಾರ ತತ್ತ್ವಾನ್ಮನಸ್ತತ್ತ್ವಂ ಸೃಜಾಮಿ । ಓಂ ನಂ ನಮಃ ಪರಾಯ ಶಬ್ದತನ್ಮಾತ್ರಾತ್ಮನೇ ನಮಃ- ಮನಸ್ತತ್ತ್ವಾಚ್ಛಬ್ದತನ್ಮಾತ್ರಾತತ್ತ್ವಂ ಸೃಜಾಮಿ । ಓಂ ಧಂ ನಮಃ ಪರಾಯ ಸ್ಪರ್ಶತನ್ಮಾತ್ರಾತ್ಮನೇ ಶಬ್ದತನ್ಮಾತ್ರಾ ತತ್ತ್ವಾತ್ ಸ್ಪರ್ಶತನ್ಮಾತ್ರಾತತ್ತ್ವಂ ಸೃಜಾಮಿ । ಓಂ ದಂ ನಮಃ ಪರಾಯ ರೂಪತನ್ಮಾತ್ರಾತ್ಮನೇ- ಸ್ಪರ್ಶತನ್ಮಾತ್ರಾ ತತ್ತ್ವಾದ್ರೂಪತತ್ತ್ವಂ ಸೃಜಾಮಿ । ಓಂ ಥಂ ನಮಃ ಪರಾಯ ರಸತನ್ಮಾತ್ರಾತ್ಮನೇ ನಮಃ- ರೂಪ ತನ್ಮಾತ್ರಾತತ್ತ್ವಾದ್ರಸತನ್ಮಾತ್ರಾತತ್ತ್ವಂ ಸೃಜಾಮಿ । ಓಂ ತಂ ನಮಃ ಪರಾಯ ಗಂಧ ತನ್ಮಾತ್ರಾತ್ಮನೇ- ರಸತನ್ಮಾತ್ರಾತತ್ತ್ವಾದ್ಗಂಧತನ್ಮಾತ್ರಾತತ್ತ್ವಂ ಸೃಜಾಮಿ । ಓಂ ಣಂ ನಮಃ ಪರಾಯ ಶ್ರೋತ್ರಾತ್ಮನೇ- ಗಂಧತನ್ಮಾತ್ರಾತತ್ತ್ವಾತ್ ಶ್ರೋತ್ರ ತತ್ತ್ವಂ ಸೃಜಾಮಿ । ಓಂ ಢಂ ನಮಃ ಪರಾಯ ತ್ವಗಾತ್ಮನೇ ನಮಃ- ಶ್ರೋತ್ರತತ್ತ್ವಾತ್ ತ್ವಕ್ತತ್ತ್ವಂ ಸೃಜಾಮಿ । ಓಂ ಡಂ ನಮಃ ಪರಾಯ ಚಕ್ಷುರಾತ್ಮನೇ ನಮಃ- ತ್ವಕ್ತತ್ತ್ವಾಚ್ಚಕ್ಷುಸ್ತತ್ತ್ವಂ ಸೃಜಾಮಿ । ಓಂ ಠಂ ನಮಃ ಪರಾಯ ಜಿಹ್ವಾತ್ಮನೇ ನಮಃ- ಚಕ್ಷುಸ್ತತ್ತ್ವಾತ್ ಜಿಹ್ವಾತತ್ತ್ವಂ ಸೃಜಾಮಿ । ಓಂ ಟಂ ನಮಃ ಪರಾಯ ಘ್ರಾಣಾತ್ಮನೇ ನಮಃ- ಜಿಹ್ವಾತತ್ತ್ವಾತ್ ಘ್ರಾಣತತ್ತ್ವಂ ಸೃಜಾಮಿ । ಓಂ ಇಂ ನಮಃ ಪರಾಯ ವಾಗಾತ್ಮನೇ- ಘ್ರಾಣತತ್ತ್ವಾತ್ ವಾಕ್ತತ್ತ್ವಂ ಸೃಜಾಮಿ । ಓಂ ಝಂ ನಮಃ ಪರಾಯ ಪಾಣ್ಯಾತ್ಮನೇ ನಮಃ- ವಾಕ್ತತ್ತ್ವಾತ್ಪಾಣಿತತ್ತ್ವಂ ಸೃಜಾಮಿ । ಓಂ ಜಂ ನಮಃ ಪರಾಯ ಪಾದಾತ್ಮನೇ- ಪಾಣಿ ತತ್ತ್ವಾತ್ಪಾದತತ್ತ್ವಂ ಸೃಜಾಮಿ । ಛಂ ನಮಃ ಪರಾಯ ಪಾಯ್ವಾತ್ಮನೇ ನಮಃ- ಪಾದತತ್ತ್ವಾತ್ಪಾಯುತತ್ತ್ವಂ । ಓಂ ಚಂ ನಮಃ ಪರಾಯ ಉಪಸ್ಥಾತ್ಮನೇ ಪಾಯುತತ್ತ್ವಾದುಪಸ್ಥಾತತ್ತ್ವಂ ಸೃಜಾಮಿ । ಓಂ ಙಂ ನಮಃ ಪರಾಯ ಆಕಾಶಾತ್ಮನೇ ನಮಃ- ಉಪಸ್ಥಾತತ್ತ್ವಾದಾಕಾಶತತ್ತ್ವಂ ಸೃಜಾಮಿ । ಓಂ ಘಂ ಪರಾಯ ವಾಯ್ವಾತ್ಮನೇ ನಮಃ- ಆಕಾಶತತ್ತ್ವಾದ್ವಾಯುತತ್ತ್ವಂ ಸೃಜಾಮಿ । ಖಂ ನಮಃ ಪರಾಯ । ಓಂ ಗಂ ನಮಃ ಪರಾಯ ತೇಜ ಆತ್ಮನೇ ನಮಃ- ವಾಯೋಃ ತೇಜಸ್ತತ್ತ್ವಂ ಸೃಜಾಮಿ ।

ಅಬಾತ್ಮನೇ– ತೇಜಸಃ ಅಪ್ತತ್ವಂ ಸೃಜಾಮಿ । ಓಂ ಕಂ ನಮಃ ಪರಾಯ ಪೃಥಿವ್ಯಾತ್ಮನೇ ಅದ್ಭ್ಯಃ ಪೃಥಿವೀ ತತ್ತ್ವಂ ಸೃಜಾಮಿ । ಓಂ ಶಂ ನಮಃ ಪರಾಯ ಹೃತ್ಪುಂಡರೀಕಾತ್ಮನೇ ನಮಃ– ಪೃಥಿವೀತತ್ತ್ವಾತ್ ಹೃತ್ಪುಂಡರೀಕತತ್ತ್ವಂ ಸೃಜಾಮಿ । ಓಂ ಹಂ ನಮಃ ಪರಾಯ ಸೂರ್ಯಮಂಡಲಾಯ ದ್ವಾದಶ ಸೌರಕಲಾತ್ಮನೇ ನಮಃ– ಹೃತ್ಪುಂಡರೀಕತತ್ತ್ವಾತ್ ದ್ವಾದಶ ಸೌರಕಲಾತತ್ತ್ವಂ ಸೃಜಾಮಿ । ಓಂ ಸಂ ನಮಃ ಪರಾಯ ಸೋಮಮಂಡಲಾಯ ಷೋಡಶ ಸೋಮಕಲಾತ್ಮನೇ ನಮಃ– ಸೌರಕಲಾ ತತ್ತ್ವಾತ್ ಷೋಡಶ ಸೋಮಕಲಾತತ್ತ್ವಂ ಸೃಜಾಮಿ । ಓಂ ರಂ ನಮಃ ಪರಾಯ ವಹ್ನಿಮಂಡಲಾಯ ದಶವಹ್ನಿಕಲಾತ್ಮನೇ ನಮಃ– ಸೋಮಕಲಾತತ್ತ್ವಾದ್ದಶವಹ್ನಿಕಲಾತತ್ತ್ವಂ ಸೃಜಾಮಿ । ಹೀಗೆ ತತ್ತ್ವಸೃಷ್ಟಿಯನ್ನು ಮಾಡಿ ಬಿಂಬದಲ್ಲಿರುವ ಜೀವವನ್ನು ಎಲ್ಲಾ ಅವಯವಗಳ ವಿಕಾಸ ಹೊಂದಿದಂತೆ ಭಾವಿಸಿ, ಮುನ್ನೂರ ಅರವತ್ತು ಪ್ರಣವ ಪ್ರಾಣಾಯಾಮದಿಂದ ವರ್ಷ ಪರ್ಯಂತ ವಾಸ ಮಾಡಲ್ಪಟ್ಟಂತೆ ಭಾವಿಸಿ 'ಓಂ ಫಟ್' ಎಂದು ಬ್ರಹ್ಮಾಂಡ (ಪ್ರಪಂಚಕ್ಕೆ ಆಶ್ರಯವಾದ ಕೋಶ)ವನ್ನು ಭೇದಿಸಿ, ಆ ತುಂಡುಗಳನ್ನು ಸ್ವರ್ಗ ಮತ್ತು ಭೂಮಿಯೆಂದು ಭಾವಿಸಿ ಅದರ ಮಧ್ಯೆ ಹೊಳೆಯುವ ಪ್ರಪಂಚದ ಹುಟ್ಟಿಗೆ ಕಾರಣವಾದ ಈ ವಿರಾಟ್ ಪುರುಷನನ್ನು ಧ್ಯಾನಿಸಿ, ಲಿಪಿಯಿಂದ ಪ್ರಾಣಾಯಾಮವನ್ನು ಮಾಡಿ ಅಕ್ಷರ (ವರ್ಣ) ಸ್ವರೂಪದ ಅಮೃತ ಜಲಧಾರೆಯನ್ನು ವಿಗ್ರಹದಲ್ಲಿ ಕೆಡವಿ (ಬೀಳಿಸಿ) ಲಿಪಿ ಮಾತೃಕಾನ್ಯಾಸವನ್ನು ( ) ಮಾಡಿ, ಯಥಾಶಕ್ತಿ ಲಿಪಿಯನ್ನು ಜಪ ಮಾಡಿ ಪೂಜಿಸಿ ವಿಘ್ನ ಬೀಜ (ಗಂ)ವನ್ನು, ವಿಘ್ನ ಮಾಲಾಮಂತ್ರವನ್ನು ( ) ಗಣಾನಾಂತ್ವಾ * * * ಜಾತವೇದಸೇ ಸುನವಾಮ * * * ಮೊದಲಾಗಿ ಜಪಿಸಿಬೇಕು.

ಹ ಹ ಹ ಎಂದು ಜಪಿಸುತ್ತಾ ಬಿಂಬದಲ್ಲಿರುವ ಜೀವವನ್ನು ಬಿಂಬದ ದ್ವಾದಶಾಂತದಲ್ಲಿ ವಿಲಯನಗೊಳಿಸಿ, ಪ್ರಣವದಿಂದ ಕೂಡಿದ ಮೂಲಮಂತ್ರವನ್ನು ಜಪಿಸುತ್ತಾ, ಪುನಃ ಬಿಂಬದ ಹೃದಯದಲ್ಲಿ ಯೋಜಿಸಿ, (ಸೇರಿಸಿ) ಬಿಂಬವನ್ನು ದರ್ಭೆಯಿಂದ ಮುಟ್ಟಿಕೊಂಡು ಮೂಲಮಂತ್ರದಿಮದ ಮೂರು ಪ್ರಾಣಾಯಾಮವನ್ನು ಮಾಡುವವನಾಗಿ, ಕ್ರಮವಾಗಿ ಪರ, ಸೂಕ್ಷ್ಮ ಸ್ಥೂಲ ರೂಪಗಳನ್ನು ಭಾವಿಸಿ, ಸ್ಥೂಲರೂಪದ ದೇವನ ಆಧಾರಕ್ಕಾಗಿ ಬಿಂಬದಲ್ಲಿ ಪೀಠನ್ಯಾಸವನ್ನು ಮಾಡಿ ಪುನಃ ದರ್ಭೆಯ ತುದಿಯಿಂದ ಬಿಂಬವನ್ನು ಮುಟ್ಟಿಕೊಂಡು ಮೂಲಮಂತ್ರದಿಂದ ಪ್ರಾಣಾಯಾಮವನ್ನು ಮಾಡಿ ಪ್ರಣವ ಪುಟಿತ ಮೂಲದಿಂದ ಬಿಂಬವನ್ನು ಮೂರಾವರ್ತಿ ವ್ಯಾಪಿಸಿ, ಲಿಪಿನ್ಯಾಸ, ತತ್ತ್ವನ್ಯಾಸ, ಮಂತ್ರಾಕ್ಷರನ್ಯಾಸ ಅದಕ್ಕೆ ಸಂಬಂಧಿಸಿದ ಅಂಗನ್ಯಾಸಗಳನ್ನು ಮಾಡಿ ತತ್ತ್ವಾವಾಹನೆಗಾಗಿ ಬಿಂಬದಲ್ಲಿ ಪೀಠಪೂಜೆಯನ್ನು ಮಾಡಿ ಮೂರ್ತ್ಯಾವಾಹನೆಯನ್ನು ಮಾಡಬೇಕು.

* * * *

## ತತ್ತ್ವಾವಾಹನಂ

(೧) ಓಂ ಮಂ ನಮಃ ಪರಾಯ ಜೀವತತ್ತ್ವಾತ್ಮನೇ ನಮಃ– ಜೀವತತ್ತ್ವಮಾವಾಹಯಾಮಿ– ಹೀಗೆ ಹೂವಿನಿಂದ ಆವಾಹನೆ ಮಾಡಿ, ವ್ಯಾಪಿಸಿ, ಅದೇ ತತ್ತ್ವವನ್ನು ಹೇಳಿ, ಪುಷ್ಪಾಂಜಲಿಯನ್ನು ಮಾಡಬೇಕು. ಹೀಗೆಯೇ ಎಲ್ಲಾ ತತ್ತ್ವಗಳಲ್ಲಿಯೂ ತಿಳಿದುಕೊಳ್ಳಬೇಕು.

(೨) ಓಂ ಭಂ * * * ಪ್ರಾಣಾತ್ಮನೇ ನಮಃ

(೩) ಓಂ ಬಂ * * * ಬುದ್ಧ್ಯಾತ್ಮನೇ ನಮಃ

(೪) ಓಂ ಫಂ * * * ಅಹಂಕಾರಾತ್ಮನೇ ನಮಃ

(೫) ಓಂ ಪಂ * * * ಮನ ಆತ್ಮನೇ ನಮಃ

(೬) ಓಂ ನಂ * * * ಶಬ್ದತನ್ಮಾತ್ರಾತ್ಮನೇ ನಮಃ

(೭) ಓಂ ಧಂ * * * ಸ್ಪರ್ಶತನ್ಮಾತ್ರಾತ್ಮನೇ ನಮಃ

(೮) ಓಂ ದಂ * * * ರೂಪತನ್ಮಾತ್ರಾತ್ಮನೇ ನಮಃ

(೯) ಓಂ ಥಂ * * * ರಸತನ್ಮಾತ್ರಾತ್ಮನೇ ನಮಃ

(೧೦) ಓಂ ತಂ * * * ಗಂಧತನ್ಮಾತ್ರಾತ್ಮನೇ ನಮಃ

(೧೧) ಓಂ ಣಂ * * * ಶ್ರೋತ್ರಾತ್ಮನೇ ನಮಃ

(೧೨) ಓಂ ಢಂ * * * ತ್ವಗಾತ್ಮನೇ ನಮಃ

(೧೩) ಓಂ ಡಂ * * * ಚಕ್ಷುರಾತ್ಮನೇ ನಮಃ

(೧೪) ಓಂ ಠಂ * * * ಜಿಹ್ವಾತ್ಮನೇ ನಮಃ

(೧೫) ಓಂ ಟಂ * * * ಘ್ರಾಣಾತ್ಮನೇ ನಮಃ

(೧೬) ಓಂ ಞಂ * * * ವಾಗಾತ್ಮನೇ ನಮಃ

(೧೭) ಓಂ ಝಂ * * * ಪಾಣ್ಯಾತ್ಮನೇ ನಮಃ

(೧೮) ಓಂ ಜಂ * * * ಪಾದಾತ್ಮನೇ ನಮಃ

(೧೯) ಓಂ ಛಂ * * * ಪಾಯ್ವಾತ್ಮನೇ ನಮಃ

(೨೦) ಓಂ ಚಂ * * * ಉಪಸ್ಥಾತ್ಮನೇ ನಮಃ

(೨೧) ಓಂ ಙಂ * * * ಆಕಾಶಾತ್ಮನೇ ನಮಃ

(೨೨) ಓಂ ಘಂ * * * ವಾಯ್ವಾತ್ಮನೇ ನಮಃ

(೨೩) ಓಂ ಗಂ * * * ತೇಜ ಆತ್ಮನೇ ನಮಃ

(೨೪) ಓಂ ಖಂ * * * ಅಬಾತ್ಮನೇ ನಮಃ

(೨೫) ಓಂ ಕಂ * * * ಪೃಥಿವ್ಯಾತ್ಮನೇ ನಮಃ

(೨೬) ಓಂ ಶಂ * * * ಹೃತ್ಪುಂಡರೀಕಾತ್ಮನೇ ನಮಃ

(೨೭) ಓಂ ಹಂ * * * ಸೂರ್ಯಮಂಡಲಾಯ ದ್ವಾದಶ ಸೌರಕಲಾತ್ಮನೇ

(೨೮) ಓಂ ಸಂ * * * ಸೋಮಮಂಡಲಾಯಷೋಡಶಸೋಮಕಲಾತ್ಮನೇ

(೨೯) ಓಂ ರಂ * * * ವಹ್ನಿಮಂಡಲಾಯ ದಶವಹ್ನಿಕಲಾತ್ಮನೇ ನಮಃ ॥

ಹಾಗೆಯೇ ಎಲ್ಲಾ ದೇವತೆಗಳಲ್ಲೂ ಪಂಚತತ್ತ್ವಗಳನ್ನು ಮೂರ್ಧಾದಿ ಐದು ಸ್ಥಾನಗಳಲ್ಲಿ ಆವಾಹಿಸಬೇಕು. ಹೀಗೆ ಪ್ರತಿಯೊಂದು ತತ್ತ್ವನ್ನೂ ಪ್ರತ್ಯೇಕವಾಗಿ ಹೂವುಗಳಿಂದ ಆವಾಹಿಸಿ, ವ್ಯಾಪಿಸಿ, ಪುಷ್ಪಾಂಜಲಿಯನ್ನು ಮಾಡಿ ಬಿಂಬದಲ್ಲಿರುವ ಜೀವವನ್ನು ಎಲ್ಲಾ ಅವಯವಗಳಿಂದ ಕೂಡಿ ಪ್ರಕಾಶಮಾನವಾದದ್ದಾಗಿ ಭಾವಿಸಿ, ಮೂಲಮಂತ್ರದಿಂದ ಆವಾಹನೆಯನ್ನು ಮಾಡಿ, ಮೂಲ ಮಂತ್ರಾತ್ಮಕ ಶಕ್ತಿಯಿಂದ ಸೇರಿಸಿ, ಮೂಲದಿಂದ ಮೂರಾವರ್ತಿ ವ್ಯಾಪಿಸಿ ತತ್ತ್ವನ್ಯಾಸವನ್ನು ಮಾಡಬೇಕು.

* * * *

## ತತ್ತ್ವನ್ಯಾಸಃ

ಓಂ ಮಂ ನಮಃ ಪರಾಯ ಜೀವತತ್ತ್ವಾತ್ಮನೇ ನಮಃ । ಓಂ ಭಂ ನಮಃ ಪರಾಯ ಪ್ರಾಣಾತ್ಮನೇ ನಮಃ– ಸರ್ವಾಂಗೇ । ಓಂ ಬಂ * * * ಬುದ್ಧ್ಯಾತ್ಮನೇ ನಮಃ– ಹೃದಯೇ । ಓಂ ಫಂ * * ಅಹಂಕಾರಾತ್ಮನೇ– ಹೃದಯೇ । ಓಂ ಪಂ * * ಮನ ಆತ್ಮನೇ– ಹೃದಯೇ । ಓಂ ನಂ * * ಶಬ್ದತನ್ಮಾತ್ರಾತ್ಮನೇ * * ಶಿರಸಿ । ಓಂ ಧಂ * * ಸ್ಪರ್ಶತನ್ಮಾತ್ರಾತ್ಮನೇ– ಮುಖೇ । ಓಂ ದಂ * * ರೂಪತನ್ಮಾತ್ರಾತ್ಮನೇ– ಹೃದಯೇ । ಓಂ ಥಂ * * ರಸತನ್ಮಾತ್ರಾತ್ಮನೇ– ಗುಹ್ಯೇ । ಓಂ ತಂ * * ಗಂಧತನ್ಮಾತ್ರಾತ್ಮನೇ– ಪಾದಯೋಃ । ಓಂ ಣಂ * * ಶ್ರೋತ್ರಾತ್ಮನೇ – ಶ್ರೋತ್ರಯೋಃ । ಓಂ ಢಂ * * ತ್ವಗಾತ್ಮನೇ– ತ್ವಚಿ । ಓಂ ಡಂ * * ಚಕ್ಷುರಾತ್ಮನೇ– ಚಕ್ಷುಷೋಃ । ಓಂ ಠಂ * * ಜಿಹ್ವಾತ್ಮನೇ– ಜಿಹ್ವಾಯಾಂ । ಓಂ ಟಂ * * ಘ್ರಾಣಾತ್ಮನೇ– ನಾಸಿಕಯೋಃ । ಓಂ ಞಂ * * ವಾಗಾತ್ಮನೇ– ಮುಖೇ । ಓಂ ಝಂ * * ಪಾಣ್ಯಾತ್ಮನೇ– ಹಸ್ತಯೋಃ । ಓಂ ಜಂ * * ಪಾದಾತ್ಮನೇ– ಪಾದಯೋಃ । ಓಂ ಛಂ * * ಪಾಯ್ವಾತ್ಮನೇ– ಅಪಾನೇ । ಓಂ ಚಂ * * ಉಪಸ್ಥಾತ್ಮನೇ(ಉಪಸ್ಥೇ)–ಗುಹ್ಯೇ । ಓಂ ಙಂ * * ಆಕಾಶಾತ್ಮನೇ– ಶಿರಸಿ । ಓಂ ಘಂ * * ವಾಯ್ವಾತ್ಮನೇ– ಮುಖೇ । ಓಂ ಗಂ * * ತೇಜ ಆತ್ಮನೇ– ಹೃದಯೇ । ಓಂ ಖಂ * * ಅಬಾತ್ಮನೇ– ಗುಹ್ಯೇ । ಓಂ ಕಂ * * ಪೃಥಿವ್ಯಾತ್ಮನೇ– ಪಾದಯೋಃ । ಓಂ ಶಂ * * ಹೃತ್ಪುಂಡರೀಕಾತ್ಮನೇ– ಹೃದಯೇ । ಓಂ ಹಂ * * ಸೂರ್ಯಮಂಡಲಾಯ ದ್ವಾದಶ ಸೌರಕಲಾತ್ಮನೇ । ಸಂ * * ಸೋಮಮಂಡಲಾಯ ಷೋಡಶ ಸೋಮಕಲಾತ್ಮನೇ । ಓಂ ರಂ ನಮಃ ಪರಾಯ ವಹ್ನಿಮಂಡಲಾಯ ದಶವಹ್ನಿಕಲಾತ್ಮನೇ ನಮಃ– ಹೃದಯೇ । ಪಂಚತತ್ತ್ವಾನಿ ಮೂರ್ಧಾದಿ ಪಂಚಸುಸ್ಥಾನೇಷು ನ್ಯಸೇತ್ ॥

ಆಮೇಲೆ ತಮ್ಮ ಮೂಲಮಂತ್ರದ ಅಕ್ಷರಗಳನ್ನೂ, ಅಂಗಗಳನ್ನು ನ್ಯಾಸ ಮಾಡಿ ತತ್ತ್ವಾವಾಹನ ತತ್ತ್ವನ್ಯಾಸ ಮೊದಲಾದುವುಗಳಿಂದ ದೇವರ ಸ್ಥೂಲದೇಹವನ್ನು ಭಾವಿಸಿ ಪ್ರತ್ಯೇಕವಾದ ಸಮಷ್ಟ್ಯಾತ್ಮಕವಾದ ಆಯಾಯ ಪಂಚತತ್ತ್ವಗಳಿಂದ ಆವಾಹಿಸಿ ಸೂಕ್ಷ್ಮದೇಹವನ್ನು ಪರಿಕಲ್ಪಿಸಿ ವ್ಯಾಪನೆಯನ್ನು ಮಾಡಿ ಮಂತ್ರಾವಾಹನೆಯನ್ನು ಮಾಡಬೇಕು. ಹೀಗೆ ಎಲ್ಲಾ ತತ್ತ್ವಗಳನ್ನು ಹೃತ್ಪುಂಡರೀಕ ಮಂಡಲ ತ್ರಯ ಪಂಚತತ್ತ್ವಗಳನ್ನಾವಾಹಿಸಿ (ನ್ಯಾಸ ಮಾಡಿ) ವಿಷ್ಣು ದುರ್ಗಾ ಶಂಕರನಾರಾಯಣರಲ್ಲಿ ಕೋಪತತ್ತ್ವದಿಂದ, ಸ್ಕಂದನಲ್ಲಿ– ಕ್ಷೇತ್ರಜ್ಞತತ್ತ್ವದಿಂದಲೂ ನ್ಯಾಸ ವ್ಯಾಪನೆಯನ್ನು ಮಾಡಬೇಕು. ಹಾಗೆಯೇ ಅಂಗದೇಹದಲ್ಲಿ ಸೂಕ್ಷ್ಮದೇಹವನ್ನೂ ಪರಿಕಲ್ಪಿಸಿ ಆವಾಹಿಸಿ (ಪಂಚಬ್ರಹ್ಮಗಳಿಂದ) ವ್ಯಾಪನೆ ಮಾಡಿ, ತಾರೋಪಚಾರಗಳಿಂದ ಎಲ್ಲಾ ದೇವತೆಗಳಲ್ಲಿಯೂ ಆವಾಹಿಸಿ, ಮುದ್ರೆಗಳನ್ನು ತೋರಿಸಿ ಮೂಲದಿಂದಲೂ ವ್ಯಾಪಿಸಿ ಷಡಧ್ವನ್ಯಾಸವನ್ನು ಮಾಡಬೇಕು. ಕೊನೆಯಲ್ಲಿ ಎಲ್ಲಾ ದೇವತೆಗಳಲ್ಲಿಯೂ ನಿಜಮೂಲಮಂತ್ರದಲ್ಲಿ ಹೇಳಿದ, ಅಷ್ಟಾಕ್ಷರದಲ್ಲಿ ದಶಾಂಗ ಮೊದಲಾದುವನ್ನೂ ಷಡಕ್ಷರದಲ್ಲಿ ಗೋಲಕನ್ಯಾಸ ಮೊದಲಾದುವನ್ನೂ ಮಾಡಬೇಕು. ಯಾವ ಯಾವ ಮಂತ್ರದಿಂದ ಮನು ಬಿಂಬ(ವಿಗ್ರಹ)ದಲ್ಲಿ ದೇವರ ಪೂಜೆಯು ಮಾಡಲ್ಪಟ್ಟಿತೋ ಆಯಾಯ ಮಂತ್ರದಿಂದ ಅದರ ಉತ್ತರ ಭಾಗದಲ್ಲಿ ಸಿದ್ಧಗೊಳಿಸಿದ ಮಂಡಲದಲ್ಲಿ ಆ ದೇವರನ್ನು ಪೂಜಿಸಬೇಕು. ವಿಷ್ಣುವನ್ನು ಚಕ್ರಾಬ್ಜ ಮಂಡಲದಲ್ಲಿಯೂ, ದುರ್ಗಿಯಲ್ಲಿ ಶಕ್ತಿ ದಂಡ ಭದ್ರಕದಲ್ಲಿಯೂ, ಉಳಿದ ದೇವತೆಗಳಲ್ಲಿ ಕೇವಲ ಭದ್ರಕಮಂಡಲದಲ್ಲಿಯೂ, ಗುಹನಲ್ಲಿ ಹಿಂದೆ ಹೇಳಿದ ಪಶ್ಚಿಮ ದಿಕ್ಕಿನಲ್ಲಿರುವ ಷಡ್ದಲಪದ್ಮದಲ್ಲಿಯೂ ಆಯಾಯ ದೇವತೆಯನ್ನು ಪೂಜಿಸಬೇಕು.

* * * *

## ಚಕ್ರಾಬ್ಜಪೂಜಾ

ಅಲ್ಲಿ ಪೂಜಾಪಟಲದಲ್ಲಿ ಹೇಳಿದ ಕ್ರಮದಂತೆ 'ಅನಂತ' ಪರ್ಯಂತವಾಗಿ ವಿಷ್ಣುಪೀಠ ಪೂಜೆಯನ್ನು ಮಾಡಿ ಆ ಮಂಡಲವನ್ನು ಕಾಲಚಕ್ರವೆಂದು ಭಾವಿಸಿ ಚಕ್ರಪದ್ಮದಲ್ಲಿ ಪೂರ್ವ ಮೊದಲಾದ ಅಂಚಿನಲ್ಲಿ– ಭಂ ನಮಃ ಪರಾಯ ಪ್ರಾಣಾತ್ಮನೇ ನಮಃ– ಇದೇ ಮೊದಲಾಗಿ ಕಂ ನಮಃ ಪರಾಯ ಪೃಥಿವ್ಯಾತ್ಮನೇ ನಮಃ– ಇದೇ ಕೊನೆಯಾದ ಇಪ್ಪತ್ತನಾಲ್ಕು ತತ್ತ್ವಗಳನ್ನು ಪೂರ್ವದಿಕ್ಕಿನಿಂದ ಒಳಗೆ ಹೊರಗೆ ಈ ಕ್ರಮದಿಂದ ಮೊದಲು ಒಳಗಿನ ಪೂರ್ವದ ಅಂಚಿನಲ್ಲಿ, ಪುನಃ ಅದರ ಪಕ್ಕದ ಹೊರಗಿನ ದಕ್ಷಿಣದ ಅಂಚಿನಲ್ಲಿ, ಪುನಃ ದಕ್ಷಿಣದಲ್ಲಿರುವ ಒಳಗಿನ ಅಂಚಿನಲ್ಲಿ, ಪುನಃ ಅದರ ಒಳಗಡೆಯಲ್ಲಿರುವ ಹೊರಗಿನ ಅಂಚಿನಲ್ಲಿ ಹೀಗೆ ಕ್ರಮದಿಂದ ಪೂಜಿಸಬೇಕು. ಪುನಃ ಅರಗಳ ನಡುವೆ (ಮಧ್ಯದಲ್ಲಿರುವ ಸರಳುಗಳು) ಹೊಂದದ ನಪುಂಸಕ ಹನ್ನೆರಡು ಸ್ವರಗಳಿಂದ ಕೂಡಿದ ಹಂ ಬೀಜದಿಂದ– ಹಂ ಹಾಂ ಮೊದಲಾದುವುಗಳಿಂದ ಮೇಷಾದಿ ರಾಶಿಗಳಿಂದ ಕೂಡಿದ– ಆತ್ಮನೇ– ಹೀಗೆ ಕೊನೆಗೊಳ್ಳುವುದರಿಂದ ಪೂಜಿಸಬೇಕು. ಹೇಗೆಂದರೆ– ಹಂ ನಮಃ ಪರಾಯ ಸೂರ್ಯಾಯ ಮೇಷಾತ್ಮನೇ ಧಾತ್ರೇ ನಮಃ । ಹಾಂ ನಮಃ ಪರಾಯ ಸೂರ್ಯಾಯ ವೃಷಾಭಾತ್ಮನೇ ಅರ್ಯಮ್ಣೇ ನಮಃ । ಹಿಂ * * * ಸೂರ್ಯಾಯ ಮಿಥುನಾತ್ಮನೇ ಮಿತ್ರಾಯ । ಹೀಂ * * ಸೂರ್ಯಾಯ ಕಟಕಾತ್ಮನೇ ವರುಣಾಯ । ಹುಂ * * ಸೂರ್ಯಾಯ ಸಿಂಹಾತ್ಮನೇ ಅಂಶಾಯ । ಹೂಂ * * ಸೂರ್ಯಾಯ ಕನ್ಯಾತ್ಮನೇ ಭಗಾಯ । ಹೇಂ * * ಸೂರ್ಯಾಯ ತುಲಾತ್ಮನೇ ವಿವಸ್ವತೇ । ಹೈಂ * * ಸೂರ್ಯಾಯ ವೃಶ್ಚಿಕಾತ್ಮನೇ ಇಂದ್ರಾಯ । ಹೋಂ * * ಸೂರ್ಯಾಯ ಧನ್ವಾತ್ಮನೇ ಪೂಷ್ಣೇ । ಹೌಂ * * ಸೂರ್ಯಾಯ ಮಕರಾತ್ಮನೇ ಪರ್ಜನ್ಯಾಯ । ಹಂ * * ಸೂರ್ಯಾಯ ಕುಂಭಾತ್ಮನೇ ತ್ವಷ್ಟ್ರೇ । ಹಃ ನಮಃ ಪರಾಯ ಸೂರ್ಯಾಯ ಮೀನಾತ್ಮನೇ ವಿಷ್ಣವೇ ನಮಃ । ಪುನಃ ಪ್ರತಿಯೊಂದು ಅರದಲ್ಲಿಯೂ ಎರಡೂ ಪಕ್ಕಗಳಲ್ಲಿ ಕೆಳಭಾಗದಿಂದ ಆರಂಭಿಸಿ ಮೇಲಿನ ಭಾಗದವರೆಗೆ ಯಥಾಕ್ರಮವಾಗಿ ಪ್ರತಿಕೂಲ ಕ್ರಮದಿಂದ ಆವಾಹಿಸಬೇಕು. ಅ ಕಾರದಿಂದಾರಂಭಿಸಿ ಅನುಸ್ವಾರ ಪರ್ಯಂತವಾದ ಹದಿನೈದು ಸ್ವರಗಳಿಂದ ಕೂಡಿದ ಸಂ ಬೀಜದಿಂದ ಅನುಕ್ರಮವಾಗಿ ಶುಕ್ಲಪ್ರತಿಪತ್ತು ಮೊದಲಾದುವನ್ನು ಮೇಲಿನಿಂದ ಕೆಳಭಾಗ ಪರ್ಯಂತವಾಗಿ ವಿಸರ್ಗದಿಂದಾರಂಭಿಸಿ ಆಕಾರಾಂತ ಪರ್ಯಂತವಾದ ಹದಿನೈದು ಸ್ವರಗಳಿಂದ ವ್ಯುತ್ಕ್ರಮವಾಗಿರುವ ಸಂ ಬೀಜದಿಂದ ಕೂಡಿದ ಕೃಷ್ಣ ಪ್ರತಿಪತ್ತು ಮೊದಲಾಗಿ ನ್ಯಾಸ ಮಾಡಬೇಕು. ಹೇಗೆಂದರೆ– ಸಂ ನಮಃ ಪರಾಯ ಸೋಮಾಯ ಶುಕ್ಲಪ್ರತಿಪದಾತ್ಮನೇ ನಮಃ । ಸಾಂ ನಮಃ ಪರಾಯ ಶುಕ್ಲ ದ್ವಿತೀಯಾತ್ಮನೇ । ಸಿಂ * * ಸೋಮಾಯ ಶುಕ್ಲ ತೃತೀಯಾತ್ಮನೇ । ಸೀಂ * * ಸೋಮಾಯ ಶುಕ್ಲ ಚತುರ್ಥ್ಯಾತ್ಮನೇ । ಸುಂ * * ಸೋಮಾಯ ಶುಕ್ಲ ಪಂಚಮ್ಯಾತ್ಮನೇ। ಸೂಂ * * ಸೋಮಾಯ ಶುಕ್ಲ ಷಷ್ಠ್ಯಾತ್ಮನೇ । ಸೃಂ * * ಸೋಮಾಯ ಶುಕ್ಲ ಸಪ್ತಮ್ಯಾತ್ಮನೇ । ಸೄಂ * * ಸೋಮಾಯ ಶುಕ್ಲಾಷ್ಟಮ್ಯಾತ್ಮನೇ । ಸ್ಲೃಂ * * ಸೋಮಾಯ ಶುಕ್ಲ ನವಮ್ಯಾತ್ಮನೇ । ಸ್ಲೄಂ * * ಸೋಮಾಯ ಶುಕ್ಲದಶಮ್ಯಾತ್ಮನೇ । ಸೇಂ * * ಸೋಮಾಯ ಶುಕ್ಲೈಕಾದಶ್ಯಾತ್ಮನೇ । ಸೈಂ * * ಸೋಮಾಯ ಶುಕ್ಲದ್ವಾದಶ್ಯಾತ್ಮನೇ । ಸೋಂ * * ಸೋಮಾಯ ಶುಕ್ಲತ್ರಯೋದಶ್ಯಾತ್ಮನೇ । ಸೌಂ * * ಸೋಮಾಯ ಶುಕ್ಲಚುತುರ್ದಶ್ಯಾತ್ಮನೇ । ಸಂ * * ಸೋಮಾಯ ಶುಕ್ಲ ಪಂಚದಶ್ಯಾತ್ಮನೇ। ಪುನಃ ಪ್ರತಿಲೋಮ ಕ್ರಮದಿಂದ– ಸಃ ನಮಃ ಪರಾಯ ಸೋಮಾಯ ಕೃಷ್ಣ ಪ್ರತಿಪದಾತ್ಮನೇ ನಮಃ । ಸಂ * * ಸೋಮಾಯ ಕೃಷ್ಣ ದ್ವಿತೀಯಾತ್ಮನೇ । ಸೌಂ * * ಸೋಮಾಯ ಕೃಷ್ಣ ತೃತೀಯಾತ್ಮನೇ । ಸೋಂ * * ಸೋಮಾಯ ಕೃಷ್ಣ ಚತುರ್ಥ್ಯಾತ್ಮನೇ। ಸೈಂ * * ಸೋಮಾಯ ಕೃಷ್ಣ ಪಂಚಮ್ಯಾತ್ಮನೇ । ಸೇಂ * * ಸೋಮಾಯ ಕೃಷ್ಣಷಷ್ಠ್ಯಾತ್ಮನೇ । ಸ್ಲೄಂ * * ಸೋಮಾಯ ಕೃಷ್ಣ

ಸಪ್ತಮ್ಯಾತ್ಮನೇ । ಸ್ಲಂ * * ಸೋಮಾಯ ಕೃಷ್ಣಾಷ್ಟಮ್ಯಾತ್ಮನೇ । ಸ್ಯಂ * * ಸೋಮಾಯ ಕೃಷ್ಣ ನವಮ್ಯಾತ್ಮನೇ । ಸ್ಯಂ * * ಸೋಮಾಯ ಕೃಷ್ಣದಶಮ್ಯಾತ್ಮನೇ । ಸೂಂ * * ಸೋಮಾಯ ಕೃಷ್ಣೈಕಾದಶ್ಯಾತ್ಮನೇ । ಸುಂ ನಮಃ ಪರಾಯ ಸೋಮಾಯ ಕೃಷ್ಣ ದ್ವಾದಶ್ಯಾತ್ಮನೇ । ಸೀಂ * * ಸೋಮಾಯ ಕೃಷ್ಣ ತ್ರಯೋದಶ್ಯಾತ್ಮನೇ । ಸಿಂ ನಮಃ ಪರಾಯ ಸೋಮಾಯ ಕೃಷ್ಣ ಚತುರ್ದಶ್ಯಾತ್ಮನೇ । ಸಾಂ ನಮಃ ಪರಾಯ ಸೋಮಾಯ ಕೃಷ್ಣ ಪಂಚದಶ್ಯಾತ್ಮನೇ ನಮಃ । ಈ ರೀತಿಯಾಗಿ ಪೂಜಿಸಿ ಅರದ ನಡುವೆ ಸಂ * * ಸೋಮಾಯ ಅಮಾಕಲಾತ್ಮನೇ– ಹೀಗೆ ಪೂಜಿಸಬೇಕು. ಹೀಗೆ ಹನ್ನೆರಡು ಅರಗಳಲ್ಲಿ ಪ್ರತಿಯೊಂದು ಅರವನ್ನೂ ಪೂಜಿಸಬೇಕು. ಪುನಃ ನಾಭಿತ್ರಯಗಳಲ್ಲಿ ಅಂತರಾದಿಕ್ರಮದಲ್ಲಿ– ಅಂ ನಮಃ ಪರಾಯ ಪ್ರಾತಃ ಸವನಾತ್ಮನೇ । ಉಂ * * ಮಾಧ್ಯಂದಿನ ಸವನಾತ್ಮನೇ ನಮಃ । ಮಂ * * ತೃತೀಯ ಸವನಾತ್ಮನೇ ನಮಃ । ಹೀಗೆ ಪೂಜಿಸಿ, ಬಂಡಿಯ ಗಾಲಿಯಲ್ಲಿ ಕ್ಷ್ರಾಂ ಕೋಪತತ್ತ್ವಾತ್ಮನೇ । ಪುನಃ ಚಕ್ರದಲ್ಲಿ ಪಂ ಪದ್ಮಾಯನ * ಅಂ ಅರ್ಕ ಮಂಡಲಾಯ । ಉಂ ಸೋಮಮಂಡಲಾಯ । ಮಂ ವಹ್ನಿ ಮಂಡಲಾಯ । ಅಂ ಆತ್ಮನೇ । ಉಂ ಅಂತರಾತ್ಮನೇ । ಮಂ ಪರಮಾತ್ಮನೇ । ಓಂ ಶ್ರೀಂ ಜ್ಞಾನಾತ್ಮನೇ । ಹೀಗೆ ಪೂಜಿಸಿ, ದಳಗಳಲ್ಲಿ ನವಶಕ್ತಿಗಳು, ಕರ್ಣಿಕೆಯಲ್ಲಿ ಸಮಷ್ಟಿಮಂತ್ರದಿಂದ ಪೂಜಿಸಿ, ಕರ್ಣಿಕೆಯಲ್ಲಿ ಮಂ * * ಜೀವತತ್ತ್ವಾತ್ಮನೇ ನಮಃ– ಹೀಗೆ ಆವಾಹಿಸಿ, ಮೂಲಮಂತ್ರದಿಂದ ದೇವತೆಯನ್ನು ಆವಾಹಿಸಿ, ಸಕಲೀಕರಣವನ್ನು ಮಾಡಿ– ಅರ್ಘ್ಯಮಿದಂ ಸಮರ್ಪಯಾಮಿ । ಪಾದ್ಯಮಿದಂ । ಆಚಮನೀಯಮಿದಂ– ಹೀಗೆ ಉಪಹಾರಗಳನ್ನು ಕೊಟ್ಟು– ಇಂದ್ರಾದಿ ಎಂಟು ದಿಕ್ಕುಗಳಲ್ಲಿ– ಓಂ ಹೃದಯಾಯ । ನಂ ಶಿರಸೇ । ಮೋಂ ಶಿಖಾಯೈ– ಮೊದಲಾಗಿ ಎಂಟರಿಂದ ಕೊನೆಗೊಳ್ಳುವ ಅಂಗಗಳಿಂದ ಪ್ರಥಮಾವರಣವನ್ನು ಪೂಜಿಸಿ– ಕ್ರುದ್ಧೋಲ್ಕಾಯ ಸ್ವಾಹಾ ಹೃದಯಾಯ ನಮಃ । ಮಹೋಲ್ಕಾಯ ಸ್ವಾಹಾ ಶಿರಸೇ ಸ್ವಾಹಾ ನಮಃ । ವೀರೋಲ್ಕಾಯ ಸ್ವಾಹಾ ಶಿಖಾಯೈ ವಷಣ್ಣಮಃ । ದ್ಯುಲ್ಕಾಯ ಸ್ವಾಹಾ ಕವಚಾಯ ಹುಂ ನಮಃ– ಹೀಗೆ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ । ಸಹಸ್ರೋಲ್ಕಾಯಸ್ವಾಹಾ ಅಸ್ತ್ರಾಯ ಫಣ್ಣಮಃ– ಹೀಗೆ ಆಗ್ನೇಯಾದಿ ವಿದಿಕ್ಕುಗಳಲ್ಲಿ ಪೂಜಿಸಿ, ಪುನಃ ಅರಗಳಲ್ಲಿ– ಓಂ ವಿಷ್ಣವೇ ನಮಃ । ನಂ ಮಧುಸೂದನಾಯ । ಮೋಂ ತ್ರಿವಿಕ್ರಮಾಯ । ಭಂ ವಾಮನಾಯ । ಗಂ ಶ್ರೀಧರಾಯ । ವಂ ಹೃಷೀಕೇಶಾಯ । ತೇಂ ಪದ್ಮನಾಭಾಯ । ವಾಂ ದಾಮೋದರಾಯ । ಸುಂ ಕೇಶವಾಯ । ದೇಂ ನಾರಾಯಣಾಯ । ವಾಂ ಮಾಧವಾಯ । ಯಂ ಗೋವಿಂದಾಯ ನಮಃ– ಹೀಗೆ ಹನ್ನೆರಡು ಮೂರ್ತಿಗಳನ್ನು ಪೂಜಿಸಬೇಕು. ಪುನಃ– ವೈನತೇಯಾದಿ ಆವರಣಗಳಿಂದ ಪೂಜಿಸಬೇಕು. ವೈನತೇಯಾಯ । ವೈನತೇಯಾಯ । ಸುದರ್ಶನಾಯ । ಕಾಮೋದಕ್ಯೈ । ಪಾಂಚಜನ್ಯಾಯ (ಇತಿ ಚತುರ್ವಾರಂ) ಹೀಗೆ ನಾಲ್ಕು ಆವರ್ತಿ । ಶಾರ್ಙ್ಗಾಯ । ಇಷುಧೀಭ್ಯಾಂ । ಖಡ್ಗಾಯ । ಖೇಟಾಯ । ಶ್ರಿಯೈ । ಪುಷ್ಟ್ಯೈ । ವನಮಾಲಾಯೈ । ಶ್ರೀವತ್ಸಾಯ । ಶ್ರೀಕೌಸ್ತುಭಾಯ ನಮಃ । ಇತಿ ತೃತೀಯಾವರಣಂ । ಇಂದ್ರಾದಿ ಚತುರ್ಥಂ । ವಜ್ರಾದಿ ಪಂಚಮಾವರಣಂ । ವಿಷ್ವಕ್ಸೇನಾಯ– ಹೀಗೆ ಆವರಣ ಪೂಜೆಯನ್ನು ಮಾಡಿ, ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಬೇಕು. ಇತಿ ಚಕ್ರಾಬ್ಜಮಂಡಲ ಪೂಜಾ.

## ಪೀಠಾಧಿವಾಸ ಪೂಜಾ

ಬಿಂಬದಿಂದ ಕೂಡಿ ಪೀಠದ ಜಲಾಧಿವಾಸವೂ ಮಾಡಲ್ಪಡಬೇಕು. ಅದೇ ದಿನದ ರಾತ್ರಿಯಲ್ಲಿ ನಪುಂಸಕ ಶಿಲೆಯಿಂದ ಕೂಡಿದ ಪೀಠವನ್ನು ಜಲಾಧಿವಾಸದ ಕೊನೆಯಲ್ಲಿ ಮಾಡಬೇಕಾದ ಸಂಸ್ಕಾರವನ್ನು ಮಾಡಿ, ಅಷ್ಟಗಂಧದ ನೀರಿನಿಂದ ತುಂಬಿದ ಕಲಶಗಳಿಂದ ಬಿಂಬದಲ್ಲಿ ಹೇಳಿದ ಕ್ರಮದಿಂದ ಅಭಿಷೇಕ ಮಾಡಿ ಸಿಂಪಡಿಸಿ, ಬೇರೊಂದು ಹಾಸಿಗೆಯಲ್ಲಿ ಇರಿಸಿ ಅಲಂಕಾರಗಳಿಂದ ಅಲಂಕರಿಸಬೇಕು. ಪೀಠ ಮೊದಲಾದುವುಗಳು ಭಾರವಾಗಿರುವಲ್ಲಿ ಗರ್ಭಗೃಹದಲ್ಲಿ ಅದನ್ನಿಡಬೇಕಾದ ನಿಜಸ್ಥಾನದಲ್ಲಿ ಶಿಲ್ಪಿಗಳಿಂದ ಇರಿಸಿ ಜಲಾಧಿವಾಸಕ್ಕಾಗಿ, ಕಡಾಯಿಯಲ್ಲಿ ತುಂಬಿಸಿದ ನೀರಿನಲ್ಲಿ ವರುಣನನ್ನು ಆವಾಹಿಸಿ ಪೂಜಿಸಿ ಆ ನೀರಿನಿಂದ ಸಿಂಪಡಿಸಬೇಕು. (ಅಭಿಷೇಕಿಸಬೇಕು)

ಆಚಾರ್ಯನು ಧ್ಯಾನಾಧಿವಾಸಾ ನಂತರದಲ್ಲಿ ಪ್ರತ್ಯೇಕವಾದ ಹಾಸಿಗೆಯಲ್ಲಿರಿಸಿದ ನಪುಂಸಕ ಶಿಲೆ, ಪೀಠವನ್ನು 'ಓಂ ಫಟ್' ಎಂದು ಪ್ರೋಕ್ಷಿಸಿ– ಓಂ ಹ್ಲಾಂ ನಮಃ ಪರಾಯ ಪೃಥಿವ್ಯಾತ್ಮನೇ ಹುಂಫಟ್ ಎಂದು ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮವನ್ನು ಮಾಡಿ ಓಂ ಹ್ಲಾಂ * * ಪೃಥೀವ್ಯಾತ್ಮನೇ ನಮಃ– ಹೀಗೆ ವ್ಯಾಪಿಸಿ, ಪೃಥಿವೀಂ ಅಪ್ಸುಸಂಹರಾಮಿ । ಪುನಃ ಹ್ವೀಂ ನಮಃ ಪರಾಯ ಅಬಾತ್ಮನೇ ಹುಂಫಟ್– ಹೀಗೆ ನಾಲ್ಕು ಪ್ರಾಣಾಯಾಮಗಳನ್ನು ಮಾಡಿ ಹ್ವೀಂ * * ಅಬಾತ್ಮನೇ ನಮಃ– ಹೀಗೆ ವ್ಯಾಪಿಸಿ, ಅಪಃ ತೇಜಸಿ ಸಂಹರಾಮಿ । ಓಂ ಹ್ರೂಂ * * ತೇಜ ಆತ್ಮನೇ ಹುಂಫಟ್– ಹೀಗೆ ಮೂರು ಪ್ರಾಣಾಯಾಮಗಳನ್ನು ಮಾಡಿ– ಹ್ರೂಂ * * ತೇಜ ಆತ್ಮನೇ ನಮಃ ಹೀಗೆ ವ್ಯಾಪಿಸಿ ತೇಜಃ ವಾಯೌ ಸಂಹರಾಮಿ । ಓಂ ಹ್ಯೈಂ ನಮಃ ಪರಾಯ ವಾಯ್ವಾತ್ಮನೇ ಹುಂಫಟ್– ಹೀಗೆ ಇಪ್ಪತ್ತೈದು ಸಂಖ್ಯೆಯ ಎರಡು ಪ್ರಾಣಾಯಾಮಗಳನ್ನು ಮಾಡಿ ಓಂ ಹ್ಯೈಂ * * ವಾಯ್ವಾತ್ಮನೇ ನಮಃ ಎಂದು ವ್ಯಾಪಿಸಿ– ವಾಯುಮಾಕಾಶೇ ಸಂಹರಾಮಿ । ಓಂ ಹೌಂ ನಮಃ ಪರಾಯ ಆಕಾಶಾತ್ಮನೇ ಹುಂಫಟ್– ಹೀಗೆ ಒಂದು ಪ್ರಾಣಾಯಾಮವನ್ನು ಮಾಡಿ, ಓಂ ಹೌಂ * * ಆಕಾಶಾತ್ಮನೇ ನಮಃ– ಹೀಗೆ

ವ್ಯಾಪಿಸಿ ಆಕಾಶಂ ಪರಮಾತ್ಮನಿ ಸಂಹರಾಮಿ– ಈ ರೀತಿಯಾಗಿ ಭೂತ ಸಂಹಾರವನ್ನು ಮಾಡಿ, ಬ್ರಹ್ಮಶಿಲೆಪೀಠಗಳಲ್ಲಿ ಶೋಷಣ ದಾಹನ ಪ್ಲಾವನ ಕಾಠಿನ್ಯ ಸುಷರೀಣೀಕರಣಗಳನ್ನು ಮಾಡಿ ಪುನಃ ಆಕಾಶ ಮೊದಲಾಗಿ ಪೃಥಿವಿ ಪರ್ಯಂತವಾದ ಭೂತಗಳನ್ನು ಸೃಷ್ಟಿಸಿ ಲಿಪಿನ್ಯಾಸವನ್ನು ಮಾಡಬೇಕು. ಪೀಠ ಮಧ್ಯದಲ್ಲಿ ಓಂ ನಮಃ– ಎಂದು ಆವಾಹಿಸಿ, ಓಂ ಹ್ರೀಂ ಓಂ ನಮಃ– ಹೀಗೆ ಪೀಠ ಶಕ್ತಿಯನ್ನು ಆವಾಹಿಸಿ, ನ್ಯಾಸ ಮಾಡಿ ಅದರ ಸುತ್ತಲೂ ಪೂರ್ವಾದಿ ಕ್ರಮದಿಂದ ಅಕಾರಾದಿ ಹದಿನಾರು ಸ್ವರಗಳನ್ನು– ಓಂ ಹ್ರೀಂ ಅಂ ಹ್ರೀಂ ನಮಃ– ಹೀಗೆ ಎಲ್ಲೆಡೆಯೂ ಮಂತ್ರ ಪ್ರಯೋಗವು. ಅದರ ಹೊರಭಾಗದಲ್ಲಿ (ಈಶಾನ್ಯ ಪಕ್ಕದ) ಪರ್ಜನ್ಯ ಮೊದಲಾದ ಕೋಷ್ಠಗಳಲ್ಲಿ– ಕಕಾರ ಮೊದಲಾಗಿ ಸಕಾರ ಪರ್ಯಂತವಾದ ಮೂವತ್ತೆರಡು ಅಕ್ಷರಗಳನ್ನು ನ್ಯಾಸ ಮಾಡಿ ಪುನಃ ಮಧ್ಯದಲ್ಲಿ ಹಂ ಳಂ ಕ್ಷಂ ಎಂದು ಮೂರು ಅಕ್ಷರಗಳನ್ನು ನ್ಯಾಸ ಮಾಡಬೇಕು. ಆಮೇಲೆ (ಹ್ರೀಂ) ಆ ಪೀಠದ ಶಕ್ತಿ ಬೀಜದಿಂದ ಪ್ರಾಣಾಯಾಮವನ್ನು ಮಾಡಿ ಮಂತ್ರದೇವತಾತ್ಮಕವನ್ನು ಸಂಪಾದಿಸಿ ಪೀಠ ಮೂರ್ತಿಯ ಅವಯವ ಗ್ರಹಿಕೆಯಿಂದ ಧರ್ಮ ಜ್ಞಾನಾದಿ ಸಮಷ್ಟಿ ಮಂತ್ರಗಳನ್ನು, ಪೀಠ ಮಂತ್ರಗಳನ್ನು ಆಯಾಯ ಸ್ಥಾನಗಳಲ್ಲಿ ನ್ಯಾಸ ಮಾಡಬೇಕು. ಶಕ್ತಿ ಬೀಜದಿಂದ ಶಕ್ತಿಯನ್ನು ಆವಾಹಿಸಿ ಹ್ರಾಂ ಮೊದಲಾಗಿ ಅಂಗನ್ಯಾಸವನ್ನು ಮಾಡಿ ಸಕಲೀಕರಣದೊಂದಿಗೆ ಪೂಜಿಸಬೇಕು. ಅನಂತರ ನಪುಂಸಕ ಶಿಲೆಯ ಭೂತ ಶುದ್ಧ್ಯಾದಿಗಳು ಈ ಮೊದಲು ಮಾಡದ ಸಂದರ್ಭ ಈಗ ಮಾಡಿ ಕೆಳಗಿನ ಮಧ್ಯದ ಹಾಗೂ ಮೇಲಿನ ಭಾಗಗಳಲ್ಲಿ ಕ್ರಮವಾಗಿ ಓಂ ಅಂ ನಮಃ ಪರಾಯ ಆತ್ಮತತ್ತ್ವಾತ್ಮನೇ ನಮಃ । ಓಂ ಉಂ * * ವಿದ್ಯಾತತ್ತ್ವಾತ್ಮನೇ ನಮಃ । ಓಂ ಮಂ * * ಪರತತ್ತ್ವಾತ್ಮನೇ ನಮಃ– ಹೀಗೆ ನ್ಯಾಸ ಮಾಡಿ ಪುನಃ ಆ ಸ್ಥಾನಗಳಲ್ಲಿ ಆಧಾರಶಕ್ತಿ ಅನಂತ ಪೃಥಿವಿಯನ್ನು ನ್ಯಾಸ ಮಾಡಿ ಪ್ರಣವ ಪ್ರಾಣಾಯಾಮವನ್ನು ಮಾಡಿ ಮೂಲ, ಮಧ್ಯ ತುದಿಗಳಲ್ಲಿ ಓಂ ಅಂ ನಮಃ, ಓಂ ಉಂ ನಮಃ , ಓಂ ಮಂ ನಮಃ– ಹೀಗೆ ಕ್ರಮವಾಗಿ ನ್ಯಾಸ ಮಾಡಿ ಪ್ರಣವದಿಂದ ಆವಾಹಿಸಿ ಪ್ರಣವದಿಂದಲೇ ಅಂಗವನ್ನು ಮಾಡಿ ಪ್ರಣವದಿಂದಲೇ ಪೂಜಿಸಬೇಕು. ಪೀಠ ಮತ್ತು ಬ್ರಹ್ಮಶಿಲೆಗಳಿಗೆ ಅರ್ಘ್ಯವನ್ನು ಕೊಟ್ಟು ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಹೊಸತಾದ ಬಟ್ಟೆಗಳೆರಡರಿಂದ ಹೊದಿಸಿ ಹೇಳಿದ ಕ್ರಮದಂತೆ ಅಧಿವಾಸ ಮಾಡಿ ಎರಡನ್ನೂ ಸಂರಕ್ಷಿಸಬೇಕು. ಇತಿ ಪೀಠ ಬ್ರಹ್ಮ ಶಿಲೆಯ ಅಧಿವಾಸಃ.

* * * *

## ಶಿವನಲ್ಲಿ ಪ್ರತಿಷ್ಠಾಹೋಮ

ಶಿವನಲ್ಲಿ ಅಧಿವಾಸ ಹೋಮಕ್ಕೆ ಮೊದಲು ತುಪ್ಪ ಜೇನು ಹಾಲುಗಳಲ್ಲಿ ಅದ್ದಿದ ಪಲಾಶ ಉದುಂಬರ ಅಶ್ವತ್ಥ ಸಮಿಧಗಳಿಂದ ಎಳ್ಳುಗಳಿಂದ ನಾಲ್ಕು ವ್ಯಾಹೃತಿಗಳಿಂದ ಕ್ರಮವಾಗಿ ಸಾವಿರದ ಎಂಟು ಸಂಖ್ಯೆಯಲ್ಲಿ ಹೋಮಿಸಬೇಕು. ನಿಜ ಪೀಠ ಮಂತ್ರಗಳಿಂದ, ಮೂಲದಿಂದ, ಶರ್ವಾದಿ ಎಂಟರಿಂದ ಎಲ್ಲಾ ನಿಜಾವರಣ ಮಂತ್ರಗಳಿಂದ ತುಪ್ಪದಿಂದ ಹೋಮಿಸಬೇಕು.

* * * *

## ಶಾಂತಿ ಹೋಮಃ

**ಮಹೇಶನಲ್ಲಿ–** ಮೃತ್ಯುಂಜಯ ಮಂತ್ರದಿಂದ ಮೊಸರು, ಜೇನು, ತುಪ್ಪಗಳನ್ನು ನೂರೆಂಟು ಸಂಖ್ಯೆಯಲ್ಲಿ ಹೋಮಿಸಬೇಕು. **ಗಣಪತಿಯಲ್ಲಿ–** 'ಗಣಾನಾಂತ್ವಾ' ಮಂತ್ರದಿಂದ ಜೇನು, ತುಪ್ಪ, ಹಾಲನ್ನು ನೂರೆಂಟರ ಸಂಖ್ಯೆಯಲ್ಲಿ ಹೋಮಿಸಬೇಕು. **ಉಳಿದ ದೇವತೆಗಳಲ್ಲಿ** ಭೂಃ ಮೊದಲಾದ ನಾಲ್ಕರಿಂದ ಕ್ರಮವಾಗಿ ತುಪ್ಪ, ಮೊಸರು, ಹಾಲು, ಜೇನು ಎಂಟಾವರ್ತಿ ಮೂಲಮಂತ್ರದಿಂದ ಎಲ್ಲಾ ದ್ರವ್ಯಗಳನ್ನೂ ಹೋಮಿಸಬೇಕು. **ಗುಹನಲ್ಲಿ–** ಭೂರಾದಿಗಳಿಂದ ಕ್ರಮವಾಗಿ ಹಾಲು, ಮೊಸರು, ಜೇನು, ತುಪ್ಪಗಳನ್ನು ಎಂಟರ ಸಂಖ್ಯೆಯಲ್ಲಿ ಹೋಮಿಸಬೇಕು. ಈ ಶಾಂತಿ ಹೋಮವು ಗುರುಮೂರ್ತಿಪರರಿಂದ ಎಲ್ಲರಿಂದಲೂ ಗುರುವಿನೊಬ್ಬನಿಂದಲಾಗಲೀ ಹೋಮಿಸಲ್ಪಡಬೇಕು. ಐದು ದ್ರವ್ಯಗಳ ಸಂಪಾತವನ್ನು ದೇವರ ಪಾದ ನಾಭಿ ಹೃದಯ ಶಿರಸ್ಸು ಎಲ್ಲಾ ಅವಯವಗಳಲ್ಲಿ ಸ್ರುವದಿಂದ ಸಮರ್ಪಿಸಬೇಕು. ನಾಲ್ಕು ದ್ರವ್ಯಗಳಿಂದುಂಟಾದ ಸಂಪಾತವನ್ನು ಪಾದ ಗುಹ್ಯ ಹೃದಯ ಮುಖಗಳಲ್ಲಿ, ಮೂರು ದ್ರವ್ಯಗಳಿಂದುಂಟಾದ ಸಂಪಾತವನ್ನು ಆಧಾರ ಹೃದಯ ಭ್ರೂ ಮಧ್ಯಗಳಲ್ಲಿ ಪ್ರತ್ಯೇಕವಾಗಿ ಅರ್ಪಿಸಬೇಕು. ಪ್ರತ್ಯೇಕವಾಗಿ ಸ್ರುವವನ್ನು ತೊಳೆಯಬೇಕು.

* * * *

## ಅಧಿವಾಸ ಹೋಮಃ

ಆಚಾರ್ಯನು ಕುಂಡದಲ್ಲಿ ಅಗ್ನಿ ಜನನವನ್ನು ಮಾಡಿ, ವಿಷ್ಣು, ಶಂಕರನಾರಾಯಣ, ದುರ್ಗಿಯರಲ್ಲಿ ಆಚಾರ್ಯಕುಂಡದಿಂದ ಪೂರ್ವಾದಿ ನಾಲ್ಕು ದಿಕ್ಕಿನ ಕುಂಡಗಳಲ್ಲಿ ಅಗ್ನಿಯನ್ನು ವಿಹರಣ ಮಾಡಿ, ಆಚಾರ್ಯನು ಹಾಗೂ ಮೂರ್ತಿಪರು ಐದು ಅಧಿವಾಸ ಹೋಮಗಳನ್ನು ಮಾಡುತ್ತಾರೆ. ಸುಬ್ರಹ್ಮಣ್ಯನಲ್ಲಿ ಹಾಗೆಯೇ ಗುರುಕುಂಡದಿಂದ ಅಗ್ನಿವಿಹರಣವನ್ನು ಮಾಡಿ, ಪೂರ್ವ ಆಗ್ನೇಯ ಯಮ ವರುಣ ಸೋಮ ಈಶಾನ ದಿಕ್ಕುಗಳಲ್ಲಿರುವ ಕುಂಡಗಳಲ್ಲಿರಿಸಿ ಏಳು ಅಧಿವಾಸ ಹೋಮಗಳನ್ನು ಮಾಡುತ್ತಾರೆ.

ಶಿವ, ಗಣಪತಿ, ಶಾಸ್ತಾರರಲ್ಲಿ ಗುರುಕುಂಡದಿಂದ ಅಗ್ನಿವಿಹರಣವನ್ನು ಮಾಡಿ ಎಂಟು ಅಥವಾ ನಾಲ್ಕು ದಿಕ್ಕಿನ ಕುಂಡಗಳಲ್ಲಿ ಅಗ್ನಿಯನ್ನಿರಿಸಿ ಐದು ಅಥವಾ ಒಂಭತ್ತು ಅಧಿವಾಸ ಹೋಮಗಳನ್ನು ಮಾಡುತ್ತಾರೆ. ಅಥವಾ ಎಲ್ಲಾ ಕಡೆಗಳಲ್ಲೂ ಕಡಿಮೆ ಸಂಖ್ಯೆಯ ಕಲಶಕ್ರಮದಲ್ಲಿ ಗುರುವು ತನ್ನ ಕುಂಡದಲ್ಲಿ ಮಾತ್ರ ಒಂದೇ ಅಧಿವಾಸ ಹೋಮವನ್ನು ಮಾಡುತ್ತಾನೆ.

* * * *

## ಕುಂಡಲಕ್ಷಣ

ಪೂರ್ವಾದಿಯಾಗಿ ಎಂಟು ದಿಕ್ಕುಗಳಲ್ಲಿ ಚತುರಸ್ರ, ಅಶ್ವತ್ಥ ಎಲೆಯಾಕಾರ, ಅರ್ಧಚಂದ್ರಾಕಾರ, ತ್ರಿಕೋಣ ವೃತ್ತಾಕಾರ, ಷಡಶ್ರ, ಪದ್ಮಾಕಾರ, ಅಷ್ಟಾಸ್ರ ಹೀಗೆ ಎಂಟು ಕುಂಡಗಳನ್ನು ಮಾಡಬೇಕು. ಐದು ಹೋಮ ಪಕ್ಷದಲ್ಲಿ ಆಯಾಯ ದಿಕ್ಕುಗಳಿಗೆ ಹೊಂದಿಕೆಯಾದ ಕುಂಡಗಳನ್ನು ಮಾಡಬೇಕು. (ಚತುರಸ್ರ, ಅರ್ಧಚಂದ್ರ, ವೃತ್ತಾಕಾರ ತ್ರಿಕೋಣ, ಅಷ್ಟಾಶ್ರ) ಅಲ್ಲಿ ಸುಬ್ರಹ್ಮಣ್ಯ, ಶಂಕರನಾರಾಯಣ, ದುರ್ಗಿಯರಲ್ಲಿ– ಉತ್ತರ ದಿಕ್ಕಿನಲ್ಲಿ ತ್ರಿಕೋಣ ಕುಂಡವನ್ನು ಮಾಡಬೇಕು. ಎಲ್ಲಾ ಕಡೆಯಲ್ಲೂ ಗುರುಕುಂಡವನ್ನು ಚತುರಸ್ರವಾಗಿ ನಾಗಸ್ಥಾನದಲ್ಲಿ ದೇವರ ತಲೆಯ ಭಾಗದಲ್ಲಾದರೂ ಮಾಡಬೇಕು. (ಮುಖ್ಯಪದ)

* * * *

## ಅಗ್ನಿವಿಹರಣ ವಿಧಿ

ಗುರುಕುಂಡದಲ್ಲಿ ಅಗ್ನಿಜನನವನ್ನು ಮಾಡಿ ಪರಿಕುಂಡಗಳಲಿ ಕೂಡ ಸ್ಥಲಶುದ್ಧಿಯನ್ನು ಮಾಡಿ ಶೋಷಣಾದಿಯಾಗಿ ತಮ್ಮ ಗೃಹ್ಯದಲ್ಲಿ ಹೇಳಿದ ಕ್ರಮದಂತೆ ಉಲ್ಲೇಖನ ಮೊದಲಾಗಿ ದರ್ಭೆಯ ಕೂರ್ಚಾಸನವನ್ನಿರಿಸಿ ಪೀಠಪೂಜೆ, ಶಕ್ತ್ಯಾವಾಹನ ಮತ್ತು ಪೂಜೆಯನ್ನು ಮಾಡಿ ಆಯಾಯ ಮಂತ್ರಗಳಿಂದ ಅಗ್ನಿವಿಹರಣವನ್ನು ಮಾಡಬೇಕು.

* * * *

## ವಿಹರಣ ಮಂತ್ರಗಳು

ಎಲ್ಲೆಡೆಯಲ್ಲೂ ಗುರುಕುಂಡದಲ್ಲಿ 'ಅಗ್ನಿಂ ದೂತಂ ವೃಣೀಮಹೇ' ಎಂದು ಉಪಸ್ಥಾನವನ್ನು ಮಾಡಬೇಕು. ಪುನಃ ದುರ್ಗಿಯಲ್ಲಿ ಪೂರ್ವಕುಂಡದಲ್ಲಿ 'ಅಗ್ನಿಮೀಳೇ ಪುರೋಹಿತಂ' ಈ ಮಂತ್ರದಿಂದ ಅಗ್ನಿವಿಹರಣವನ್ನು ಮಾಡಬೇಕು. ವಿಷ್ಣುವಿನಲ್ಲಿ ಪೂರ್ವ ಕುಂಡದಲ್ಲಿ 'ಅಗ್ನಿನಾ ರಯಿಮಶ್ನವತ್' ಎಂದು. ವಿಷ್ಣು ಮೊದಲಾದವರಲ್ಲಿ ಮಂತ್ರ ರಹಿತವಾಗಿ ಇಡುವುದು (ಸ್ಥಾಪಿಸುವುದು) ಅಥವಾ ಪ್ರಣವವು ಮಂತ್ರವೆಂದು ವಿವರಣಕಾರನ ಅಭಿಪ್ರಾಯ. ಪುನಃ ವಿಷ್ಣು ದುರ್ಗಿಯರಲ್ಲಿ ದಕ್ಷಿಣ ಕುಂಡದಲ್ಲಿ 'ತ್ವಮಗ್ನೇದ್ಯುಭಿಸ್ತ್ವಮಾಶು' ಎಂದು, ಪಶ್ಚಿಮ ಕುಂಡದಲ್ಲಿ 'ಅಗ್ನ ಆಯಾಹಿ ವೀತಯೇ' ಎಂದೂ, ಉತ್ತರದ ಕುಂಡದಲ್ಲಿ 'ಅಗ್ನಿಮಗ್ನಿಂ ಹವೀಮಭಿಃ' ಎಂದು ದುರ್ಗಿ ಹಾಗೂ ವಿಷ್ಣುವಿನಲ್ಲಿ ವಿಹರಣ ಪ್ರಕಾರ ಕ್ರಮವು. ಪುನಃ ಶಿವ ಶಂಕರನಾರಾಯಣ ಶಾಸ್ತಾರ ಸುಬ್ರಹ್ಮಣ್ಯ ಗಣಪತಿಯರಲ್ಲಿ ತಮ್ಮ ತಮ್ಮ ಹೋಮ ಮಂತ್ರಗಳಿಂದ ಅಗ್ನಿ ವಿಹರಣವನ್ನು ಮಾಡಬೇಕು. ಶಿವ ಮೊದಲಾದವರಲ್ಲಿ ಪಕ್ಷಾಂತರವೂ ಹೇಳಲ್ಪಟ್ಟಿದೆ. ಎಲ್ಲೆಡೆಯಲ್ಲೂ ಗುರುಕುಂಡದಲ್ಲಿ 'ಸಪ್ತತೇ ಅಗ್ನೇ ಸಮಿಧಃ ಸಪ್ತ ಜಿಹ್ವಾ' ಎಂದು ಉಪಸ್ಥಾನವನ್ನು ಮಾಡಬೇಕು. ಶಿವನಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ 'ಅಗ್ನಿಮೀಳೇ ಪುರೋಹಿತಂ', 'ಅಗ್ನಿ ಪೂರ್ವೇಭಿರ್ಋಷಿಭಿಃ', 'ಅಗ್ನಿರ್ಹೋತಾಕವಿಕ್ರತು', 'ಯದಂಗದಾಶುಷೇತ್ವಂ', 'ಉಪತ್ವಾಗ್ನೇ ದಿವೇ ದಿವೇ', 'ಸನಃ ದಿತೇವಸೂನವೇ', 'ಅಗ್ನಿದೂತಂ ವೃಣೀಮಹೇ', 'ಅಗ್ನಿಮಗ್ನಿಂ ಹವೀಮಭಿಃ' ಈ ಎಂಟು ವಿಹರಣ ಮಂತ್ರಗಳು. **ಶಂಕರನಾರಾಯಣನಲ್ಲಿ** ಎಲ್ಲೆಡೆಯಲ್ಲೂ ಪ್ರಣವದಿಂದ ಅಗ್ನಿಯನ್ನು ವಿಹರಣ ಮಾಡಬೇಕು. **ಶಾಸ್ತಾರನಲ್ಲಿ** 'ಅಗ್ನಿಮೀಳೇ ಪುರೋಹಿತಂ' ಎಂದು ಅಗ್ನಿವಿಹರಣ ಮಾಡಿ ಎಲ್ಲಾ ಕುಂಡಗಳಲ್ಲೂ– ಭೂರ್ಭುವಃಸುವಃ ಎಂದು ಇರಿಸಬೇಕು. **ಸುಬ್ರಮ್ಹಣ್ಯನಲ್ಲಿ** ಹಿಂದೆ ಹೇಳಿದಂತೆ ಉಪಸ್ಥಾನ ಮಾಡಿ ಪೂರ್ವ ಕುಂಡದಲ್ಲಿ ಸನತ್ಕುಮಾರಾಯ ನಮಃ– ಎರಡು ಮೂಲಗಳು ಸ್ಕಂದ ಮೊದಲಾದ ಹನ್ನೆರಡು ನಾಮಗಳು– ಸನತ್ಕುಮಾರಾಯ ನಮಃ ಎಂದು . ಆಗ್ನೇಯ ಕುಂಡದಲ್ಲಿ ಭವಪುತ್ರಾಯ ನಮಃ– ಎಂದು. ದಕ್ಷಿಣ ಕುಂಡದಲ್ಲಿ– ಸ್ಕಂದಾಯ ನಮಃ– ಎರಡು ಮೂಲಗಳು, ಸ್ಕಂದಾದಿ ದ್ವಾದಶನಾಮಗಳು. ಸ್ಕಂದಾಯ ನಮಃ ಎಂದು. ಪಶ್ಚಿಮಕುಂಡದಲ್ಲಿ ಬಾಣಾಯ ನಮಃ– ಮೂಲದ್ವಯ– ದ್ವಾದಶನಾಮಗಳು– ಬಾಣಾಯ ನಮಃ । ಉತ್ತರಕುಂಡದಲ್ಲಿ– ಹೇಮಚೂಡಾಯ ನಮಃ । ಮೂಲದ್ವಯ– ದ್ವಾದಶನಾಮಗಳು– ಹೇಮಚೂಡಾಯ ನಮಃ ಎಂದು. ಈಶ ಕುಂಡದಲ್ಲಿ ಭದ್ರಸೇನಾಯ ನಮಃ– ಎರಡು ಮೂಲಗಳು. ಹನ್ನೆರಡು ನಾಮಗಳು ಮೂಲಗಳು. ಭದ್ರಸೇನಾಯ ನಮಃ– ಹೀಗೆ ವಿಹರಣ ಮಂತ್ರಗಳು. **ಗಣಪತಿಯಲ್ಲಿ**– ಹಿಂದೆ ಹೇಳಿದಂತೆ ಗುರುಕುಂಡದಲ್ಲಿ ಅಗ್ನಿಯನ್ನು ಉಪಸ್ಥಾನ ಮಾಡಿ ಪೂರ್ವಾದಿಯಾಗಿ ಎಂಟು ದಿಕ್ಕುಗಳಲ್ಲಿ ಷಣ್ಮಂತ್ರದ ಕೊನೆಯಲ್ಲಿ ಗಂ ಗಣಂಜಯಾಯ ನಮಃ । ಪುನಃ ಷಣ್ಮಂತ್ರದ ಕೊನೆಯಲ್ಲಿ ಗಿಂ ವಿಘ್ನೇಶಾಯ ನಮಃ– ಹೀಗೆ ಎಂಟು ಮಂತ್ರಗಳಿಂದ ವಿಹರಣ ಮಾಡಬೇಕು. ಪುನಃ– ಎಲ್ಲಾ ಕಡೆಯಲ್ಲೂ ಅನ್ವಾಧಾನ ಮೊದಲಾಗಿ ಮಾಡಿ ಇಧ್ಮಾಧಾನಕ್ಕೆ ಮೊದಲು ಪೀಠವನ್ನು ಪೂಜಿಸಿ, ದೇವತಾವಾಹನೆಯನ್ನು ಮಾಡಿ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯ

ಸ್ಥಾನದಲ್ಲಿ ಇಧ್ಮಾಧಾನ ಮೊದಲಾಗಿ ಚಕ್ಷುಷ್ಯಂತವಾಗಿ ಹೋಮಿಸಿ ಪ್ರಣವವ್ಯಾಹೃತಿ ಪೀಠಮಂತ್ರಗಳಿಂದ ಆಜ್ಯವನ್ನು ಹೋಮಿಸಿ, ಶಿವನಲ್ಲಿ ತತ್ಪುರುಷ ಮಂತ್ರದಿಂದ ದುರ್ಗಿಯಲ್ಲಿ ಜಾತವೇದಸ ಮಂತ್ರದಿಂದ, ಉಳಿದ ದೇವತೆಗಳಲ್ಲಿ– ನಿಜಗಾಯತ್ರಿಯಿಂದ, ಶಾಸ್ತಾರನಲ್ಲಿ ವ್ಯಾಹೃತಿಯಿಂದ ಕೂಡಿದ ಗಾಯತ್ರಿಯಿಂದ ಪಕ್ವಹೋಮವನ್ನು ಮಾಡಿ ಪೂಜಾ ಮಂತ್ರಗಳಿಂದ ತುಪ್ಪವನ್ನು ಹೋಮಿಸಿ, ತಮ್ಮ ತಮ್ಮ ಮಂತ್ರಗಳಿಂದ ಪೂರ್ಣಾಹುತಿಯನ್ನು ಮಾಡಿ ನಿಜ ಮೂಲ ಮಂತ್ರಗಳಿಂದ ಎಂಟಾವರ್ತಿ ಆಜ್ಯವನ್ನು ಹೋಮಿಸಿ ಪೂರ್ಣಾಹುತಿಯನ್ನು ಮಾಡಬೇಕು.

ಪುನಃ ಶಿವನಲ್ಲಿ ಗುರುಕುಂಡದಲ್ಲಿ– ಈಶಾನ ಮಂತ್ರದಿಂದ ಸಮಿಧ ಮೊದಲಾಗಿ ಹತ್ತು ದ್ರವ್ಯಗಳನ್ನು ಹೋಮಿಸಬೇಕು. ಪೂರ್ವ ಮೊದಲಾದ ಎಂಟು ದಿಕ್ಕುಗಳಲ್ಲಿ– ತತ್ಪುರುಷ ಹೃದಯ ಅಘೋರ ಶಿಖಾ ಸದ್ಯೋಜಾತಕವಚ ವಾಮದೇವ ಶಿರೋ ಮಂತ್ರಗಳಿಂದ ಸಮಿತ್ತು, ಆಜ್ಯ, ಚರು, ಲಾಜ, ಸರ್ಷಪ, ತಿಲ, ಯವ, ವ್ರೀಹಿ, ಸಕ್ತು, ಘೃತಗಳೆಂದು ಹತ್ತು ದ್ರವ್ಯಗಳನ್ನು ಎಲ್ಲಾ ಕುಂಡಗಳಲ್ಲಿಯೂ ಸಂಪಾತದಿಂದ ಕೂಡಿ ಹೋಮಿಸಬೇಕು. ನಡು ನಡುವೆ ಕೊನೆಯಲ್ಲಿಯೂ ವ್ಯೋಮವ್ಯಾಪಿ ದಶಾಕ್ಷರ ಮಂತ್ರದಿಂದ ಸಂಪಾತದಿಂದ ಸಹಿತವಾಗಿ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಸ್ವಿಷ್ಟಕೃದಾದಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಿ, ಪೂಜಿಸಿ, ಪೂಜೆಯನ್ನು ಪೂರ್ತಿಗೊಳಿಸಿ ರಕ್ಷಿಸಬೇಕು. ವಿಷ್ಣುವಿನಲ್ಲಿ ಗುರು ಕುಂಡದಲ್ಲಿ– ಮೂಲದಿಂದ ಪೂರ್ವಾದಿ ದಿಕ್ಕುಗಳಲ್ಲಿ ಅಂ ಓಂ ನಮೋ ಭಗವತೇ ವಾಸುದೇವಾಯ ಅಂ । ಆಂ ಓಂ ನಮೋ ಭಗವತೇ ಸಂಕರ್ಷಣಾಯ ಆಂ । ಅಂ ಓಂ ನಮೋ ಭಗವತೇ ಪ್ರದ್ಯುಮ್ನಾಯ ಅಂ । ಅಃ ಓಂ ನಮೋ ಭಗವತೇ ಅನಿರುದ್ಧಾಯ ಅಃ । ಈ ಮಂತ್ರಗಳಿಂದ ಸಮಿತ್ತು, ಆಜ್ಯ, ಚರು, ಲಾಜ, ಸರ್ಷಪ, ಯವ, ವ್ರೀಹಿ, ತಿಲ, ಘೃತ ಹೀಗೆ ಒಂಭತ್ತು ದ್ರವ್ಯಗಳನ್ನು ಎಲ್ಲಾ ಕುಂಡಗಳಲ್ಲಿಯೂ ದ್ವಾದಶಾಕ್ಷರ ಮಂತ್ರದಿಂದ ನಡು ನಡುವೆ ಕೊನೆಯಲ್ಲಿಯೂ ಸಂಪಾತ ಸಹಿತವಾಗಿ ಪೂರ್ಣಾಹುತಿಯನ್ನು ಮಾಡಬೇಕು. ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಶಂಕರನಾರಾಯಣನಲ್ಲಿ**– ಗುರುಕುಂಡದಲ್ಲಿ ನಾಲ್ಕು ದಿಕ್ಕುಗಳಲ್ಲಿರುವ ಕುಂಡಗಳಲ್ಲಿಯೂ– ಪಲಾಶ ಸಮಿತ್ತು, ಆಜ್ಯ, ಹವಿಸ್ಸು, ಆಜ್ಯ, ತಿಲ, ಸರ್ಷಪ, ಯವ, ಲಾಜ, ಘೃತ ಹೀಗೆ ಒಂಭತ್ತು ದ್ರವ್ಯಗಳಿಂದ– ಅಗ್ನಿಮೀಳೇ * * ಇಷೇತ್ವೋರ್ಜೇತ್ವಾ * * ಅಗ್ನಾಯಾಹಿ * * ಶಂನೋದೇವೀಃ * * ನಾಲ್ಕು ವೇದಾದಿ ಮಂತ್ರಗಳಿಂದ ಭೂರಾದಿ ನಾಲ್ಕರಿಂದ ಮೂಲದಿಂದ ಹೀಗೆ ಒಂಭತ್ತು ಮಂತ್ರಗಳಿಂದ ಸಂಪಾತ ಸಹಿತವಾಗಿ ಹೋಮಿಸಬೇಕು. ಮಧ್ಯ ಮಧ್ಯೆ ಮೂಲಮಂತ್ರದಿಂದ ಪೂರ್ಣಹುತಿಯನ್ನು ಮಾಡಬೇಕು. ಪುನಃ ಸ್ವಿಷ್ಟಕೃದಾದಿ ಹೋಮಶೇಷವನ್ನು ಪೂರ್ತಿಗೊಳಿಸಬೇಕು.

**ದುರ್ಗಿಯಲ್ಲಿ**– ವಿಹರಣಾ ನಂತರದಲ್ಲಿ ಎಲ್ಲರಿಂದ ಕೂಡಿ ಅನ್ವಾಧಾನ ಮೊದಲಾದುವನ್ನು ಮಾಡಿ ಇಧ್ಮಹೋಮಕ್ಕೆ ಮೊದಲು ಪೀಠಪೂಜೆಯನ್ನು ಮಾಡಿ ದೇವಿಯನ್ನಾವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯ ಸ್ಥಾನದಲ್ಲಿ ಇಧ್ಮವನ್ನು ಹೋಮಿಸಿ ಆಘಾರ, ಚಕ್ಷುಹೋರ್ಮಗಳನ್ನು ಮಾಡಿ ಪ್ರಣವವ್ಯಾಹೃತಿ ಪೀಠ ಮಂತ್ರಗಳಿಂದ ಒಂದೊಂದಾವರ್ತಿ ತುಪ್ಪವನ್ನು ಹೋಮಿಸಿ ತ್ರಿಷ್ಟುಪ್ (ಜಾತವೇದಸೇ) ಮಂತ್ರದಿಂದ ಪಕ್ವಹೋಮವನ್ನು ಮಾಡಿ ಪೂಜಾಮಂತ್ರಗಳಿಂದ ಒಂದೊಂದರಂತೆ ಆಜ್ಯವನ್ನು ಹೋಮಿಸಿ, ಮೂಲಮಂತ್ರದಿಂದ ಪೂರ್ಣಾಹುತಿಯನ್ನು ಮಾಡಿ ಮೂಲಮಂತ್ರದಿಂದ ಎಂಟು ಬಾರಿ ಆಜ್ಯವನ್ನು ಹೋಮಿಸಿ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಎಲ್ಲಾ ಕುಂಡಗಳಲ್ಲಿ ಪಂಚದುರ್ಗಾಮಂತ್ರದಿಂದ ಒಂದೊಂದಾವರ್ತಿ ಆಜ್ಯವನ್ನು ಹೋಮಿಸಿ– ಗುರುಕುಂಡದಲ್ಲಿ ತ್ರಿಷ್ಟುಪ್ ಮಂತ್ರದಿಂದ ಪಲಾಶ ಸಮಿಧವನ್ನು ಹೋಮಿಸಬೇಕು. ಪೂರ್ವ ಮೊದಲಾದ ಕುಂಡಗಳಲ್ಲಿ– ಅಗ್ನಿಮೀಳೇ * * ಇಷೇತ್ವೋರ್ಜೇತ್ವಾ * * ಅಗ್ನ ಆಯಾಹಿ * * ಶನ್ನೋದೇವೀಃ * * ಹೀಗೆ ವೇದಾದಿ ಮಂತ್ರಗಳಿಂದ ಪಲಾಶ ಪಿಪ್ಪಲ ಖದಿರ ಬಿಲ್ವ ಸಮಿತ್ತುಗಳನ್ನು ಹೋಮಿಸುತ್ತಾರೆ. ಪುನಃ ಎಲ್ಲರೂ ಗುರುಕುಂಡ, ಪರಿಕುಂಡಗಳಲ್ಲಿಯೂ ತ್ರಿಷ್ಟುಪ್ ಮಂತ್ರದಿಂದ ಆಜ್ಯ, ಹವಿಸ್ಸು ಯವ ವ್ರೀಹಿ ತಿಲ ಸರ್ಷಪ ದೂರ್ವಾ– ಹೀಗೆ ಏಳು ದ್ರವ್ಯಗಳನ್ನು ಹೋಮಿಸುತ್ತಾರೆ. ಹೀಗೆ ಎಂಟು ದ್ರವ್ಯಗಳನ್ನು ನಡು ನಡುವಿನಲ್ಲಿ ಪೂರ್ಣಾಹುತಿ ಸಹಿತವಾಗಿ ಸಂಪಾತ ಸಹಿತವಾಗಿ ಹೋಮಿಸಿ ಪುನಃ ಸ್ವಿಷ್ಟಕೃದಾದಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಸುಬ್ರಹ್ಮಣ್ಯನಲ್ಲಿ**– ವಿಹಿರಣದ ನಂತರದಲ್ಲಿ ಅನ್ವಾಧಾನ ಮೊದಲಾಗಿ ಎಲ್ಲವನ್ನೂ ಮಾಡಿ ಪೂರ್ವ, ಆಗ್ನೇಯ ದಕ್ಷಿಣ ಪಶ್ಚಿಮ ಉತ್ತರ ಈಶಾನ್ಯ ಕುಂಡಗಳಲ್ಲಿ ಸನತ್ಕುಮಾರ ಭವಪುತ್ರ ಸ್ಕಂದ ಬಾಣ ಹೇಮಚೂಡ ಭದ್ರಸೇನ ಮಂತ್ರಗಳಿಂದ ಅನುಕ್ರಮವಾಗಿ ಆರಾರು ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಿ ಮೂಲ ಮಂತ್ರಗಳೆರಡರಿಂದ (ಒಂದು ಉಪಚಾರ ಮಂತ್ರ) ಸ್ಕಂದನಿಗೆ ಹೇಳಿದ ಹನ್ನೆರಡು ನಾಮಗಳಿಂದಲೂ ಒಂದೊಂದು ಆಜ್ಯವನ್ನು ಹೋಮಿಸಿ ಮೂಲಮಂತ್ರದಿಂದ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಗುರುಕುಂಡದಲ್ಲಿ ಮೂಲದ್ವಯ (ಮೂಲದಿಂದ ಆರು ಬಾರಿ ಉಪಚಾರ, ದ್ವಾದಶ ನಾಮಗಳಿಂದ ಒಂದೊಂದು ಆಹುತಿ) ದ್ವಾದಶನಾಮಗಳಿಂದ ಹೋಮಿಸಲೂ ಹೋಮಿಸಬಹುದು.(ವಾ) ಪುನಃ ಗುರುಕುಂಡದಲ್ಲಿ ಮೂಲಮಂತ್ರದಿಂದ ಬೇರೆ ಕುಂಡಗಳಲ್ಲಿ ಸನತ್ಕುಮಾರ ಮೊದಲಾಗಿ ನಿಜನಿಜಮಂತ್ರಗಳಿಂದ ಆಯಾಯ ಸಮಿತ್ತು ಆಜ್ಯ ಹವಿಸ್ಸು ಲಾಜ ತಿಲ ಯವ ಸರ್ಷಪ ಹೀಗೆ ಏಳು ದ್ರವ್ಯಗಳನ್ನು ಸಂಪಾತ ಸಹಿತವಾಗಿ ಹೋಮಿಸಬೇಕು. ನಡು ನಡುವಿನಲ್ಲಿ

ಸ್ಥಾನದಲ್ಲಿ ಇಧ್ಮಾಧಾನ ಮೊದಲಾಗಿ ಚಕ್ಷುಷ್ಯಂತವಾಗಿ ಹೋಮಿಸಿ ಪ್ರಣವವ್ಯಾಹೃತಿ ಪೀಠಮಂತ್ರಗಳಿಂದ ಆಜ್ಯವನ್ನು ಹೋಮಿಸಿ, ಶಿವನಲ್ಲಿ ತತ್ಪುರುಷ ಮಂತ್ರದಿಂದ ದುರ್ಗಿಯಲ್ಲಿ ಜಾತವೇದಸ ಮಂತ್ರದಿಂದ, ಉಳಿದ ದೇವತೆಗಳಲ್ಲಿ– ನಿಜಗಾಯತ್ರಿಯಿಂದ, ಶಾಸ್ತಾರನಲ್ಲಿ ವ್ಯಾಹೃತಿಯಿಂದ ಕೂಡಿದ ಗಾಯತ್ರಿಯಿಂದ ಪಕ್ವಹೋಮವನ್ನು ಮಾಡಿ ಪೂಜಾ ಮಂತ್ರಗಳಿಂದ ತುಪ್ಪವನ್ನು ಹೋಮಿಸಿ, ತಮ್ಮ ತಮ್ಮ ಮಂತ್ರಗಳಿಂದ ಪೂರ್ಣಾಹುತಿಯನ್ನು ಮಾಡಿ ನಿಜ ಮೂಲ ಮಂತ್ರಗಳಿಂದ ಎಂಟಾವರ್ತಿ ಆಜ್ಯವನ್ನು ಹೋಮಿಸಿ ಪೂರ್ಣಾಹುತಿಯನ್ನು ಮಾಡಬೇಕು.

ಪುನಃ ಶಿವನಲ್ಲಿ ಗುರುಕುಂಡದಲ್ಲಿ– ಈಶಾನ ಮಂತ್ರದಿಂದ ಸಮಿಧ ಮೊದಲಾಗಿ ಹತ್ತು ದ್ರವ್ಯಗಳನ್ನು ಹೋಮಿಸಬೇಕು. ಪೂರ್ವ ಮೊದಲಾದ ಎಂಟು ದಿಕ್ಕುಗಳಲ್ಲಿ– ತತ್ಪುರುಷ ಹೃದಯ ಅಘೋರ ಶಿಖಾ ಸದ್ಯೋಜಾತಕವಚ ವಾಮದೇವ ಶಿರೋ ಮಂತ್ರಗಳಿಂದ ಸಮಿತ್ತು, ಆಜ್ಯ, ಚರು, ಲಾಜ, ಸರ್ಷಪ, ತಿಲ, ಯವ, ವ್ರೀಹಿ, ಸಕ್ತು, ಘೃತಗಳೆಂದು ಹತ್ತು ದ್ರವ್ಯಗಳನ್ನು ಎಲ್ಲಾ ಕುಂಡಗಳಲ್ಲಿಯೂ ಸಂಪಾತದಿಂದ ಕೂಡಿ ಹೋಮಿಸಬೇಕು. ನಡು ನಡುವೆ ಕೊನೆಯಲ್ಲಿಯೂ ವ್ಯೋಮವ್ಯಾಪಿ ದಶಾಕ್ಷರ ಮಂತ್ರದಿಂದ ಸಂಪಾತದಿಂದ ಸಹಿತವಾಗಿ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಸ್ವಿಷ್ಟಕೃದಾದಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಿ, ಪೂಜಿಸಿ, ಪೂಜೆಯನ್ನು ಪೂರ್ತಿಗೊಳಿಸಿ ರಕ್ಷಿಸಬೇಕು. **ವಿಷ್ಣುವಿನಲ್ಲಿ** ಗುರು ಕುಂಡದಲ್ಲಿ– ಮೂಲದಿಂದ ಪೂರ್ವಾದಿ ದಿಕ್ಕುಗಳಲ್ಲಿ ಅಂ ಓಂ ನಮೋ ಭಗವತೇ ವಾಸುದೇವಾಯ ಅಂ । ಆಂ ಓಂ ನಮೋ ಭಗವತೇ ಸಂಕರ್ಷಣಾಯ ಆಂ । ಅಂ ಓಂ ನಮೋ ಭಗವತೇ ಪ್ರದ್ಯುಮ್ನಾಯ ಅಂ । ಅಃ ಓಂ ನಮೋ ಭಗವತೇ ಅನಿರುದ್ಧಾಯ ಅಃ । ಈ ಮಂತ್ರಗಳಿಂದ ಸಮಿತ್ತು, ಆಜ್ಯ, ಚರು, ಲಾಜ, ಸರ್ಷಪ, ಯವ, ವ್ರೀಹಿ, ತಿಲ, ಘೃತ ಹೀಗೆ ಒಂಭತ್ತು ದ್ರವ್ಯಗಳನ್ನು ಎಲ್ಲಾ ಕುಂಡಗಳಲ್ಲಿಯೂ ದ್ವಾದಶಾಕ್ಷರ ಮಂತ್ರದಿಂದ ನಡು ನಡುವೆ ಕೊನೆಯಲ್ಲಿಯೂ ಸಂಪಾತ ಸಹಿತವಾಗಿ ಪೂರ್ಣಾಹುತಿಯನ್ನು ಮಾಡಬೇಕು. ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಶಂಕರನಾರಾಯಣನಲ್ಲಿ**– ಗುರುಕುಂಡದಲ್ಲಿ ನಾಲ್ಕು ದಿಕ್ಕುಗಳಲ್ಲಿರುವ ಕುಂಡಗಳಲ್ಲಿಯೂ– ಪಲಾಶ ಸಮಿತ್ತು, ಆಜ್ಯ ಹವಿಸ್ಸು, ಆಜ್ಯ, ತಿಲ, ಸರ್ಷಪ, ಯವ, ಲಾಜ, ಘೃತ ಹೀಗೆ ಒಂಭತ್ತು ದ್ರವ್ಯಗಳಿಂದ– ಅಗ್ನಿಮೀಳೇ * * ಇಷೇತ್ವೋರ್ಜೇತ್ವಾ * * ಅಗ್ನಾಯಾಹಿ * * ಶಂನೋದೇವೀಃ * * ನಾಲ್ಕು ವೇದಾದಿ ಮಂತ್ರಗಳಿಂದ ಭೂರಾದಿ ನಾಲ್ಕರಿಂದ ಮೂಲದಿಂದ ಹೀಗೆ ಒಂಭತ್ತು ಮಂತ್ರಗಳಿಂದ ಸಂಪಾತ ಸಹಿತವಾಗಿ ಹೋಮಿಸಬೇಕು. ಮಧ್ಯ ಮಧ್ಯೆ ಮೂಲಮಂತ್ರದಿಂದ ಪೂರ್ಣಹುತಿಯನ್ನು ಮಾಡಬೇಕು. ಪುನಃ ಸ್ವಿಷ್ಟಕೃದಾದಿ ಹೋಮಶೇಷವನ್ನು ಪೂರ್ತಿಗೊಳಿಸಬೇಕು.

**ದುರ್ಗಿಯಲ್ಲಿ**– ವಿಹರಣಾ ನಂತರದಲ್ಲಿ ಎಲ್ಲರಿಂದ ಕೂಡಿ ಅನ್ವಾಧಾನ ಮೊದಲಾದುವನ್ನು ಮಾಡಿ ಇಧ್ಮಹೋಮಕ್ಕೆ ಮೊದಲು ಪೀಠಪೂಜೆಯನ್ನು ಮಾಡಿ ದೇವಿಯನ್ನಾವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯ ಸ್ಥಾನದಲ್ಲಿ ಇಧ್ಮವನ್ನು ಹೋಮಿಸಿ ಆಘಾರ, ಚಕ್ಷುರ್ಹೋಮಗಳನ್ನು ಮಾಡಿ ಪ್ರಣವವ್ಯಾಹೃತಿ ಪೀಠ ಮಂತ್ರಗಳಿಂದ ಒಂದೊಂದಾವರ್ತಿ ತುಪ್ಪವನ್ನು ಹೋಮಿಸಿ ತ್ರಿಷ್ಟುಪ್ (ಜಾತವೇದಸೇ) ಮಂತ್ರದಿಂದ ಪಕ್ವಹೋಮವನ್ನು ಮಾಡಿ ಪೂಜಾಮಂತ್ರಗಳಿಂದ ಒಂದೊಂದರಂತೆ ಆಜ್ಯವನ್ನು ಹೋಮಿಸಿ, ಮೂಲಮಂತ್ರದಿಂದ ಪೂರ್ಣಾಹುತಿಯನ್ನು ಮಾಡಿ ಮೂಲಮಂತ್ರದಿಂದ ಎಂಟು ಬಾರಿ ಆಜ್ಯವನ್ನು ಹೋಮಿಸಿ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಎಲ್ಲಾ ಕುಂಡಗಳಲ್ಲಿ ಪಂಚದುರ್ಗಾಮಂತ್ರದಿಂದ ಒಂದೊಂದಾವರ್ತಿ ಆಜ್ಯವನ್ನು ಹೋಮಿಸಿ– ಗುರುಕುಂಡದಲ್ಲಿ ತ್ರಿಷ್ಟುಪ್ ಮಂತ್ರದಿಂದ ಪಲಾಶ ಸಮಿಧವನ್ನು ಹೋಮಿಸಬೇಕು. ಪೂರ್ವ ಮೊದಲಾದ ಕುಂಡಗಳಲ್ಲಿ– ಅಗ್ನಿಮೀಳೇ * * ಇಷೇತ್ವೋರ್ಜೇತ್ವಾ * * ಅಗ್ನ ಆಯಾಹಿ * * ಶನ್ನೋದೇವೀಃ * * ಹೀಗೆ ವೇದಾದಿ ಮಂತ್ರಗಳಿಂದ ಪಲಾಶ ಪಿಪ್ಪಲ ಖದಿರ ಬಿಲ್ವ ಸಮಿತ್ತುಗಳನ್ನು ಹೋಮಿಸುತ್ತಾರೆ. ಪುನಃ ಎಲ್ಲರೂ ಗುರುಕುಂಡ, ಪರಿಕುಂಡಗಳಲ್ಲಿಯೂ ತ್ರಿಷ್ಟುಪ್ ಮಂತ್ರದಿಂದ ಆಜ್ಯ, ಹವಿಸ್ಸು ಯವ ವ್ರೀಹಿ ತಿಲ ಸರ್ಷಪ ದೂರ್ವಾ– ಹೀಗೆ ಏಳು ದ್ರವ್ಯಗಳನ್ನು ಹೋಮಿಸುತ್ತಾರೆ. ಹೀಗೆ ಎಂಟು ದ್ರವ್ಯಗಳನ್ನು ನಡು ನಡುವಿನಲ್ಲಿ ಪೂರ್ಣಾಹುತಿ ಸಹಿತವಾಗಿ ಸಂಪಾತ ಸಹಿತವಾಗಿ ಹೋಮಿಸಿ ಪುನಃ ಸ್ವಿಷ್ಟಕೃದಾದಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಸುಬ್ರಹ್ಮಣ್ಯನಲ್ಲಿ**– ವಿಹರಣದ ನಂತರದಲ್ಲಿ ಅನ್ವಾಧಾನ ಮೊದಲಾಗಿ ಎಲ್ಲವನ್ನೂ ಮಾಡಿ ಪೂರ್ವ, ಆಗ್ನೇಯ ದಕ್ಷಿಣ ಪಶ್ಚಿಮ ಉತ್ತರ ಈಶಾನ್ಯ ಕುಂಡಗಳಲ್ಲಿ ಸನತ್ಕುಮಾರ ಭವಪುತ್ರ ಸ್ಕಂದ ಬಾಣ ಹೇಮಚೂಡ ಭದ್ರಸೇನ ಮಂತ್ರಗಳಿಂದ ಅನುಕ್ರಮವಾಗಿ ಆರಾರು ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಿ ಮೂಲ ಮಂತ್ರಗಳೆರಡರಿಂದ (ಒಂದು ಉಪಚಾರ ಮಂತ್ರ) ಸ್ಕಂದನಿಗೆ ಹೇಳಿದ ಹನ್ನೆರಡು ನಾಮಗಳಿಂದಲೂ ಒಂದೊಂದು ಆಜ್ಯವನ್ನು ಹೋಮಿಸಿ ಮೂಲಮಂತ್ರದಿಂದ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ಗುರುಕುಂಡದಲ್ಲಿ ಮೂಲದ್ವಯ (ಮೂಲದಿಂದ ಆರು ಬಾರಿ ಉಪಚಾರ, ದ್ವಾದಶ ನಾಮಗಳಿಂದ ಒಂದೊಂದು ಆಹುತಿ) ದ್ವಾದಶನಾಮಗಳಿಂದ ಹೋಮಿಸಲೂ ಹೋಮಿಸಬಹುದು.(ವಾ) ಪುನಃ ಗುರುಕುಂಡದಲ್ಲಿ ಮೂಲಮಂತ್ರದಿಂದ ಬೇರೆ ಕುಂಡಗಳಲ್ಲಿ ಸನತ್ಕುಮಾರ ಮೊದಲಾಗಿ ನಿಜನಿಜಮಂತ್ರಗಳಿಂದ ಆಯಾಯ ಸಮಿತ್ತು ಆಜ್ಯ ಹವಿಸ್ಸು ಲಾಜ ತಿಲ ಯವ ಸರ್ಷಪ ಹೀಗೆ ಏಳು ದ್ರವ್ಯಗಳನ್ನು ಸಂಪಾತ ಸಹಿತವಾಗಿ ಹೋಮಿಸಬೇಕು. ನಡು ನಡುವಿನಲ್ಲಿ

ಪೂರ್ಣಾಹುತಿಯನ್ನು ಹೋಮಿಸುವರು. ಅಲ್ಲಿ ಪಲಾಶ ಖದಿರ ಅಶ್ವತ್ಥ ಪ್ಲಕ್ಷ ವಟ ಉದುಂಬರಗಳು ಸಮಿತ್ತುಗಳು ಪರಿಕುಂಡಗಳಲ್ಲಿ ಪೂರ್ವಾದಿಕ್ರಮದಿಂದಾಗಿದೆ. ಗುರುಕುಂಡದಲ್ಲಿ ಬಿಲ್ವ ಅಥವಾ ಕದಂಬ ಸಮಿತ್ತನ್ನು ಹೋಮಿಸಬೇಕು.

**ಗಣಪತಿಯಲ್ಲಿ** – ವಿಹರಣಾ ನಂತರದಲ್ಲಿ ಅನ್ವಾಧಾನಾದಿಗಳನ್ನು ಮಾಡಿ ಪೂಜಾ ಮಂತ್ರದ ಹೋಮದ ಕೊನೆಯಲ್ಲಿ ಮೂಲಮಂತ್ರದಿಂದ ಎಂಟು ಆಜ್ಯಾಹುತಿಯನ್ನು ಪೂರ್ಣಾಹುತಿಯನ್ನೂ ಮಾಡಿ ಎಲ್ಲಾ ಕುಂಡಗಳಲ್ಲಿಯೂ ವಿಘ್ನಾದಿ ಆರುಮಂತ್ರಗಳಿಂದ ಒಂದೊಂದು ಆಜ್ಯಾಹುತಿಯನ್ನು ಮಾಡಿ ಪೂರ್ವಾದಿ ಎಂಟು ಕುಂಡಗಳಲ್ಲಿ ಗಂ ಗಣಂಜಯಾಯ ಸ್ವಾಹಾ- ಮೊದಲಾಗಿ ಪೂಜೆಯಲ್ಲಿ ಹೇಳಿದ ಪರಿವಾರದ ಎಂಟು ಮಂತ್ರಗಳಿಂದ, ಆಚಾರ್ಯ ಕುಂಡದಲ್ಲಿ ಮೂಲದಿಂದಲೂ ಸಮಿತ್ತು, ಆಜ್ಯ, ಹವಿಸ್ಸು, ಲಾಜ (ಅರಳು), ಪೃಥುಕ (ಅವಲಕ್ಕಿ), ಲಡ್ಡುಕ, ಅಪೂಪ, ಶಷ್ಕುಲೀ ಆಜ್ಯಗಳೆಂದು ಒಂಭತ್ತು ದ್ರವ್ಯಗಳನ್ನು ಹೋಮಿಸುತ್ತಾರೆ. ಪೂರ್ವ ಮೊದಲಾದ ದಿಕ್ಕುಗಳಲ್ಲಿ ಪಲಾಶ ಖದಿರ ಅಶ್ವತ್ಥ ಶಮೀ ಸಮಿತ್ತುಗಳು. ಗುರುಕುಂಡ ವಿದಿಕ್ಕಿನ (ಕೋಣ) ಕುಂಡಗಳಲ್ಲಿ ಬಿಲ್ವ ಸಮಿಧವಾಗಿರುತ್ತದೆ. ಹೀಗೆ ಒಂಭತ್ತು ದ್ರವ್ಯಗಳು. ಪೂರ್ಣಾಹುತಿಯ ನಂತರ ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಶಾಸ್ತಾರನಲ್ಲಿ** – ವಿಹರಣಾ ನಂತರದಲ್ಲಿ ಅನ್ವಾಧಾನ ಮೊದಲಾಗಿ ಎಲ್ಲವನ್ನೂ ಮಾಡಿ ಪೂಜಾಮಂತ್ರದ ಹೋಮದ ಕೊನೆಯಲ್ಲಿ ಮೂಲ ಮಂತ್ರದಿಂದ ಎಂಟಾವರ್ತಿ ಆಜ್ಯವನ್ನು ಹೋಮಿಸಿ ವೌಷಡಂತವಾದ ವ್ಯಾಹೃತಿಯಿಂದ ಪೂರ್ಣಾಹುತಿಯನ್ನು ಮಾಡಬೇಕು. ಪುನಃ ರೇವಂತನಿಂದ ಹೇಳಲ್ಪಟ್ಟ ಷಣ್ಮಂತ್ರ, ಇಪ್ಪತ್ತಾರು ಮಂತ್ರಗಳಿಂದ ಎಲ್ಲಾ ಕಡೆಯಲ್ಲೂ ಹೋಮಿಸುತ್ತಾರೆ. ಪುನಃ ಪೂರ್ಣಾಹುತಿಯನ್ನ ಮಾಡುತ್ತಾರೆ. ಪುನಃ ಆಚಾರ್ಯನು ತನ್ನ ಕುಂಡದಲ್ಲಿ ಸಮಿತ್ತು ಮೊದಲಾಗಿ ಎಂಟು ದ್ರವ್ಯಗಳನ್ನು ಮೂಲಮಂತ್ರದಿಂದಲೇ, ಮೂರ್ತಿಪರು ತಮ್ಮ ತಮ್ಮ ಕುಂಡದಲ್ಲಿ ಸಮಿತ್ತು ಆಜ್ಯ ಚರು ಲಾಜ ವ್ರೀಹಿ ಯವ ಸರ್ಷಪ ತಿಲಗಳೆಂದು ಎಂಟು ದ್ರವ್ಯಗಳನ್ನು ಮೂಲಮಂತ್ರ ಗಾಯತ್ರೀ, ಹೃದಯ ಮಂತ್ರಗಳಿಂದ ಶಾಸ್ತಾದಿ ಮಂತ್ರ ಆರ್ಯಾದಿ ಮಂತ್ರ ನಮಸ್ತೇ ಭವಾದಿ ಮಂತ್ರ, ಶರಾದಿ ಮಂತ್ರ ಆಯಾಯ ದಿಕ್ಪಾಲ ಮಂತ್ರಗಳಿಂದ ಎಲ್ಲಾ ಕುಂಡಗಳಲ್ಲಿಯೂ ಹೋಮಿಸುವರು. ಇಲ್ಲಿ ಒಂದೊಂದು ದ್ರವ್ಯಕ್ಕೆ ಒಂದೊಂದು ಮಂತ್ರವು. ಮೂಲ ೧. ಗಾಯತ್ರಿ ೨. ಹೃದಯ ಮಂತ್ರ (ಓಂ ರೇವಂತಾಯ ಹೃದಯಾಯ ನಮಃ) ೩. ಓಂ ಶಾಸ್ತ್ರೇ ಗೋಪ್ತ್ರೇ ನಮೋ ಭೂತಾದಿಪತಯೇ ನಮೋ ನಮಃ ಸ್ವಾಹಾ । ಇತಿ ಶಾಸ್ತೃ ಮಂತ್ರಃ ೪. ಓಂ ಆರ್ಯಾಯ ವಿಶ್ವಗೋಪ್ತ್ರೇ ಸೇನಾನ್ಯೈ ನಮೋ ನಮಃ ೫. ನಮಸ್ತೇ ಭವಪುತ್ರಾಯ ಭವತುಲ್ಯ ಭವಾಯ ಚ ವರದಾಯ ನಮಸ್ತೇಽಸ್ತು ಭಕ್ತಪ್ರಿಯ ಹಿತಾಯವೈ ಸ್ವಾಹಾ । ಇತಿ ಭವ ಮಂತ್ರಃ ೬. ಓಂ ಶಂ ಶರಾಯ ನಮಸ್ತೇಽಸ್ತು ನಮಃ ಕುಕ್ಕುಟ ಕೇತವೇ । ನಮಸ್ತೇ ನೀಲರೂಪಾಯ ನೀಲಾಂಬರಧರಾಯ ಚ ನಮೋ ನಮಃ ಸ್ವಾಹಾ– ಇದು ಶರಮಂತ್ರ ೭. ಓಂ ಇಂದ್ರಾಯ ಸುರಾಧಿಪತಯೇ ಸಾಯುಧ ಸವಾಹನ ಪರಿವಾರಾಯ ನಮಃ ಸ್ವಾಹಾ– ಇತೀಂದ್ರ ಮಂತ್ರಃ । ಅಗ್ನಯೇ ತೇಜೋಧಿಪತಯೇ ಸಾಯುಧಾಯೇತ್ಯಾದಿ । ಯಮಾಯ ಪ್ರೇತಾಧಿಪತಯೇ । ನಿಋತಯೇ ರಕ್ಷೋಧಿಪತಯೇ । ವರುಣಾಯ ಜಲಾಧಿಪತಯೇ । ವಾಯವೇ ಪ್ರಾಣಾಧಿಪತಯೇ । ಸೋಮಾಯ ನಕ್ಷತ್ರಾಧಿಪತಯೇ । ಈಶಾನಾಯ ವಿದ್ಯಾಧಿಪತಯೇ । ಸಾಯುಧಾಯ ಸವಾಹನಾಯ ಸಪರಿವಾರಾಯ ನಮಃ ಸ್ವಾಹಾ– ಹೀಗೆ ಎಂಟು ಕುಂಡಗಳಲ್ಲಿ ದಿಕ್ಪಾಲ ಮಂತ್ರಗಳು ೮. ಗುರುಕುಂಡದಲ್ಲಿ ಮೂಲಮಂತ್ರದಿಂದಲೆ ಹೋಮವು. ಪಲಾಶ(ಮುತ್ತುಗ) ಸಮಿಧವು. ಪೂರ್ವಾದಿ ಎಂಟು ದಿಕ್ಕುಗಳಲ್ಲಿ– ಪಲಾಶ ಖದಿರ ಅಶ್ವತ್ಥ ಪ್ಲಕ್ಷ ವಟ ಔದುಂಬರ ಬಿಲ್ವ ಅಪಾಮಾರ್ಗ ಸಮಿಧಗಳು. ಎಲ್ಲಾ ಕುಂಡಗಳಲ್ಲಿ ಎಂಟು ದ್ರವ್ಯಗಳನ್ನು ಹೋಮಿಸಿ, ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮಭಾಗವನ್ನು ಪೂರ್ತಿಗೊಳಿಸಬೇಕು.

**ಶಾಸ್ತಾರನಲ್ಲಿ** ಐದು ಹೋಮದ ಪಕ್ಷದಲ್ಲಿ– ಆಚಾರ್ಯನು ಕುಂಡದಲ್ಲಿ ನಾಲ್ಕು ಪರಿಕುಂಡಗಳಲ್ಲಿಯೂ ಮೂಲಮಂತ್ರದಿಂದ ಸಮಿದಾಜ್ಯ ಚರು ಲಾಜ ಸರ್ಷಪ ಯವ ತಿಲ ಆಜ್ಯಗಳೆಂದು ಎಂಟು ದ್ರವ್ಯಗಳನ್ನು ಹೋಮಿಸುತ್ತಾರೆ. ಇಲ್ಲಿ ಮಧ್ಯದಲ್ಲಿ ಪಲಾಶ ಸಮಿಧವು. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಅಶ್ವತ್ಥ ವಟ ಪ್ಲಕ್ಷ ಶಮೀ ಸಮಿಧಗಳಾಗಿರುತ್ತವೆ. ಇಲ್ಲಿ ಲಾಜ ಸರ್ಷಪ ಯವ ತಿಲಗಳೆಂಬ ನಾಲ್ಕು ದ್ರವ್ಯಗಳನ್ನು ಆರ್ಯ ಭವ ಶರ ದಿಕ್ಪಾಲ ಮಂತ್ರಗಳಿಂದಲಾದರೂ ಹೋಮಿಸಬಹುದು. ಅಥವಾ ಆಯಾಯ ದಿಕ್ಕಿನ ದಿಕ್ಪಾಲಕರ ಮಂತ್ರದಿಂದಲಾದರೂ ಹೋಮಿಸಬಹುದು. ಎಂಟನೆಯದಾದ ಆಜ್ಯವನ್ನು ಮೂಲಮಂತ್ರದಿಂದಲೇ ಹೋಮಿಸುತ್ತಾರೆ. ಮಧ್ಯೆ ಮಧ್ಯೆ ಹಾಗೂ ಕೊನೆಯಲ್ಲಿ ಸಂಪಾತ ಸಹಿತವಾಗಿ ವ್ಯಾಹೃತಿಯಿಂದ ಪೂರ್ಣಾಹುತಿಯನ್ನು ಮಾಡುತ್ತಾರೆ. ಪುನಃ ಸ್ವಿಷ್ಟಕೃತ್ ಮೊದಲಾಗಿ ಉಳಿದ ಹೋಮ ಭಾಗವನ್ನು ಮಾಡಬೇಕು.

ಹೀಗೆ ಎಲ್ಲಾ ದೇವತೆಗಳಲ್ಲಿಯೂ ಹೇಳಲ್ಪಟ್ಟ ಮಂತ್ರಗಳಿಂದ ಹಾಗೂ ದ್ರವ್ಯಗಳಿಂದ ಕ್ರಮವಾಗಿ ಪ್ರತ್ಯೇಕವಾಗಿ ನೂರೆಂಟು ಅಥವಾ ಇಪ್ಪತ್ತೆಂಟರ ಯಾ ಎಂಟರ ಸಂಖ್ಯೆಯಲ್ಲಿ ಸಂಪಾತ ಸಹಿತವಾಗಿ ಹೋಮಿಸಿ, ಅಷ್ಟಬಂಧ ವಿಷಯದಲ್ಲಿ ಕೊನೆಯ ಪೂರ್ಣಾಹುತಿಯಲ್ಲಿ ಗುರು ಕುಂಡದಲ್ಲಿ ಆಯಾಯ ನವಶಕ್ತಿ ಮಂತ್ರದಿಂದ ಸಂಹಾರ ಕ್ರಮದಿಂದ ಒಂದೊಂದಾಗಿ ಆಜ್ಯಾಹುತಿಯನ್ನು ಮಾಡಿ ತಮ್ಮ ತಮ್ಮ ಪೂರ್ಣಾಹುತಿ ಮಂತ್ರದಿಂದ ಪೂರ್ಣಾಹುತಿಯನ್ನು ಮಾಡಿ ಸಂಪಾತವನ್ನು ಪ್ರತ್ಯೇಕವಾಗಿ ಸಂಗ್ರಹಿಸಬೇಕು. ಪುನಃ ತಮ್ಮ ತಮ್ಮ ನವ ಶಕ್ತಿ ಮಂತ್ರಗಳಿಂದ ಸೃಷ್ಟಿಕ್ರಮದಿಂದ ಪ್ರತ್ಯೇಕವಾಗಿ (ಪ್ರತಿಯೊಂದನ್ನೂ) ಎಂಟೆಂಟರ ಸಂಖ್ಯೆಯಲ್ಲಿ

ನಡುನಡುವೆ ಪೂರ್ಣಾಹುತಿ ಸಹಿತವಾಗಿ ಹೋಮಿಸಿ ಅದರ ಸಂಪಾತವನ್ನು ಪ್ರತ್ಯೇಕವಾಗಿ ಸಂಗ್ರಹಿಸಬೇಕು. ಸಂಹಾರ ಸಂಪಾತವನ್ನು ಸೃಷ್ಟಿ ಸಂಪಾತವನ್ನೂ ಅಷ್ಟಬಂಧಕ್ಕಾಗಿ ಸಂರಕ್ಷಿಸಿಡಬೇಕು. ಗುರುಕುಂಡದಲ್ಲಿಯೇ ಈ ರೀತಿಯಾಗಿ ಶಕ್ತಿ ಹೋಮವನ್ನು ಮಾಡಿ, ಪುನಃ ಗುರುವೂ ಮೂರ್ತಿಪರೂ ಸ್ವಿಷ್ಟಕೃತ್ತನ್ನು ಹೋಮಿಸಿ, ಸ್ರುವನ್ನು ಬಿಟ್ಟು ಮೇಕ್ಷಣವನ್ನು ಅಗ್ನಿಯಲ್ಲಿ ಹಾಕಿ ಹವಿಸ್ಸನ್ನು ಉತ್ತರದಲ್ಲಿ ಕೊಂಡು ಹೋಗಿ ಅನುಯಾಜ, ಪರಿಧಿಗಳನ್ನು ರಜ್ಜುವನ್ನು ಸಡಿಲಿಸಿ ಅಗ್ನಿಯಲ್ಲಿ ಹಾಕಬೇಕು. ಆಮೇಲೆ ವೈದಿಕೋಕ್ತವಾದ ಪ್ರಾಯಶ್ಚಿತ್ತಗಳನ್ನು ಮಾಡಿ ಅದರ ವ್ಯಾಹೃತಿಯ ಕೊನೆಯಲ್ಲಿ ಪ್ರಣವದಿಂದ ತುಪ್ಪವನ್ನು ಹೋಮಿಸಿ ಸಮಾಪ್ತಿಗೊಳಿಸಬೇಕು. ಗಂಡೂಷ ಸಮರ್ಪಣ ಕಾಲದಲ್ಲಾಗಲೀ ಪ್ರಸನ್ನ ಪೂಜೆಯ ಕೊನೆಯಲ್ಲಿ ಬ್ರಹ್ಮಾರ್ಪಣ ಕಾಲದಲ್ಲಾಗಲೀ ಪ್ರಣೀತಾವನ್ನು ಮಾರ್ಜನೆ ಮಾಡಬೇಕು. ಅವಸಾನಾರ್ಘ್ಯ ಮೊದಲಾಗಿ ಕೊಟ್ಟು ವ್ಯಾಪಿಸಿ ಲಯಾಂಗವನ್ನು ಮಾಡಿ ಪರಿಸಮೂಹನ ಮೊದಲಾಗಿ ಮಾಡಿ ಗಂಡೂಷ ಸಮರ್ಪಣೆ ಪುಷ್ಪಾಂಜಲಿಯನ್ನು ಮಾಡಿ ತಾಳತ್ರಯಾದಿಗಳಿಂದ ಸಂರಕ್ಷಣೆಯನ್ನು ಮಾಡಬೇಕು. ಪುನಃ ಆ ಸಂಪಾತವೆಲ್ಲವನ್ನೂ ಸೇರಿಸಿ ದ್ರವ್ಯಕಲಶಗಳಲ್ಲಿ ಸಂಪಾತವನ್ನು ಹಾಕಿ ಎಲ್ಲಾ ಕಲಶಗಳನ್ನು ಬಟ್ಟೆಯಿಂದ ಹೊದಿಸಿ ದರ್ಭೆಯ ಕೊಡಿಗಳಿಂದ ಅಲಂಕರಿಸಿ, ಗುರುವು ತಾನು ಕಲಶಕ್ಷೇತ್ರದಿಂದ ಹೊರಗೆ ಪೂರ್ವಾಭಿಮುಖವಾಗಿ ಕುಳಿತು ಪ್ರಣವದಿಂದ ತತ್ತ್ವಬುದ್ಧಿಯಿಂದ ಹೂವನ್ನು ಸಮರ್ಪಿಸಿ ಒಂದಾಗಿಸಿ, ಭೂತಸಂಹಾರವನ್ನೂ ಭೂತ ಸೃಷ್ಟಿಯನ್ನೂ ಮಾಡಿ ಲಿಪಿಪ್ರಾಣಾಯಾಮವನ್ನೂ ಲಿಪಿನ್ಯಾಸವನ್ನೂ ಮಾಡಿ ಮಂತ್ರೋದಯ ಪ್ರಾಣಾಯಾಮವನ್ನೂ ಮಾಡಿ ಪೀಠನ್ಯಾಸದೊಡನೆ ಪುನಃ ಮಂತ್ರ ಪ್ರಾಣಾಯಾಮವನ್ನು ಮಾಡಿ ವ್ಯಾಪಿಸಿ ತಮ್ಮ ತಮ್ಮ ಷಡಂಗಾದ್ಯನ್ಯಾಸವನ್ನು ಮಾಡಿ ಪೀಠವನ್ನು ಪೂಜಿಸಿ ಮೂರ್ತಿಯನ್ನು ಸಂಕಲ್ಪಿಸಿ ಪ್ರಣವ ಉಪಚಾರದಿಂದ ಕೂಡಿದ ಮೂಲಮಂತ್ರದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯ(ಬಲಿ)ಯನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ-

**ಶುದ್ಧಾ ಭವಂತ್ವಿ ಮೇ ಕುಂಭಾಃ ಸಕುಶಾಃ ಸಪಿಧಾನಕಾಃ ।**

**ವಾತಾತಪಪರೀತಾಶ್ಚ ಶುಭ ಲಕ್ಷಣ ಸಂಯುತಾಃ ॥**

**ಪಂಚವಿಂಶಧಾ ವಿಷ್ಣೋಸ್ತತ್ತ್ವಭೇದೇ ನತಿಷ್ಠತಃ ।**

**ದ್ರವ್ಯೇಯತ್ರಾಶ್ರಯಾಃ ಸರ್ವಾಃ ಸಂಗಚ್ಛನ್ತಾಂವಿಭೂತಯಃ ॥**

ಈ ಎರಡು ಮಂತ್ರಗಳಿಂದ ಪವಿತ್ರ ಧರಿಸಿದ ಕೈಯುಳ್ಳವನಾಗಿ ಇದುರಿನಲ್ಲಿ ನಿಂತು ಸಂಪಾತ ಸಹಿತವಾದ ಪ್ರಣೀತಾ ಜಲದಿಂದ ಎಲ್ಲಾ ಕಲಶಗಳನ್ನೂ ಪ್ರೋಕ್ಷಿಸಬೇಕು. ಪುಷ್ಪಾಕ್ಷತೆಗಳನ್ನು ಚೆಲ್ಲಬೇಕು. ಇಲ್ಲಿ ವಿಷ್ಣು ಶಬ್ದದಲ್ಲಿ 'ಶಂ ಭೋಃ' 'ದೇವ್ಯಾಃ' 'ಶಾಸ್ತುಃ' 'ವಿಘ್ನ' ಈ ಮೊದಲಾಗಿ ಸೇರಿಸಬೇಕು. ಪುನಃ ಅಲ್ಲಿ ಕುಳಿತುಕೊಂಡು ಬ್ರಹ್ಮಾರ್ಪಣ ಮೊದಲಾದುವನ್ನು ಮಾಡಿ, ನಿಂತುಕೊಂಡು ಪುಷ್ಪಾಂಜಲಿಯನ್ನು ಮಾಡಿ ಅಂಜಲಿ ಮುದ್ರೆಯಿಂದ

**ಶಾಸ್ತ್ರೋದಿತಮಿದಂಚಾಸ್ತು ಸ್ನಪನಂ ದೇವನಿರ್ಮಿತಂ ।**
**ಅನೇನ ಸ್ನಪನೇನಾಸ್ತು ಪ್ರಸನ್ನೋಃ ಭಗವಾನ್ಹರಿಃ ॥**

ಹೀಗೆ ವಿಷ್ಣುವಿನಲ್ಲಿ ಪ್ರಾರ್ಥಿಸಬೇಕು. ಶಿವ ಮೊದಲಾದವರಲ್ಲಿ ಶಿವಃ, ಗುಹಃ, ಪ್ರಸನ್ನಾಭವತೀ ಶಿವಾ- ಹೀಗೆ ಪ್ರಾರ್ಥನಾ ಮಂತ್ರವು. ಪುನಃ ಅಲ್ಲಿ ಕುಳಿತುಕೊಂಡು ಅವಸಾನೀಯಾರ್ಘ್ಯವನ್ನು ಕೊಟ್ಟು ವ್ಯಾಪಿಸಿ ಲಯಾಂಗವನ್ನು ಮಾಡಿ ತಾಳತ್ರಯದಿಂದ ಸಂರಕ್ಷಿಸಬೇಕು. ಪುನಃ ಗರ್ಭಗೃಹದ ಇದುರಿನಲ್ಲಿ ನಿಂತು ಪೂರ್ಣ ಪುಷ್ಪಾಂಜಲಿಯನ್ನು ಮಾಡಿ ಅಂಜಲಿ ಮುದ್ರೆಯೊಡನೆ-

**ಅಧಿವಾಸಃ ಕೃತೋದೇವ ಸ್ನಪನಾಯ ಮಯಾ ತವ ।**
**ಕ್ಷಣೇನ ಮೇ ಪ್ರಸಾದೋಽಸ್ಯ ಕ್ರಿಯತಾಂ ಪುರುಷೋತ್ತಮ**

ಹೀಗೆ ವಿಷ್ಣುವಿನಲ್ಲಿ. ಶಿವ ಮೊದಲಾದರಲ್ಲಿ ಪರಮೇಶ್ವರಃ ಮೊದಲಾಗಿ ಮಂತ್ರದಿಂದ ಪ್ರಾರ್ಥಿಸಬೇಕು. ಪುನಃ ಮಂಟಪಕ್ಕೆ ಬಂದು ತನ್ನ ಆಸನದಲ್ಲಿ ಕುಳಿತು ಆಯಾಯ ದೇವತೆಯನ್ನು ಧ್ಯಾನಿಸುತ್ತಾ ನಿದ್ರಿಸದೇನೇ (ಮಲಗದೇನೇ) ರಾತ್ರಿಯನ್ನು ಕಳೆಯಬೇಕು. ಇದು ಕಲಶಾಧಿವಾಸವು.

* * * *

## ಪೀಠಾಧಿವಾಸ ಹೋಮ

ಪೀಠಾಧಿವಾಸಕ್ಕಾಗಿ ಎಲ್ಲಾ ದೇವತೆಗಳಲ್ಲಿಯೂ ಆಯಾಯ ದೇವತೆಯ ಶಕ್ತಿ ಬೀಜದಿಂದ, ಶಿವನಲ್ಲಿ ಔಮೇಯಾಷ್ಟಾಕ್ಷರದಿಂದ (ಓಂ ಹ್ರೀಂ ಐಂ ಕ್ಲೀಂ ಹ್ಸೌಃ ಪ್ರೋಂ ಹಂಸಃ) ಲಾಗಲೀ ತುಪ್ಪವನ್ನು ನೂರೆಂಟು ಮೊದಲಾದ ಸಂಖ್ಯೆಯಲ್ಲಿ ಹೋಮಿಸಿ. ಅದರ ಸಂಪಾತವನ್ನು ಪೀಠದಲ್ಲಿ ಸಮರ್ಪಿಸಬೇಕು. ಇಲ್ಲಿ ಅನಂತ ಪೃಥಿವಿಗಳಿಗೂ ಹೋಮವಿದೆ.

* * * *

## ನಪುಂಸಕ ಶಿಲಾಧಿವಾಸ ಹೋಮ

ಪ್ರಣವ (ಓಂ)ದಿಂದ ನೂರೆಂಟು ಸಂಖ್ಯೆಯ ಮೊದಲಾಗಿ ಹೋಮಿಸಿ ಅದರ ಸಂಪಾತವನ್ನು ನಪುಂಸಕ ಶಿಲೆಯಲ್ಲಿ ಸಮರ್ಪಿಸಿ, ಎರಡನ್ನೂ ಅಧಿವಾಸ ಮಾಡಿ ಸಂರಕ್ಷಿಸಬೇಕು.

ಪುನಃ ಪ್ರಾಸಾದವನ್ನು ಭೂತಸಂಹಾರ ಶೋಷಣಾದಿಗಳಿಂದ ಶೋಧಿಸಿ ಭೂತಸೃಷ್ಟಿಯನ್ನು ಮಾಡಿ ಲಿಪಿನ್ಯಾಸ ಮಂತ್ರನ್ಯಾಸಾದಿಗಳಿಂದ ಸಕಲೀಕರಣವನ್ನು ಮಾಡಿ, ಪೂಜಿಸಿ ಸಂಪಾತಶೇಷವನ್ನು ಸಮರ್ಪಿಸಿ ಬಟ್ಟೆಯಿಂದ ಹೊದಿಸಿ ಸಂರಕ್ಷಿಸಬೇಕು.

* * * *

## ರತ್ನನ್ಯಾಸ ಹೋಮ

ಪುನಃ ಆಚಾರ್ಯನು ಅಲ್ಲಿಯೇ ಅಗ್ನಿಯಲ್ಲಿ ಪ್ರತಿಷ್ಠೆ ಮಾಡಿ ಬೇರೊಂದು ಅಗ್ನಿಯಲ್ಲಾಗಲೀ ತಮ್ಮ ತಮ್ಮ ಪಕ್ವಹೋಮಕ್ಕೆ ಹೇಳಿದ ಮಂತ್ರದಿಂದ ನೂರೆಂಟು ಸಂಖ್ಯೆಯಿಂದ ತುಪ್ಪವನ್ನು ಹೋಮಿಸಬೇಕು. ಪ್ರತ್ಯೇಕವಾದ ಅಗ್ನಿಯಾದರೆ ನಾಲ್ಕು ದ್ರವ್ಯಗಳನ್ನೂ ಹೋಮಿಸಬೇಕು.

* * * *

## ಶಕ್ತಿ ಹೋಮ

ಅಷ್ಟಬಂಧ ಮಾಡುವ ಸಂದರ್ಭದಲ್ಲಿ ಆಯಾಯ ದೇವತೆಗಳ ನವಶಕ್ತಿ ಮಂತ್ರಗಳಿಂದ ಎಂಟೆಂಟು ಮೊದಲಾದ ಸಂಖ್ಯೆಯಲ್ಲಿ ತುಪ್ಪವನ್ನು ಹೋಮಿಸಬೇಕು. ಆ ಎರಡೂ ಸಂಪಾತಗಳನ್ನು ರಕ್ಷಿಸಿಡಬೇಕು. ಗುಹನಲ್ಲಿ– ಗಾಯತ್ರಿಯಿಂದ ಆಜ್ಯಹೋಮ ಮಾಡಿ, ಕೊನೆಯಲ್ಲಿ– ಬ್ರಹ್ಮಣೇ ಸ್ವಾಹಾ, ಸೋಮಾಯ, ವಸುಭ್ಯಃ, ರುದ್ರೇಭ್ಯಃ, ರತ್ನೇಭ್ಯಃ, ಬೀಜೇಭ್ಯಃ, ಲೋಹೇಭ್ಯಃ, ಧಾತುಭ್ಯಃ, ಓಷಧೀಭ್ಯಃ ಸ್ವಾಹಾ– ಇವುಗಳಿಂದ ಒಂದೊಂದು ಆಜ್ಯಾಹುತಿಯನ್ನು ಹೋಮಿಸಬೇಕು. ಹೀಗೆ ಎಲ್ಲೆಡೆಯೂ ಹೋಮಾನಂತರದಲ್ಲಿ ಸ್ವಿಷ್ಟಕೃದಾದಿ ಎಲ್ಲವನ್ನೂ ಮಾಡಿ ದೇವರನ್ನು ಸಂತೋಷಗೊಳಿಸಿ ಕೊನೆಯಲ್ಲಿ ಎಲ್ಲಾ ಮೂರ್ತಿಪರು ಪರಿಸಮೂಹನ ಪರ್ಯುಕ್ಷಣ ಮೊದಲಾದ ಕ್ರಿಯೆಗಳನ್ನು ಮಾಡುತ್ತಾರೆ.

* * * *

## ಗೋ ದೋಹನಂ

ವಿಷ್ಣುವಿನಲ್ಲಿ ಮಂಟಪದ ಹೊರಭಾಗದಲ್ಲಿ ದಕ್ಷಿಣ ದಿಕ್ಕಿನಲ್ಲಿ ಗಂಗೆ, ಯಮುನೆ, ಗೋದಾವರಿ, ಸರಸ್ವತೀ ಎಂದು ಹಸುಗಳನ್ನು ನಿಲ್ಲಿಸಿ, ಗಂಗಾಯೈ ನಮಃ ಮೊದಲಾದ ನಾಮಗಳಿಂದ ಪೂಜಿಸಿ ಗಾಯತ್ರಿ ಮಂತ್ರದಿಂದ ಹಾಲನ್ನು ಕರೆಯಬೇಕು. ದುರ್ಗಿಯಲ್ಲೂ ಇದೇ ರೀತಿಯಾಗಿ ಇರಿಸಿ ಪೂಜಿಸಿ ಪ್ರಣವದಿಂದ ಹಾಲನ್ನು ಕರೆಯಬೇಕು. ವಿಷ್ಣು ದುರ್ಗಿಯರಲ್ಲಿ ಆಚಾರ್ಯ ಕುಂಡದ ಅಗ್ನಿಯಲ್ಲಿ ಕರೆಯಲು ಹೇಳಿದ ಮಂತ್ರದಿಂದ ಪಾಯಸವನ್ನು ಬೇಯಿಸಬೇಕು. ಬಿಂಬ ಹಾಗೂ ಮಂಡಲಗಳಲ್ಲಿ ಗಾಯತ್ರಿಯಿಂದ ವಿಷ್ಣುವನ್ನೂ ಪ್ರಣವದಿಂದ ದುರ್ಗಿಯನ್ನೂ ಪೂಜಿಸಿ, ಅರ್ಧ ಹವಿರ್ಭಾಗವನ್ನು ನೈವೇದ್ಯ ಮಾಡಬೇಕು. ಉಳಿದ ಅರ್ಧದಿಂದ ಪೂಜಾಹೋಮವನ್ನು ಮಾಡಿ ಮಂಟಪದ ಉತ್ತರಭಾಗದಲ್ಲಿ ಬ್ರಾಹ್ಮಣರನ್ನು ದಕ್ಷಿಣಾದಾನ ಸಹಿತ ಊಟ ಮಾಡಿಸಬೇಕು. ಶಿವನಲ್ಲಿ– ಹನ್ನೊಂದು ಬ್ರಾಹ್ಮಣರು, ವಿಷ್ಣುವಿನಲ್ಲಿ– ಹನ್ನೆರಡು, ದುರ್ಗಿಯಲ್ಲಿ– ಒಂಭತ್ತು, ಸ್ಕಂದನಲ್ಲಿ– ಹನ್ನೆರಡು ಅಥವಾ ಆರು, ಶಂಕರನಾರಾಯಣನಲ್ಲಿ– ಹನ್ನೆರಡು, ಗಣಪತಿ, ಶಾಸ್ತಾರರಲ್ಲಿ ಎಂಟು ಬ್ರಾಹ್ಮಣರನ್ನು ಊಟ ಮಾಡಿಸಬೇಕು. ಪುನಃ ಈ ವಿಷ್ಣು ದುರ್ಗಿಯರಲ್ಲಿ ಮಂಟಪದ ಹೊರಗೆ ದಿಕ್ಕುಗಳಲ್ಲಿ

**ಆದ್ಯಾಶ್ಚ ಕರ್ಮಜಾಶ್ಚೈವಯೇ ಭೂತಾಪ್ರಾಗ್ದಿಶಿಸ್ಥಿತಾಃ ।**

**ಪ್ರಸನ್ನಾಃ ಪರಿತುಷ್ಟಾಸ್ತೇ ಪ್ರತಿಗೃಣ್ಹಂತ್ವಿಮಂ ಬಲಿಂ ॥**

**ಎನ್ನುವುದಾಗಿ, ವಿದಿಕ್ಕುಗಳಲ್ಲಿ–**

**ವೃಕ್ಷೇಷು ಪರ್ವತಾಗ್ರೇಷು ಯೇವಿದಿಕ್ಷುಚ ಸಂಸ್ಥಿತಾಃ ।**

**ಭೂಮೌ ವ್ಯೋಮ್ನಿ ಸ್ಥಿತಾಯೇ ಚ ತೇಽಪಿಗೃಣ್ಹಂತ್ವಿಮಂ ಬಲಿಂ ।**

**ವಿನಾಯಕಾ ಕ್ಷೇತ್ರಪಾಲಾಯಚಾನ್ಯೇ ಬಲಿಕಾಂಕ್ಷಿಣಃ ।**

**ಪೂರ್ವಾದ್ಯಾಃ ಪಾರ್ಷದಾಃ ಸರ್ವೇತೇಽಪಿಗೃಹ್ಣಂತ್ವಿಮಂ ಬಲಿಂ ॥**

ಮೊದಲಿನ ಶ್ಲೋಕ ಮಂತ್ರದಲ್ಲಿ 'ಪ್ರಾಗ್ದಿಶಿ' ಎಂಬ ಸ್ಥಾನದಲ್ಲಿ ಉಳಿದ ದಿಕ್ಕುಗಳಲ್ಲಿ ಹೇಳುವಾಗ ದಕ್ಷಿಣೇ, ಪಶ್ಚಿಮೇ, ಉತ್ತರೇ– ಈ ಪದಗಳನ್ನು ಸೇರಿಸಿ ಹೇಳಬೇಕು. ಉಳಿದ ದೇವತೆಗಳಲ್ಲಿ– ಬಿಂಬ ಮತ್ತು ಮಂಡಲದಲ್ಲಿ ಮೂಲದಿಂದ ದೇವರನ್ನು ಪೂಜಿಸಿ, ಸಾಮಾನ್ಯವಾದ ಹಾಲಿನಲ್ಲಿ ಸಾಮಾನ್ಯಾಗ್ನಿಯಲ್ಲಿ ಬೇಯಿಸಿದ ಪಾಯಸವನ್ನು ನೈವೇದ್ಯ ಮಾಡಿ ನಿಜಾಗ್ನಿಯಲ್ಲಿ ಹೋಮಿಸಿ, ಬ್ರಾಹ್ಮಣರನ್ನು ಊಟ ಮಾಡಿಸಿ, ಹೇಳಲ್ಪಡುವ ಕ್ರಮದಿಂದ ಬಲಿಯನ್ನು ಮಾಡಬೇಕು. **ದೇವಂ ರುದ್ರಂ ಪುರಸ್ಕೃತ್ಯ ಇಮಂ ಬಲಿಂ ಪ್ರತಿಗೃಣ್ಣಂತು ಸರ್ವಭೂತಾನಿ ಪೈಶಾಚಾಂತಂ ಯಜಾಮಹೇ– ಇತಿ** । ಮಹೇಶನಲ್ಲಿ– ಒಂದೇ ಪ್ರದಕ್ಷಿಣದಿಂದ ಎಂಟು ದಿಕ್ಕುಗಳಲ್ಲಿ ಬಲಿಯನ್ನು ಹಾಕಬೇಕು. ಉಳಿದ ದೇವತೆಗಳಲ್ಲಿ ರುದ್ರ ಪದಸ್ಥಾನದಲ್ಲಿ ಆಯಾಯ ದೇವತಾ ಪದಗಳನ್ನು ಹೊಂದಿಸಬೇಕು. ಸ್ಕಂದನಲ್ಲಾದರೂ–

**ಇಮಂ ಸ್ಕಂದಂ ಪುರಸ್ಕೃತ್ಯ ಯೇ ದೇವಾಯೇ ಚ ರಾಕ್ಷಸಾಃ ।**

**ಯೇ ಭೂತಾ ಯೇಽಸುರಾಃ ಸರ್ವೇ ಪಿಶಾಚಾಃ ಕಿನ್ನರಾಸ್ತಥಾ ।**

**ಗಂಧರ್ವಾ ಪನ್ನಗಾ ನಾಗಾ ಋಷಯಶ್ಚ ಖಗಾ ಅಪಿ ।**

**ಯಕ್ಷಾಶ್ಚ ಮಾತರಃ ಸರ್ವೇ ಚಾರಕಾಃ ಪರಮಾತ್ಮನಃ ।**

**ತೇ ಸರ್ವೇ ಪ್ರತಿಗೃಣ್ಣಂತು ತೇಭ್ಯಸ್ತಾಭ್ಯೋ ನಮೋ ನಮಃ ॥**

ಈ ಮಂತ್ರದಿಂದ ಎಂಟು ದಿಕ್ಕುಗಳಲ್ಲಿ ಬಲಿಯನ್ನು ಹಾಕಬೇಕು. ಎಲ್ಲಾ ದೇವತೆಗಳಲ್ಲಿ ಬಲಿದಾನಾ ನಂತರದಲ್ಲಿ ಆಚಮನವನ್ನು ಮಾಡಿ, ಪ್ರಸನ್ನ ಪೂಜೆಯನ್ನು ಮಾಡಿ ಆಯಾಯ ದೇವತಾಸಂಬಂಧಿಯಾದ ಮಂತ್ರಗಳನ್ನು ಜಪಿಸಿ ರಕ್ಷಣೆಯನ್ನು ಮಾಡಬೇಕು. ರತ್ನನ್ಯಾಸದ್ರವ್ಯ ಸಮೂಹವನ್ನು ದೇವತೆಯನ್ನು ಮಲಗಿಸಿದ ಹಾಸಿಗೆಯಲ್ಲಿರಿಸಿ ವಾಯು ಮೊದಲಾದ ಬೀಜಗಳಿಂದ ಶೋಷಣಾದಿಗಳನ್ನು ಮಾಡಿ ಶೋಧಿಸಿ, ಆಯಾಯ ರತ್ನಹೋಮದಲ್ಲಿ ಹೇಳಿದ ಮಂತ್ರದಿಂದಾಗಲೀ ಪ್ರಣವದಿಂದಾಗಲೀ ಪೂಜಿಸಿ ಅಧಿವಾಸ ಮಾಡಿ ರಕ್ಷಿಸಬೇಕು. ಮಂಟಪದ ಸುತ್ತಲೂ ಇತಿಹಾಸ ಪುರಾಣಾದಿಗಳಿಂದ ಹೆಚ್ಚಿನ ಹಬ್ಬದಂತೆ ಆಚರಿಸುತ್ತಾ ದೇವರಲ್ಲಿ ತದೇಕಮನಸ್ಕನಾಗಿ ನಿದ್ರಿಸದೇ ರಾತ್ರಿಯನ್ನು ಕಳೆಯಬೇಕು.

* * * *

## ಪ್ರತಿಷ್ಠಾವಿಧಿಃ

ಹೀಗೆ ಅಧಿವಾಸದ ಮರುದಿನದಲ್ಲಿ ಬೆಳಗಿನ ಜಾವದಲ್ಲೆ, ಎದ್ದು ಸ್ನಾನ ಮಾಡಿ, ಬೆಳಗಿನ ಆನ್ಹಿಕ ಮೊದಲಾದುವನ್ನು ಮಾಡಿ ಅಧಿವಾಸ ಮಾಡಿದ ಪ್ರಾಸಾದವನ್ನು ಮುಷ್ಟ್ಯಾದಿಗಳಿಂದ ಶೋಧಿಸಿ, ಪ್ರಾಸಾದ ಪುರುಷನನ್ನು ಅಲಂಕರಿಸಿ ಪೂಜಿಸಿ, ಆಚಾರ್ಯನು ಹೊಸ ಬಟ್ಟೆಯನ್ನು ಧರಿಸಿ, ಆಚಮನ ಮಾಡಿ ಪ್ರಾಸಾದದ ಒಳಗೆ ಹೋಗಿ ಗರ್ಭಗೃಹದಲ್ಲಿ ಕುಳಿತು, ಪವಿತ್ರಪಾಣಿಯಾಗಿ ಗುರು ಗಣಪತಿಯರನ್ನು ನಮಸ್ಕರಿಸಿ, ಸಕಲೀಕರಣವನ್ನು ಮಾಡಿ ಶಂಖಪೂರಣ, ಆತ್ಮಾರಾಧನಗಳನ್ನು ಮಾಡಿ– ರತ್ನಾಷ್ಟಬಂಧ ದೇವತಾಃ ಪ್ರೀಯಂತಾಂ– ಹೀಗೆ ವಿಶೇಷದಿಂದ ಕೂಡಿದ ಪುಣ್ಯಾಹವನ್ನು ಮಾಡಿ ಬ್ರಾಹ್ಮಣರನ್ನು ಕೂಡಿಸಿ, ನವಗ್ರಹ ದಶದಾನ ಮೊದಲಾದುವನ್ನು ಕೊಟ್ಟು, ಮುಹೂರ್ತ ಹೇಳಿದವನಿಗೆ ದಕ್ಷಿಣೆ ಕೊಟ್ಟು ಸುಮೂಹರ್ತವನ್ನು ಹೇಳಿಸಿ, ಫಲದಾನವನ್ನು ಕೊಟ್ಟು, ಕೃಚ್ಛ್ರಾಚರಣೆಯನ್ನು ಮಾಡಿ ನಪುಂಸಕಶಿಲೆಯ ಕೆಳಗಿನ ಕುಳಿಯಲ್ಲಿ ಪೀಠ ಪೂಜೆಯನ್ನು ಮಾಡಿ, ನಪುಂಸಕ ಶಿಲೆಯನ್ನು ಪ್ರಣವದಿಂದ ಪೂಜಿಸಿ, ರತ್ನಪೀಠ ಬಿಂಬಾದಿಗಳಿಗೆ ಆಧಾರವಾಗಿರುವ ನಪುಂಸಕ ಶಿಲೆಯನ್ನು ಧ್ಯಾನಿಸುತ್ತಾ, ಪ್ರಣವದಿಂದ ಇರಿಸಿ,

**ತ್ವಮೇವ ಪರಮಾ ಶಕ್ತಿಃ ತ್ವಮೇವಾಸನ ಧಾರಿಕಾ ।**
**ದೇವಾಜ್ಞಯಾ ತ್ವಯಾ ದೇವಿ ಸ್ಥಾತವ್ಯಮಿಹ ಸರ್ವದಾ ॥**
**ಸ್ಥಿತಂ ಚರಾಚರಂ ಯಸ್ಯಾಂ ರತ್ನಾನಾಂ ನಿಧಿರವ್ಯಯಃ ।**
**ಸಾ ತ್ವಂ ಬ್ರಹ್ಮ ಶಿಲಾರೂಪಾ ತಿಷ್ಠಾತ್ರ ಧರಣೀ ಸ್ಥಿರಾ ॥**

ಹೀಗೆ ಪ್ರಾರ್ಥಿಸಬೇಕು. ಮೊದಲ ಮಂತ್ರದಿಂದ ಪ್ರಾರ್ಥಿಸಿ ಎರಡನೆಯ ಮಂತ್ರದಿಂದ ಇಡಬೇಕು. ಅಲ್ಲಿ ನಪುಂಸಕ ಶಿಲೆಯ ಕುಳಿಗಳನ್ನು ಮೂಲಮಂತ್ರದಿಂದ ಪಂಚಗವ್ಯ ಹಾಗೂ ಗಂಧ ಜಲದಿಂದ ಶೋಧಿಸಬೇಕು.

* * * *

# ರತ್ನನ್ಯಾಸಃ

ದ್ರವ್ಯಗಳ ಸಂಖ್ಯೆ ಆವರಣ ಕ್ರಮದಿಂದ ಕುಳಿಗಳನ್ನು ಮಧ್ಯದಲ್ಲಿ ಇನ್ನೊಂದು ಕುಳಿಯನ್ನು ಮಾಡಿ ಹೋಮ ಸಿದ್ಧವಾದ ಸಂಪಾತವನ್ನು ಕುಳಿಯಲ್ಲಿ ಸೇರಿಸಿ ದ್ರವ್ಯಗಳನ್ನಿರಿಸಬೇಕು.

**ಶಿವನಲ್ಲಿ** – ರತ್ನಧಾತು, ಬೀಜಗಳು ವೃಷ ಸಹಿತವಾದ ಅಸ್ತ್ರಗಳು, ಲೋಹಗಳು ಹೊರಗಿನಿಂದ ಒಳ ಒಳಗೆ ಇರಿಸಬೇಕು ಕ್ರಮವಾಗಿ ದ್ರವ್ಯಗಳನ್ನು ಮೊದಲು ಪಂಚಗವ್ಯದಿಂದ ಸಿಂಪಡಿಸಬೇಕು. ಎಂಟು ಸದ್ಯೋಜಾತ ಕಲೆಗಳಿಂದ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ವಜ್ರ, ಮೌಕ್ತಿಕ, ಪುಷ್ಯರಾಗ, ಇಂದ್ರನೀಲ, ಸ್ಫಟಿಕ, ವೈಡೂರ್ಯ, ಮರಕತ ನೀಲರತ್ನ ಮಧ್ಯದಲ್ಲಿ– ಸದ್ಯೋಜಾತ ಮಂತ್ರದಿಂದ ಪದ್ಮರಾಗವನ್ನಿಡಬೇಕು. ಅದರ ಒಳಗಡೆ ವಾಮದೇವ ಕಲೆಗಳಿಂದ ವಾಮದೇವ ಮಂತ್ರದಿಂದಲೂ ಮನಶ್ಶಿಲಾ, ಹರಿತಾಳ, ಸೌರಾಷ್ಟ್ರಿಕ, ವಿದ್ರುಮ, ಗೋರೋಚನ, ಪ್ರವಾಳ, ಅಂಜನ, ಮಾಕ್ಷಿಕ(ಜೇನು), ಪಾದರಸ ಪೂರ್ವಾದಿ ಎಂಟು ದಿಕ್ಕುಗಳಲ್ಲಿ, ನಡುವಿನಲ್ಲಿ ಇಡಬೇಕು. ಅದರ ಒಳಭಾಗದಲ್ಲಿ ಅಘೋರ ಕಲೆಗಳಿಂದ ಮತ್ತು ಅಘೋರ ಮಂತ್ರಗಳಿಂದ– ವ್ರೀಹಿ, ಯವ, ಗೋಧೂಮ, ಪ್ರಿಯಂಗು, ಮಾಷ, ತಿಲ, ನೀವಾರ, ನಿಷ್ಪಾವ, ಸರ್ಷಪ– ಎಂಟು ದಿಕ್ಕುಗಳಲ್ಲಿ ಮಧ್ಯೆ ಕ್ರಮವಾಗಿ ಇಡಬೇಕು. ತತ್ಪುರುಷ ಕಲೆಗಳಿಂದ ನಾಲ್ಕು ದಿಕ್ಕುಗಳಲ್ಲಿ ವೃಷ, ಪರಶು, ರುದ್ರಾಕ್ಷ ಮಾಲೆ, ತ್ರಿಶೂಲವನ್ನೂ ಮಧ್ಯೆ ತತ್ಪುರುಷ ಮಂತ್ರದಿಂದ ಚಿನ್ನದ ಕಮಲವನ್ನೂ ಇಡಬೇಕು. ವಿದಿಕ್ಕುಗಳಲ್ಲಿ ಈಶಾನ ಕಲೆಗಳಿಂದ ರಜತ, ಅಯಃತ್ರಪು, ತಾಮ್ರಗಳನ್ನೂ ಈಶಾನ ಮಂತ್ರದಿಂದ ನಡುವೆ ಚಿನ್ನವನ್ನೂ ಇರಿಸಬೇಕು. ಈ ದ್ರವ್ಯಗಳನ್ನು ಅಣಿಮಾದಿ ಅಷ್ಟೈಶ್ವರ್ಯಗಳೆಂದು ಭಾವಿಸಿ, ಸಂಪಾತ ಸವರಿದ ಕೈಯಿಂದ ರತ್ನನ್ಯಾಸ ಹೋಮದ ಮಂತ್ರದಿಂದ ಅಭಿಮರ್ಶಿಸಿ ಪ್ರಣವದಿಂದ ಪೂಜಿಸಿ, ಪೂಜಿಸಲ್ಪಟ್ಟ ನಪುಂಸಕ ಶಿಲೆಯಲ್ಲಿ ಪೀಠ ಪೂಜೆಯನ್ನು ಮಾಡಿ ಯಂತ್ರದ ಮೇಲಿರುವ ಪೀಠದಲ್ಲಿ ನಿಜಪೀಠಕ್ಕೆ ಸಂಬಂಧಿಸಿದ ಶಕ್ತಿಯನ್ನು ಸಂಕಲ್ಪಿಸಿ ಆವಾಹಿಸಿ ಶಕ್ತಿ ಸಂಪುಟಿತವಾದ ಪಂಚತತ್ತ್ವಗಳಿಂದ ಸ್ಥಾಪಿಸಿ– ಧ್ರುವಾದ್ಯೌರ್ಧ್ರುವಾ ಪೃಥಿವೀ– ಮಂತ್ರದಿಂದ ಸ್ಪರ್ಶಿಸಿ ಪೂಜಿಸಿ ಅಸ್ತ್ರ ತಾಲತ್ರಯಾದಿಗಳಿಂದ ಸಂರಕ್ಷಿಸಬೇಕು. ಹೇಳಲ್ಪಟ್ಟ ಬೀಜರತ್ನ ಲೋಹಗಳ ಅಭಾವವಾದಾಗ ಎಲ್ಲಾ ಬೀಜಸ್ಥಾನದಲ್ಲಿ ಬತ್ತವನ್ನೂ, ಎಲ್ಲಾ ರತ್ನಸ್ಥಾನದಲ್ಲಿ ಮುತ್ತನ್ನೂ, ಎಲ್ಲಾ ಧಾತುಸ್ಥಾನದಲ್ಲಿ ಹರಿತಾಳವನ್ನೂ, ಎಲ್ಲಾ ಲೋಹದ ಸ್ಥಾನದಲ್ಲಿ ಚಿನ್ನವನ್ನೂ ಇಡಬೇಕು.

**ವಿಷ್ಣುವಿನಲ್ಲಿ** – ಮೂಲದಿಂದ ಗಂಧ ಜಲ ಮಾರ್ಜನಾ ನಂತರದಲ್ಲಿ ನಪುಂಸಕ ಶಿಲೆಯಲ್ಲಿ ಕುಳಿಯನ್ನು ಮಾಡಿ ಮೂಲಾಕ್ಷರ ಹಾಗೂ ಮೂಲಮಂತ್ರದಿಂದ ಯವ, ವ್ರೀಹಿ, ನಿಷ್ಪಾವ, ಪ್ರಿಯಂಗು, ತಿಲ, ಮಾಷ, ನೀವಾರ, ಶಾಲಿ, ಸರ್ಷಪ ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ ಇಡಬೇಕು. ಅದರ ಒಳಭಾಗದಲ್ಲಿ ಪೂರ್ವಾದಿ ಈಶಾನಾಂತವಾಗಿ ಮತ್ತು ನಡುವೆ ಮೂಲಾಕ್ಷರ ಮತ್ತು ಮೂಲ ಮಂತ್ರದಿಂದ ವಜ್ರ, ಮೌಕ್ತಿಕ, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗಗಳನ್ನು ಇಡಬೇಕು. ಅದರ ಒಳಭಾಗದಲ್ಲಿ ಮೂಲಾಕ್ಷರ, ಮೂಲಮಂತ್ರದಿಂದ ಮನಶ್ಶಿಲಾ, ಹರಿತಾಳ, ಅಂಜನ, ಶ್ಯಾಮ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ ಮಧ್ಯದಲ್ಲಿ ಪಾದರಸವನ್ನಿರಿಸಬೇಕು. ಅದರ ಒಳಭಾಗದಲ್ಲಿ ದಿಕ್ಕುಗಳಲ್ಲಿ ಸುವರ್ಣ, ರಜತ, ತಾಮ್ರ, ಅಯಃ, ತ್ರಪು, ಸೀಸ, ಚಿನ್ನದಿಂದ ಮಾಡಿದ ಕೂರ್ಮ (ಆಮೆ) ಶಂಖವನ್ನೂ ಇರಿಸಿ ಮಧ್ಯದಲ್ಲಿ ಚಿನ್ನದ ಕಮಲವನ್ನು ಇಡಬೇಕು.

**ದುರ್ಗಿಯಲ್ಲಿ** – ದಿಕ್ಕುಗಳಲ್ಲಿ ತ್ರಿಷ್ಟುಪ್ ಮಂತ್ರದಿಂದ ನಡುವೆ ಮೂಲ ಮಂತ್ರದಿಂದ ನ್ಯಾಸ ಮಾಡಬೇಕು. ಯವ, ವ್ರೀಹಿ, ನಿಷ್ಪಾವ, ಪ್ರಿಯಂಗು, ತಿಲ, ಮಾಷ, ನೀವಾರ, ಶಾಲಿ (ಸಣ್ಣಕ್ಕಿ ಭತ್ತ), ಸರ್ಷಪಗಳನ್ನು ದಿಕ್ಕು, ಮಧ್ಯದಲ್ಲಿರಿಸಬೇಕು. ಅದರ ಒಳಸುತ್ತಿನಲ್ಲಿ– ವಜ್ರ, ಮೌಕ್ತಿಕ, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗಗಳನ್ನು ಕ್ರಮವಾಗಿ ದಿಕ್ಕುಗಳಲ್ಲಿ ಮಧ್ಯದಲ್ಲಿ ಇಡಬೇಕು. ಅದರ ಒಳಸುತ್ತಿನಲ್ಲಿ ದಿಕ್ಕುಗಳಲ್ಲಿ– ಪುಲಕ, ವಿದ್ರುಮ, ಅಂಜನ, ಶ್ಯಾಮ, ಸೀಸ, ಮನಃಶಿಲಾ, ಹರಿತಾಳ, ಗೈರಿಕ ಮಧ್ಯದಲ್ಲಿ ಪಾದರಸ ಇಡಬೇಕು. ಅದರ ಒಳಗೆ ದಿಕ್ಕುಗಳಲ್ಲಿ ಸುವರ್ಣ, ರಜತ, ತಾಮ್ರ, ಕಬ್ಬಿಣ, ತ್ರಪು, ಸೀಸ, ಗರುಡಶಿಲೆ, ಆರಕೂಟ, ಮಧ್ಯದಲ್ಲಿ ಶಂಖ, ಚಕ್ರ, ಇಷು, ಚಾಪ, ಅಸಿ, ಶೂಲ, ಪಾಶ ದಂಡವನ್ನಿರಿಸಬೇಕು.

**ಗಣಪತಿಯಲ್ಲಿ** – ಎಲ್ಲಾ ದ್ರವ್ಯಗಳನ್ನು ಕ್ರಮವಾಗಿ ಪ್ರಣವದಿಂದ ತೆಗೆದುಕೊಂಡು ಮೂಲಮಂತ್ರದಿಂದ ಇಡಬೇಕು. ಅಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ಮಧ್ಯದಲ್ಲಿ– ವಜ್ರ, ಮೌಕ್ತಿಕ, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗವನ್ನಿರಿಸಬೇಕು. ಅದರ ಒಳಗಡೆ ಯವ, ವ್ರೀಹಿ, ನಿಷ್ಪಾವ, ಪ್ರಿಯಂಗು, ಶ್ಯಾಮಾಕ, ಮಾಷ, ನೀವಾರ, ಶಾಲಿ, ಸರ್ಷಪ ಇವುಗಳನ್ನಿಡಬೇಕು. ಅದರ ಒಳಗಡೆ ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ– ಮನಶ್ಶಿಲಾ, ಹರಿತಾಳ, ಅಂಜನ, ಶ್ಯಾಮ, ಸೀಸ, ಸೌರಾಷ್ಟ್ರಿ, ಗೋರೋಚನ, ಗೈರಿಕ, ಪಾದರಸ– ಇವುಗಳನ್ನಿಡಬೇಕು. ಅದರ ಒಳಗಡೆಯಲ್ಲಿ ಹಿಂದೆ ಹೇಳಿದ ಪ್ರಣವ ಮೂಲಮಂತ್ರಗಳಿಂದ ದಿಕ್ಕುಗಳಲ್ಲಿ ಸುವರ್ಣ, ರಜತ, ತಾಮ್ರ, ಅಯಃತ್ರಪು (ತವರ), ಆರಕೂಟ (ಹಿತ್ತಾಳೆ) ಪಿತ್ತಲ, ಕಾಂಸ್ಯ, ಮಧ್ಯದಲ್ಲಿ ಚಿನ್ನಗಳಿಂದ ಸಿದ್ಧಗೊಳಿಸಿದ ಸ್ವದಂತ, ಕೂರ್ಮ, ಮೂಷಿಕ, ಪದ್ಮಗಳನ್ನಿರಿಸಬೇಕು.

**ಶಾಸ್ತಾರನಲ್ಲಿ** – ಮೂಲಮಂತ್ರದಿಂದ ಬೀಜ ರತ್ನಧಾತು ಲೋಹಗಳನ್ನು ಇಡಬೇಕು. ಯವ, ವ್ರೀಹಿ, ನಿಷ್ಪಾವ, ಪ್ರಿಯಂಗು, ತಿಲ, ಮಾಷ, ನೀವಾರ, ವೈಣವ (ಬಿದರಕ್ಕಿ)– ಎಂಟು ದಿಕ್ಕುಗಳಲ್ಲಿ, ಮಧ್ಯದಲ್ಲಿ ಈ ಎಲ್ಲಾ ಬೀಜಗಳನ್ನೂ ಇಡಬೇಕು. ಅದರ ಒಳಗಡೆ ದಿಕ್ಕು ಹಾಗೂ ಮಧ್ಯದಲ್ಲಿ– ವಜ್ರ, ಮುತ್ತು, ವೈಡೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಚಂದ್ರಕಾಂತ, ಮಹಾನೀಲ, ಪದ್ಮರಾಗ– ಇವುಗಳನ್ನಿಡಬೇಕು. ಅದರ ಒಳಭಾಗದಲ್ಲಿ, ಮಧ್ಯದಲ್ಲಿಯೂ ಪುಲಕ, ಮಿದ್ರುವ, ಅಂಜನ, ಶ್ಯಾಮ, ಸೀಸ, ಮನಃಶಿಲಾ, ಹರಿತಾಲ, ಗೈರಿಕ, ಪಾದರಸಗಳನ್ನಿಡಬೇಕು. ಅದರ ಒಳಗಡೆ ದಿಕ್ಕಗಳಲ್ಲಿ ಮತ್ತು ಮಧ್ಯದಲ್ಲಿ– ಸುವರ್ಣ, ರಜತ, ತಾಮ್ರ, ಅಯಃತ್ರಪು, ಸೀಸ, ಆರಕೂಟ, ಕಾಂಸ್ಯ, ಸ್ವರ್ಣಗಳನ್ನಿಡಬೇಕು.

**ಶಂಕರನಾರಾಯಣನಲ್ಲಿ** – ರತ್ನಗಳನ್ನು ಮಾತ್ರ ನ್ಯಾಸ ಮಾಡಬೇಕು. ತಾರ(ಓಂ)ದಿಂದ ದಿಕ್ಕುಗಳಲ್ಲಿ ಇಂದ್ರ, ನೀಲ, ಮಾಣಿಕ್ಯ, ಗರುಡಶಿಲಾ, ವೈಡೂರ್ಯ, ಮೌಕ್ತಿಕ, ವಿದ್ರುಮ, ವಜ್ರ, ಪುಷ್ಯರಾಗವನ್ನಿರಿಸಿ, ಮಧ್ಯದಲ್ಲಿ ಸುವರ್ಣವನ್ನಿರಿಸಬೇಕು.

**ಸ್ಕಂದನಲ್ಲಿ** – ರತ್ನಧಾತು, ಲೋಹಬೀಜ ಅಸ್ತ್ರಗಳನ್ನು ಮೂಲಮಂತ್ರದಿಂದ ಒಳಗೊಳಗಿನ ಕ್ರಮದಿಂದ ನ್ಯಾಸ ಮಾಡಬೇಕು. ಪೂರ್ವಾದಿ ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ ಕ್ರಮವಾಗಿ– ವಜ್ರ, ವೈಡೂರ್ಯ ಇಂದ್ರ, ನೀಲ, ಶಂಖ, ಸ್ಫಟಿಕ, ಪುಷ್ಯರಾಗ, ಮೌಕ್ತಿಕ, ವಿದ್ರುಮ, ಪದ್ಮರಾಗಗಳನ್ನಿಡಬೇಕು. ಅದರ ಒಳಗಡೆ ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ ಮನಃಶಿಲಾ, ಹರಿತಾಳ, ಅಂಜನ, ಶ್ಯಾಮ, ಸೌರಾಷ್ಟ್ರಿ, ಗೋರೋಚನ, ಮಾಕ್ಷಿಕ, (ಜೇನು) ಗೈರಿಕ, ಪಾದರಸಗಳನ್ನು ಇಡಬೇಕು. ಅದರ ಒಳಸುತ್ತಿನಲ್ಲಿ ದಿಕ್ಕುಗಳಲ್ಲಿ ಸ್ವರ್ಣ, ರಜತ, ತಾಮ್ರ, ಪಿತ್ತಲ, ತ್ರಪು, ಸೀಸ, ಅಯಃ, ಕಾಂಸ್ಯ– ಮಧ್ಯದಲ್ಲಿ ಸ್ವರ್ಣಾದಿ ಎಂಟು ಲೋಹಗಳು ಹೀಗೆ ಇಡಬೇಕು. ಪುನಃ ಅದರ ಒಳಗೆ ಎಂಟು ದಿಕ್ಕುಗಳಲ್ಲಿ ಯವ, ಗೋಧೂಮ, ಮಾಷ, ತಿಲ, ಮುದ್ಗ, ಪ್ರಿಯಂಗು, ಸರ್ಷಪ, ಶಾಲಿ ಮಧ್ಯದಲ್ಲಿ ಯವಾದಿ ಎಂಟು ಬೀಜಗಳನ್ನಿಡಬೇಕು. ಅದರ ಒಳಭಾಗದಲ್ಲಿ ಚಿನ್ನದಿಂದ ಸಿದ್ಧಗೊಳಿಸಿದ ಪದ್ಮ, ಗಜ, ಮಯೂರ, ಶಕ್ತಿ, ವಜ್ರ, ಕುಕ್ಕುಟ (ಕೋಳಿ)– ಈ ರೀತಿಯಾಗಿ ಇಡಬೇಕು.

ಹೀಗೆ ಎಲ್ಲಾ ದೇವತೆಗಳಲ್ಲೂ ಅಣಿಮಾದಿ ಅಷ್ಟೈಶ್ವರ್ಯ ರೂಪವಾದ ದ್ರವ್ಯ ಸಮೂಹವನ್ನು ಭಾವಿಸಿ ಸಂಪಾತಲಿಪ್ತವಾದ ಕೈಯಿಂದ ಆಯಾಯ ರತ್ನ ಹೋಮದ ಮಂತ್ರಗಳಿಂದ ಮುಟ್ಟಿಕೊಂಡು ಜಪಿಸಿ, ಪ್ರಣವದಿಂದ ಪೂಜಿಸಿ, ಈ ರೀತಿಯಾಗಿರುವ ನಪುಂಸಕ ಶಿಲೆಯ ಮೇಲೆ ಪೀಠ ಮಂತ್ರಗಳನ್ನು ಹೇಳಿ, ಶಕ್ತಿಪುಟಿತವಾದ ಪಂಚತತ್ತ್ವಗಳನ್ನು ಹೇಳಿ ಪೀಠವನ್ನಿರಿಸಬೇಕು. ಪುನಃ ಆಯಾಯ ಶಕ್ತಿ ಬೀಜದಿಂದ ಹೂವನ್ನು ಸಮರ್ಪಿಸಿ ಶಕ್ತಿಯನ್ನಾವಾಹಿಸಿ ಹಿಂದಿನಂತೆ ಲಿಪಿ, ಪೀಠ ಮಂತ್ರಗಳನ್ನು ಯಥಾಶಕ್ತಿ ಬೀಜ, ತದಂಗಗಳನ್ನು ನ್ಯಾಸ ಮಾಡಿ ಧ್ರುವಾದ್ಯೌಃ ಮೊದಲಾಗಿ ಜಪಿಸಿ ಬಿಂಬ ಪ್ರತಿಷ್ಠಾಪನೆಗಾಗಿ ಪೀಠವನ್ನು ಪೂಜಿಸಿ ನಿಜ ಶಕ್ತಿ ಬೀಜಗಳಿಂದ ಪೂಜಿಸಿ, ಬಟ್ಟೆಯಿಂದ ಸುತ್ತಲ್ಪಟ್ಟ ಪೀಠವನ್ನು ಅಸ್ತ್ರ ತಾಳ ತ್ರಯಾದಿಗಳಿಂದ ರಕ್ಷಿಸಬೇಕು.

* * * *

## ವಿಷ್ಣೌ ಪರಿಹೋಮಾಃ

ವಿಷ್ಣುವಿನಲ್ಲಿ ರತ್ನನ್ಯಾಸಾನಂತರದಲ್ಲಿ ಪ್ರಾಸಾದದ ಸುತ್ತಲೂ ಎಂಟು ದಿಕ್ಕುಗಳಲ್ಲಿ ಸಿದ್ಧಗೊಳಿಸಿದ ಸ್ಥಂಡಿಲಗಳಲ್ಲಿ ವೈಷ್ಣವಾಗ್ನಿಯನ್ನು ಪ್ರತಿಷ್ಠಾಪಿಸಿ, ಕಲಶ ಪೂಜಾ ಸಹಿತವಾಗಿ ಅಗ್ನಿಮುಖವನ್ನು ಮಾಡಿ ಮೂಲಮಂತ್ರದಿಂದ ನೂರೆಂಟು ಪಲಾಶ ಸಮಿತ್ತನ್ನು ಹೋಮಿಸಬೇಕು. ಗಾಯತ್ರಿಯಿಂದ ನೂರೆಂಟರ ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಬೇಕು. ಹೀಗೆ ಪರಿಹೋಮದಿಂದ ಸಿದ್ಧವಾದ ಸಂಪಾತ ಕಲಶಗಳಿಂದ ಅಷ್ಟಾಕ್ಷರ ವರ್ಣಗಳಿಂದ ಕ್ರಮವಾಗಿ ಬೇರೊಂದು ತಾಮ್ರದ ಕುಂಭ (ಕಲಶ)ವನ್ನು ತುಂಬಿಸಿ ಅದರಲ್ಲಿ ಒಂದಾಗಿ ಸೇರಿದ ಅಗ್ನಿಯನ್ನು ಮೂಲದಿಂದ ಸಂಕಲ್ಪಿಸಿ ಆವಾಹಿಸಿ ಪೂಜಿಸಿ ಹೊಸತಾದ ಬಟ್ಟೆಯಿಂದ ಸುತ್ತಿ ಎಡಕೈಯಲ್ಲಿರುವುದನ್ನು ಬಲದ ಕೈಯಿಂದ ಮುಚ್ಚಿ ಹಿಡಿದ ಆ ಕಲಶವನ್ನು ಮಂಟಪದ ಒಳಗೆ ಕೊಂಡು ಹೋಗಿ ಒಂದೆಡೆ ಇಡಬೇಕು. ಅಲ್ಲಿ ಬಿಂಬದಲ್ಲಿ ಪೀಠವನ್ನು ಪೂಜಿಸಿ, ಮೂಲದಿಂದ ಆವಾಹಿಸಿ, ಸಕಲೀಕರಣವನ್ನು ಮಾಡಿ, ಅರ್ಘ್ಯ ಮೊದಲಾಗಿ ಕೊಟ್ಟು ಸ್ನಾನಕಾಲದಲ್ಲಿ ಪರಿಹೋಮದಲ್ಲಿ ಸಿದ್ಧವಾದ ಕಲಶದಿಂದ ಪ್ರಣವದಿಂದ ಸಿಂಪಡಿಸಬೇಕು. ಈ ಪರಿಹೋಮವನ್ನು ಶಂಕರನಾರಾಯಣನಲ್ಲಿಯೂ ಹೀಗೆಯೇ ಮಾಡಬಹುದು. ಆಮೇಲೆ ಎಲ್ಲಾ ದೇವತೆಗಳಲ್ಲಿಯೂ ಬಿಂಬವನ್ನು ನಿಜ ನಿಜ ವಿದ್ಯೇಶ ಕಲಶಗಳಿಂದ ಆಯಾಯ ವಿದ್ಯೇಶ ಮಂತ್ರಗಳಿಂದ ಸಿಂಪಡಿಸಿ, ಅಭಿಷೇಕ ಮಾಡಿಯಾಗಲೀ ಬಟ್ಟೆ ಮೊದಲಾದುವುಗಳಿಂದ ಅಲಂಕರಿಸಿ, ಉಪಹಾರಗಳಿಂದ ಪೂಜಿಸಬೇಕು. ಆಮೇಲೆ ನೈವೇದ್ಯ ಮಾಡಿ ಮಂಡಲ ಹಾಗೂ ಅಗ್ನಿಯಲ್ಲಿ ಪುಷ್ಪಾಂಜಲಿಯನ್ನು ಮಾಡಿ, ಸಂತೋಷಗೊಳಿಸಿ, ಅವುಗಳಲ್ಲಿರುವ ದೇವರನ್ನು ಸಂತಸಗೊಳಿಸಿ ತೋರಣ, ಧ್ವಜ, ದ್ವಾರಕಲಶ ಮೊದಲಾದುವಲ್ಲಿ ಇರುವ ಕುಂಡದಲ್ಲಿ ಮಂಡಲದಲ್ಲಿರುವ ಚೈತನ್ಯವನ್ನು ಬಿಂಬದಲ್ಲಿ ಉದ್ವಾಸನೆ ಮಾಡಬೇಕು. ಅನಂತರ ಕುಂಭೇಶ ನಿದ್ರಾಕಲಶಗಳಲ್ಲಿ ಪುಷ್ಪಾಂಜಲಿಯನ್ನು ಮಾಡಿ ಕುಂಭೇಶ ನಿದ್ರಾ ಕಲಶಗಳಲ್ಲಿರುವ ಪೀಠಶಕ್ತಿಯನ್ನು ಅವುಗಳಲ್ಲೇ ಉದ್ವಾಸನೆಯನ್ನು ಮಾಡಿ, ಲಯಾಂಗವನ್ನು ಮಾಡಿ, ನೀರಾಜನವನ್ನು ಮಾಡಿ ಮೂರ್ತಿಪರಿಬ್ಬರಿಂದ ಅದನ್ನು ಹಿಡಿದುಕೊಳ್ಳುವಂತೆ ಹೇಳಿ, ಉಳಿದ ಬ್ರಾಹ್ಮಣರಿಂದ ತುಪ್ಪ ಮೊದಲಾದ ಬಿಂಬದ ಸುತ್ತಲೂ ಇಟ್ಟಿರುವ ಪಾತ್ರೆಗಳನ್ನು ದ್ರವ್ಯಗಳನ್ನು

ಹಿಡಿದುಕೊಳ್ಳಲು ಹೇಳಿ. ಆಮೇಲೆ ಮಂಗಲಾಂಕುರದ, ಶಯ್ಯೆಯಲ್ಲಿ ಇರುವ ಶಕ್ತಿಯನ್ನು ಬಿಂಬದಲ್ಲಿ ವಿಲಯನಗೊಳಿಸಿ, ನೀರಾಜನೆಯನ್ನು ಮಾಡಿ. ಅರ್ಘ್ಯವನ್ನು ಕೊಟ್ಟು **'ಉತ್ತಿಷ್ಠ ಬ್ರಹ್ಮಣಸ್ಪತೇ'** ಮಂತ್ರವನ್ನು ಜಪಿಸುತ್ತಾ ಪ್ರತಿಮೆಯನ್ನು ಹಾಸಿಗೆಯಿಂದ ಮೇಲಕ್ಕೆತ್ತಿ **'ರಥೇ ತಿಷ್ಠನ್ನಯತಿ ವಾಜನಃ ಪುರೋ'** ಈ ಮಂತ್ರವನ್ನು ಜಪಿಸುತ್ತಾ ಗುರುವು ಬ್ರಾಹ್ಮಣರಿಂದ ಸಿದ್ಧಗೊಳಿಸಲ್ಪಟ್ಟ ರಥ ಮೊದಲಾದ ಯಾನದಲ್ಲಿರಿಸಿ, ಆ ಮಂಟಪದಿಂದ ಹೊರ ಹೊರಟು ಶಂಖ ಮೊದಲಾದ ಎಲ್ಲಾ ಬಗೆಯ ವಾದ್ಯಗಳಿಂದ ಕೂಡಿ **'ಕನಿಕ್ರದಜ್ಜನುಷಂ'** ಮೊದಲಾಗಿ **'ಪ್ರದಕ್ಷಿಣಧಭಿಗೃಣಂತಿ'** ಮೊದಲಾಗಿ ಎರಡು ಸೂಕ್ತಗಳನ್ನು, **'ಸ್ವಸ್ತಿ ನೋ ಮಿಮೀತಾಮಶ್ವನಾಭಗಃ'** ಈ ಸೂಕ್ತವನ್ನು ಹಾಗೆಯೇ **'ಅತೋ ದೇವಾ ಅಂವಂತು ನಃ'** ಮೊದಲಾಗಿ ಆಯಾಯ ದೇವತಾ ಸಂಬಂಧಿಯಾದ ಸೂಕ್ತಗಳನ್ನು ಜಪಿಸುತ್ತಾ ಪ್ರದಕ್ಷಿಣ ಗಮನವುಳ್ಳವನಾಗಿ ಬಿಂಬವನ್ನು ಗರ್ಭಗೃಹದೊಳಗೆ ಕೊಂಡು ಹೋಗಬೇಕು.

* * * *

## ನಿರ್ಗಮನ ಪ್ರಕಾರ

ಅಲ್ಲಿಯ ಕ್ರಮವು ಹೀಗೆ– ಮೊದಲು ನೀರಾಜನ, ಆಮೇಲೆ ಕರಕಧಾರೆ, ಪುನಃ ಅರ್ಘ್ಯವನ್ನು ಹಿಡಿದು ಬಿಂಬವನ್ನು ಮುಟ್ಟಿಕೊಂಡಿರುವ ದೇಶಿಕನು (ಆಚಾರ್ಯನು), ಆಮೇಲೆ ಬಿಂಬವು, ಆಮೇಲೆ ನಿದ್ರಾ ಕಲಶ, ಅದರ ಹಿಂದುಗಡೆ ಕುಂಭೇಶನು (ಸ್ಕಂದನಲ್ಲಿ ಅನಂತರ ಕೌಮಾರ ಕಲಶವು. ಬಿಂಬಸ್ಥಾನದಲ್ಲಿ ಕುಂಭವು) ಆಮೇಲೆ ಯಜಮಾನನು. ದ್ವಾರದಲ್ಲಿ ಆ ದೇವತೆಯ ಉಪಚಾರ ಮಂತ್ರದಿಂದ ಅರ್ಘ್ಯವನ್ನು ಕೊಟ್ಟು, (ಪಾದ ಮೊದಲಾಗಿ ದ್ವಾರಶಾಖೆಗಳನ್ನು ಮುಟ್ಟದೇನೇ, ಬಿಂಬೋದ್ಧಾರವಾದ ತಲೆಯು ಮೊದಲಾಗಿ) ಪೀಠದ ಹತ್ತಿರ ತೆಗೆದುಕೊಂಡು ಹೋಗಿ, ಪೀಠದ ಹಿಂಭಾಗದಲ್ಲಿ ಭದ್ರಪೀಠದಲ್ಲಿರಿಸಿ, ಬಿಂಬ ಹಾಗೂ ಆ ಪೀಠವನ್ನು ಕರಕಧಾರೆಯಿಂದ ಮೂರಾವರ್ತಿ ಸಿಂಪಡಿಸಬೇಕು. (ಪರಿಷೇಕಿಸಬೇಕು) ಗುರುವು ಅಲ್ಲಿ ಕುಳಿತುಕೊಂಡು ತನಗೆ ಸಕಲೀಕರಣ ಮೊದಲಾಗಿ ಆತ್ಮಾರಾಧನ ಪರ್ಯಂತವಾಗಿ ಕರ್ಮಗಳನ್ನು ಮಾಡಿ ಗುರು ಹಾಗೂ ಗಣಪತಿಯನ್ನು ಕ್ರಮದಂತೆ ಪೂಜಿಸಿ, ಸುವರ್ಣ, ಗೋ, ಭೂದಾನಾದಿಗಳನ್ನು ಮಾಡಿ ಬ್ರಾಹ್ಮಣರನ್ನು ಸಂತೋಷಗೊಳಿಸಿ ಮುಹೂರ್ತವನ್ನು ಹೇಳಿದ ಸುಲಗ್ನದಲ್ಲಿ ಮೂಲ ಪುಟಿತ ಪ್ರಣವ ತ್ರಯದಿಂದ ಪರಾವಾಹನೆಯನ್ನೂ, ಅವಸ್ಥಾವಾಹನೆಯನ್ನೂ ಮೂಲಮಂತ್ರಾವಾಹನೆಯನ್ನೂ, ಲಿಪಿನ್ಯಾಸವನ್ನೂ ತತ್ತ್ವನ್ಯಾಸವನ್ನೂ ಷಡಧ್ವನ್ಯಾಸವನ್ನೂ ಮೂಲಮಂತ್ರಕ್ಕೆ ಹೇಳಿದ ವಿಶೇಷ ನ್ಯಾಸಗಳನ್ನೂ ಮಾಡಿ ತಾರ ಉಪಚಾರ ಮೂಲಗಳಿಂದ, ಅಲಂಕಾರಗಳಿಂದಲೂ ವಿಗ್ರಹ ಪೂಜೆಯಿಂದಲೂ ಚೆನ್ನಾಗಿ ಪೂಜಿಸಲ್ಪಟ್ಟ ಪಂಚೋಪಚಾರಗಳಿಂದ ಪೂಜಿಸಲ್ಪಟ್ಟ ಬಿಂಬವನ್ನು ವಿರಾಡ್ರೂಪವನ್ನಾಗಿ ಧ್ಯಾನಿಸಿ, ಆಕಾಶಾತ್ಮಕವಾಗಿ ಧ್ಯಾನಿಸಿ ಶಕ್ತಿ ಬೀಜವಾಹನದಿಂದ ಪೂಜಿಸಲ್ಪಟ್ಟ ಪೀಠವನ್ನು ಪ್ರಕೃತಿ ಸ್ವರೂಪ ಹಾಗೂ ಪೃಥಿವೀ ರೂಪವಾಗಿ ಭಾವಿಸಿ ಆ ಎರಡನ್ನೂ ತನ್ನ ತೇಜಸ್ಸಿನಿಂದ ಪರಸ್ಪರವಾಗಿ ಸೇರಿಸಿ ನಿಂತು ಪ್ರಲಯಪರ್ಯಂತವಾಗಿ ಇರುವುದಾಗಿ ಭಾವಿಸಿ, ಸ್ವತಃ ತಾನು ಮುಂದುಗಡೆ ನಿಂತು ಅಸ್ತ್ರಮಂತ್ರದಿಂದ ಪೀಠದ ವಸ್ತ್ರವನ್ನು ತೆಗೆದು ಎರಡನ್ನೂ ನೀರಾಜನ ಮಾಡಿ ಆಯಾಯ ದೇವತೆಗಳಿಗೆ ಹೇಳೀದ ಪ್ರತಿಷ್ಠಾಮಂತ್ರಗಳನ್ನು ಜಪಿಸುತ್ತಾ ಇರಿಸಬೇಕಾದ ಸ್ಥಳದ (ಪೀಠದ) ಮೇಲ್ಭಾಗದಲ್ಲಿ ಮೂರಾವರ್ತಿ ತಿರುಗಿಸಿ, ಎರಡೂ ಕೈಗಳಿಂದ ಹಿಡಿದ ಮನು ಬಿಂಬವನ್ನು ನಿಜಪೀಠದಲ್ಲಿ ನಪುಂಸಕಶಿಲೆಯಲ್ಲಿ ಮಾಡಲ್ಪಟ್ಟ ಅಬ್ಜ(ತಾವರೆಯ) ನಾಳವನ್ನು ಹೊಂದುವಂತೆ ಇರಿಸಬೇಕು. ಮೂರಾವರ್ತಿ ಪ್ರಣವ ಉಪಚಾರ ಮೂಲಮಂತ್ರಗಳು ಪೃಥಿವಿಯಿಂದ ಕೊನೆಗೊಳ್ಳುವ ಎಲ್ಲಾ ತತ್ತ್ವಮಂತ್ರಗಳು ಪ್ರತಿಷ್ಠಾಮಂತ್ರ (ಯಜ್ಞಾಯಜ್ಞಾದಿ) ಮೂಲ ಪುಟಿತ ಪಂಚತತ್ತ್ವಗಳು ಮೂಲಮಂತ್ರ, ಪ್ರಣವ, ಮೂರಾವರ್ತಿ ಎಂದು ಕ್ರಮವು. ಮೂಲಮಂತ್ರದ ಪ್ರಣವಾದಿ ಬೀಜಗಳು. ಆಮೇಲೆ ಸೃಷ್ಟಿಕ್ರಮದಿಂದ ನಿಜ ನಿಜ ಪಂಚತತ್ತ್ವಗಳು, ಆಮೇಲೆ ಚತುರ್ಥ್ಯೆಕ ವಚನಾಂತವಾದ ಆಯಾಯ ನಿಜಮೂರ್ತಿಗಳು ಹೇಳಲ್ಪಡಬೇಕು.

## ಅವಸ್ಥಾವಾಹನ

**ಓಂ ಹೌಂ ನಮಃ ಶಿವಾಯ ಶಾಂತ್ಯತೀತಾತ್ಮನೇ ಈಶಾನಾಯ ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ನಮಃ ಶಿವಾಯ ನಮಃ। ಓಂ ಹ್ಯೈಂ ನಮಃ ಶಿವಾಯ ಶಾಂತ್ಯಾತ್ಮನೇ ತತ್ಪುರುಷಾಯ ಶಕ್ತ್ಯಾತ್ಮನೇ ತುರೀಯ ಸ್ವರೂಪಿಣೇ ನಮಃ ಶಿವಾಯ ನಮಃ । ಓಂ ಹ್ರೂಂ ನಮಃ ಶಿವಾಯ ವಿದ್ಯಾತ್ಮನೇ ಅಘೋರಾಯ ನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ನಮಃ ಶಿವಾಯ ನಮಃ । ಓಂ ಹ್ವೀಂ ನಮಃ ಶಿವಾಯ ಪ್ರತಿಷ್ಠಾತ್ಮನೇ ವಾಮದೇವಾಯ ಬಿಂದ್ವಾತ್ಮನೇ ಸ್ವಪ್ನ ಸ್ವರೂಪಿಣೆ ನಮಃ ಶಿವಾಯ ನಮಃ। ಓಂ ಹ್ಲಾಂ ನಮಃ ಶಿವಾಯ ನಿವೃತ್ತ್ಯಾತ್ಮನೇ ಸದ್ಯೋಜಾತಾಯ ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ನಮಃ ಶಿವಾಯ ನಮಃ ॥** ಇದು ಶಿವನಲ್ಲಿ.

**ಓಂ ಷೋಂ ನಮಃ ಪರಾಯ ಪರಮೇಷ್ಠ್ಯಾತ್ಮನೇ ವಾಸುದೇವಾಯ ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ನಮೋ ನಾರಾಯಣಾಯ ನಮಃ । ಓಂ ಯಂ ನಮಃ ಪರಾಯ ಪುರುಷಾತ್ಮನೇ ಸಂಕರ್ಷಣಾಯ ಶಕ್ತ್ಯಾತ್ಮನೇ ತುರೀಯಾತೀತ ಸ್ವರೂಪಿಣೆ**

ನಮೋ ನಾರಾಯಣಾಯ ನಮಃ । ಓಂ ರಾಂ ನಮಃ ಪರಾಯ ವಿಶ್ವಾತ್ಮನೇ ಪ್ರದ್ಯುಮ್ನಾಯ ನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ನಮೋ ನಾರಾಯಣಾಯ ನಮಃ । ಓಂ ವಂ ನಮಃ ಪರಾಯ ನಿವೃತ್ತ್ಯಾತ್ಮನೇ ಅನಿರುದ್ಧಾಯ ಬಿಂದ್ವಾತ್ಮನೇ ಸ್ವಪ್ನ ಸ್ವರೂಪಿಣೇ ನಮೋ ನಾರಾಯಣಾಯ ನಮಃ । ಓಂ ಲಾಂ ನಮಃ ಪರಾಯ ಸರ್ವಾತ್ಮನೇ ನಾರಾಯಣಾಯ ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ನಮೋ ನಾರಾಯಣಾಯ ನಮಃ ॥ ಇದು ವಿಷ್ಣುವಿನಲ್ಲಿ.

ಓಂ ಹ್ಯಾಂ ಹೋಂ ಷೋಂ ನಮಃ ಪರಾಯ ಈಶಾನಾಯ ಪರಮೇಷ್ಠ್ಯಾತ್ಮನೇ (ಈಶಾನಾಯ ವಾಸುದೇವಾತ್ಮನೇ) ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ಶಿವನಾರಾಯಣಾಯ ನಮೋ ನಮಃ । ಓಂ ಹಂ ಹೇಂ ಯಂ ನಮಃ ಪರಾಯ ತತ್ಪುರುಷಾಯ ಪುರುಷಾತ್ಮನೇ (ತತ್ಪುರುಷಾಯ ಸಂಕರ್ಷಣಾತ್ಮನೇ) ಶಕ್ತ್ಯಾತ್ಮನೇ ತುರೀಯಾತೀತ ಸ್ವರೂಪಿಣೇ ಶಿವನಾರಾಯಣಾಯ ನಮೋ ನಮಃ । ಓಂ ಹ್ಯಾಂ ರಾಂ ನಮಃ ಪರಾಯ ಅಘೋರಾಯ ವಿಶ್ವಾತ್ಮನೇ (ಅಘೋರಾಯ ಪ್ರದ್ಯುಮ್ನಾಯತ್ಮನೇ) ನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ಶಿವನಾರಾಯಣಾಯ ನಮೋ ನಮಃ । ಓಂ ಹ್ಯಾಂ ಹಿಂ ವಂ ನಮಃ ಪರಾಯ ವಾಮದೇವಾಯ ನಿವೃತ್ತ್ಯಾತ್ಮನೇ (ವಾಮದೇವಾಯಾನಿರುದ್ಧಾತ್ಮನೇ) ಬಿಂದ್ವಾತ್ಮನೇ ಸ್ವಪ್ನ ಸ್ವರೂಪಿಣೇ ಶಿವನಾರಾಯಣಾಯ ನಮೋ ನಮಃ । ಓಂ ಹ್ಯಾಂ ಹಂ ಲಾಂ ನಮಃ ಪರಾಯ ಸದ್ಯೋಜಾತಾಯ ಸರ್ವಾತ್ಮನೇ (ಸದ್ಯೋಜಾತಾಯ ನಾರಾಯಣಾತ್ಮನೇ) ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ಶಿವನಾರಾಯಾಣಾಯ ನಮೋ ನಮಃ ॥ ಇದು ಶಂಕರನಾರಾಯಣನಲ್ಲಿ.

ಓಂ ಹ್ರೀಂ ದುಂ ಷೋಂ ನಮಃ ಪರಾಯೈ ಶ್ರೇಷ್ಠಾ ಶಕ್ತ್ಯಾತ್ಮನೇ ಸೇಂ ದುರ್ಗಾಯೈ ಶಾಂತಾತ್ಮನ್ಯೈ ತುರೀಯಾತೀತ ಸ್ವರೂಪಿಣ್ಯೈ ದುರ್ಗಾಯೈ ನಮೋ ನಮಃ । ಓಂ ಹ್ರೀಂ ದುಂ ಯೌಂ ನಮಃ ಪರಾಯೈ ಪೌರುಷೀ ಶಕ್ತ್ಯಾತ್ಮನ್ಯೈ ದಂ ಆರ್ಯಾಯೈ ಶಕ್ತ್ಯಾತ್ಮನ್ಯೈ ತುರೀಯ ಸ್ವರೂಪಿಣ್ಯೈ ದುರ್ಗಾಯೈ ನಮೋ ನಮಃ । ಓಂ ಹ್ರೀಂ ದುಂ ರೌಂ ನಮಃ ಪರಾಯೈ ವಿಶ್ವರೂಪಾ ಶಕ್ತ್ಯಾತ್ಮನ್ಯೈ ವೇಂ ದೇವ್ಯೈ ನಾದಾತ್ಮನ್ಯೈ ಸುಷುಪ್ತಿಸ್ವರೂಪಿಣ್ಯೈ ದುರ್ಗಾಯೈ ನಮೋ ನಮಃ । ಓಂ ಹ್ರೀಂ ದುಂ ವೌಂ ನಮಃ ಪರಾಯೈ ನಿವೃತ್ತಿನೀ ಶಕ್ತ್ಯಾತ್ಮನ್ಯೈ ತಂ ಭಗವತ್ಯೈ ಬಿಂದ್ವಾತ್ಮನ್ಯೈ ಸ್ವಪ್ನಸ್ವರೂಪಿಣ್ಯೈ ದುರ್ಗಾಯೈ ನಮೋ ನಮಃ । ಓಂ ಹ್ರೀಂ ದುಂ ಲೌಂ ನಮಃ ಪರಾಯೈ ಸರ್ವರೂಪಾ ಶಕ್ತ್ಯಾತ್ಮನ್ಯೈ ಜಾಂ ಕನ್ಯಕಾಯೈ ಬೀಜಾತ್ಮನ್ಯೈ ಜಾಗ್ರತ್ಸ್ವರೂಪಿಣ್ಯೈ ದುರ್ಗಾಯೈ ನಮೋ ನಮಃ ॥ ಹೀಗೆ ದುರ್ಗಿಯಲ್ಲಿ.

ಓಂ ನಂ ನಮಃ ಪರಾಯ ಶಾಂತ್ಯತೀತಾತ್ಮನೇ ಷಷ್ಠಾಯ (ಷಷ್ಠಿನೇ) ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ವಚದ್ಭುವೇ ನಮೋ ನಮಃ । ಓಂ ವೇಂ ನಮಃ ಪರಾಯ ಶಾಂತ್ಯಾತ್ಮನೇ ವಿಶಾಖಾಯ ಶಕ್ತ್ಯಾತ್ಮನೇ ತುರೀಯ ಸ್ವರೂಪಿಣೇ ವಚದ್ಭುವೇ ನಮಃ । ಓಂ ದ್ಭುಂ ನಮಃ ಪರಾಯ ವಿದ್ಯಾತ್ಮನೇ ಇಂದ್ರಾಯ ನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ವಚದ್ಭುವೇ ನಮೋ ನಮಃ । ಓಂ ಚಂ ನಮಃ ಪರಾಯ ಪ್ರತಿಷ್ಠಾತ್ಮನೇ ಸ್ಕಂದಾಯ ಬಿಂದ್ವಾತ್ಮನೇ ಸ್ವಪ್ನಸ್ವರೂಪಿಣೇ ವಚದ್ಭುವೇ ನಮೋ ನಮಃ । ಓಂ ವಂ ನಮಃ ಪರಾಯ ನಿವೃತ್ತ್ಯಾತ್ಮನೇ ಸನತ್ಕುಮಾರಾಯ ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ವಚದ್ಭುವೇ ನಮೋ ನಮಃ ॥ ಹೀಗೆ ಸ್ಕಂದನಲ್ಲಿ.

ಓಂ ಗಂ ಗೋಂ ನಮಃ ಪರಾಯ ಶಾಂತ್ಯತೀತಾತ್ಮನೇ ವರದಾಯ ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ಗಣಪತಯೇ ನಮೋ ನಮಃ । ಓಂ ಗಂ ಗೇಂ ನಮಃ ಪರಾಯ ಶಾಂತ್ಯಾತ್ಮನೇ ಶೂರಾಯ ಶಕ್ತ್ಯಾತ್ಮನೇ ತುರೀಯ ಸ್ವರೂಪಿಣೇ ಗಣಪತಯೇ ನಮೋ ನಮಃ । ಓಂ ಗಂ ಗುಂ ನಮಃ ಪರಾಯ ವಿದ್ಯಾತ್ಮನೇ ವೀರಾಯ ನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ಗಣಪತಯೇ ನಮೋ ನಮಃ । ಓಂ ಗಂ ಗಿಂ ನಮಃ ಪರಾಯ ಪ್ರತಿಷ್ಠಾತ್ಮನೇ ವಿನಾಯಕಾಯ ಬಿಂದ್ವಾತ್ಮನೇ ಸ್ವಪ್ನ ಸ್ವರೂಪಿಣೇ ಗಣಪತಯೇ ನಮೋ ನಮಃ । ಓಂ ಗಂ ಗಂ ನಮಃ ಪರಾಯ ನಿವೃತ್ತ್ಯಾತ್ಮನೇ ವಿಘ್ನಾಯ ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ಗಣಪತಯೇ ನಮೋ ನಮಃ ॥ ಇದು ಗಣಪತಿಯಲ್ಲಿ.

ಓಂ ಘ್ರೂಂ ಘ್ರೋಂ ನಮಃ ಪರಾಯ ಶಾಂತ್ಯತೀತ್ಮಾನೇ ದೀಪ್ತ್ರೇ ಶಾಂತಾತ್ಮನೇ ತುರೀಯಾತೀತ ಸ್ವರೂಪಿಣೇ ನಮಃ ಪರಾಯ ಗೋಪ್ತ್ರೇ ನಮಃ । ಓಂ ಘ್ರೂಂ ಘ್ರೇಂ ನಮಃ ಪರಾಯ ಶಾಂತ್ಯಾತ್ಮನೇ ಪ್ರಭವೇ ಶಕ್ತ್ಯಾತ್ಮನೇ ತುರೀಯ ಸ್ವರೂಪಿಣೇ ನಮಃ ಪರಾಯ ಗೋಪ್ತ್ರೇ ನಮಃ । ಓಂ ಘ್ರೂಂ ಘ್ರುಂ ನಮಃ ಪರಾಯ ವಿದ್ಯಾತ್ಮನೇ ಗೋಪ್ತ್ರೇನಾದಾತ್ಮನೇ ಸುಷುಪ್ತಿ ಸ್ವರೂಪಿಣೇ ನಮಃ ಪರಾಯ ಗೋಪ್ತ್ರೇ ನಮಃ । ಓಂ ಘ್ರೂಂ ಘ್ರಿಂ ನಮಃ ಪರಾಯ ಪ್ರತಿಷ್ಠಾತ್ಮನೇ ಮಹಾಶಾಸ್ತ್ರೇ ಬಿಂದ್ವಾತ್ಮನೇ ಸ್ವಪ್ನ ಸ್ವರೂಪಿಣೇ ನಮಃ ಪರಾಯ ಗೋಪ್ತ್ರೇ ನಮಃ । ಓಂ ಘ್ರೂಂ ಘ್ರುಂ ನಮಃ ಪರಾಯ ನಿವೃತ್ತ್ಯಾತ್ಮನೇ ರೇವಂತಾಯ ಬೀಜಾತ್ಮನೇ ಜಾಗ್ರತ್ಸ್ವರೂಪಿಣೇ ನಮಃ ಪರಾಯ ಗೋಪ್ತ್ರೇ ನಮಃ ॥ ಇದು ಶಾಸ್ತಾರನಲ್ಲಿ.

# ಪ್ರತಿಷ್ಠಾಮಂತ್ರಾಃ

**ಶಂಕರನಾರಾಯಣನಲ್ಲಿ–**

**ಯಜ್ಞಾಯಜ್ಞಾ ವೋ ಅಗ್ನಯೇ ಗಿರಾಗಿರಾಚ ದಕ್ಷ ಸೇ । ಪ್ರಪ್ರವಯಮಮೃತಂ**

**ಜಾತವೇದಸಂ ಪ್ರಿಯಂ ಮಿತ್ರಂ ನ ಶಂಸಿತಂ ॥**

ಮೊದಲಾಗಿ ಪುರುಷ ಸೂಕ್ತವೂ ಪ್ರತಿಷ್ಠಾಮಂತ್ರವು. **ವಿಷ್ಣುವಿನಲ್ಲಿ** – ಪುರುಷಸೂಕ್ತವು ತ್ರೈಲೋಕ್ಯ ಮಂತ್ರವು– **ತ್ರೈಲೋಕ್ಯ ವಿಕ್ರಾಂತಾಯ ತ್ರಿವಿಕ್ರಮಾಯ ವಿಷ್ಣವೇ ನಮಃ** । ಗಾಯತ್ರೀ ದ್ವಾದಶಾಕ್ಷರ ಅಷ್ಟಾಕ್ಷರ ಷಡಕ್ಷರ (ಓಂ ನಮೋ ವಿಷ್ಣವೇ) ಮೂಲ ಪುಟಿತ ಪಂಚತತ್ತ್ವಾದಿ । **ಷಣ್ಮುಖನಲ್ಲಿ** – ಓಂ ನಮಃ ಷಣ್ಮುಖಾಯ ಧ್ರುವಾದ್ಯೌಃ * * ಧಾರಯತಾಂ ಧ್ರುವಂ । ದುರ್ಗಿಯಲ್ಲಿ– ಪಂಚದುರ್ಗಾ ಮಂತ್ರಾಃ । **ಗಣಪತಿಯಲ್ಲಿ** – 'ಗಂ' ಎಂದು ನಿಜ ಬೀಜ– ಗಣಾನಾಂತ್ವಾಂ * * ಸಾದನಂ । **ಶಿವನಲ್ಲಿ** – ಪಂಚಬ್ರಹ್ಮ ಮಂತ್ರಗಳು. **ಶಾಸ್ತಾರನಲ್ಲಿ** – ಗೋಪ್ತಾರ ಮೊದಲಾದವುಗಳು. ತಾರೋಪಚಾರ ಮೂಲ, ಎಲ್ಲಾ ತತ್ತ್ವಮಂತ್ರಗಳು ಅಣುರುದ್ಧ (ಸಂಪುಟಿತ) ಶರತತ್ತ್ವ ಮೂಲ ಧ್ರುವ ಮಂತ್ರದಿಂದ ಕೊನೆಯಾಗಿ ಎಲ್ಲಾ ದೇವತೆಗಳಲ್ಲಿಯೂ ಹೊಂದಿಸಬೇಕು.

**ಶಿವನಲ್ಲಿ** – ಹೇಳಲ್ಪಟ್ಟ ರೀತಿಯಲ್ಲಿ ಸಕಲೀಕರಣದೊಂದಿಗೆ ಹೇಳಿದ ಕ್ರಮ (ನಿಯಮ) ದಂತೆ ಪೂಜಿಸಲ್ಪಟ್ಟ ಶಿವಲಿಂಗವನ್ನು ಸದ್ಯೋಜಾತ ಮಂತ್ರದಿಂದ ತೆಗೆದುಕೊಂಡು ವಾಮದೇವ ಮಂತ್ರದಿಂದ ನಪುಂಸಕ ಶಿಲೆಯಲ್ಲಿರಿಸಿ, ಅಘೋರ ಮಂತ್ರದಿಂದ ಸ್ಥಿರವಾಗಿಸಿ, ನಿರೋಧ ಮುದ್ರೆಯನ್ನು ಪ್ರದರ್ಶಿಸಿ, ತತ್ಪುರುಷ ಮಂತ್ರದಿಂದ ನಮಸ್ಕರಿಸಿ ಸಾನ್ನಿಧ್ಯವನ್ನು ಪ್ರಾರ್ಥಿಸಿ, ಸಾನ್ನಿಧ್ಯ ಮುದ್ರೆಯನ್ನು ತೋರಿಸಿ, ಈಶಾನ ಮಂತ್ರದಿಂದ ಪುಷ್ಪಾಂಜಲಿಯನ್ನು ಮಾಡಬೇಕು. ಇದು ವಿಶೇಷವು. **(ಓಂ ತ್ರೈಲೋಕ್ಯ * * ನಮಃ– ಇದು ತ್ರೈಲೋಕ್ಯ ಮಂತ್ರವು) ಗೋಪ್ತಾರಂ ವಿಶ್ವ ಗೋಪ್ತಾರಂ ಶಾಸ್ತಾರಂ ಶಾಂಭವಂ ಪ್ರಭುಂ । ಅಮೇಯಮದ್ಭುತಂ ಶಾಂತಂ ಸ್ಥಾಪಯಾಮ್ಯಹಮಚ್ಯುತಂ ॥** ಇದು ಗೋಪ್ತೃ ಮಂತ್ರವು. ಆಮೇಲೆ ಬಿಂಬದ ಮೂಗಿನ ತುದಿಯಲ್ಲಿ ಪೀಠದ ಇದುರಿನ ಮೂಲೆಗಳೆರಡರಲ್ಲಿ ಇಡಲ್ಪಟ್ಟ ಸೂತ್ರವು ಲಂಬ ಸೂತ್ರವು. ಅದಕ್ಕೆ ಸರಿಯಾಗಿ ಬಿಂಬವು ಹೇಗೆ ಸರಿಯಾಗಿ ನಿಲ್ಲುವುದೋ ಹಾಗೆ ತಿರುಗುವುದನ್ನು ಹೋಗಲಾಡಿಸಿ (ಸ್ಥಿರೀಕರಿಸಿ) ಕೈಗಳೆರಡರಿಂದ ಬಿಂಬದ ಪಾದವನ್ನೂ ಪೀಠವನ್ನೂ ಮುಟ್ಟಿಕೊಂಡು **'ಧ್ರುವಾದ್ಯೌರ್ಧ್ರುವಾ'**– ಮಂತ್ರವನ್ನು ಜಪಿಸುವವನಾಗಿ ಅಲುಗಾಡದಂತೆ ಸ್ಥಿರವಾಗಿಸಿ ಎದುರಿನಲ್ಲಿ ನಿಂತು **'ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ'** ಈ ಮಂತ್ರವನ್ನು ಹೇಳಬೇಕು. ಶಿವನಲ್ಲಿಯಾದರೋ ಬ್ರಹ್ಮಶಿಲೆಯಲ್ಲಿ ಲಿಂಗವನ್ನು ಸ್ಥಾಪಿಸಿ ಅಲ್ಲಿ ಓಂಕಾರವು, ಭುವನೇಶ್ವರಿ ಪಂಚತತ್ತ್ವಗಳನ್ನು ಆರಂಭದಲ್ಲಿ, ನಡುವೆ ಔಮೇಯಾಷ್ಟಕ್ಷರವು. ಕೊನೆಯಲ್ಲಿ ವಾಮದೇವ ಮಂತ್ರವು. ಧ್ರುವಾಧ್ಯೌಃ– ಈ ಮಂತ್ರವು, ಓಂಕಾರವು– ಇವುಗಳಿಂದ ಪೀಠವನ್ನು ಸ್ಥಾಪಿಸಬೇಕು. ಆಮೇಲೆ ತನ್ನ ಹೃದಯ ಪದ್ಮದಿಂದ ಸದ್ಯೋಜಾತ ಮಂತ್ರದಿಂದ ಶಿವಮಯವಾದ ತೇಜಸ್ಸನ್ನು ತೆಗೆದುಕೊಂಡು ವಾಮದೇವ ಮಂತ್ರದಿಂದ ಸ್ಥಾಪಿಸಲ್ಪಟ್ಟ ಲಿಂಗದಲ್ಲಿ ಪುಷ್ಪಾಂಜಲಿಯನ್ನು ಮಾಡುವವನಾಗಿ ಸೇರಿಸಿ (ಜೋಡಿಸಿ)ಅಘೋರ ಮಂತ್ರದಿಂದ ನಿರೋಧ ಮುದ್ರೆಯನ್ನು ಮಾಡುವವನಾಗಿ ತಡೆಯುವಿಕೆ, ಸ್ಥಿರೀಕರಣವನ್ನು ಮಾಡಿ ತತ್ಪುರುಷ ಮಂತ್ರದಿಂದ ಸಾನ್ನಿಧ್ಯ ಮುದ್ರೆಯಿಂದ ಸನ್ನಿಧಿಯನ್ನು ಹೊಂದಿಸಿ, ಈಶಾನ ಮಂತ್ರದಿಂದ ಪೂಜಿಸಬೇಕು. ಆಮೇಲೆ ಎಲ್ಲಾ ದೇವತೆಗಳಲ್ಲಿ ಪ್ರಕೃತಿ ಸ್ವರೂಪದ ಪೀಠವನ್ನು ಆಯಾಯ ನಿಜ ಶಕ್ತಿ ಬೀಜದಿಂದ ಪೂಜಿಸಿ, ಪುರುಷ ಸ್ವರೂಪವಾದ ಪ್ರತಿಮೆಯನ್ನು ಮೂಲಮಂತ್ರದಿಂದ ಪೂಜಿಸಿ ತೇಜಸ್ಸಿನ ಅನ್ಯೋನ್ಯ (ಪರಸ್ಪರ) ಸೇರುವಿಕೆಯು ಸ್ಥಿರವಾಗಿರಲು ಅಷ್ಟಬಂಧವನ್ನು ಮಾಡಬೇಕು. ಮೊದಲು ನವಶಕ್ತಿಗಳಿಂದ ಪೂಜಿಸಲ್ಪಟ್ಟ ಅಷ್ಟಬಂಧದಲ್ಲಿ ಸಿಂಪಡಿಸಿ ಚಿನ್ನ ಮಳಲುಗಳಿಂದ, ರತ್ನಗಳಿಂದ ಆ ನಳಿಕೆಯ ತೂತನ್ನು ತುಂಬಿಸಿ, ಅಲ್ಲಿಯೂ ಸಂಪಾತವನ್ನು ಸಿಂಪಡಿಸಿ ಪ್ರಕೃತಿ ಪುರುಷಾತ್ಮಕವಾದ ಪೀಠ ದೇವತೆಗಳನ್ನು ಬಟ್ಟೆ ಮೊದಲಾದುವುಗಳಿಂದ ಅಲಂಕರಿಸಿ, ಪ್ರಣವ ಉಪಚಾರ ಪೀಠಮಂತ್ರ, ಪೂಜಾಮಂತ್ರ, ಶಕ್ತಿಮಂತ್ರ, ಮೂಲ ಮಂತ್ರ ಪ್ರಣವಗಳಿಂದ ಪೀಠ ಮತ್ತು ಬಿಂಬಗಳ ಸಂದುಗಳಲ್ಲಿ ಅಲುಗಾಡದಂತೆ ಗಟ್ಟಿಯಾಗುವಂತೆ ಮಾಡಿ ಅಷ್ಟಬಂಧವನ್ನು ಮಾಡಬೇಕು. ಧ್ರುವಾದ್ಯಾ– ಮೊದಲಾದ ಮಂತ್ರಗಳಿಂದ ಮುಟ್ಟುವಿಕೆಯನ್ನು ಸ್ಥಿರೀಕರಣವನ್ನು ಮಾಡಿ ಪ್ರಣವದಿಂದ ಪೀಠದ ಬುಡದಿಂದ ಬಿಂಬದ ತುದಿಯ ತನಕ, ಬಿಂಬದ ತುದಿಯಿಂದ ಪೀಠದ ಬುಡದ ತನಕ ವ್ಯಾಪನೆಯನ್ನು ಮಾಡಿ ಪ್ರಕೃತಿ ಪುರುಷರ ಪರಸ್ಪರ ಸೇರುವಿಕೆಯನ್ನು ಧ್ಯಾನಿಸಿ ಮೂಲ ಮಂತ್ರದಿಂದ ಆವಾಹನೆಯನ್ನು ಮಾಡಿ ಸಕಲೀಕರಣದೊಂದಿಗೆ ಉಪಹಾರಗಳನ್ನು ಸಮರ್ಪಿಸಿ ಪೂಜೆಯನ್ನು ಪುನಃ ನೀರಾಜನವನ್ನು ಮಾಡಿ ಪ್ರತಿಮೆಯ ತಲೆಯಲ್ಲಿ ಚಿನ್ನವನ್ನಿರಿಸಿ ಮೂರು ತತ್ತ್ವಮಂತ್ರಗಳಿಂದ ಕುಂಭೇಶ ಕಲಶದಿಂದ ಅಭಿಷೇಕ ಮಾಡಿ ನ್ಯಾಸವನ್ನು ಮಾಡಿ ಪೂಜಿಸಿ, ನೀರಾಜನ ಮೊದಲುಗೊಂಡು

ಎಲ್ಲಾ ತತ್ತ್ವಮಂತ್ರಗಳಿಂದ ನಿದ್ರಾಕಲಶದಿಂದ ಅಭಿಷೇಕ ಮಾಡಿ ಆಯಾಯ ನ್ಯಾಸಗಳನ್ನು, ಮೂಲಮಂತ್ರಕ್ಕೆ ಸಂಬಂಧಿಸಿದ ನ್ಯಾಸಗಳನ್ನು ಮಾಡಿ ಪೂಜಿಸಬೇಕು. **ಶಿವನಲ್ಲಿ** – ಮಂಟಪದಿಂದ ಬರುವ ಸಮಯದಲ್ಲಿ ಮೂರ್ತಿಪರಿಂದ ಹಿಡಿದುಕೊಂಡು ತರಲ್ಪಟ್ಟ ಜೇನು ಹಾಲುಗಳಿಂದ ತುಂಬಿದ ಕಲಶಗಳಿಂದ ತಲೆಯಲ್ಲಿ ನೀರಾಜವನನ್ನು ಮಾಡಬೇಕು. **ವಿಷ್ಣುವಿನಲ್ಲಿ** – ಹಾಸಿಗೆಯ ಹತ್ತಿರ ಇಡಲ್ಪಟ್ಟ ತುಪ್ಪ ಮೊದಲಾದುವುಗಳನ್ನು ತಲೆ, ಬಾಯಿ, ಹೃದಯ, ಗುಹ್ಯ ಪಾದಗಳಲ್ಲಿ ಪಂಚತತ್ತ್ವಗಳಿಂದ ಗರಿಕೆ (ದೂರ್ವೆ)ಕುಡಿಗಳಿಂದ ಸಮರ್ಪಿಸಬೇಕು. ಉಳಿದ ದೇವತೆಗಳಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ಇಡಲ್ಪಟ್ಟ ಉಪಾಹಾರ ದ್ರವ್ಯಗಳಿಂದ ಆಯಾಯ ನಿಜಮಂತ್ರಗಳಿಂದ ಸಮರ್ಪಿಸಬೇಕು. ಆಮೇಲೆ ಗುರೂಪದೇಶದಿಂದ ಹೊಂದಿದ ಜೀವಾವಾಹನವನ್ನೂ ಪ್ರಾಣನ್ಯಾಸಾದಿಗಳನ್ನೂ ಮಾಡಿ, ಆಮೇಲೆ ಪ್ರಣವ ಪುಟಿತವಾದ ಮೂಲದಿಂದ ಸ್ಥೂಲಾತ್ಮಕ ರೂಪವನ್ನೂ ಬಿಂಬದಲ್ಲಿ ಆವಾಹಿಸಿ ಆಯಾಯ ಮಂತ್ರಗಳಲ್ಲಿ ಹೇಳಿದ ಷಡಧ್ವನ್ಯಾಸ ಮೊದಲಾದುವನ್ನು ಮಾಡಿ ನಿಜಮಂತ್ರದಿಂದ ಪೂಜೆ ಮಾಡಬೇಕು. ಎಲ್ಲಾ ದೇವತೆಗಳಲ್ಲಿಯೂ ಗಾಯತ್ರಿ, ಮೂಲಮಂತ್ರ ಪ್ರಣವಗಳಿಂದ ಸ್ಥೂಲ ಸೂಕ್ಷ್ಮಪರ ರೂಪಾವಾಹನವನ್ನು ಮಾಡಬೇಕು. ಗಾಯತ್ರೀ ಸ್ಥಾನದಲ್ಲಿ ಸ್ಥೂಲಾವಾಹನದಲ್ಲಿ ತಮ್ಮ ತಮ್ಮ ಉಪಚಾರ ಮಂತ್ರವಾದರೂ ಹೇಳಬಹುದು. ವಿಷ್ಣುವಿನಲ್ಲಿ– ಅಷ್ಟಾಕ್ಷರ, ದ್ವಾದಶಾಕ್ಷರ ಪ್ರಣವದಿಂದಾಗಲೀ, ಶಿವನಲ್ಲಿ ಷಡಕ್ಷರ ಪ್ರಾಸಾದ ಪ್ರಣವದಿಂದಾಗಲೀ ಸ್ಥೂಲ ಸೂಕ್ಷ್ಮ ಪರರೂಪಗಳನ್ನು ಆವಾಹಿಸಬೇಕು.

* * * *

## ಜೀವಾವಾಹನಂ

ಪ್ರಣವ ಪ್ರಾಣಾಯಾಮದಿಂದ ಅರಳಿದ ಹೃದಯ ಕಮಲಗಳೆರಡನ್ನು ಧ್ಯಾನಿಸಿ ತನ್ನ ಹೃದಯ ಕಮಲವನ್ನು ನೋಡಿ ತನ್ನ ಇಡಾನಾಡಿಯಿಂದ ಹೊರಗೆ ಬಂದು ಈ ದೇವನ ಸುಷುಮ್ನಾ ನಾಡಿಯಿಂದ ಒಳಹೊಕ್ಕು ಹತ್ತು ಪ್ರಣವಗಳಿಂದ ಈ ದೇವರ ಹೃದಯ ಕಮಲದಲ್ಲಿರಿಸಬೇಕು. ಓಂ ಹ್ರೀಂ ಪ್ರಾಣಾಯ ನಮೋ ಮನ ಆತ್ಮನೇ ನಮಃ । ಓಂ ಹ್ರೀಂ ಯಂ ಅಪಾನಾಯ ನಮೋ ಬುದ್ಧ್ಯಾತ್ಮನೇ ನಮಃ । **ಓಂ ಹ್ರೀಂ ಯಂ ವ್ಯಾನಾಯ ನಮಶ್ಚಿತ್ತಾತ್ಮನೇ ನಮಃ । ಓಂ ಹ್ರೀಂ ಯಂ ಉದಾನಾಯ ನಮೋ ಅಹಂಕಾರಾತ್ಮನೇ ನಮಃ । ಓಂ ಹ್ರೀಂ ಯಂ ಸಮಾನಾಯ ನಮೋ ಜ್ಞಾನಾತ್ಮನೇ ನಮಃ । ಓಂ ಹ್ರೀಂ ಯಂ ನಾಗಾಯ ನಮೋ ತ್ವಗಾತ್ಮನೇ ನಮಃ । ಓಂ ಹ್ರೀಂ ಯಂ ಕೂರ್ಮಾಯ ನಮಶ್ಚಕ್ಷುರಾತ್ಮನೇ ನಮಃ । ಓಂ ಹ್ರೀಂ ಯಂ ಕೃಕಲಾಯ ನಮಃ ಕ್ಷುಧಾತ್ಮನೇ ನಮಃ । ಓಂ ಹ್ರೀಂ ಯಂ ದೇವದತ್ತಾಯ ನಮೋಽಂತರಾತ್ಮನೇ ನಮಃ । ಓಂ ಹ್ರೀಂ ಯಂ ಧನಂಜಯಾಯ ನಮಃ ಪರಮಾತ್ಮನೇ ನಮಃ** । ಇತಿ ಜೀವಾವಾಹನಂ ॥

* * * *

## ಪ್ರಾಣನ್ಯಾಸಃ

ಓಂ ಓಂ ಓಂ ಹೀಗೆ ಜಪಿಸಿ, ಹೃದಯವನ್ನು ಮುಟ್ಟಿ ಆಯಾಯ ದೇವತಾ ಸಂಬಂಧಿಯಾದ ಪಂಚತತ್ತ್ವಗಳನ್ನು ಜಪಿಸಿ, **ಓಂ ಹೌಂ ನಮಃ ಪರಾಯ ಶಾಂತ್ಯತೀತಾತ್ಮನೇ * । ಹ್ಯೈಂ * ಶಾಂತ್ಯಾತ್ಮನೇ * । ಹ್ರೂಂ * ವಿದ್ಯಾತ್ಮನೇ * । ಹ್ವೀಂ * ಪ್ರತಿಷ್ಠಾತ್ಮನೇ * । ಹ್ಲಾಂ * ನಿವೃತ್ತ್ಯಾತ್ಮನೇ *** । ಜಪಿಸಿ ಓಂ ಪೋಂ ನಮಃ ಪರಾಯ ಪ್ರಾಣಾತ್ಮನೇ ನಮಃ– ಶಿರಸಿ । ಯಂ * * ಅಪಾನಾತ್ಮನೇ– ಆಸ್ಯೇ । ಓಂ ರಾಂ * * ವ್ಯಾನಾತ್ಮನೇ– ಹೃದಿ । ಓಂ ನಂ * * ಉದಾನಾತ್ಮನೇ– ಗುಹ್ಯೇ । ಓಂ ಲಾಂ ನಮಃ ಪರಾಯ ಸಮಾನಾತ್ಮನೇ– ಪಾದಯೋಃ । ಓಂ ನಾಗಾತ್ಮನೇ– ಅಂಗುಷ್ಠೇ । ಓಂ ಕೂರ್ಮಾತ್ಮನೇ– ತರ್ಜನ್ಯಾಂ । ಓಂ ಕೃಕಲಾತ್ಮನೇ– ಮಧ್ಯಮಾಯಾಂ । ದೇವದತ್ತಾತ್ಮನೇ– ಅನಾಮಿಕೇ । ಓಂ ಧನಂಜಯಾಯ– ಕನಿಷ್ಠಿಕಾಯಾಂ । ಪಾದಾಗ್ರಾದಿ ನಾಸಿಕಾಂತಂ– ಓಂ ಪ್ರಾಣಾತ್ಮನೇ । ನಾಸಾಗ್ರಾದಿ ಪೃಷ್ಠಾಭಾಗ ಪಾದಾಂತಂ– ಓಂ ಅಪಾನಾತ್ಮನೇ ನಮಃ । ವ್ಯಾಪಕತ್ವೇನ– ವ್ಯಾನಾತ್ಮನೇ । ಉದರಾದಿ ನೇತ್ರಾಂತಂ– ಉದಾನಾತ್ಮನೇ । ನಾಭ್ಯಾದಿ ಹೃದಯಾಂತಂ– ಸಮಾನಾತ್ಮನೇ । ಆಸ್ಯೇ– ನಾಗಾತ್ಮನೇ ನಮಃ । ನೇತ್ರಯೋಃ– ಕೂರ್ಮಾತ್ಮನೇ । ನಾಸಿಕಯೋಃ– ಕೃಕಲಾತ್ಮನೇ। ಬಹಿರ್ವ್ಯಾಪಕತ್ವೇನ– ದೇವದತ್ತಾತ್ಮನೇ । ಅಂತರ್ವ್ಯಾಪಕತ್ವೇನ– ಧನಂಜಯಾತ್ಮನೇ ನಮಃ– ಇತಿ ಪ್ರಾಣನ್ಯಾಸಃ ॥

**ಓಂ ಹಂಸಃ– ಜೀವತತ್ತ್ವಮಾವಾಹಯಾಮಿ**– ಇತಿ ಜೀವಾವಾಹನಂ ॥

* * * *

## ಪರ್ಯುಷ್ಟಕ ಸನ್ನಿವೇಶಃ

ಜೀವಾವಾಹನದ ನಂತರದಲ್ಲಿ ದೇವರ ಹೃತ್ಕಮಲದ ದಳಗಳಲ್ಲಿ– ಓಂ ಭಂ ನಮಃ ಪರಾಯ ಪ್ರಾಣಾತ್ಮನೇ । ಬಂ * * ಬುದ್ಧ್ಯಾತ್ಮನೇ । ಫಂ * * ಅಹಂಕಾರಾತ್ಮನೇ । ನಂ * * ಶಬ್ದ ತನ್ಮಾತ್ರಾತ್ಮನೇ । ಧಂ * * ಸ್ಪರ್ಶ ತನ್ಮಾತ್ರಾತ್ಮನೇ । ದಂ * * ರೂಪ ತನ್ಮಾತ್ರಾತ್ಮನೇ । ಥಂ * * ರಸ ತನ್ಮಾತ್ರಾತ್ಮನೇ । ತಂ * * ಗಂಧ ತನ್ಮಾತ್ರಾತ್ಮನೇ । ಹೀಗೆ ಹೃದಯದಲ್ಲಿ ಕೆಳಭಾಗದಿಂದಾರಂಭಿಸಿ ನವಶಕ್ತಿ ನ್ಯಾಸದಂತೆ ನ್ಯಾಸ ಮಾಡಿ ಕರ್ಣಿಕೆಯಲ್ಲಿ ಶಕ್ತಿ ಬೀಜದಿಂದ ಶಕ್ತಿಯನ್ನು ನ್ಯಾಸ ಮಾಡಿ ಶಕ್ತಿ

ಮಧ್ಯದಲ್ಲಿ- ಮಂ * * ಜೀವತತ್ತ್ವಾತ್ಮನೇ ನಮಃ- ಹೀಗೆ ಜೀವ ತತ್ತ್ವವನ್ನು ನ್ಯಾಸ ಮಾಡಿ ಮೂಲಮಂತ್ರರೂಪವನ್ನು ಮೂಲದಿಂದ ನ್ಯಾಸ ಮಾಡಬೇಕು. ಆಮೇಲೆ ತತ್ತ್ವನ್ಯಾಸವನ್ನು ಮಾಡಬೇಕು. ಓಂ ಮಂ ನಮಃ ಪರಾಯ ಜೀವತತ್ತ್ವಾತ್ಮನೇ ನಮಃ । ಭಂ * * ಪ್ರಾಣಾತ್ಮನೇ- ಸರ್ವಾಂಗೇ । ಬಂ * * ಬುದ್ಧ್ಯಾತ್ಮನೇ- ಹೃದಯೇ । ಫಂ * * ಅಹಂಕಾರಾತ್ಮನೇ । ಪಂ * * ಮನು ಆತ್ಮನೇ- ಹೃದಯೇ । ನಂ * * ಶಬ್ದ ತನ್ಮಾತ್ರಾತ್ಮನೇ- ಶಿರಸಿ । ಧಂ * * ಸ್ಪರ್ಶ ತನ್ಮಾತ್ರಾತ್ಮನೇ-ಮುಖೇ । ದಂ * * ರೂಪ ತನ್ಮಾತ್ರಾತ್ಮನೇ- ಹೃದಯೇ । ಥಂ * * ರಸ ತನ್ಮಾತ್ರಾತ್ಮನೇ- ಗುಹ್ಯೇ । ತಂ * * ಗಂಧ ತನ್ಮಾತ್ರಾತ್ಮನೇ- ಪಾದಯೋಃ । ಓಂ ಣಂ * * ಶ್ರೋತ್ರಾತ್ಮನೇ- ಶ್ರೋತ್ರಯೋಃ । ಢಂ * * ತ್ವಗಾತ್ಮನೇ- ತ್ವಚಿ । ಡಂ * * ಚಕ್ಷುರಾತ್ಮನೇ- ನೇತ್ರಯೋಃ । ಠಂ * * ಜಿಹ್ವಾತ್ಮನೇ- ಜಿಹ್ವಾಯಾಂ । ಟಂ * * ಘ್ರಾಣಾತ್ಮನೇ- ನಾಸಿಕಯೋಃ । ಞಂ * * ವಾಗಾತ್ಮನೇ- ಮುಖೇ । ಝಂ * * ಪಾಣ್ಯಾತ್ಮನೇ- ಹಸ್ತಯೋಃ । ಜಂ * * ಪಾದಾತ್ಮನೇ- ಪಾದಯೋಃ । ಛಂ * * ಪಾಯ್ವಾತ್ಮನೇ- ಅಪಾನೇ । ಚಂ * * ಉಪಸ್ಥಾತ್ಮನೇ- ಗುಹ್ಯೇ । ಙಂ * * ಆಕಾಶಾತ್ಮನೇ- ಶಿರಸಿ । ಘಂ * * ವಾಯ್ವಾತ್ಮನೇ- ಮುಖೇ । ಗಂ * * ತೇಜ ಆತ್ಮನೇ- ಹೃದಯೇ । ಖಂ * * ಅಬಾತ್ಮನೇ ನಮಃ- ಗುಹ್ಯೇ । ಕಂ ನಮಃ ಪರಾಯ ಪೃಥಿವ್ಯಾತ್ಮನೇ ನಮಃ- ಪಾದಯೋಃ । ಶಂ * * ಹೃತ್ಪುಂಡರೀಕಾತ್ಮನೇ । ಉಂ * * ಸೋಮಮಂಡಲಾಯ ಕಾಮಪ್ರದ ಷೋಡಶ ಸೋಮಕಲಾತ್ಮನೇ । ಅಂ ಅರ್ಕಮಂಡಲಾಯ ವಸುಪ್ರದ ದ್ವಾದಶ ಸೌರಕಲಾತ್ಮನೇ । ಮಂ ವನ್ಹಿ ಮಂಡಲಾಯ ಧರ್ಮಪ್ರದ ದಶವನ್ಹಿ ಕಲಾತ್ಮನೇ- ಹೃದಯೇ । ಮೂಲವನ್ನು ಹೇಳಿ, ಆಯಾಯ ದೇವತೆಯ ಪಂಚತತ್ತ್ವಗಳನ್ನು ಹೇಳಿ- ಶಿರ, ಮುಖ, ಹೃದಯ, ಗುಹ್ಯ ಪಾದಗಳಲ್ಲಿ ನ್ಯಾಸ ಮಾಡಿ ಮೂಲಾಂಗ ನ್ಯಾಸವನ್ನು ಮಾಡಬೇಕು. ಆಮೇಲೆ ಸ್ಥೂಲಾವಾಹನೆಯು. ಮೂಲ ಮಂತ್ರವನ್ನೂ ಹೇಳಿ ಓಂ ಓಂ ಓಂ ಓಂ ಓಂ **ಸ್ಥೂಲಾತ್ಮಕಂ ರೂಪವಾವಾಹಯಾಮಿ** – ಹೀಗೆ ಆವಾಹಿಸಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಆಂ ಹ್ರೀಂ ಕ್ರೋಂ * * ಇಹ ಪ್ರಾಣಾಃ- ಇತ್ಯಾದಿ.

## ಸ್ತೋತ್ರಾವಾಹನಂ

**ಶಿವನಲ್ಲಿ ಸ್ತೋತ್ರಾವಾಹನ–**

**ಯಸ್ಯ ಸಿಂಹಾ ರಥೇ ಯುಕ್ತಾ ವ್ಯಾಘ್ರ ಭೂತಾಸ್ತಥಾನುಗಾಃ ।**
**ಋಷಯೋ ಲೋಕಪಾಲಾಶ್ಚ ದೇವಸ್ಕಂದಸ್ತಥಾ ವೃಷಃ ॥**
**ಪ್ರಿಯಾ ಗಣೋ ಮಾತರಶ್ಚ ಸೋಮೋ ವಿಷ್ಣುಃ ಪಿತಾಮಹಃ ।**
**ನಾಗಾ ಯಕ್ಷಾಃ ಸಗಂಧರ್ವಾ ಯೇ ಚ ದಿವ್ಯಾ ನಭಶ್ಚರಾಃ ॥**
**ತಮಹಂ ತ್ರ್ಯಕ್ಷಮೀಶಾನಂ ದೇವಂ ಸ್ಥಾಣುಮುಮಾಪತಿಂ ।**
**ಆವಾಹಯಾಮಿ ಸಗಣಂ ಸಪತ್ನೀಕಂ ವೃಷಧ್ವಜಂ ॥**
**ಆಗಚ್ಛಾಗಚ್ಛ ಭಗವನ್ ಸ್ಥಿರೋ ಭವ ಶಿವೋ ಭವ ।**
**ಸ್ಥಿರೋ ಭವ ಧ್ರುವೋ ಭವ ಪ್ರಸನ್ನೋ ಭವ ನಮೋಽಸ್ತುತೇ ॥**

ಓಂ ಹೌಂ ನಮಃ ಶಿವಾಯ । ಓಂ ಜೂಂಸಃ । ಶಿವ ಶರ್ವ ಸರ್ವದಾತ್ರಸಾನ್ನಿಧ್ಯಂ ಕುರು ಕುರು ಅಧಿಷ್ಠಾಯ ತಿಷ್ಠ ಸ್ವಾಹಾ । ನಿರೋಧನಂ ಚ ನೋ ಭವ ಪೂಜಾಂ ಪ್ರತಿ ಗೃಹ್ಣಾತು ಭವಾನ್ ಮಂತ್ರ ಪೂತಮಿದಮರ್ಘ್ಯಮಿದಂ ಪಾದ್ಯಮಿದಮಾಚಮನೀಯಮೇತದಾಸನಂ ಬ್ರಹ್ಮಣಾ ವಿಹಿತಃ ಸ್ವಯಂ ಸ್ವಾಹಾ- ಹೀಗೆ ಶಿವನಲ್ಲಿ.

**ವಿಷ್ಣುವಿನಲ್ಲಿ ಸ್ತೋತ್ರಾವಾಹನ–**

**ಆವಾಹಯಾಮ್ಯಮರವೃಂದನತಾಂಘ್ರಿಪದ್ಮಂ**
**ಲಕ್ಷ್ಮೀಪತಿಂ ಸಕಲಕಾರಣಮಪ್ರಮೇಯಂ ।**
**ಆದ್ಯಂ ಸನಾತನತನುಂ ಫಣಿವಾಸನಸ್ಥಂ**
**ಪೂರ್ಣೇಂದುಭಾಸ್ಕರಹುತಾಶಸಹಸ್ರಭಾಸಂ ॥**

ಧ್ಯೇಯಂ ಪರಂ ಸಕಲತತ್ತ್ವವಿದಾಂ ಚ ವೇದ್ಯಂ
ವಾರಾಹಕಾಪಿಲನೃಕೇಸರಿಸೌಮ್ಯಮೂರ್ತಿಂ ।
ಶ್ರೀವತ್ಸಕೌಸ್ತುಭಮಹಾಮಣಿಭೂಷಿತಾಂಗಂ
ಕೌಮೋದಕೀ ಕಮಲಶಂಖರಥಾಂಗಹಸ್ತಂ ॥
ಸರ್ವತ್ರಗೋಽಸಿ ಭಗವನ್ ಕಿಲ ಯದ್ಯಪಿ ತ್ವಾಂ
ಆವಾಹಯಾಮಿ ಹಿ ಯಥಾ ವ್ಯಜನೇನ ವಾಯುಂ ।
ಗೂಢೋ ಯಥೈವ ದಹನೋ ಮಥನಾದುಪೈತಿ
ಹ್ಯಾವಾಹಿತೋಽಪಿ ಹಿ ತಥಾತ್ವಮುಪೈಷಿ ಚಾರ್ಚಾಂ ॥
ಮೂಲಾಧರಾಚ್ಯುತ ವಿಭೋ ಪರಮಾರ್ಥಮೂರ್ತೇ
ಸರ್ವಜ್ಞನಾಥ ಪರಮೇಶ್ವರ ಸರ್ವಶಕ್ತೇ ।
ಆಗಚ್ಛ ಮೇ ಕುರುದಯಾಂ ಪ್ರತಿಮಾಂ ಭಜಸ್ವ
ಪೂಜಾಂ ಗೃಹಾಣ ಮದನುಗ್ರಹಕಾಮ್ಯಯಾದ್ಯ ॥ ಇತೀ.

ದುರ್ಗಿಯಲ್ಲಿ ಸ್ತೋತ್ರಾವಾಹನ–

ಆವಾಹಯೇತ್ವರಾಂ ಶಕ್ತಿಂ ಚಿದ್ರೂಪಾಮಮಲಾಂ ಧ್ರುವಾಂ ।
ಆತ್ಮಾನಂದಮನೌಪಮ್ಯಾಂ ಅನೇಕಾರ್ಕಾಯುತಪ್ರಭಾಂ ॥
ಆದಾಯ ಹೃದಯಾಂಭೋಜಾನ್ನಾದೇನ ಶ್ವಾಸಸಂಯುತಂ ।
ಯೋಜಯೇತ್ಸಕಲೇ ಬಿಂಬೇ ಯಥಾವತ್ಸಾಧಕೋತ್ತಮಃ ॥
ಧ್ಯಾಯೇತ್ತಾಂ ಪರಮಾಂ ಶಕ್ತಿಂ ದುರ್ಗಾಂ ಸರ್ವಾರ್ತಿಹಾರಿಣೀಂ ।
ರಕ್ತಾಂಬರಾನುಲೇಪಾದಿ ರಕ್ತಮಾಲ್ಯಾದಿಶೋಭಿತಾಂ ॥
ಜ್ಞಾನಾನಂದಮಯೀಂ ಸಾಕ್ಷಾಜ್ಜಗದುತ್ಪತ್ತಿಕಾರಣಾಂ ।
ಧ್ಯಾತ್ವಾ ದೇವೀಂ ತತೋ ನ್ಯಸ್ಯೇನ್ಮಂತ್ರಾನಂಗಾನ್ಯಪಿ ಕ್ರಮಾತ್ ॥
ಸರ್ವದೇವಮಯೀಮೀಶಾಂ ದುರ್ಗಮಾಂ ಸಿಂಹವಾಹಿನೀಂ ।
ಚಕ್ರಂ ತ್ರಿಶೂಲಂ ಪಾಶಂ ಚ ದಧತೀಂ ಪರಶುಂ ತಥಾ ॥
ತೇಜೋಮಂಡಲದುರ್ಧರ್ಷಾಂ ವಾಂಛಿತಾರ್ಥಪ್ರದಾಯಿನೀಂ ।
ಭಾವಯೇದನಯಾ ವ್ಯಾಪ್ತಂ ಜಗತ್ಸ್ಥಾವರಜಂಗಮಂ ॥
ಕಾರ್ಮುಕಂ ಚ ಸ್ಫುರತ್ಕಾಂತಿ ಬಿಭರ್ತಿ ಪರಮೇಶ್ವರೀ ।
ವಾಂಛಿತಾರ್ಥಪ್ರದಾ ದೇವೀ ಶಮನೀ ದುರಿತಾಪದಾಂ ।
ಏವಂ ಭೂತಾಂ ಪರಾಂ ದೇವೀಂ ವಿದ್ಯುದ್ವರ್ಣಸಮಪ್ರಭಾಂ ।
ಭುಕ್ತಿಮುಕ್ತಿಪ್ರದಾಂ ಸೌಮ್ಯಾಂ ಕಟಾಕ್ಷವಿಲಸದ್ದಿಶಾಂ ।
ದಯಾಪೂರಿತ ಸರ್ವಾಗಾಂ ಭಾವಯೇ ಭುವನೇಶ್ವರೀಂ ।

ಆಗಚ್ಛ ಭಗವತ್ಯಂಬ ಶಿವಾ ಭವ ಸುಖಾಯ ನಃ ॥

ಓಂ ಸ್ಥಿರಾಭವ । ಅತ್ರಸಾನ್ನಿಧ್ಯಂ ಕುರು ಕುರು ಅಧಿಷ್ಠಾಯತಿಷ್ಠತಿಷ್ಠ

ಸ್ವಾಹಾ ॥(ಆವಾಹಯಾಮಿ)–ಇತಿ.

ಗಣಪತಿಯಲ್ಲಿ ಸ್ತೋತ್ರಾವಾಹನ–

ಆವಾಹಯೇತ್ಪರಂ ತತ್ತ್ವಂ ಚಿದ್ರೂಪಮಮಲಂ ವಿಭುಂ ।

ಆತ್ಮಾನಂದಮನೌಪಮ್ಯಮನೇಕಾರ್ಕಾಯುತಪ್ರಭಂ ॥

ಆದಾಯ ಹೃದಯಾಂಭೋಜಾನ್ನಾದೇನ ಶ್ವಾಸಸಂಯುತಂ ।

ಯೋಜಯೇತ್ಸಕಲೇ ಬಿಂಬೇ ಯಥಾವತ್ಸಾಧಕೋತ್ತಮ : ॥

ಜ್ಞಾನಾನಂದಮಯಂ ಸಾಕ್ಷಾತ್ಸರ್ವಕಾರಣಕಾರಣಂ ।

ಧ್ಯಾತ್ವಾ ಬಿಂಬಂ ತತೋನ್ಯಸ್ಯೇನ್ಮಂತ್ರಾನ್ಯಂಗಾನ್ಯನುಕ್ರಮಾತ್ ॥

ಧ್ಯಾಯೇತ್ತಂ ಸಕಲಂ ದೇವಂ ಪದ್ಮಸ್ಥಂ ಗಜವಕ್ತ್ರಕಂ ।

ರಕ್ತಾಂಬರಾನುಲೇಪಾದಿ ರಕ್ತಮಾಲ್ಯಾದಿ ಭೂಷಿತಂ ॥

ಹಸ್ತಾಗ್ರಕ್ಲೃಪ್ತಪಾಶಂ ಚ ಸೃಣಿಸ್ವರದಸಂಜ್ಞಕಾನ್ ।

ಬೀಜಾಪೂರಂ ಚತುರ್ಭಿಃ ಸ್ವೈಸ್ತುಂಡಿಲಂ ತ್ರಿದಶಂ ಪರಂ ॥

ಗಣಾಧಿಪಂ ಪರಾನಂದಮಿಕ್ಷುಸಾಗರಮಧ್ಯಗಂ ।

ಆಸ್ವಾದಯಂತಂ ಶುಂಡಾಗ್ರೇ ಕದಲೀಕ್ಷುರಸಂ ಸದಾ ॥

ಏವಂ ಭೂತಂ ಸಶಕ್ತೀಕಂ ಕಾಲಮೇಘಸಮಪ್ರಭಂ ।

ಮುಕ್ತಿಪ್ರದಂ ಕಾರುಣಿಕಂ ಕಟಾಕ್ಷವಿಲಸದ್ದಿಶಂ ॥

ಆಗಚ್ಛಭಗವನ್ನತ್ರ ಶಿವೋ ಭವ ನಮೋಽಸ್ತುತೇ ।

ಓಂ ಸ್ಥಿರೋಭವ ಅತ್ರ ಸಾನ್ನಿಧ್ಯಂ ಕುರುಕುರು ಅಧಿಷ್ಠಾಯತಿಷ್ಠತಿಷ್ಠ ಸ್ವಾಹಾ ॥– ಇತಿ.

ಶಿವನಾರಾಯಣನಲ್ಲಿ ಸ್ತೋತ್ರಾವಾಹನ–

ಆವಾಹಯಾಮ್ಯಮರವೃಂದನತಾಂಘ್ರಿಪದ್ಮಂ

ಈಶಾಚ್ಯುತಂ ಸಕಲಕಾರಣಮಪ್ರಮೇಯಂ ।

ಆದ್ಯಂ ಸನಾತನವಿಭುಂ ಪ್ರಣವಾಸನಸ್ಥಂ

ಪೂರ್ಣೇಂದು ಭಾಸ್ಕರಹುತಾಶಸಹಸ್ರಭಾನುಂ ॥

ಧ್ಯಾಯೇನ್ಮಾಣಿಕ್ಯಪೀಠೇ ಸಕಲಸುರಗಣೈಃ ಸೇವ್ಯಮಾನಂ ಸಮಂತಾತ್

ಬಿಭ್ರಾಣಂ ಪಾಣಿಪದ್ಮೇ ಪರಶುಧರವರಂ ಮಧ್ಯರಾಜತ್ಕರಾಬ್ಜಂ ।

ವ್ಯಾಘ್ರಶ್ರೀಕ್ಲೃಪ್ತಪೀತಾಂಬರಧರಮಹಿರಾಟ್‌ಕೌಸ್ತುಭಾಕ್ಲೃಪ್ತಮೀಶಂ

ಗೌರೀಲಕ್ಷ್ಮೀಸಮೇತಂ ಸ್ಫಟಿಕಮರಕತೋದ್ಭಾಸಿತಾಂಗಂ ಶುಭಾಂಗಂ ॥

ವ್ಯಾಪ್ತಂಭವಂತಮಖಿಲೇಷ್ವವಿದೇಶಕಾಲ
ವಸ್ತುಷ್ವಖಂಡಮವಿಕಾರಮಹಂತಮೀಶಂ ।
ಆವಾಹಯಾಮಿ ಕಥಮತ್ರ ಹಿ ಶಂಕರಶ್ರೀ
ನಾರಾಯಣಾಗತಮಿವ ಪ್ರವದಾಮಿ ಸಮ್ಯಕ್ ॥
ಸರ್ವತ್ರಗೋಽಸಿ ಭಗವನ್ನಿಲಯದ್ಯಪಿ ತ್ವಾಂ
ಆವಾಹಯಾಮಿ ಹಿ ಯಥಾ ವ್ಯಜನೇನ ವಾಯುಂ ॥
ಗೂಢೋ ಯಥೈವ ದಹನೋ ಮಥನಾದುಪೈತಿ
ಧ್ಯಾವಾಹಿತೋಽಪಿ ಹಿ ತಥಾ ತ್ವಮುಪೈಷಿ ಚಾರ್ಚ್ಯಾಂ ॥
ಈಶಾಚ್ಯುತಾಖಿಲವಿಭೋ ಪರಮಾರ್ಥಮೂರ್ತೇ
ಸರ್ವಜ್ಞನಾಥ ಪರಮೇಶ್ವರ ಸರ್ವಶಕ್ತೇ ।
ಆಗಚ್ಛ ಮೇ ಕುರುದಯಾಂ ಪ್ರತಿಮಾಂ ಭಜಸ್ವ
ಪೂಜಾಂ ಗೃಹಾಣಮದನುಗ್ರಹಕಾಮ್ಯಯಾಽದ್ಯ ॥

ಸ್ಕಂದನಲ್ಲಿ ಸ್ತೋತ್ರಾವಾಹನ–

ಆವಾಹಯೇತ್ಪರಂ ತತ್ತ್ವಂ ಚಿದ್ರೂಪಮಮಲಂ ಗುಹಂ ।
ಆತ್ಮಾನಂದಮನೌಪಮ್ಯಂ ದೇವಗಂಧರ್ವವಂದಿತಂ ॥
ಜ್ಞಾನಾನಂದಮಯಂ ದೇವಂ ತಾರಕಾಸುರ ಮರ್ದನಂ ।
ಆವಾಹಯಾಮಿ ಬಿಂಬೇಽಸ್ಮಿನ್ಭಕ್ತಾನುಗ್ರಹದೋ ಭವ ॥
ಆಯಾಹಿ ಸ್ಕಂದ ಭದ್ರಂ ತೇ ಕುಮಾರ ಶಿವಸಂಭವ ।
ಮಯೂರವಾಹನ ವಿಭೋ ಇಹ ವಾರಣವಾಹನ ॥
ಸುಬ್ರಹ್ಮಣ್ಯ ನಮಸ್ತೇಽಸ್ತು ಕಾರ್ತಿಕೇಯ ಸುರೇಶ್ವರ ।
ದೇವಸೇನಾಪತೇ ದೇವ ಅಸುರೇಂದ್ರವಿಮರ್ದನ ॥
ಶಕ್ತಿ ವಜ್ರಾಯುಧಧರ ಧೃತದಂಡ ವರಾಂಕುಶ ।
ಸಚಕ್ರತೋಮರವಿಭೋ ಜ್ಞಾನಶಕ್ತ್ಯಾಯುಧಾತ್ಮಕ ॥
ಆವಾಹಯಾಮಿ ತ್ವಾಂ ದೇವ ದೇವೇಂದ್ರನುತಪಾದುಕ ।
ಶೀಘ್ರಮಾಯಾತು ಭದ್ರಂತೇ ಸುಕುಮಾರ ಸುಪದ್ಮಜ ॥
ಮಯೂರರಥಯುಕ್ತಶ್ಚ ವಾರಣಾನುಚರೋ ಗುಹಃ ।
ಅನ್ನಾದ್ಯಪ್ರಿಯಶೀಲಸ್ತು ಶಕ್ತಿತೋಮರವಜ್ರಧೃಕ್ ॥
ಕಾರ್ತಿಕೇಯ ಸುರಶ್ರೇಷ್ಠ ದುಷ್ಟನಾಶನಶೀಲಕ ।
ಆವಾಹಯಾಮಿ ಸೇನಾನೀಂ ದೇವೇಶಂ ಕುಕ್ಕುಟಧ್ವಜಂ ॥
ಓಂ ಸ್ಥಿರೋಭವ । ಅತ್ರಸಾನ್ನಿಧ್ಯಂ ಕುರುಕುರು ಅಧಿಷ್ಠಾಯ ತಿಷ್ಠತಿಷ್ಠ ಸ್ವಾಹಾ ॥

ಶಾಸ್ತಾರನಲ್ಲಿ ಸ್ತೋತ್ರಾವಾಹನ–

ಆವಾಹಯೇತ್ಪರಂ ತತ್ತ್ವಂ ಚಿದ್ರೂಪಮಮಲಂಶುಭಂ ।
ಆತ್ಮಾನಂದಮನೌಪಮ್ಯಂ ಕೋಟಿಸೂರ್ಯಸಮಪ್ರಭಂ ॥
ಜ್ಞಾನಾನಂದಮಯಂ ದೇವಂ ಸರ್ವಕಾರಣ ಕಾರಣಂ ।
ಧ್ಯಾತ್ವಾ ಬಿಂಬಂ ತತೋ ನ್ಯಸ್ಯೇನ್ಮಂತ್ರಾನಂಗಾನ್ಯನುಕ್ರಮಾತ್ ॥
ಧ್ಯಾಯೇತ್ತಂ ಶಂಭುತನಯಂ ಭೂತನಾಥಂ ಮಹಾಬಲಂ ।
ಅಶ್ವಾರೂಢಂ ಖಡ್ಗಪಾಣಿಂ ಗ್ರಾಮರಕ್ಷಾಕರಂ ಪ್ರಭುಂ ॥
ಗೋಪ್ತಾರಂ ವಿಶ್ವಗೋಪ್ತಾರಂ ಶಾಸ್ತಾರಂ ಶಾಂಭವಂ ಪ್ರಭುಂ ।
ಅಮೋಘಮದ್ಭುತಂ ಶಾಂತಂ ಸದಾ ಭಕ್ತಹಿತೈಷಿಣಂ ॥
ಆಯಾತು ಶಾಸ್ತಾಸಗಣೋಮುದೇನೋ ।
ಹಯೇನ ನಾಗಾನುಚರೇಣ ಶೀಘ್ರಂ ॥
ಭವಾತ್ಮಜೋ ವಾರಿನಿಧೀಶ್ವರೋಽಯಂ ।
ಸ್ವಕೇತುನಾ ಕೃಷ್ಣನಿಭೇನ ಗೋಪ್ತಾ ॥
ಚಿಂತಿತಾರ್ಥಪ್ರದೋ ದೇವೋ ರೇವಂತೋ ಭಕ್ತವತ್ಸಲಃ ।
ಆಗಚ್ಛ ಭಗವನ್ನತ್ರ ಶಿವೋ ಭವ ನಮೋಽಸ್ತುತೇ ॥
ಓಂ ಆವಾಹಯಾಮಿ । ಓಂ ಸ್ಥಿರೋಭವ । ಅತ್ರ ಸಾನ್ನಿಧ್ಯಂ ಕುರು ಕುರು ಅಧಿಷ್ಠಾಯ ತಿಷ್ಠ ಸ್ವಾಹಾ ॥

ಹೀಗೆ ಎಲ್ಲಾ ದೇವತೆಗಳಲ್ಲಿ ಪ್ರತಿಷ್ಠೆಯನ್ನು ಮಾಡಿ– ಓಂ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಬಾಹುರುತ ವಿಶ್ವಸ್ಪಾತ್ । ಸಂ ಬಾಹುಭ್ಯಾಂಧಮತಿ ಸಂಪತತ್ರೈರ್ದ್ಯಾವಾ ಭೂಮೀಜನಯನ್ದೇವ ಏಕಃ– ಹೀಗೆ ಹೇಳಬೇಕು. ಪ್ರಕೃತಿ ರೂಪವಾದ ಪೀಠವನ್ನು ಶಕ್ತಿಬೀಜದಿಂದ, ಪುರಷಾತ್ಮಕವಾದ ಬಿಂಬವನ್ನೂ ಮೂಲದಿಂದ ಪೂಜಿಸಿ, ತೇಜಸ್ಸಿನ ಸೇರುವಿಕೆಯನ್ನೂ ನವಶಕ್ತಿರೂಪವನ್ನೂ ಧ್ಯಾನಿಸಿ ಪ್ರಾರ್ಥಿಸಬೇಕು–

ಲೋಕಾನುಗ್ರಹಹೇತ್ವರ್ಥಂ ಸ್ಥಿರೋ ಭವ ಸುಖಾಯ ನಃ ।
ಸಾನ್ನಿಧ್ಯಂ ಚ ಸದಾ ದೇವ ಪ್ರತ್ಯಹಂ ಪರಿವರ್ಧಯ ॥
ಮಾ ಭೂತ್ಪ್ರಜಾವಿರೋಧೋಽಸ್ಮಿನ್ ಯಜಮಾನಃ ಸಮೃಧ್ಯತಾಂ ।
ಸಭೂಪಾಲಂ ತಥಾ ರಾಷ್ಟ್ರಂ ಸರ್ವೋಪದ್ರವವರ್ಜಿತಂ ॥
ಕ್ಷೇಮೇಣ ವೃದ್ಧಿಮತುಲಾಂ ಸುಖಮಕ್ಷಯ್ಯಮಶ್ನುತಾಂ ।
ಪೂಜಾಂ ಗೃಹ್ಣಾತು ಸತತಂ ಮಾಮುದ್ಧರ ನಮೋಽಸ್ತುತೇ ॥

ಶಿವನಲ್ಲಿ–

ಸರ್ವಮಂತ್ರಾದಿಸಂಯುಕ್ತೋ ಲೋಕಾನುಗ್ರಹಕಾಮ್ಯಯಾ ।
ಅತ್ರ ಲಿಂಗೇ ಮಹಾದೇವ ಸನ್ನಿಧೋ ಭವ ಸರ್ವದಾ ॥
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ।
ತಾವತ್ತ್ವಯಾತ್ರ ಲೋಕೇಶ ಸ್ಥಾತವ್ಯಂ ಸರ್ವದಾ ವಿಭೋ ॥

ದುರ್ಗಿಯಲ್ಲಿ–

ನಮಸ್ತುಭ್ಯಂ ಸುರೇಶಾನಿ ಯಾವತ್ತಿಷ್ಠತಿ ಭೂತಲಂ ।
ತಾವತ್ತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ಸನ್ನಿಧಾ ಭವ ॥
ಯಾವಚ್ಚಂದ್ರಶ್ಚಸೂರ್ಯಶ್ಚ ಯಾವದ್ಬಿಂಬಂ ಚ ತಿಷ್ಠತಿ ।
ತಾವತ್ತ್ವಯಾತ್ರ ಸ್ಥಾತವ್ಯಾ ಬಿಂಬೇಽಸ್ಮಿನ್ಸನ್ನಿಧಾನತಃ ॥
ಶಾಕಂಭರೀ ನಮಸ್ತುಭ್ಯಂ ವಾಂಛಿತಾರ್ಥಫಲಪ್ರದೇ ।
ಶಿಲಾಮಯೇ ನವಾಗಾರೇ ಸದಾ ಸನ್ನಿಹಿತಾ ಭವ ॥

ಹೀಗೆ ಪ್ರಾರ್ಥಿಸಿ. ಹೇಳಲ್ಪಡುವ ಮಂತ್ರಗಳಿಂದ ಉಪಸ್ಥಾನವನ್ನು ಮಾಡಬೇಕು. ಶ್ರೀ ಸೂಕ್ತ, ಜಾತವೇದಸೇ-ಋಕ್, ತಾಮಗ್ನಿವರ್ಣಾಂ- ಈ ಸೂಕ್ತವನ್ನು ಪುರುಷ ಸೂಕ್ತ, ರಥಂತರಂ, ಗಾಯತ್ರಂಶಾಕ್ವರಂಸಾಮ, ಯೇನೇದಂ ಭೂತಂ- ಮೊದಲಾಗಿ ಶಿವಸಂಕಲ್ಪ, ಪ್ರತಿಷ್ಠಾಸಿಪ್ರತಿಷ್ಠಾವಂತೋ- ಹೀಗೆ ಯಜುಸ್ಸಿಸಂದ ಕೂಡಿದ ಮಂತ್ರಗಳನ್ನು ತಾನು ಹೇಳಬೇಕು. ಮೂರ್ತಿಪರಿಂದ ಹೇಳಿಸಬೇಕು.

(ಪ್ರತಿಷ್ಠಾಸಿ ಪ್ರತಿಷ್ಠಾವಂತೋ ಭೂಯಾಸ್ಮ ಮಾ ಪ್ರತಿಷ್ಠಾಯಾಶ್ಛಿಥ್ಥ
ಹ್ಯಪ್ರತಿಷ್ಠಸ್ಸಭೂಯಾದ್ಯೋಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ । ಆವಾತವಾಹಿಭೇಷಜಂ
ವಿವಾತವಾಹಿ ಯದ್ರಪಃ । ತ್ವಗುಂಹಿ ವಿಶ್ವಭೇಷಜೋ ದೇವಾನಾಂ ಧೂತ ಈಯಸೇ ।
ದ್ವಾವಿಮೌ ವಾತೌ ವಾತ ಆಸಿಂಧೋ ರಾಪರಾವತಃ ॥)

ಗಣಪತಿಯಲ್ಲಿ–

ವಿನಾಯಕ ನಮಸ್ತುಭ್ಯಂ ವಂಶವೃದ್ಧಿಕರೋತ್ತಮ ।
ಶಿಲಾಮಯೇ ನವಾಗಾರೇ ಸದಾ ಸನ್ನಿಹಿತೋ ಭವ ॥
ಯಾವದ್ದೇವಾಶ್ಚ ತಿಷ್ಠಂತಿ ಋಷಯೋ ವಸವಸ್ತಥಾ ।
ತಾವತ್ತ್ವಂ ಶೈಲಬಿಂಬೇಽಸ್ಮಿನ್ತಿಷ್ಠ ತಿಷ್ಠ ಗಣೇಶ್ವರ ॥
ಸರ್ವಮಂತ್ರಾದಿ ಸಂಯುಕ್ತೋ ಲೋಕಾನುಗ್ರಹಕಾಮ್ಯಯಾ ।
ಅತ್ರ ಬಿಂಬೇ ಮಹಾದೇವ ಸನ್ನಿಧೋ ಭವ ಸರ್ವದಾ ॥ ಇತಿ

ಗುಹನಲ್ಲಿ–

ದೇವ ಲೋಕಾದಿಸಂಯುಕ್ತೋ ಲೋಕಾನುಗ್ರಹಕಾಮ್ಯಯಾ ।
ಅತ್ರ ಬಿಂಬೇ ಹೇಮಚೂಡ ಸನ್ನಿಧೋ ಭವ ಸರ್ವದಾ ॥
ಯಾವಚ್ಚಂದ್ರ * * ತಿಷ್ಠತಿ । ತಾವತ್ತ್ವಂ * * * ಸನ್ನಿಧಿಂ ಕುರು ॥

**ನಮಸ್ತುಭ್ಯಂ ಕಾರ್ತಿಕೇಯ ಯಾವತ್ತಿಷ್ಠತಿ ಭೂತಲಂ ।**
**ತಾವತ್ತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ಸನ್ನಿಧಿಂ ಕುರು ॥**
**ನಮಸ್ತುಭ್ಯಂ ಕಾರ್ತಿಕೇಯ ಯಾವತ್ತಿಷ್ಠತಿ ಭೂತಲಂ ।**
**ತಾವತ್ತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ಸನ್ನಿಧೋ ಭವ ॥**
**ದೇವಸೇನಾಪತೇ ತುಭ್ಯಂ ಶರಣಾಗತವತ್ಸಲ ।**
**ಭವಾತ್ಮಜ ನಮಸ್ತೇಽಸ್ತು ತ್ರಾಹಿ ಮಾಂ ಭವಸಾಗರಾತ್ ॥**
**ಮಯೂರವಾಹನ ವಿಭೋ ಭಕ್ತಾನುಗ್ರಹಹೇತವೇ ।**
**ಶಿಲಾಮಯೇ ನವಾಗಾರೇ ಸದಾ ಸನ್ನಿಹಿತೋ ಭವ ॥**
**ಯಾವದ್ದೇವಾಶ್ಚ ತಿಷ್ಠಂತಿ ಋಷಯೋ ವಸವಸ್ತಥಾ ।**
**ತಾವತ್ತ್ವಂ ಶೈಲಬಿಂಬೇಽಸ್ಮಿನ್ತಿಷ್ಠ ತಿಷ್ಠ ಶಿವಾತ್ಮಜ ॥**

* * * *

## ಮಂತ್ರಾವಾಹನಂ

ಪ್ರಣವ ಉಪಚಾರದಿಂದ ಕೂಡಿದ ಮೂಲಮಂತ್ರದಿಂದ ಮಂತ್ರಾವಾಹನೆಯನ್ನು ಮಾಡಬೇಕು. ಮಾತೃಕಾ ತತ್ತ್ವನ್ಯಾಸ ವರ್ಗ ಲಿಂಗನ್ಯಾಸ ಮೊದಲಾದುವುಗಳಿಂದ ಆಯಾಯ ದೇವರ ಸಕಲಭಾವವನ್ನು ಕಲ್ಪಿಸಬೇಕು. ಪೂಜಾಪಟಲದಲ್ಲಿ ಹೇಳಿದ ಕ್ರಮದಂತೆ ಪಾದ್ಯ ಮೊದಲಾದ ಆಯಾಯ ಉಪಚಾರಗಳನ್ನು ನಿಜ ನಿಜ ಕ್ರಮದಿಂದ ಸಮರ್ಪಿಸಿ, ದೇವರನ್ನು ಪೂಜಿಸಿ, ಪಾಯಸವನ್ನು ನೈವೇದ್ಯ ಮಾಡಿ ಭಕ್ತಿಯಿಂದ ದೇವರನ್ನು ಸಂತೋಷಗೊಳಿಸಬೇಕು. ಆಮೇಲೆ ನಿತ್ಯಪೂಜೆಗಾಗಿ ಯೋಗಪದ್ಮಪೀಠವನ್ನು ಪೂಜಿಸಿ, ಮೂಲಮಂತ್ರದಿಂದಾವಾಹಿಸಿ, ಸಕಲೀಕರಣವನ್ನು ಮಾಡಿ ಪೂಜಾಪಟಲದಲ್ಲಿ ಹೇಳಿದ ಕ್ರಮದಿಂದ ಪೂಜಿಸಬೇಕು. ಪಾಯಸ ಮೊದಲಾಗಿ ಮನೋಹರವಾದ ಹೆಚ್ಚಿನದನ್ನು ದೇವರಿಗೆ ಸಮರ್ಪಿಸಿ, ಅಗ್ನಿಯಲ್ಲಿ ಹೋಮಿಸಿ, ಪರಿವಾರಗಳಲ್ಲಿ ಮುಖ್ಯವಾದುವುಗಳನ್ನು ಪೂಜಿಸಿ, ಅವುಗಳಿಗೆ ಬಲಿಯನ್ನು ಹಾಕಬೇಕು. ಹೇಗೆಂದರೆ– ಬಾಗಿಲಲ್ಲಿರುವ ವಾಹನ, ಗಣಪತಿ, ಈಶಾನ ಲೋಕಪಾಲ, ದುರ್ಗಾ, ಷಣ್ಮುಖ, ನಿರ್ಮಾಲ್ಯಧಾರಿ, ಸಭಾ ದ್ವಾರಪಾಲಕರು, ಬಲಿಯಿಂದ ಕ್ರಮವಾಗಿ ಪೂಜಿಸಿ, ಹೊರಗಿನ ಎಂಟು ಧ್ವಜನಾಯಕರನ್ನು ಮಹಾಬಲಿಪೀಠದಲ್ಲಿ ಅದರ ಆವರಣ ಪೂಜೆಯ ಕೊನೆಯಲ್ಲಿ ಪರಿಷತ್ತಿನ ಅಧಿಪತಿಯನ್ನೂ ಪೂಜಿಸಬೇಕು. ಪುನಃ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ ಮುಂಭಾಗದಲ್ಲಿ ನಿಂತು–

**ಯಾವದತ್ರ ಜಗನ್ನಾಥೋ ಬಿಂಬಮಾಶ್ರಿತ್ಯ ತಿಷ್ಠತಿ ।**
**ತಾವದತ್ರೈವ ರಕ್ಷಾರ್ಥಂ ಯೂಯಂ ತಿಷ್ಠತ ಸರ್ವದಾ ॥**

ಈ ಮಂತ್ರದಿಂದ ಪರಿವಾರ ಮುಖ್ಯಸ್ಥರನ್ನು ಪ್ರಾರ್ಥಿಸಿ ಪೂಜಿಸಿ, ಒಳಗೆ ಹೋಗಿ ನೈವೇದ್ಯವನ್ನು ವಿಸರ್ಜನೆ ಮಾಡಬೇಕು. ಆಮೇಲೆ ಈ ದೇವರಿಗೆ ಗಂಡೂಷ ಮೊದಲಾಗಿ ಕೊಟ್ಟು ಪೂಜಿಸಿ ದೇವರನ್ನು ಸಂತೋಷಗೊಳಿಸಿ ಆ ದೇವರ ತಲೆಯಲ್ಲಿ ಇಟ್ಟ ಮಂತ್ರದ ಕೈಯಿಂದ ಸ್ಪರ್ಶಿಸಿ(ಮುಟ್ಟಿ) ತನ್ನ ಕಲ್ಪದಲ್ಲಿ ಸಿದ್ಧವಾದ ಮಂತ್ರಗಳನ್ನು ಜಪಿಸಬೇಕು. ಅಲ್ಲಿ **ವಿಷ್ಣುವಿನಲ್ಲಿ** – ಪುರುಷಸೂಕ್ತ, ಶ್ರೀಸೂಕ್ತ, ಪಂಚತತ್ತ್ವಗಳು, ದ್ವಾದಶಾಕ್ಷರ, ಅಷ್ಟಾಕ್ಷರ, ಷಡಕ್ಷರ ಮಂತ್ರಗಳನ್ನು ಜಪಿಸಬೇಕು. **ಶಂಕರನಾರಾಯಣನಲ್ಲಿ**– ಶ್ರೀರುದ್ರ, ಪುರುಷಸೂಕ್ತಗಳನ್ನೂ, **ಗುಹನಲ್ಲಿ**– ಮೂಲಮಂತ್ರ ಗಾಯತ್ರಿಯನ್ನು ಜಪಿಸಬೇಕು. **ದುರ್ಗಿಯಲ್ಲಿ** – ಶ್ರೀಸೂಕ್ತ ಮೊದಲಾಗಿ ಪ್ರಾರ್ಥನೆಯಲ್ಲಿ ಹೇಳಿದ ಮಂತ್ರಗಳನ್ನು ಜಪಿಸಬೇಕು. ಆಮೇಲೆ ಆಯಾಯ ಮೂಲಮಂತ್ರಗಳನ್ನು ಸಾಧ್ಯವಾದಷ್ಟು ಜಪಿಸಬೇಕು. **ಶಿವನಲ್ಲಿ**– ಪ್ರಾಸಾದ ಮಂತ್ರ, ಪಂಚಾಕ್ಷರ, ಪಂಚಬ್ರಹ್ಮ ಮಂತ್ರಗಳು, ವ್ಯೋಮವ್ಯಾಪಿದಶಾಕ್ಷರ, ಚತುಃಶತಾಕ್ಷರಗಳನ್ನೂ ಆಯಾಯ ಅಂಗಗಳಿಂದ ಕೂಡಿದ ಮೃತ್ಯುಂಜಯ, ತ್ರ್ಯಂಬಕ, ಶ್ರೀರುದ್ರ, ಪಾಶುಪತಾಸ್ತ್ರಗಳನ್ನು ಆವರ್ತನೆ ಮಾಡಬೇಕು. ಪ್ರೋಂ ಎಂದು ಶ್ರೀಕಂಠಬೀಜವನ್ನು ಅಘೋರಾಸ್ತ್ರ ಪ್ರಣವಪುಟಿತ ಹುಂಫಟ್‌ಕಾರವನ್ನು (ವಜ್ರಮಂತ್ರ) ರಮಾಸೂಕ್ತ, ಶಾಕುನ ಕನಿಕ್ರದಾದಿ ಸ್ವಸ್ತಿನೋಮಿಮಿತಾ–ಮೊದಲಾಗಿ ಶಿವಸಂಕಲ್ಪ, ಮೂಲಮಂತ್ರಗಳನ್ನಾವರ್ತಿಸಬೇಕು. **ವಿಷ್ಣುವಿನಲ್ಲಿ** ಪರಮೇಷ್ಠೀ ಪುರುಷ ತತ್ತ್ವಗಳಿಂದ ಒಮ್ಮೆ ಬಿಂಬದಲ್ಲಿ ವ್ಯಾಪಿಸುತ್ತಾ ಅದರಲ್ಲಿನ ಚೈತನ್ಯಕ್ಕೆ ಬಿಂಬದಿಂದ ತಾದಾತ್ಮ್ಯ ಲಕ್ಷಣರೂಪವಾದ ಸಂಯೋಗವನ್ನು ಭಾವಿಸಬೇಕು. ವಿಶ್ವ ನಿವೃತ್ತಿ ತತ್ತ್ವಗಳಿಂದ ಬಿಂಬಾಗ್ರಾದಿ ಪೀಠದ ಮೂಲ ಪರ್ಯಂತವಾಗಿ ಒಮ್ಮೆ ವ್ಯಾಪಿಸುತ್ತ ಬಿಂಬ ಪೀಠಗಳಲ್ಲಿ ಪುರುಷ ಪ್ರಕೃತ್ಯಾದಿಗಳ ಸಂಯೋಗವನ್ನು ಭಾವಿಸಬೇಕು. ಪುನಃ ಸರ್ವತತ್ತ್ವಗಳಿಂದ (ಒಂದರಿಂದ) ಪೀಠಾಗ್ರಾದಿ ಗರ್ಭಗೃಹಾದಿರೂಪಪ್ರಾಸಾದ

ಪರ್ಯಂತವಾಗಿ ಭಾವಿಸಿ ವ್ಯಾಪಿಸುತ್ತಾ ಅವುಗಳಲ್ಲಿಯ ಆಶ್ರಯಾಶ್ರಯ ಭಾವ ಲಕ್ಷಣವನ್ನು ಸಂಯೋಗವೆಂದು ಭಾವಿಸಬೇಕು. ಶಿವನಲ್ಲಿ ಈ ಭಾವನೆಯನ್ನು ಪಂಚಬ್ರಹ್ಮಮಂತ್ರಗಳಿಂದಲೂ, ಸ್ಕಂದನಲ್ಲಿ ಕ್ಷೇತ್ರಜ್ಞತತ್ತ್ವದಿಂದ ಚಿದರ್ಚನಾ ಸಂಯೋಜನೆಯನ್ನು ಮಾಡಬೇಕು. ಈ ವ್ಯಾಪನೆಯಲ್ಲಿ ಪ್ರಣವ ಮೂಲಶಕ್ತಿ ಬೀಜದಿಂದ ಸಂಪುಟಿತವಾಗಿ ಮಾಡಬೇಕು. ಆಮೇಲೆ ಆಚಾರ್ಯನು ಎರಡೆರಡು ಒಂದೆನ್ನುವುದಾಗಿ ವಿಭಾಗಿಸಲ್ಪಟ್ಟು ಪಂಚತತ್ತ್ವ ಮಂತ್ರಗಳಿಂದ ಚೈತನ್ಯ ಬಿಂಬ ಪ್ರತಿಮಾ ಪೀಠಗಳ ಪೀಠ ಮತ್ತು ಅದು ಇರುವ ಸ್ಥಾನಗಳು ಒಂದನ್ನೊಂದು ಕೂಡಿ ಕೊಂಡಿರುವುದಾಗಿ ಭಾವಿಸಿ, ಪ್ರತ್ಯೇಕವಾಗಿ ವ್ಯಾಪನೆಯನ್ನು ಮಾಡಿ ಪುನಃ ಪ್ರಣವೋಚ್ಚಾರ ಪೂರ್ವಕವಾಗಿ ಮೇಲಕ್ಕೆ ಹಾಗೂ ಕೆಳಕ್ಕೆ ಹೊಂದಿಸಲ್ಪಟ್ಟ ವ್ಯಾಪ್ತಿಯಿಂದ ಬ್ರಹ್ಮಾಧ್ವದ ಸುಷುಮ್ನಾ ನಾಡಿಯಲ್ಲಿ ಬೆಳಗುವ ಚೈತನ್ಯದಿಂದ ಎಲ್ಲಾ ಬ್ರಹ್ಮಾಂಡವನ್ನೂ ಅದರ ಹರಡುವಿಕೆಯಿಂದ ತುಂಬಿದ ಆ ಬ್ರಹ್ಮಾಂಡವನ್ನು ಮಹಾಮರ್ಯಾದಾ ರೂಪದಿಂದ ಇರುವುದಾಗಿ ಪರಿಕಲ್ಪಿಸಬೇಕು. ಹೀಗೆ ಚಿದ್ಬಿಂಬಗಳ ಸಂಯೋಗವನ್ನು ಮಾಡಿ ಆ ದೇವತೆಯ ಲಯಾಂಗಾದಿಗಳನ್ನು ಮಾಡಿ ಅಸ್ತ್ರಮಂತ್ರಾದಿಗಳಿಂದ ಸಂರಕ್ಷಣೆಯನ್ನು ಮಾಡಿ ನಿರಂತರವಾಗಿ ಉರಿಯುವ ದೀಪವನ್ನಿಟ್ಟು ಅಕ್ಷತೆ ಹೂವು ನೀರು ಗಂಧ ಮುಂತಾದ ಪೂಜಾ ಸಾಧನೆಗಳನ್ನು ಒಳಗಡೆ ಇಟ್ಟು ಹೊರಗೆ ಹೋಗಿ ಬಾಗಿಲನ್ನು ಮುಚ್ಚಿ ಆಮೇಲೆ ಯಜಮಾನನಿಂದ ಕೂಡಿ ನಿತ್ಯಪೂಜೆಗಾಗಿ ವ್ಯವಸ್ಥೆಯನ್ನು ಮಾಡಿ ಪ್ರದಕ್ಷಿಣೆ ನಮಸ್ಕಾರ ಮೊದಲಾದುವುನ್ನು ಮಾಡುವವನಾಗಿ ದೇವತೆಯನ್ನು ಪೂಜಿಸಬೇಕು.

* * * *

## ನಿರೀಕ್ಷಾ

ದೇವರ ಮುಂಭಾಗದಲ್ಲಿ ನೆಲವನ್ನು ಶುದ್ಧಗೊಳಿಸಿ, ಅಲ್ಲಿ ಪ್ರತ್ಯೇಕ ಪಾತ್ರೆಯಲ್ಲಿ ಅಕ್ಕಿ ಮೊದಲಾದುವನ್ನಿರಿಸಬೇಕು. ತಂಡುಲ(ಅಕ್ಕಿ), ವ್ರೀಹಿಃ (ಭತ್ತ), ಗೋಧೂಮಃ (ಗೋಧಿ), ಚಣಕಃ(ಕಡಲೆ), ಮುದ್ಗಃ(ಹೆಸರು), ಮಾಷಃ(ಉದ್ದು), ಕುಲಿತ್ಥಃ(ಹುರುಳಿ), ನಿಷ್ಪಾವಃ(ಅವರೆ), ಸರ್ಷಪಃ(ಸಾಸಿವೆ), ಆಢಕಃ(ತೊಗರಿ), ಕಂಗುಃ(ನವಣೆ), ನೀವಾರಃ(ನವಣೆ) ನಾಲಿಕೇರಃ(ತೆಂಗಿನ ಕಾಯಿ), ಗುಡಂ(ಬೆಲ್ಲ), ಘೃತಂ(ತುಪ್ಪ), ತೈಲಂ(ಎಣ್ಣೆ), ಅಂಜನಂ(ಕಾಡಿಗೆ), ಭಕ್ಷಂ(ತಿಂಡಿ, ಖಾದ್ಯ), ಕೂಷ್ಮಾಂಡಂ(ಕುಂಬಳಕಾಯಿ), ದೀಪಂ, ಹಾರಿದ್ರಾಚೂರ್ಣಂ (ಅರಸಿನ ಪುಡಿ), ದಧಿ(ಮೊಸರು), ಕ್ಷೀರಂ(ಹಾಲು), ವಸ್ತ್ರಂ(ಬಟ್ಟೆ), ಗೌಃ(ಹಸು), ಖರ್ಜೂರಂ, ದ್ರಾಕ್ಷಾಂ, ಕರೀರಂ(ಉತ್ತುತ್ತೆ), ಶರ್ಕರಾಃ(ಸಕ್ಕರೆ), ಶರ್ಕರಾಶಿಲಾಃ(ಕಲ್ಲು ಸಕ್ಕರೆ), ಪನಸಂ(ಹಲಸು), ಚೂತಂ(ಮಾವಿನಹಣ್ಣು), ಜಂಬೀರಂ(ಲಿಂಬೆಹಣ್ಣು), ಬೀಜಾಪೂರ(ಮಾದಲಹಣ್ಣು), ಕಪಿತ್ಥಂ(ಬೇಲದಹಣ್ಣು) ಮೊದಲಾಗಿ ಬಗೆಬಗೆಯ ಹಣ್ಣುಗಳನ್ನು ಇರಿಸಿ, ಒಂದು ಕನ್ನಡಿಯನ್ನೂ ಅದರ ಇದಿರಿನಲ್ಲಿರಿಸಿ, ದೇವರ ಮುಚ್ಚಿದ ಬಟ್ಟೆಯನ್ನು ತೆಗೆದು, ಪೂಜಿಸಿ, ನೈವೇದ್ಯ ಮಾಡಿ, ನೀರಾಜನವನ್ನು ಮಾಡಿ, ಪ್ರಾರ್ಥಿಸಿ, ಪ್ರಸನ್ನಪೂಜೆ ಮೊದಲಾದುವನ್ನು ಮಾಡಿ ಬ್ರಹ್ಮಾರ್ಪಣವನ್ನು ಮಾಡಬೇಕು. ಆಮೇಲೆ ತತ್ತ್ವಕಲಾಹೋಮಾದಿಗಳನ್ನು ಮಾಡಬೇಕು.

* * * *

## ದಕ್ಷಿಣಾಮಾನ

ಯಜಮಾನನು ಆಚಾರ್ಯನಿಗೆ ದಕ್ಷಿಣೆಯನ್ನು ಕೊಡಬೇಕು. ಆಚಾರ್ಯನಿಗೆ ನೂರು ಚಿನ್ನದ ನಾಣ್ಯಗಳನ್ನು ಕೊಡಬೇಕು. ಅಷ್ಟೊಂದು ಕೊಡಲು ಅಸಮರ್ಥನಾದಲ್ಲಿ ಕೊಡುವವನ ಹಾಗೂ ತೆಗೆದುಕೊಳ್ಳುವವನ ಮನಸ್ಸಿಗೆ ಸಂತೋಷವುಂಟಾಗುವಷ್ಟಾದರೆ ಸಾಕು ಅದೇ ಉತ್ತಮವಾದ ದಕ್ಷಿಣೆಯು. ಗೋವು, ಭೂಮಿ, ರತ್ನರೇಶ್ಮೆ ಬಟ್ಟೆ ಮೊದಲಾದುವನ್ನು ಕೊಟ್ಟು ಅವನನ್ನು ಸಂತೃಪ್ತಿಗೊಳಿಸಬಹುದು. ಪರಿಕರ್ಮಿಗಳಿಗೆ ಅದರ ಹತ್ತಂಶವನ್ನು ಕೊಡಬೇಕು. ಪ್ರಕಾರಾಂತದಿಂದಲೂ ದಕ್ಷಿಣಾ ವಿಧಾನವು ಹೇಳಲ್ಪಟ್ಟಿದೆ. ಯಜಮಾನನು ತನ್ನಿಂದ ಗಳಿಸಲ್ಪಟ್ಟ ಹಣದ ಮೊತ್ತವನ್ನು ಮೂರು ಭಾಗವಾಗಿಸಿ, ಒಂದಂಶವನ್ನು ದೇವರಿಗೆ ನಿತ್ಯ ಪೂಜಾದಿಗಳಿಗಾಗಿಯೂ ವಿಶೇಷ ಪೂಜೋತ್ಸವಾದಿಗಳಿಗಾಗಿ ವಿನಿಯೋಗಿಸಬೇಕು. ಎರಡನೆಯ ಇನ್ನೊಂದು ಭಾಗವನ್ನು ಆಚಾರ್ಯನಿಗೆ ಪ್ರತಿಷ್ಠೆಗೆ ಯೋಗ್ಯವಾದ ದಕ್ಷಿಣೆಯನ್ನು ಕೊಡಬೇಕು. ಆಚಾರ್ಯನಿಗೆ ಅಲ್ಲಿ ಉಪಯೋಗಿಸಿದ ಧನ ಕನಕ ವಸ್ತುಗಳೆಲ್ಲವನ್ನೂ ಸಮರ್ಪಿಸಿ, ಮೂರನೆಯ ಭಾಗವನ್ನು ಯಜಮಾನನು ಸ್ವತಃ ಮಕ್ಕಳು ಮಡದಿ ಸಹೋದರ ಮುಂತಾದವರ ಪರಿಪೋಷಣೆಗಾಗಿ ತೆಗೆದುಕೊಳ್ಳಬೇಕು. ಈ ಪ್ರಕಾರಾಂತರದಲ್ಲಿ ಆಚಾರ್ಯನು ತನಗೆ ಮಾಡಿದ ದಕ್ಷಿಣೆಯ ಭಾಗದಿಂದ ಹೋಮ ಮೊದಲಾದುವನ್ನು ಮಾಡಿದವರಿಗೂ ಹೇಳಿದಂತೆ ಅನುಕೂಲಿಸುವ, ಕೆಲಸವನ್ನು ಮಾಡುವ ಪರಿಕರ್ಮಿಗಳಿಗೂ ಸದಸ್ಯರಿಗೂ ವೇದ ಪಾರಾಯಣ ಮಾಡುವವರಿಗೂ ಮಂತ್ರಜಪಾದಿಗಳನ್ನು ಮಾಡುವವರಿಗೂ ಗಾಯಕ ಮುಂತಾಗಿ ಬೇರೆಯವರಿಗೂ ಅವರವರಿಗೆ ಸರಿಯಾದ ಭಾಗಗಳಿಂದಲೂ, ಬಟ್ಟೆ ಮೊದಲಾಗಿ ಕೊಡುವುದರಿಂದಲೂ ತೃಪ್ತಿಗೊಳಿಸಬೇಕು.

ಪ್ರತಿಷ್ಠಾ ಸಮನಂತರದಲ್ಲಿ ದೇಗುಲದ ಪ್ರಧಾನದ್ವಾರವನ್ನು ಮೂರು ದಿನಗಳ ಪರ್ಯಂತ ತೆರೆಯಬಾರದು. ಆ ಬಾಗಿಲಿನ ಇದುರಿನಲ್ಲಿ ಸ್ವಸ್ತಿಕ (ಸ್ಥಂಡಿಲ) ಮೊದಲಾದುವನ್ನು ಬರೆದು, ತನ್ನ ಪೂಜೆಗೆ ಯೋಗ್ಯಸಾಧನಗಳನ್ನಿರಿಸಿ ನಿತ್ಯಾರ್ಚನೆ ಹೋಮಾದಿಗಳನ್ನು ಮಾಡಬೇಕು. ನಾಲ್ಕನೆಯ ದಿನದಲ್ಲಿ ಕಲಶಪಟಲದಲ್ಲಿ ಹೇಳಿದಂತೆ ಕಲಶಾಭಿಷೇಕದಿಂದ ಪೂಜಿಸಬೇಕು.

# ಪರಿವಾರಪ್ರತಿಷ್ಠೆ

ಪರಿವಾರ ಪ್ರತಿಷ್ಠೆಯನ್ನು ನಾಲ್ಕನೇ ದಿವಸಕ್ಕೆ ಮೊದಲಾಗಿ ಮಾಡಬೇಕು. ಅಲ್ಲಿ ಮೊದಲನೆಯದಾಗಿ ಪೂರ್ವ ದಿಕ್ಕಿನ ದ್ವಾರದಲ್ಲಿ ಬೇರೆ ದಿಕ್ಕಿನ ಬಾಗಿಲಲ್ಲಾಗಲೀ ದೇವಾಲಯದಲ್ಲಿ ಇಂದ್ರಾದಿ ದಿಕ್ಪಾಲಕರ ಪೀಠಿಕೆಯನ್ನು ಮಾಡಿಸಿ, ಸ್ವೀಕರಿಸಿ ದರ್ಭೆಯಿಂದ ಮಣ್ಣು, ತೊಗಟೆಗಳಿಂದ ಉಜ್ಜಿ ನೀರಿನಿಂದ ತೊಳೆದು ಸ್ಥಳಶುದ್ಧಿಯನ್ನು ಮಾಡಿ ಪ್ರಾಣಾಯಾಮ ಮೊದಲಾದುವುಗಳಿಂದ ಶುದ್ಧಿಗೊಳಿಸಿ, ನಿಜಮಂತ್ರಗಳಿಂದ ಪ್ರಾಣಾಯಾಮ, ಅಂಗನ್ಯಾಸ ಮೊದಲಾದುವುಗಳನ್ನು ಮಾಡಬೇಕು. ಶುದ್ಧಗೊಳಿಸಿದಾಗ ಶೋಷಣ, ದಾಹನ, ಪ್ಲಾವನ, ಸುಶರೀಕರಣವನ್ನು ಮಾಡಬೇಕು. ಈ ಜೀವೋದ್ವಾಸನ, ಭೂತಸಂಹಾರ ಮೊದಲಾದುವನ್ನು ಆಯಾಯ ಸಂದರ್ಭಗಳಲ್ಲಿ ನೆರವೇರಿಸಬೇಕು. ಆಯಾಯ ದಿಗಧೀಶರ ಮಂತ್ರಗಳಿಂದ ಪ್ರಾಣಾಯಾಮ, ನ್ಯಾಸನ, ಪೂಜೆ, ಅರ್ಘ್ಯ ಮೊದಲಾಗಿ ಮಾಡಬೇಕು. ಬಿಂಬದ ಜೊತೆಯಲ್ಲೇ ಜಲಾಧಿವಾಸ, ಅಧಿವಾಸಗಳನ್ನು ಮಾಡಬಹುದು. ಆಮೇಲೆ ತಮ್ಮ ನಿಜಸ್ಥಾನದ ಉತ್ತರದಲ್ಲಿ ಸ್ಥಂಡಿಲವನ್ನು ಬರೆದು ಅಗ್ನಿಯನ್ನು ಪ್ರತಿಷ್ಠಾಪಿಸಿ, ಅದರ ದಕ್ಷಿಣದಲ್ಲಿ ತುಂಬಿದ ಕಲಶದಲ್ಲಿ ಪೀಠಪೂಜೆ ಮೊದಲುಗೊಂಡು ಆಯಾಯ ದಿಗಧಿಪತಿಗಳ ಮಂತ್ರದಿಂದ ಆಯಾಯ ದಿಗಧಿಪತಿಗಳನ್ನು ತಮ್ಮ ತಮ್ಮ ಅಂಗಗಳಿಂದ ಲೋಕಪಾಲರಿಂದ ಅವರ ಅಸ್ತ್ರಗಳಿಂದ ಕೂಡಿ ಪೂಜಿಸಬೇಕು. ಹೇಗೆಂದರೆ– ಓಂ ಇಂದ್ರಾಯ ಸುರಾಧಿಪತಯೇ ನಮಃ– ಮೊದಲಾದವು ದಿಗಧೀಶರ ಮಂತ್ರಗಳು– ಓಂ ಹೃದಯಾಯ । ಇಂದ್ರಾಯ ಶಿರಸೇ । ಸುರಾಧಿಪತಯೇ ಶಿಖಾಯೈ । ನಮಃ ಕವಚಾಯ । ಓಂ ಇಂದ್ರಾಯ ನೇತ್ರಾಭ್ಯಾಂ । ಸುರಾಧಿಪತಯೇ ನಮಃ– ಅಸ್ತ್ರಾಯ– ಹೀಗೆ ಬೇರೆ ದಿಕ್ಕಿನ ಮಂತ್ರಗಳಲ್ಲೂ ಕಲ್ಪಿಸಬೇಕು. ಪುನಃ ಪರಿಧಿಸ್ಥಾಪನಾದಿ ಮಾಡಿ, ಪಂಚಪ್ರಣವಾದಿಯಾದ ಆಯಾಯ ದಿಕ್ಕುಗಳಲ್ಲಿನ ಮಂತ್ರದಿಂದ (ಇಂದ್ರಕ್ರತುಂ ನ ಆಭರ– ಇತ್ಯಾದಿ ಮಂತ್ರದಿಂದ) ಪಕ್ವವನ್ನು ಹೋಮಿಸಬೇಕು. ಪೂರ್ವ ದಿಕ್ಕಿನ ಹೋಮದಲ್ಲಿ ಇಂದ್ರಕ್ರತುಂ ನ ಆಭರ– ಎಂದು, ಆಗ್ನೇಯದಲ್ಲಿ– ಅಗ್ನಿಂದೂತಂ ವೃಣೀಮಹೇ, ದಕ್ಷಿಣ ದಿಕ್ಕಿನಲ್ಲಿ– ನಾಕೇಸುಪರ್ಣಮುಪಯತ್ಪತಂತಂ, ನೈಋತ್ಯದಲ್ಲಿ– ಮೋಷಣಃ ಪರಾಪರಾ, ಪಶ್ಚಿಮ ದಿಕ್ಕಿನಲ್ಲಿ– ಯಂ ರಕ್ಷಂತಿ ಪ್ರಚೇತಸಃ, ವಾಯವ್ಯದಲ್ಲಿ– ವಾಯವಾಯಾಹಿದರ್ಶತೇ, ಉತ್ತರದಲ್ಲಿ– ಸೋಮಂರಾಜಾನಮವಸೇಽಗ್ನಿಂ, ಈಶಾನ್ಯದಲ್ಲಿ– ತ್ರ್ಯಂಬಕಂ ಯಜಾಮಹೇ ಸುಗಂಧಿಂ– ಹೀಗೆ ದಿಕ್ಕುಗಳಲ್ಲಿನ ಪಕ್ವಮಂತ್ರಗಳು. ಪೂಜಾ ಹೋಮದ ಕೊನೆಯಲ್ಲಿ ಆಯಾಯ ದೇವತೆಗಳ ಅಧಿವಾಸ ಹೋಮದಲ್ಲಿ ಹೇಳಿದ ದ್ರವ್ಯಗಳನ್ನು ಸಮಿತ್ತು, ತುಪ್ಪ, ಚರು, ಆಜ್ಯಗಳೆಂಬ ಚತುರ್ದ್ರವ್ಯಗಳನ್ನು ಆಗಲೀ ದಿಗಧೀಶರ ಮಂತ್ರಗಳಿಂದ ಮೂರ್ತಿಪರು ಹೋಮಿಸುತ್ತಾರೆ. ಇಲ್ಲಿ ಎಲ್ಲಾ ದೇವತೆಗಳಲ್ಲಿಯೂ ಶಿವಾಧಿವಾಸದಲ್ಲಿ ಹೇಳಿದ ಅಥವಾ ಪಲಾಶ(ಮುತ್ತುಗ)ದ ಸಮಿಧಗಳಾಗಿರುತ್ತವೆ. ಹೋಮದ ಕೊನೆಯಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ಪದ್ಮಪರ್ಯಂತವಾಗಿ ಪೂಜಿಸಲ್ಪಟ್ಟ ಪೀಠದಲ್ಲಿ ಆಯಾಯ ದಿಕ್ಪಾಲಕರ ನಾಮಮಂತ್ರದಿಂದ ಬಲಿಪೀಠವನ್ನು ಧ್ರುವಾದ್ಯೌಃ– ಎಂಬ ಮಂತ್ರದಿಂದ ಪ್ರತಿಷ್ಠಾಪಿಸಿ, ಇಲ್ಲಿ ಅದೇ ನಾಮಮಂತ್ರದಿಂದಾವಾಹಿಸಿ ಪ್ರಣವಾಂಗದಿಂದಲಾಗಲೀ ಸಕಲೀಕರಣವನ್ನು ಮಾಡಿ, ಆ ಕಲಶಕ್ಕೆ ಸಂಪಾತವನ್ನು ಸೇರಿಸಿ ಆ ಕಲಶೋದಕದಿಂದ ಬಲಿಪೀಠವನ್ನು ಅಭಿಷೇಕ ಮಾಡಿ ಪುನಃ ಅಂಗನ್ಯಾಸವನ್ನು ಮಾಡಿ ಪೂಜಿಸಿ, ಸ್ವಿಷ್ಟಕೃದವದಾನಾ ನಂತರದಲ್ಲಿ ಬೇರೊಂದು ಪಾತ್ರದಲ್ಲಿ ತೆಗೆದಿರಿಸಿದ ಹವಿಸ್ಸಿನಿಂದ ಬಲಿಯನ್ನು ಹಾಕಿ ಪ್ರಸನ್ನ ಪೂಜೆಯನ್ನು ಮಾಡಬೇಕು.

* * * *

# ವೀರಭದ್ರಾದಿ ಪ್ರತಿಷ್ಠೆ

ವೀರಭದ್ರಗಣಪತಿ ಮಾತೃಕೆಗಳನ್ನು ಕೂಡ ಇಂದ್ರಾದಿಗಳಿಗೆ ಹೇಳಿದ ಕ್ರಮದಿಂದಲೇ ದರ್ಭ, ಮೃತ್ ತೊಪ್ಪೆಗಳಿಂದ ಪೀಠಗಳನ್ನು ವರುಣಾಭಿಮಂತ್ರಿತ ಜಲದಿಂದ ಶೋಧಿಸಿ, ಅಗ್ನಿಯನ್ನು ಪ್ರತಿಷ್ಠಾಪಿಸಿ, ಅದರ ದಕ್ಷಿಣದಲ್ಲಿ ಒಂಭತ್ತು ಕಲಶಗಳನ್ನು ಪ್ರತಿಷ್ಠಾಪಿಸಿ, ಅದರ ದಕ್ಷಿಣದಲ್ಲಿ ಒಂಭತ್ತು ಕಲಶಗಳನ್ನು ಪ್ರತಿಷ್ಠಾಪಿಸಿ ಮಧ್ಯದಲ್ಲಿ ವೀರಭದ್ರನನ್ನೂ ಪೂರ್ವದಲ್ಲಿ ಗಣಪತಿಯನ್ನೂ ಆಗ್ನೇಯಾದಿ ಏಳು ಕಲಶಗಳಲ್ಲಿ ಬ್ರಾಹ್ಮ್ಯಾದಿ ಏಳು ಮಾತೃಕೆಗಳನ್ನು ಪೂಜಿಸಬೇಕು. ಅಗ್ನಿಯಲ್ಲೂ ಆವಾಹಿಸಿ, ಪೂಜಿಸಿ, ವೀರಭದ್ರ ಗಾಯತ್ರಿಯಿಂದ ಪಕ್ವಹೋಮವನ್ನು ಮಾಡಿ ಉತ್ಸವ ಪಟಲದಲ್ಲಿ ಹೇಳಲ್ಪಡುವ ವೀರಭದ್ರಾದಿ ಆಯಾಯ ಮಂತ್ರಗಳಿಂದ ಎಂಟೆಂಟರ ಸಂಖ್ಯೆಯಲ್ಲಿ ನಾಲ್ಕು ದ್ರವ್ಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೋಮಿಸಿ, ಆಯಾಯ ದೇವತೆಯ ಸಂಪಾತವನ್ನು ಆಯಾಯ ಕಲಶಗಳಲ್ಲಿ ಹಾಕಿ ಹೋಮದ ಕೊನೆಯಲ್ಲಿ ಪೀಠದಲ್ಲಿ ಹೋಮದಲ್ಲಿ ಹೇಳಿದ ಮಂತ್ರದಿಂದಲೇ ಸ್ಥಾಪಿಸಿ ಪೂಜಿಸಿ ಮಧ್ಯಾದಿಯಾದ ಒಂಭತ್ತು ಕಲಶಗಳಿಂದ ನಿಜ ನಿಜ ಮಂತ್ರಗಳಿಂದ ಅಭಿಷೇಕಿಸಿ, ಬೀಜಗಳಿಂದ ಆರುದೀರ್ಘ ಸ್ವರಗಳ ಹೊಂದಿಕೆಯಿಂದ ಅಂಗ ಹಾಗೂ ಲೋಕಪಾಲರ (ಅಸ್ತ್ರಾವರಣದಿಂದ ಕೂಡಿ) ಪೂಜಿಸಿ ಬಲಿಯನ್ನು ಹಾಕಬೇಕು. ವೀರಭದ್ರ ಗಣಪತಿಯರ ನಡುವೆ– ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ– ಹೀಗೆ ಏಳು ಮಾತೃಕೆಗಳನ್ನು ಪ್ರತಿಷ್ಠಾಪಿಸಿ ಪೂಜಿಸಬೇಕು.

* * * *

## ನಿರ್ಮಾಲ್ಯಧಾರಿ ಪ್ರತಿಷ್ಠೆ

ಆಯಾಯ ದೇವರ ನಿರ್ಮಾಲ್ಯಧಾರಿಯನ್ನು ಜಲಾಧಿವಾಸಾನಂತರದಲ್ಲಿ ದರ್ಭೆ, ಮಣ್ಣು, ತೊಪ್ಪೆ, ನೀರುಗಳಿಂದ ಶುದ್ಧಗೊಳಿಸಿ ಭೂತಸಂಹಾರ ಪೂರ್ವಕವಾಗಿ ವರುಣಾವಾಹನೆಗೊಂಡ ನೀರಿನಿಂದ ತೊಯ್ದು ಜಲಾಧಿವಾಸಾನಂತರದಲ್ಲಿ ತಿರುಗಿ ಸಮೀಪದಲ್ಲಿರಿಸಿ ಭೂತ ಸಂಹಾರ ಶೋಷಣ ದಾಹನ ಪ್ಲಾವನ ಕಾಠಿನ್ಯವನ್ನು ಆಯಾಯ ಬೀಜದಿಂದ ಮಾಡಿ ಭೂತಸೃಷ್ಟಿ ಲಿಪಿ ಭಾವನೆಯನ್ನು ಮಾಡಬೇಕು. ಬಿಂಬಪರಿಗ್ರಹದ ವಿಧಿಯಲ್ಲಿ ಹೇಳಿದಂತೆ ಹಿಂದಿನ ಕ್ರಮದಲ್ಲೇ ದರ್ಭಾದಿಗಳಿಂದ ಶೋಧಿಸಿ, ಘೃತಾಭ್ಯಂಜನ, ಕ್ಷಾಳನವನ್ನು ಮಾಡಿ ಬಿಂಬದ ಸಮೀಪವೇ ಜಲಾಧಿವಾಸ ಮಾಡಿ ಬಿಂಬಶುದ್ಧಿಯ ಒಂದು ಕಲಶದಿಂದ ಅಭಿಷೇಕಿಸಿ, ಪುಣ್ಯಾಹವನ್ನು ಮಾಡಿ ಮಂಟಪದಲ್ಲಿಯೇ ದೇವರ ಸಮೀಪದಲ್ಲಿ ಒಂದೆಡೆ ಸ್ವಸ್ತಿಕ ಪೀಠದಲ್ಲಿಟ್ಟು ಹೇಳಲ್ಪಟ್ಟಂತೆ ಧ್ಯಾನಾಧಿವಾಸ ಮಾಡಬೇಕು. ತತ್ತ್ವಹೋಮ ವಿಧಿಯಲ್ಲಿ ತನ್ನ ಮಂತ್ರದಿಂದ ನಿಜ ಸಂದರ್ಭದಲ್ಲಿ ಸಮಿದಾಜ್ಯಚರ್ವಾಜ್ಯವೆಂಬ ಚತುರ್ದ್ರವ್ಯದಿಂದ ಕೂಡಿ ಆಜ್ಯವನ್ನು ಹೋಮಿಸಬೇಕು. ಗಾಯತ್ರಿ ಇರುವ ಸಂದರ್ಭದಲ್ಲಿ ಗಾಯತ್ರಿಯಿಂದ ಪಕ್ವಹೋಮ. ಅದಿಲ್ಲದಿರುವಲ್ಲಿ ನಿಜಮಂತ್ರದಿಂದಲೇ ಪಕ್ವಹೋಮ. ಅದರಿಂದಲೇ ಪೂರ್ಣಾಹುತಿಯು. ಮಂದಿರದ ವಾಸ್ತುವಿನ ಉದಿತಿಸ್ಥಾನದಲ್ಲಿ ಉತ್ತರಕ್ಕೆ ನಾಳ ಅಂದರೆ ನೀರಿನ ಮಾರ್ಗವಿರುವಂತೆ ಪ್ರಣವ; ತನ್ನ ಮಂತ್ರದಿಂದ ದಕ್ಷಿಣಾಭಿಮುಖವಾಗಿ ಪ್ರತಿಷ್ಠಾಪಿಸಿ 'ಧ್ರುವಾದ್ಯೌಃ' ಎಂದು ಜಪಿಸಬೇಕು. ಮಂಟಪದಲ್ಲಿಯೇ ಅಧಿವಾಸವಾಗಿದ್ದರೆ ಬಲಿಪೀಠದೊಡನೆ ತೆಗೆದುಕೊಂಡು ಬಂದು ಸ್ವಾಯತನದ ಸಮೀಪದಲ್ಲಿರಿಸಿ ಸಮಯಕ್ಕೆ ಸರಿಯಾಗಿ ಪ್ರತಿಷ್ಠಾಪಿಸಬೇಕು. ಅದರ ಉತ್ತರ ಭಾಗದಲ್ಲಿ ಹೋಮವು. ಹೋಮದ ದಕ್ಷಿಣದಲ್ಲಿ (ಹೋಮ ನಿರ್ಮಾಲ್ಯಧಾರಿಯ ಮಧ್ಯದಲ್ಲಿ) ಕಲಶವನ್ನು ಮಾಡಿ ಆವಾಹನಾದಿಗಳಿಂದ ಅಭಿಮಂತ್ರಿಸಿ ಪ್ರತಿಷ್ಠಾಸಮನಂತರದಲ್ಲಿ ಅಭಿಷೇಕ ಮಾಡಿ ದೇವಪೂಜಾವಶಿಷ್ಟವಾದ ಹೂವು ಗಂಧ ಮೊದಲಾದುವುಗಳಿಂದ ಪೂಜಿಸಿ ನೈವೇದ್ಯ ಮಾಡಿ ಬಲಿ ಹಾಕಿ ಪುನಃ ಪೂಜೆ ಮಾಡಿ ಸಂತೋಷಗೊಳಿಸಿ ದೇವೋಪಭುಕ್ತವಾದ ಎಲ್ಲವನ್ನೂ ಸಮರ್ಪಿಸಿ ಪ್ರಾರ್ಥಿಸಬೇಕು.

**ಯಾವದತ್ರ ಜಗನ್ನಾಥೋ ಬಿಂಬಮಾಶ್ರಿತ್ಯ ತಿಷ್ಠತಿ ।**

**ತಾವದತ್ರೈವ ರಕ್ಷಾರ್ಥಂ ತ್ವಂ ತಿಷ್ಠಸ್ವ ಪ್ರತರ್ದನ ॥**

**ನಿರ್ಮಾಲ್ಯಧಾರಿಗಳು** – ವಿಷ್ಣುವಿನಲ್ಲಿ– ವಿಷ್ವಕ್ಸೇನಃ, ಗುಹನಲ್ಲಿ– ಧೂರ್ತಸೇನಃ, ಶಿವನಲ್ಲಿ– ಚಂಡೇಶ್ವರಃ, ದುರ್ಗಿಯಲ್ಲಿ– ಮುಂಡಿನೀ, ಗಣಪತಿಯಲ್ಲಿ– ಕುಂಭೋದರಃ, ಹರಿಹರನಲ್ಲಿ– ಚಂಡಸೇನಃ, ಶಾಸ್ತಾರನಲ್ಲಿ– ಘೋಷವಾನ್.

* * * *

## ಮಹಾಬಲಿಪೀಠ ಪ್ರತಿಷ್ಠಾ

ಮಹಾಬಲಿಪೀಠದ ರಚನೆಗೆ ಮೊದಲು ತಾಮ್ರಪಾತ್ರೆಯಲ್ಲಿ ಪಂಚಗವ್ಯವನ್ನು ಸಿದ್ಧಗೊಳಿಸಿ, ಬಲಿಪೀಠವನ್ನು ಸ್ಥಾಪಿಸುವ ಉತ್ತರಭಾಗದಲ್ಲಿ ಯಾ ಬೇರೆಡೆಯಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ನೂರೆಂಟರ ಸಂಖ್ಯೆಯಲ್ಲಿ ತುಪ್ಪವನ್ನು ನಿಜಪೀಠಾಧಿಪನ ಮಂತ್ರದಿಂದ ಹೋಮಿಸಬೇಕು. ಅದರ ದಕ್ಷಿಣದಲ್ಲಿ ಸ್ವಸ್ತಿಕವನ್ನು ಬರೆದು ಗರ್ಭಪಾತ್ರ ಸ್ಥಾಪನೆಗೆ ಬೇಕಾಗುವ ಪರಿಕರಗಳನ್ನು ಸಂಗ್ರಹಿಸಿ ನಿಜಪೀಠಾಧಿಪನ ಮಂತ್ರದಿಂದ ತಾಮ್ರ ಪಾತ್ರೆಯಲ್ಲಿ ಸಂಗ್ರಹಿಸಿದ ಪಂಚಗವ್ಯವನ್ನು ಪೂಜಿಸಿ, ಆ ನಿಜಮಂತ್ರದಿಂದಲೇ ನೂರೆಂಟು ಆವರ್ತಿ ಹೋಮಿಸಿ, ಆ ಸಂಪಾತಾಜ್ಯವನ್ನು ಅಗ್ನಿಗತ ಚೈತನ್ಯವನ್ನೂ ಆ ಗರ್ಭಪಾತ್ರದಲ್ಲಿ ಸೇರಿಸಿ, ಪೀಠ ಮಧ್ಯ ಬರುವ ಭೂಭಾಗದಲ್ಲಿ(ಉಪಪೀಠ ಬೇಕಿದ್ದರೆ ಸಿದ್ಧಪಡಿಸಿಕೊಂಡು) ಸ್ಥಳಶುದ್ಧಿಯನ್ನು ಮಾಡಿ, ಅಲ್ಲಿ ವಿಷ್ಟರವನ್ನಿರಿಸಿ, ಪೀಠಪೂಜಾ ನಂತರದಲ್ಲಿ ಶಕ್ತಿಯನ್ನು ಆವಾಹಿಸಿ, ಪೂಜಿಸಿ, ಅದರ ಗರ್ಭಾಶಯದಲ್ಲಿ ರಾತ್ರಿಯಲ್ಲಿ ಗರ್ಭಪಾತ್ರೆಯನ್ನು ಗುರೂಪದಿಷ್ಟ ಮಾರ್ಗದಿಂದ ಇರಿಸಿ, ಆ ದೇವತೆಯನ್ನು ಆ ಪೀಠಾಧಿಪತಿಯನ್ನೂ ಅದರಲ್ಲಿ ಆವಾಹಿಸಿ ಪೂಜಿಸಿ, ನೈವೇದ್ಯ ಮಾಡಿ, ಪ್ರಸನ್ನಪೂಜೆಯನ್ನು ಮಾಡಿ ತಾಳತ್ರಯಾದಿಗಳಿಂದ ಸಂರಕ್ಷಿಸಬೇಕು. ಶಿಲ್ಪಿಯಿಂದ ಮಹಾಬಲಿಪೀಠವನ್ನು ಸಿದ್ಧಗೊಳಿಸಬೇಕು. ತಯಾರಿಸಿದ ಬಲಿಪೀಠವನ್ನು ಪ್ರದಕ್ಷಿಣ ಪೂರ್ವಕವಾಗಿ ಪ್ರಣವದಿಂದ ಸ್ವೀಕರಿಸಿ, ದರ್ಭೆ,ಮಣ್ಣು, ತೊಪ್ಪೆಗಳಿಂದ ಉಜ್ಜಿ ಪರಿಶೋಧಿಸಿ, ತುಪ್ಪವನ್ನು ಲೇಪಿಸಿ, ಹಿಟ್ಟಿನಿಂದ ಉಜ್ಜಿ ತೊಳೆದು ಅಭಿಷೇಕ ಮಾಡಿ ಜಲಾಧಿವಾಸದ ಸಮಯದಲ್ಲಿ ವಾರುಣ ಮಂತ್ರಾವಾಹನೆಯ ಕಲಶೋಕದಿಂದ ತೊಳೆದು ಬಿಂಬಶುದ್ಧಿಗೆ ಹೇಳಿದಂತೆ ಕಲಶಗಳಿಂದ ಅಭಿಷೇಕಿಸಿ ಪುಣ್ಯಾಹಪರ್ಯಂತವಾಗಿ ಮಾಡಿ ಭೂತ ಸಂಹಾರ ಶೋಷಣಾದಿ ಶಕ್ತಿ ಮಂತ್ರದಿಂದ ಪೂಜೆ, ಮಾತೃಕಾನ್ಯಾಸ, ತತ್ತ್ವನ್ಯಾಸ, ಲಿಪಿನ್ಯಾಸಗಳನ್ನು ಮಾಡಿ ಪೀಠಪೂಜೆಯನ್ನು ಮಾಡಿ ನಿಜನಾಮ ಮಂತ್ರದಿಂದ ಬಲಿಪೀಠಾಧಿಪತಿಯನ್ನು ಆವಾಹಿಸಿ, ಪೀಠಾಧಿಪತಿಯ ಪರಿಶುದ್ಧಿಯ ಸಮಯದಲ್ಲಿ ಸಂಸ್ಕರಿಸಲ್ಪಟ್ಟ ನಿಜ ಪರಿವಾರಗಳಿಂದ ಕೂಡಿ ಮಹಾಬಲಿಪೀಠವನ್ನು ಪೂಜಿಸಿ, ಅನ್ನ ಮೊದಲಾಗಿ ನೈವೇದ್ಯ ಮಾಡಿ ಆಮೇಲೆ ಬಲಿಪೀಠಕ್ಕೂ ಪರಿವಾರಕ್ಕೂ ಬಲಿಯನ್ನು ಹಾಕಬೇಕು. ನೈವೇದ್ಯವನ್ನು ವಿಸರ್ಜಿಸಿ, ನಿರ್ಮಾಲ್ಯವನ್ನು

ಪರಿಶೋಧಿಸಿ ಪೂಜಿಸಿ, ಪ್ರಸನ್ನ ಪೂಜೆಯನ್ನು ಮಾಡಿ ರಕ್ಷಿಸಬೇಕು. ಅದರ ಇದುರಿನಲ್ಲಿ ಕುಂಡದಲ್ಲಿ ಅಗ್ನಿಜನನವನ್ನು ಮಾಡಿ, ಅದರ ದಕ್ಷಿಣದಲ್ಲಿ ಒಂಭತ್ತು ಕಲಶಗಳನ್ನು ತುಪ್ಪ ಧಾನ್ಯ, ಅಥವಾ ಗಂಧೋದಕದಿಂದಲಾಗಲೀ ತುಂಬಿಸಿ, ನಿಜ ನಿಜಾಧಿಪ ಮಂತ್ರದಿಂದ, ಪರಿವಾರ ಮಂತ್ರಗಳಿಂದಲೂ ತುಂಬಿಸಿ, ಪೂಜಿಸಿ, ಪೀಠಾಧಿಪ ಗಾಯತ್ರಿಯಿಂದ ಅದರ ಮಂತ್ರದಿಂದ ಅಥವಾ ದೇವರ ಗಾಯತ್ರಿಯಿಂದಾಗಲೀ ಪಕ್ವಹೋಮವನ್ನು ಮಾಡಿ, ಪೀಠಾಧಿಪ ಮಂತ್ರದಿಂದ ನೂರೆಂಟು ಸಂಖ್ಯೆಯಲ್ಲಿ ಪರಿವಾರ ಪೀಠ ಮಂತ್ರಗಳಿಂದ ಎಂಟೆಂಟರ ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಬೇಕು. ಪಾಂಚರಾತ್ರಾದಿ ವೈಷ್ಣವಾಗಮ ವಿಧಿಯಲ್ಲಿ ಪೀಠಾಧಿಪ ಮಂತ್ರದಿಂದ ಸಮಿತ್ತು, ತುಪ್ಪ, ಚರು, ಲಾಜ(ಅರಳು), ಸಾಸಿವೆ, ಸಕ್ತು(ಅರಳುಪುಡಿ), ಯವ, ತಿಲ, ದಧಿ, ಕ್ಷೀರ, ಜೇನು, ಪುಷ್ಪ(ಪದ್ಮಾದಿ), ಫಲ(ಕದಲ್ಯಾದಿ) ನೂರ ಎಂಟು ಪರಿವಾರ ಪೀಠ ಮಂತ್ರಗಳಿಂದ ಎಂಟರ ಸಂಖ್ಯೆಯಲ್ಲಿ ಹೋಮಿಸಬೇಕು. ಬಲಿಪೀಠ ಮತ್ತು ಅದರ ಕಲಶಗಳಲ್ಲಿ ಸಂಪಾತವನ್ನು ಸಮರ್ಪಿಸಿ ಬಲಿಪೀಠದಲ್ಲಿ ಆವರಣ ಸಹಿತವಾಗಿ ಪೀಠಾಧಿಪನನ್ನು ಪೂಜಿಸಿ, ಪೀಠಾಧಿಪನಿಗೂ ದಿಗ್ಗಣಗಳಿಗೂ ಬಲಿಯನ್ನೂ ಕೊಡಬೇಕು. ಅಲ್ಲಿ ವಿಷ್ಣುವಿನಲ್ಲಿ ಬಲಿದಾನದಲ್ಲಿ ಓಂ ನಮಃ ಪ್ರಾಚ್ಯೇಭ್ಯೋ ಭೂತೇಭ್ಯೋ ವಿಶ್ವಭೂತೇಭ್ಯೋ ನಮೋಽಸ್ತು ವಿಶ್ವರೂಪೇಭ್ಯೋ ವಿವಿಧರೂಪೇಭ್ಯಶ್ಚ ವೋ ನಮೋ ನಮಃ । ಓಂ ನಮೋ ದಕ್ಷಿಣೇಭ್ಯೋ ಶಾರ್ಙ್ಗಧನ್ವನೋ ಹಾಹಾಭ್ಯಶ್ಚ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ । **ಓಂ ನಮಃ ಪಾಶ್ಚಾತ್ಯೇಭ್ಯೋ ಭೂತೇಭ್ಯೋ ಭೈರವೇಭ್ಯೋ ವಿಷ್ಣುಪಾಲಕೇಭ್ಯೋ ವಿಯದ್ಗತಹೋದರ ವರ್ತಿಭ್ಯೋ ಹುಂಫಟ್ ಗಚ್ಛತ ಸ್ವಾಹಾ । ವಿಷ್ಣು ಗಣಾನಾಮತೋ ಬಲಿಮುಪಹರಾಮಿ ಭದ್ರಂನೋ ದದತ ಪ್ರೀಣಯತ ಸ್ವಾಹಾ । ಓಂ ನಮೋ ವಿಷ್ಣು ಭೂತೇಭ್ಯಃ ಉದೀಚ್ಯೇಭ್ಯಃ ಸಕಲಜಂತು ಹಿತಕರೇಭ್ಯಃ ವಿಶ್ವಪಾಲಕೇಭ್ಯೋ ನಮಃ ಸ್ವಾಹಾ।** ಹೀಗೆ ನಾಲ್ಕು ದಿಕ್ಕುಗಳಲ್ಲಿ ವಿಷ್ಣುವಿನಲ್ಲಿ ಬಲಿಕೊಡಬೇಕು. ಶಿವನಲ್ಲಿ– ಎಂಟು ದಿಕ್ಕುಗಳಲ್ಲಿ ಎರಡು ಬಗೆಯ ಮಂತ್ರಗಳು. **ದಶಮೂರ್ತಿಪಾರ್ಷದೇಭ್ಯಃ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ । ಪ್ರಾಗ್ಗಣೇಭ್ಯೋ ಬಹುರೂಪೇಭ್ಯೋ ವಿರೂಪೇಭ್ಯಃ ವಿಶ್ವರೂಪೇಭ್ಯಃ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ ।** ಹೀಗೆಯೇ– **ಆಗ್ನೇಯೀಗಣೇಭ್ಯೋ ಬಹುರೂಪೇಭ್ಯೋ ವಿರೂಪೇಭ್ಯೋ ವಿಶ್ವರೂಪೇಭ್ಯಃ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ ಇತ್ಯಾದ್ಯೂಹ್ಯಂ ।** ಅಥವಾ ಇಲ್ಲಿ ಎಲ್ಲಾ ದೇವತೆಗಳಲ್ಲೂ ಉತ್ಸವ ಬಲಿಯಲ್ಲಿ **ಯೇಭೂತಾ–** ಮೊದಲಾದ ಮಂತ್ರಗಳು ಪ್ರಯೋಗಿಸಲ್ಪಡಬೇಕು. ಪುನಃ ಪೀಠದಲ್ಲಿರುವ ನಿರ್ಮಾಲ್ಯವನ್ನು ತೆಗೆದು ಪೂಜಿಸಿ ಕೆಂಪು ಬಟ್ಟೆಯಿಂದ ಮುಚ್ಚಿಟ್ಟು ರಾತ್ರಿಯಲ್ಲಿ ಅಧಿವಾಸ ಮಾಡಬೇಕು. ದೇವರ ಬೆಳಗಿನ ಪೂಜೆಯ ಕೊನೆಯಲ್ಲಿ ಬಲಿಪೀಠದ ಸ್ಥಾಪನೆಗಾಗಿ ದೇವರನ್ನು ಪ್ರಾರ್ಥಿಸಿ ಪುನಃ ನಿರ್ಮಾಲ್ಯವನ್ನು ತೆಗೆದು ಚೆನ್ನಾಗಿ ಅಭಿಷೇಕ ಮಾಡಿ, ಪದ್ಮಾಂತ ಪೀಠವನ್ನು ಪೂಜಿಸಿ ಬಲಿಪೀಠವನ್ನು ಮಂತ್ರಮಯವಾಗಿ ಕಲ್ಪಿಸಿ, ಅಲ್ಲಿ ಪೂಜಿಸಲ್ಪಟ್ಟ ಪೀಠದಲ್ಲಿ ಆಯಾಯ ಮಂತ್ರದಿಂದ ಸ್ಥಾಪಿಸಿ, **'ಧ್ರುವಾದ್ಯೌಃ'** ಎಂದು ಮಂತ್ರ ಜಪವನ್ನು ಮಾಡಿ ಆವಾಹಿಸಿ, ಸಕಲೀಕರಣವನ್ನು ಮಾಡಿ ಪೂಜಿಸಲ್ಪಟ್ಟ ನವಕ ಮಧ್ಯದ ಬ್ರಹ್ಮಕಲಶದಿಂದ ಅಭಿಷೇಕಿಸಿ ಪ್ರಣವದಿಂದ ಅಂಗವನ್ನು ಮಾಡಿ, ಪುನಃ ಸುತ್ತಲೂ ಇರುವ ಅಷ್ಟಮೂರ್ತಿಗಳನ್ನು ಕ್ರಮವಾಗಿ ಪೂರ್ವಾದಿಯಾಗಿ ಪ್ರದಕ್ಷಿಣ ಕ್ರಮದಿಂದ ನಿಜನಿಜ ಮಂತ್ರಗಳಿಂದ ಅಭಿಷೇಕ ಮಾಡಿ ಆವರಣದಿಂದ ಕೂಡಿದ ಪೀಠಾಧಿಪನನ್ನು ಪೂಜಿಸಿ ಬಲಿ ಪೀಠದಲ್ಲಿ ಮೊದಲು ನೈವೇದ್ಯವನ್ನು ಮಾಡಿ ಪೀಠದ ಮೇಲ್ಭಾಗದಲ್ಲಿ ಉಪಪೀಠಗಳಲ್ಲಿಯೂ (ಪೂಜಿಸಿ) ಬಲಿಯನ್ನು ನಿಜ ನಿಜ ಮಂತ್ರಗಳಿಂದ ಕೊಟ್ಟು ನಿರ್ಮಾಲ್ಯವೆಲ್ಲವನ್ನೂ ತೆಗೆದು ಪೂಜಿಸಿ ಸಂತೋಷಗೊಳಿಸಿ, ನಮಸ್ಕರಿಸಿ, **'ಯಾವದತ್ರ ಜಗನ್ನಾಥಃ'** ಮೊದಲಾಗಿ ಹಿಂದೆ ಹೇಳಿದ ಮಂತ್ರದಿಂದ ಪ್ರಾರ್ಥಿಸಿ ತಾಲತ್ರಯ ಮೊದಲಾದುವನ್ನು ಮಾಡಬೇಕು. ದೇವರಪ್ರತಿಷ್ಠೆಯ ನಾಲ್ಕನೆಯ ದಿನದಲ್ಲಿ ದೇವರನ್ನು ಹೇಳಲ್ಪಟ್ಟ ಕಲಶಗಳಿಂದ ಅಭಿಷೇಕಿಸಿ ಪೂಜಿಸಿ ದೇವರ ಕಲಶಾಭಿಷೇಕದಲ್ಲುಳಿದ ಅವಸ್ರಾವ (ಮಿಕ್ಕ ಕಲಶದ ನೀರು)ವನ್ನು ಸಂಗ್ರಹಿಸಿ ಬಲಿಪೀಠಕ್ಕೆ ಪ್ರೋಕ್ಷಣೆಯನ್ನು ಮಾಡಿ, ಸ್ಥಾಪಿಸಲ್ಪಟ್ಟ ಪೀಠಿಕಾದಲ್ಲಿರುವ ಪರಿವಾರಗಳಿಗೂ ಬಲಿಯನ್ನು ಕೊಡಬೇಕು. ಮಹಾಪೀಠ ಪ್ರತಿಷ್ಠೆಯನ್ನು ನಾಲ್ಕು ದಿನಗಳ ನಂತರವೇ ಯಾವಾಗಲಾದರೂ ಮಾಡುವ ಸಂದರ್ಭದಲ್ಲಿ ಪ್ರತಿಷ್ಠೆಯ ನಾಲ್ಕನೆಯ ದಿನದಲ್ಲಿ ಕ್ರಮದಂತೆ ಹೇಳಿದ ಕಲಶಗಳಿಂದ ದೇವರನ್ನು ಅಭಿಷೇಕಿಸಿ, ಅದರ ಉಳಿದ ಅವಸ್ರಾವದಿಂದ ಪ್ರೋಕ್ಷಣೆ ಮೊದಲಾದುವನ್ನು ಮಾಡಬೇಕೆನ್ನುವುದು ವಿಶೇಷವು.

## ಧ್ವಜಪ್ರತಿಷ್ಠೆ

ಧ್ವಜಪ್ರತಿಷ್ಠೆಯನ್ನು ಮಾಡಲು ಮೊದಲು ನಿಶ್ಚಯಿಸಲ್ಪಟ್ಟ ಅಂಕುರಾರೋಪಣವನ್ನು ಬೀಜ ಬಿತ್ತುವಿಕೆಯನ್ನು ಮಾಡಿ ಲೋಹದಿಂದ ಸಿದ್ಧಗೊಳಿಸಿದ ವಾಹನವನ್ನು ಅಧಿವಾಸ ದಿವಸಕ್ಕೆ ಮೊದಲು ಸ್ವೀಕರಿಸಿ ನೀರಿನಲ್ಲಿ ಅಧಿವಾಸ ಮಾಡಬೇಕು. ದೇವರ ಅಧಿವಾಸದ ಮಂಟಪದಂತೆ ಮಂಟಪವನ್ನು ಮಾಡಿ ಸಂಸ್ಕರಿಸಿ ಅಲ್ಲಿ ನಿದ್ರಾ ಕಲಶದಿಂದ ಕೂಡಿ ಹಾಸಿಗೆಯನ್ನು ಮಾಡಿ ಕ್ರಮದಂತೆ ಪೀಠಪೂಜೆಯನ್ನು ಮಾಡಿ ಪ್ರಕೃತಿಯನ್ನಾವಾಹಿಸಿ ಪೂಜಿಸಬೇಕು. ವಿಷ್ಣುವಿನ ಕಲಶಪೂಜೆಯಲ್ಲಿ ಹಾಸಿಗೆಯ ನಾಲ್ಕು ದಿಕ್ಕುಗಳಲ್ಲಿ ಈಶಾನ್ಯ ಮೂಲೆಯಲ್ಲಿಯೂ ಕ್ರಮವಾಗಿ ವಜ್ರ, ಗರುಡಶಿಲಾ, ಮೌಕ್ತಿಕ, ಶಂಖರತ್ನ, ಪದ್ಮರಾಗದಿಂದ ಕೂಡಿದ ಐದು ಕಲಶಗಳಲ್ಲಿ ಇಂದ್ರ ಮೊದಲಾದ ದಿಕ್ಪಾಲರನ್ನು , ಈಶಾನ್ಯಕೋಣದ ಕಲಶದಲ್ಲಿ ಗರುಡನನ್ನೂ ಆವಾಹಿಸಿ ಪೂಜಿಸಬೇಕು. ಶಿವನಲ್ಲಿಯಾದರೂ ಹಾಸಿಗೆಯ ಇದುರಿನಲ್ಲಿ ಹೇಮರತ್ನಗಂಧಗಳಿಂಥ ಕೂಡಿದ ನೀರಿನಿಂದಲೇ ಒಂಭತ್ತು

ಕಲಶಗಳನ್ನು ತುಂಬಿಸಿ ಮಧ್ಯದ ಕಲಶದಲ್ಲಿ ವೃಷಭವನ್ನೂ, ಪರಿಕಲಶಗಳಲ್ಲಿ ಇಂದ್ರಾದಿ ದಿಕ್ಪಾಲಕರನ್ನೂ ಪೂಜಿಸಬೇಕು. ದುರ್ಗಿಯಲ್ಲಿ ವಿಷ್ಣುವಿನಂತೆಯೂ, ಉಳಿದ ದೇವತೆಗಳಲ್ಲಿ ಶಿವನಂತೆಯೂ ಕಲಶಸ್ಥಾಪನೆ ಮೊದಲಾಗಿ ಮಾಡಬೇಕು. ಅವುಗಳಲ್ಲಿ ಪ್ರಧಾನ ಕಲಶದಲ್ಲಿ ತಮ್ಮ ನಿಜವಾಹನವನ್ನು ಪೂಜಿಸಬೇಕು. ವಿಷ್ಣುವಿನಲ್ಲಿ ಇನ್ನೊಂದು ಕೋಣದಲ್ಲಿ ಐದು ಕಲಶಗಳನ್ನು ಸ್ಥಾಪಿಸಿ ಮಧ್ಯ ಮೊದಲಾಗಿ ಉತ್ತರ ಕೊನೆಯಾಗಿ ಕ್ರಮವಾಗಿ ಕಷಾಯ ಮೃಜ್ಜಲ ಧಾನ್ಯ ಜಲ ಗವ್ಯ ಗಂಧಜಲಗಳಿಂದ ತುಂಬಿಸಿ ಪೂಜಿಸಬೇಕು. ಉಳಿದ ದೇವತೆಗಳಲ್ಲಿ ಹೇಳಿದ ಕ್ರಮದಂತೆ ಗಂಧೋದಕದಿಂದ ತಮ್ಮ ನಿಜ ಬಿಂಬ ಶುದ್ಧಿಯಲ್ಲಿ ಹೇಳಿದ ಕಲಶದ್ರವ್ಯಗಳಿಂದಲಾಗಲೀ ನವಕವನ್ನು ತುಂಬಿಸಿ ಪೂಜಿಸಬೇಕು. ವಾಹನದ ಪ್ರತಿಮೆಯನ್ನು ದೇವರ ಬಿಂಬದಂತೆ ನೀರಿನಿಂದ ತೆಗೆದುಕೊಂಡು ಬಂದು ಸ್ನಾನ ಮಂಟಪಕ್ಕೆ ತೆಗೆದುಕೊಂಡು ಹೋಗಿ ಪೂಜಿಸಲ್ಪಟ್ಟ ಪೀಠದಲ್ಲಿ ಎಲ್ಲಾ ದೇವತೆಗಳಲ್ಲಿ ನಿಜಾಯತನಕ್ಕೆ ಸಮ್ಮುಖವಾಗಿ, ವಿಷ್ಣುವಿನಲ್ಲಿ ಪೂರ್ವಾಭಿಮುಖವಾಗಿಯಾಗಲೀ, ಇರಿಸಿ, ಕ್ರಮವಾಗಿ ಹೇಳಿದ ಪ್ರಕಾರದಿಂದ ಮಧು ಮನ್ಮಂತ್ರದಿಂದ ಜಪಿಸಲ್ಪಟ್ಟ ಮಧು ಆಜ್ಯದಿಂದ ಚಿನ್ನದ ಸೂಜಿಯಿಂದ ನಿಜ ನೇತ್ರ ಮಂತ್ರದಿಂದ ನೇತ್ರೋಲ್ಲೇಖನವನ್ನು ಮಧ್ವಾಜ್ಯ ತುಂಬುವಿಕೆಯನ್ನು ಮಾಡಿ ನೇತ್ರಪಟವನ್ನು ತೆಗೆದು ಹಸುವನ್ನು ತೋರಿಸಿ, ಆ ಹಸುವನ್ನು ಆಚಾರ್ಯನಿಗೆ ಕೊಟ್ಟು ತನಗೆ ಹೇಳಿದ ಕ್ರಮದಿಂದ ನಿಜ ನಿಜ ದ್ರವ್ಯಗಳಿಂಥ ತೊಳೆದು ಪುನಃ ಹಿಂದೆ ಹೇಳಿದ ಕಲಶಗಳಿಂದ ಅಭಿಷೇಕಿಸಿ, ಉಪಹಾರ ಸಮರ್ಪಣೆ ಮೊದಲಾಗಿ ಪುಣ್ಯಾಹ ವಾಚನಾಂತವಾಗಿ ಮಾಡಿ ಶಾಕುನಾದಿ ಸೂಕ್ತಗಳಿಂದ ಮಂಟಪಕ್ಕೆ ತೆಗೆದುಕೊಂಡು ಹೋಗಿ ಹಾಸಿಗೆಯಲ್ಲಿ ನಿಜಾಲಯದ ಸಮ್ಮುಖವಾಗಿ ಮಲಗಿಸಿ, ಹೇಳಲ್ಪಟ್ಟ ಕ್ರಮದಿಂದ ತತ್ತ್ವಸಂಹಾರವನ್ನು ಮಾಡಿ ಶೋಷಣಾದಿಗಳಿಂದ ಶೋಧಿಸಿ, (ವಾಹನ ಬಲಿ ಪೀಠಾದಿ ವಿಷಯದಲ್ಲಿ ದೇವರದ್ದೇ ಮೂಲಮಂತ್ರವಿಧಾನದಿಂದ ತನ್ನ ಸಕಲೀಕರಣ ಮೊದಲಾಗಿ ಮಾಡಬೇಕು) ತತ್ತ್ವಸೃಷ್ಟಿ ಮಂತ್ರ ಪ್ರಾಣಾಯಾಮ ಮೊದಲಾದುವನ್ನೂ ಮಾಡಬೇಕು. ಆಮೇಲೆ ಪೂಜಿಸಲ್ಪಟ್ಟ ಪೀಠದಲ್ಲಿ ಆಯಾಯ ವಾಹನ ಮಂತ್ರದಿಂದ ಆವಾಹಿಸಿ ಪೂಜಿಸಿ ಹೊರಗೆ ಹೋಗಿ ದರ್ಭಮುಷ್ಟಿ ಮೊದಲಾದುವುಗಳಿಂದ ಶುದ್ಧೀಕರಿಸಲ್ಪಟ್ಟ ಧ್ವಜಸ್ಥಾನದಲ್ಲಿ ಕಂಗೊಳಿಸುವ ಪೀಠ ಮತ್ತು ನಪುಂಸಕ ಶಿಲೆಯನ್ನು ಹಿಂದೆ ಹೇಳಿದ ಕ್ರಮದಿಂದ ಸಂಸ್ಕರಿಸಿ, ದರ್ಭೆ ಮಣ್ಣು ತೊಪ್ಪೆಗಳಿಂದ ಧ್ವಜದಂಡವನ್ನು ಉಜ್ಜಿ ತಿಕ್ಕಿ ತೊಳೆದು ಧ್ವಜದಂಡದ ಹಾಗೂ ಪೀಠಕ್ಕೆ ಪುಣ್ಯಾಹವನ್ನು ಮಾಡಬೇಕು. ಧ್ವಜದಂಡವನ್ನು ಶೋಷಣ ಮೊದಲಾದುವುಗಳಿಂದ ಸಂಸ್ಕರಿಸಿ ಪ್ರಣವದಿಂದ ಪೂಜಿಸಿ, ಅದರ ಮೂಲ (ಬುಡ), ಮಧ್ಯ (ನಡು), ಅಗ್ರ (ತುದಿ)ಗಳಲ್ಲಿ ವೃಷ, ಷಣ್ಮುಖ, ವಾಯುವನ್ನು **ಓಂ ವೃಷಭಾಯ ನಮಃ, ಓಂ ಸ್ಕಂದಾಯ ನಮಃ, ಓಂ ವಾಯವೇ ನಮಃ**– ಹೀಗೆ ನಾಮಮಂತ್ರದಿಂದ ಪೂಜಿಸಬೇಕು. ಪುನಃ ಪೀಠ ಮೊದಲಾದುವನ್ನು ಶೋಷಣ ಮೊದಲಾದುವುಗಳಿಂದ ಸಂಸ್ಕರಿಸಿ, ಆಯಾಯ ನಿಜಶಕ್ತಿಗಳಿಂದ ಪೂಜಿಸಿ ಪ್ರಣವದಿಂದ ನಪುಂಸಕಶಿಲೆಯನ್ನು ಪೂಜಿಸಿ ಎಲ್ಲವನ್ನೂ ಸಂರಕ್ಷಿಸಿ, ಮಂಟಪದ ಒಳಗೆ ಹೋಗಿ ತತ್ತ್ವಹೋಮಾದಿಗಳನ್ನು ಮಾಡಬೇಕು. ಆಯಾಯ ದೇವತೆಗಳಿಗೆ ಹೇಳಿದ ಪಂಚತತ್ತ್ವಮಂತ್ರಗಳಿಂದ, ಆಯಾಯ ದೇವತೆಗಳಿಗೆ ಹೇಳಿದ ಕ್ರಮದಿಂದ ಶಿವನಲ್ಲಿ ಉದ್ಘಾತವೃತ್ತಿಯಿಂದಲೂ ಹೋಮಿಸಿ, ಸಂಪಾತವನ್ನು ವಾಹನದಲ್ಲಿ ಸಮರ್ಪಿಸಿ, ಆಯಾಯ ನಿಜಾಗಮಗಳಲ್ಲಿ ಹೇಳಿದ ಅಧಿವಾಸ ಹೋಮ (ಪ್ರಣವಶಕ್ತಿ ಪ್ರಣವಗಳಿಂದ ಧ್ವಜದಂಡ ಅದರ ಪೀಠದ ನಪುಂಸಕ ಶಿಲೆಯ ಮಂತ್ರದಿಂದ ಎಂಟರಂತೆ ಹೋಮಿಸಿ, ಆ ಸಂಪಾತವನ್ನೂ ಸ್ಪರ್ಶಿಸಬೇಕು) ಪ್ರಣವದಿಂದ ರತ್ನ ನ್ಯಾಸ ಹೋಮವನ್ನು ಶಾಂತಿ ಹೋಮಾದಿಗಳನ್ನು ಮಾಡಬೇಕು. ವಾಹನಮಂಡಲಾದಿಗಳಲ್ಲಿ ಪೂಜಿಸಿ ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸಿ ಹೊರಗೆ ಬಲಿಯನ್ನು ಕೊಟ್ಟು ಒಳಗೆ ಹೋಗಿ ಪುನಃ ಪೂಜೆಯೊಂದಿಗೆ ಸ್ತುತಿಯನ್ನು ಮಾಡಬೇಕು. ಆಮೇಲೆ ಗರ್ಭಗೃಹದಲ್ಲಿರುವ ದೇವತೆಯನ್ನು ಪೂಜಿಸಿ ಸಂತೋಷಗೊಳಿಸಬೇಕು. ಅಧಿವಾಸ ಹೋಮಾದಿಗಳಲ್ಲಿ ವಿಶೇಷವು ಹೇಳಲ್ಪಡುತ್ತದೆ. ಆಚಾರ್ಯನೂ ಮೂರ್ತಿಪರೂ ಹೇಳಿದ ಕ್ರಮದಿಂದ ಅಗ್ನಿಯನ್ನು ವಿಹರಣವನ್ನು ಧ್ವಜವಾಹನದ ಅಥವಾ ದೇವತೆಯ ಗಾಯತ್ರಿಯಿಂದ ಪಕ್ವವನ್ನು ಹೋಮಿಸುತ್ತಾರೆ. ಆಮೇಲೆ ಎಲ್ಲಾ ದೇವತೆಗಳಲ್ಲಿಯೂ ಸಮಿತ್ತು ತುಪ್ಪ ಮೊದಲಾದ ದ್ರವ್ಯಗಳನ್ನು ಆಯಾಯ ನಿಜವಾಹನ ಮಂತ್ರದಿಂದ ಹೋಮಿಸುತ್ತಾರೆ. ವಿಷ್ಣುವಿನಲ್ಲಿ ಕಚಟಪತಪ ವರ್ಗಗಳಿಂದ ಕೂಡಿದ ಸ್ವಾಹಾಂತವಾದ ವೈನತೇಯ ಪದವು ವಾಹನಮಂತ್ರವು. ಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿ ಮತ್ತು ನಡುವೆ ಐದು ಕುಂಡಗಳಲ್ಲಿ ಹೋಮಿಸುತ್ತಾರೆ. ಹೇಗೆಂದರೆ– **ಓಂ ಕಂ ಖಂ ಗಂ ಘಂ ಙಂ ವೈನತೇಯಾಯ ಸ್ವಾಹಾ** । ಇದೇ ಮೊದಲಾದ ಮಂತ್ರ ಸ್ವರೂಪವು. ವಿಷ್ಣುವಿನಲ್ಲಿ– ಎಂಟು ದಿಕ್ಕುಗಳಲ್ಲಿ– **ಧ್ವಜವಾಸಿಭ್ಯೋ ಭೂತೇಭ್ಯೋ ನಮಃ**– ಇದು ಬಲಿಮಂತ್ರ

**ಧ್ವಜವಾಹನಭೂತೋಽಸೌ ವಿಷ್ಣೋರ್ವಿಷ್ಣುಪರಾಕ್ರಮಃ**

**ಸುಪರ್ಣಃ ಪ್ರೀಯತಾಂ ಮಹ್ಯಂ ವಿನತಾಕುಲನಂದನಃ**

ಇದು ಸ್ತುತಿ ಮಂತ್ರವು. ಬೇರೆಡೆಯಲ್ಲಿ ಹೀಗೆ ಊಹಿಸಿಕೊಳ್ಳಬೇಕು. ಹೀಗೆ ಅಧಿವಾಸವನ್ನು ಮಾಡಿ ಮರುದಿನ ಬೆಳಿಗ್ಗೆ ದೇವರನ್ನು ಪೂಜಿಸಿ, ಪ್ರಸನ್ನಗೊಳಿಸಿ ಧ್ವಜಸ್ಥಾನಕ್ಕೆ ಬಂದು ದೇವರ ಪ್ರತಿಷ್ಠೆಯಲ್ಲಿ ಹೇಳಿದ ಕ್ರಮದಿಂದ ನಾಂದೀಮುಖ ಮೊದಲಾಗಿ ಪುಣ್ಯಾಹದಿಂದ ಕೂಡಿ ನಪುಂಸಕ ಶಿಲೆಯನ್ನು ಸ್ಥಾಪಿಸಿ, ಸಂಪಾತವನ್ನು ಸಮರ್ಪಿಸಿ, ಎಲ್ಲಾ ದೇವತೆಗಳಲ್ಲೂ ನಪುಂಸಕ ಶಿಲೆಯಲ್ಲಿ ಚಿನ್ನದಿಂದ ಕೂಡಿ ರತ್ನಗಳನ್ನು ನ್ಯಾಸ ಮಾಡಬೇಕು. ವಿಷ್ಣುವಿನಲ್ಲಿ ವೈಡೂರ್ಯ, ಪುಷ್ಯರಾಗ, ಮೌಕ್ತಿಕ

ಗಾರುಡ ಮಾಣಿಕ್ಯಗಳನ್ನು ಐದು ಬಗೆಯ ರತ್ನಗಳನ್ನು **ಓಂ ಕಂ ಖಂ ಗಂ ಘಂ ಙಂ ವೈನತೆಯಾಯ ನಮಃ** ಎಂದು ಕ್ರಮವಾಗಿ ಪೂರ್ವಾದಿ ಮಧ್ಯಾಂತವಾಗಿ ಇಡಬೇಕು. ಉಳಿದ ದೇವತೆಗಳಲ್ಲಿ ಎಲ್ಲಾ ಆ ದೇವತೆಗಳ ರತ್ನನ್ಯಾಸದಲ್ಲಿ ಹೇಳಿದುದನ್ನೇ ಸ್ವೀಕರಿಸಬೇಕು. ಪುನಃ ಎಲ್ಲಾ ದೇವತೆಗಳಲ್ಲಿಯೂ ಮಂಟಪಕ್ಕೆ ಹೋಗಿ ತೋರಣ ಧ್ವಜಗಳಲ್ಲಿನ ಸತ್ವವನ್ನು ಉದ್ವಾಸನೆ ಮಾಡಿ ಅಕ್ಷಿಯನ್ನು ತುಂಬಿದ ಪಾತ್ರೆಯಲ್ಲಿ ಪತಾಕೆ ಘಂಟೆ ಹೂವಿನ ಮಾಲೆಗಳಿಂದ ಕೂಡಿದ ವಾಹನಬಿಂಬವನ್ನು ಇರಿಸಿ ಅಲ್ಲಿ ಉಳಿದ ಎಲ್ಲವನ್ನೂ ಮೂರ್ತಿಪರಿಂದ ತರಿಸಿ, ನೀರಾಜನವನ್ನು ಮುಂದಾಗಿಸಿ, ಕ್ರಮವಾಗಿ ಕುಂಭೇಶನಿಂದ ಮುಂದೆ ಕಲಶಪಂಚಕ ಯಾ ನವಕವನ್ನು ತೆಗೆದುಕೊಂಡು ಬಂದು ದೇವರ ಗರ್ಭಾಲಯದಲ್ಲಿ ಬಂದು ದೇವರನ್ನು ಪೂಜಿಸಿ, ಸಂತೋಷಪಡಿಸಿ, ದೇವರ ಇದುರಿನಲ್ಲಿರುವ ವಾಹನದಿಂದ ಪತಾಕೆಯಿಂದ ಕೂಡಿದ ವಾಹನದ ಬಿಂಬದಲ್ಲಿ ಆವಾಹಿಸಿ ಪೂಜಿಸಿ, ನಿದ್ರಾಕಲಶ ಕುಂಭೇಶ ಮೊದಲಾದವುಗಳಿಂದ ಕೂಡಿಕೊಂಡು ಧ್ವಜಸ್ಥಾನವನ್ನು ಹೊಂದಿ ಜ್ಞಾನಿಗಳಾದ ಬ್ರಾಹ್ಮಣರನ್ನು ಸಂತೋಷಗೊಳಿಸಿ ಅವರ ಅನುಮತಿಯೊಂದಿಗೆ ಸ್ಥಾಪಿಸಬೇಕು. ಅಲ್ಲಿ ಕ್ರಮವು ಹೀಗಿದೆ– ಪ್ರತಿಷ್ಠೆಯ ಸಮಯದಲ್ಲಿ ಧ್ವಜದ ಇದುರಿನಲ್ಲಿ ಪೀಠಪೂಜಾ ನಂತರದಲ್ಲಿ ಪರಾವಾಹನ ಮೊದಲಾಗಿ ಮಾಡಿ ಪ್ರಣವ ಉಪಚಾರ ಮೂಲಮಂತ್ರಗಳನ್ನು ನಿಜಮಂತ್ರ (ವಾಹನ ಮಂತ್ರ, ಮೂಲಮಂತ್ರ) ಪುಟಿತವಾದ ಪಂಚತತ್ತ್ವಗಳನ್ನು ನಿಜಮಂತ್ರ, ಪ್ರಣವಗಳನ್ನು ಹೇಳಿ ಸ್ಥಾಪಿಸಬೇಕು. ಮಂತ್ರನ್ಯಾಸಾನಂತರದಲ್ಲಿ ಪೂಜಿಸಿ ವಾಹನ ಕಲಶ ಜಲದಿಂದ ನಿಜಮಂತ್ರದಿಂದಭಿಷೇಕಿಸಿ ಜೀವಾವಾಹನೆ ಮೊದಲಾಗಿ ಮಾಡಿ ಮಂತ್ರಾವಾಹನ, ನ್ಯಾಸಪೂಜೆ ಮೊದಲಾದುವನ್ನು ಮಾಡಿ ಧ್ವಜದ ಇದುರಿನಲ್ಲಿ ಕೀಲು ಜೋಡಣೆ ಮೊದಲಾದುವುಗಳಿಂದ ದೃಢವಾಗಿಸಿ ಪೀಠಪೂಜೆ ಮಾಡಿದ ಕುಳಿಯಲ್ಲಿ ಉತ್ತರ ಯಾ ವಾಮದಲ್ಲಿ ಪಕ್ಕದಲ್ಲಿ ಜೋತಾಡುವ ಘಂಟೆ ಮಾಲೆ ಶುಭ್ರವಾದ ಪತಾಕೆಗಳುಳ್ಳ ಧ್ವಜದಂಡವನ್ನು ದೇವರ ಅಭಿಮುಖವಾಗಿ ಇರುವಂತೆ ಸ್ಥಾಪನೆ ಮಾಡಿ ಹಿಂದೆ ಹೇಳಿದ ಮಂತ್ರಗಳಿಂದ ಪ್ರತಿಷ್ಠೆ ಮಾಡಿದುದನ್ನು ಸರಿಯಾಗಿರುವುದಾಗಿ ನಿಶ್ಚಯವಾಗಿಸಿಕೊಂಡು ಧ್ಯಾನಿಸಿ ಅದನ್ನು ಮುಟ್ಟಿಕೊಂಡು 'ಧ್ರುವಾದ್ಯೌಃ' ಎಂದು ಮಂತ್ರಗಳನ್ನು ಜಪಿಸಬೇಕು. ವಾಹನ ಮಂತ್ರಾವಾಹನ ವಿನ್ಯಾಸಾ ನಂತರದಲ್ಲಿ ದಿಕ್ಪಾಲಕರ ಕಲಶಗಳಿಂದ– ವಿಷ್ಣುವಿನಲ್ಲಿ ನಾಲ್ಕು, ಉಳಿದ ದೇವತೆಗಳಲ್ಲಿ ಎಂಟು ಆಯಾಯ ಅಧಿಪರ ಮಂತ್ರದಿಂದಲೇ ವೇದಿಯಲ್ಲೆ ಇದುರಿನಲ್ಲಿ ಸಿಂಪಡಿಸಿ ಕರ್ಕರೀ(ಅಸ್ತ್ರ) ನೀರಿನಿಂದ ಪರಿಷೇಕಿಸಿ, ಕ್ರಮವಾಗಿ ಕುಂಭೇಶ ನಿದ್ರಾಕಲಶ ನೀರುಗಳಿಂದ ಅಭಿಷೇಕ ಮಾಡಬೇಕು. ಆಯಾಯ ಮಂತ್ರನ್ಯಾಸ ಪೂರ್ವಕವಾಗಿ ಪೂಜಿಸಿ, ಅದಕ್ಕೆ ಹವಿಸ್ಸನ್ನು ನೈವೇದ್ಯ ಮಾಡಿ ಬಲಿಯನ್ನು ಹಾಕಬೇಕು. ನಿರ್ಮಾಲ್ಯವನ್ನು ವಿಸರ್ಜಿಸಿ (ತೆಗೆದು) ನೆಲವನ್ನು ಶುದ್ಧಗೊಳಿಸಿ, ಸಂತೋಷಗೊಳಿಸಿ, ಪ್ರಸನ್ನಪೂಜೆಯನ್ನು ಮಾಡಿ, ಸ್ತುತಿ(ಪ್ರಾರ್ಥನೆ)ಯನ್ನು ಮಾಡಬೇಕು. ವಿಷ್ಣುವಿನಲ್ಲಿ **ಓಂ ನಮೋಽಷ್ಟಕುಲ ನಾಗಭೂಷಣಾಯ ನಾಗಶೋಣಿತ ಲಿಪ್ತಾಂಗಾಯ ಸಮಸ್ತ ಪಾತಾಲವಾಸಿ ಜನವಿಕ್ಷೋಭಣ ಕರಾಯ ದೇವದಾನವ ಗಂಧರ್ವೋರಗ ಮಥನಾಯ ಮಾತುರರ್ಥೇ ನಾಗಮೋಹನಾಯ ಹನಹನ ವಿಘ್ನಂ ನಾಶಯ ಸ್ವಾಹಾ** – ಇದು ಸ್ತುತಿ. (ಪ್ರಾರ್ಥನಾ) ಮಂತ್ರವು. ಶಿವನಲ್ಲಿ–

**ನಮಸ್ತೇಽಸ್ತು ತ್ರಿಣೇತ್ರಾಯ ಧ್ವಜಾಧಿಪತಯೇ ನಮಃ ।**
**ನಂದಿನೇ ತು ನಮಸ್ತುಭ್ಯಂ ಉತ್ಸವಸ್ಯ ಪ್ರಸಿದ್ಧಯೇ ॥**

ಇದು ಸ್ತುತಿ ಮಂತ್ರವು. ಪುನಃ ಗರ್ಭಗೃಹದಲ್ಲಿ ಹೋಗಿ ಸಾಮರ್ಥ್ಯವನ್ನು ಅನುಸರಿಸಿ (ಸಾಧ್ಯವಾದಷ್ಟು) ವೈಭವದಿಂದ ದೇವರನ್ನು ಆರಾಧಿಸಿ, ಧ್ವಜವಾಹನದಿಂದ ಕೂಡಿ ಪರಿವಾರಗಳಿಗೆ ಹಿಂದಿನಂತೆ ಸುತ್ತಲೂ ಬಲಿಯನ್ನು ಮಾಡಿ ಮೂರು ದಿನ ಕಳೆದು ನಾಲ್ಕನೆಯ ದಿನದಲ್ಲಿ ದೇವರನ್ನು ಸಾಧ್ಯವಾದಷ್ಟು ಕಲಶಗಳಿಂದ ಅಭಿಷೇಕಿಸಿ ಅವಸ್ರಾವ ಪ್ರೋಕ್ಷಣೆಯನ್ನು ಭೂತ ಬಲಿಯನ್ನೂ ಮಾಡಬೇಕು.

* * * *

## ಸಮಷ್ಟಿಹೋಮಾನ್ವಾಧಾನಂ

ದೇವತಾ ನೂತನ ಬಿಂಬ ಪ್ರತಿಷ್ಠಾಯಾಂ ತತ್ತ್ವಹೋಮಂ ಶಾಂತಿಹೋಮಂ, ಅಧಿವಾಸಹೋಮಂ, ಪೀಠಾಧಿವಾಸ ಹೋಮಂ, ನಪುಂಸಕಶಿಲಾಧಿವಾಸ ಹೋಮಂ, ಶಕ್ತಿಹೋಮಂ ಚ ತಂತ್ರೇಣ ಕರಿಷ್ಯೇ– ಇತಿ ಸಂಕಲ್ಪ್ಯ– **ಅನ್ವಾಧಾನಂ– ತತ್ತ್ವಹೋಮೇ** – ಪ್ರಣವವ್ಯಾಹೃತಿ ಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾ ಪಕ್ವೇನ ಪೂಜಾ ಮಂತ್ರೈರಾಜ್ಯೇನ, ಮೂಲೇನಾಷ್ಟವಾರ ಮಾಜ್ಯೇನ ಪ್ರಧಾನ ದೇವತಾಂ * * * ಆದೌ ಸಂಹಾರ ಮಾರ್ಗೇಣ ಅಖಿಲ ತತ್ತ್ವಮಂತ್ರೈಃ ಸಕೃತ್ಸಕೃದಾಜ್ಯೇನ, ಮೂಲೇನಾಷ್ಟವಾರ ಮಾಜ್ಯೇನ, ಪುನಃ ಸೃಷ್ಟಿ ಕ್ರಮೇಣ ಅಖಿಲತತ್ತ್ವಮಂತ್ರೈಃ ಅಷ್ಟವಾರ ಮಾಜ್ಯೇನ ಪ್ರತಿ ತತ್ತ್ವಂ ಪೂರ್ಣಾಹುತಿಭಿಃ ।

**ಶಾಂತಿಹೋಮೇ** – ಪ್ರಧಾನದೇವತಾಂ * * * * * ಮಂತ್ರೇಣ ಮಧು ಘೃತ ಕ್ಷೀರ ದ್ರವ್ಯೈಃ ಪೃಥಕ್ ಯಥಾ ಸಂಖ್ಯಯಾ (ಸಂಪಾತಂ ಸ್ರುವೇಣ ಆಧಾರ ಹೃದಯ ಭ್ರೂಮಧ್ಯೇಷು ಸಮರ್ಪಯೇತ್ । ಸ್ರುವಂ ಪ್ರಕ್ಷಾಳಯೇಚ್ಚ)

**ಅಧಿವಾಸ ಹೋಮೇ** – ಪ್ರಧಾನದೇವತಾಂ * * * ಮೂಲೇನ ಸಮಿದಾಜ್ಯಚರು ಯವ ವ್ರೀಹಿ ತಿಲ ಸರ್ಷಪ ದೂರ್ವೇತಿ ದ್ರವ್ಯೈಃ ಪ್ರತ್ಯೇಕಂ ಯಥಾ ಸಂಖ್ಯಯಾ (ಪ್ರತಿದೇವತಾಮಾಶ್ರಿತ್ಯ ದ್ರವ್ಯಭೇದಃ ಮೂಲೇದ್ರಷ್ಟವ್ಯಃ) ಮಧ್ಯೇ ವ್ಯಾಹೃತಿ ಪೂರ್ಣಾಹುತಿಭಿಃ ।

**ಪೀಠಾಧಿವಾಸಹೋಮೇ** – ಪ್ರಧಾನದೇವತಾಂ ಶಕ್ತಿಂ ಶಕ್ತಿಬೀಜೇನ ಯಥಾಸಂಖ್ಯಯಾ ಆಜ್ಯೇನ

**ನಪುಂಸಕಶಿಲಾಧಿವಾಸ ಹೋಮೇ** – ಪ್ರಧಾನದೇವತಾಂ ಪರಮಾತ್ಮಾನಂ ಪ್ರಣವೇನ ಯಥಾಸಂಖ್ಯಯಾ ಆಜ್ಯೇನ

**ರತ್ನನ್ಯಾಸಹೋಮೇ** – ದೇವಗಾಯತ್ರ್ಯಾ ಯಥಾಸಂಖ್ಯಯಾ ಆಜ್ಯೇನ

**ಶಕ್ತಿಹೋಮೇ** – ಪೀಠ ಮಂತ್ರೈಃ ಸಕೃತ್ಸಕೃದಾಜ್ಯೇನ ನವಶಕ್ತಿಮಂತ್ರೈಃ ಪೃಥಗಷ್ಟಾಷ್ಟವಾರ ಮಾಜ್ಯೇನ, ಮೂಲೇನ ಸಮಿದಾಜ್ಯ ಚರ್ವಾಜ್ಯದ್ರವ್ಯೈಃ ಯಥಾ ಸಂಖ್ಯಯಾ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋ ಯಕ್ಷೇ ॥

* * * *

## ಕಲಶಾರಾಧನೆ

ಸ್ಥಾಪಿಸಲ್ಪಟ್ಟ ದೇವತೆಯ ನಾಲ್ಕನೆಯ ದಿನದಲ್ಲಿ ಮಾಡಬೇಕಾದ ಕಲಶಾಭಿಷೇಕದ ವಿಧಿವಿಧಾನಗಳು ವಿವರಿಸಲ್ಪಡುತ್ತದೆ. ಈ ಅಭಿಷೇಕದಿಂದ ಅಶುದ್ಧತೆಯ ಹೋಗಲಾಡಿಸುವುದರೊಂದಿಗೆ ಪ್ರತಿಮೆಯಲ್ಲಿ ಪವಿತ್ರತೆಯನ್ನು ಹೊಂದಿಸಿ ಸಾನ್ನಿಧ್ಯಾಭಿವೃದ್ಧಿಯುಂಟಾಗುತ್ತದೆ.

ಈ ಕಲಶ ವಿಧಿಯು ಹದಿನೇಳು ದ್ರವ್ಯ ಹಾಗೂ ಇಪ್ಪತ್ತೈದು ದ್ರವ್ಯಗಳಿಂದ ಎರಡು ವಿಧವಾಗಿದೆ. ದೇವತೆಯನ್ನನುಸರಿಸಿ ದ್ರವ್ಯ ಭೇದದೊಂದಿಗೆ ಕಲಶಗಳ ಸಂಖ್ಯೆಯೂ ಹೇಳಲ್ಪಟ್ಟಿದೆ. ಕಲಶ ಸಂಖ್ಯೆಯು ಹೆಚ್ಚಿದ್ದರೂ ದ್ರವ್ಯಗಳು ಮಾತ್ರ ಹದಿನೇಳು ಅಥವಾ ಇಪ್ಪತ್ತೈದೇ ಆಗಿರುತ್ತದೆ. ಉಳಿದ ಕಲಶಗಳು ಗಂಧೋದಕದಿಂದಲಾಗಲೀ ಶುದ್ಧೋದಕದಿಂದಲಾಗಲೀ ತುಂಬಿಸಲ್ಪಡುತ್ತವೆ.

ದ್ರವ್ಯಗಳು ಹದಿನೇಳರಲ್ಲಿ– ಇಪ್ಪತ್ತೈದು ಕಲಶಗಳಲ್ಲಿ ಏಳು ಪದದ ಮಂಡಲವು. ನಲವತ್ತೆಂಟು ಕಲಶಗಳಲ್ಲಿ ಒಂಭತ್ತು ಪದದ ಮಂಡಲವು. ಎಂಭತ್ತೊಂದು ಕಲಶಗಳಲ್ಲಿ ಹನ್ನೊಂದು ಪದದ ಮಂಡಲವು. ನೂರೆಂಟು ಕಲಶ ಸಮೂಹಗಳಲ್ಲಿ ಹದಿಮೂರು ಪದದ ಮಂಡಲವು. ಇನ್ನೂರ ಒಂಭತ್ತರಲ್ಲಿ ಹದಿನೇಳು ಪದದ ಮಂಡಲವು.

ಇಪ್ಪತ್ತೈದು ಕಲಶಗಳ ಏಳು ಪದಗಳ ಮಂಡಲದಲ್ಲಿ ಮಧ್ಯದ ಒಂಭತ್ತು ಪದಗಳಿಂದ ಎಂಟು ದಳದ ಪದ್ಮವನ್ನು ಬರೆದು ಮಧ್ಯದ ಬೀಜಕೋಶದಲ್ಲಿ(ಕರ್ಣಿಕೆ) ದಳಗಳಲ್ಲಿ ಒಂಭತ್ತು ಕಲಶವನ್ನೂ ಮಾಡಿ, ಸುತ್ತಲಿನ ಒಂದು ಪದದಿಂದ ವೀಥಿಯನ್ನು ಮಾಡಿ, ಅದರ ಹೊರ ಭಾಗದ ದಿಕ್ಕುಗಳಲ್ಲಿ ಮೂರರಂತೆ ಹನ್ನೆರಡನ್ನು, ವಿದಿಕ್ಕುಗಳಲ್ಲಿ ಒಂದೊಂದರಂತೆ ನಾಲ್ಕನ್ನು ಇರಿಸಿ ಇಪ್ಪತ್ತೈದು ಮಾಡಬೇಕು. ನಲವತ್ತೊಂಭತ್ತು ಕಲಶಗಳಲ್ಲಿ ಒಂಭತ್ತು ಪದದ ಮಂಡಲದಲ್ಲಿ ಮಧ್ಯದ ಒಂಭತ್ತು ಪದಗಳಿಂದ ಕಮಲವನ್ನು ಬರೆದು ಹಿಂದೆ ಹೇಳಿದಂತೆ ಒಂಭತ್ತು ಕಲಶಗಳು ದಿಕ್ಕುಗಳಲ್ಲಿ ಆರರಂತೆ ಇಪ್ಪತ್ತನಾಲ್ಕು ಕಲಶಗಳು. ವಿದಿಕ್ಕುಗಳಲ್ಲಿ ನಾಲ್ಕರಂತೆ ಹದಿನಾರು ಕಲಶಗಳು. ಎಂಭತ್ತೊಂದು ಕಲಶಗಳಲ್ಲಿ ಹನ್ನೊಂದು ಪದದ ಮಂಡಲದಲ್ಲಿ ನಡುವೆ ಹಿಂದೆ ಹೇಳಿದಂತೆ ಪದ್ಮವನ್ನು ಬರೆದು ಒಂಭತ್ತು ಕಲಶಗಳು. ದಿಕ್ಕುಗಳಲ್ಲಿ ಒಂಭತ್ತರಂತೆ ಒಟ್ಟು ಮೂವತ್ತಾರು ಕಲಶಗಳು. ವಿದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಕಲಶಗಳು. ನೂರಾ ಎಂಟು ಕಲಶಗಳಲ್ಲಿ ಹದಿಮೂರು ಪದದ ಮಂಡಲದಲ್ಲಿ ಮಧ್ಯದಲ್ಲಿ ಹಿಂದೆ ಹೇಳಿದಂತೆ ಕಮಲವನ್ನು ಬರೆದು ಒಂಭತ್ತು ಕಲಶಗಳು ದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಕಲಶಗಳು. ವಿದಿಕ್ಕುಗಳಲ್ಲಿ ಹದಿನಾರರಂತೆ ಅರವತ್ತನಾಲ್ಕು ಕಲಶಗಳು– ಇನ್ನೂರ ಒಂಭತ್ತು ಕಲಶಗಳಲ್ಲಿ ಹದಿನೇಳು ಪದದ ಮಂಡಲದಲ್ಲಿ– ಮಧ್ಯದಲ್ಲಿ ಇಪ್ಪತ್ತೈದು ಪದಗಳಿಂದ ಅಷ್ಟದಳ ಪದ್ಮವನ್ನು ಬರೆದು ಅದರಲ್ಲಿ ಒಂಭತ್ತು ಕಲಶಗಳು. ಹೊರಗೆ ಎಂಟು ದಿಕ್ಕುಗಳಲ್ಲಿ ಇಪ್ಪತ್ತೈದರಂತೆ ಒಟ್ಟು ಇನ್ನೂರು ಕಲಶಗಳು. ಇದು ಶಿವನಲ್ಲಿ ಹೇಳಿದ ವಿಧಾನವು.

ಇದರಂತೆ ವಿಷ್ಣುವಿನಲ್ಲಿ ನೂರೆಂಟು ಕಲಶಗಳಲ್ಲಿ ಹೊರಗಡೆ ದಿಕ್ಕುಗಳಲ್ಲಿ ಹತ್ತು ಕಲಶಗಳು. ವಿದಿಕ್ಕುಗಳಲ್ಲಿ ಹದಿನೈದು ಕಲಶಗಳಾಗಿರುತ್ತವೆ. ಉಳಿದುದೆಲ್ಲವೂ ಶಿವನಿಗೆ ಹೇಳಿದಂತೆ ವಿಷ್ಣುವಿಗೂ ಸರಿಸಮನಾಗಿರುತ್ತದೆ.

ಇಪ್ಪತ್ತೈದು ದ್ರವ್ಯಗಳ ವಿಧಾನವು ಬರೆಯಲ್ಪಡುತ್ತದೆ. ಇಲ್ಲಿ ಕಲಶಗಳನ್ನನುಸರಿಸಿ ರೇಖೆಗಳನ್ನು ದ್ರವ್ಯಗಳನ್ನನುಸರಿಸಿ ವಿಭಾಗಗಳನ್ನು ಮಾಡಬೇಕು. ಇಪ್ಪತ್ತೈದು ಕಲಶಗಳು ಮೊದಲಿನದು. ನಲವತ್ತೊಂಭತ್ತು ಎರಡನೆಯದು. ಎಂಭತ್ತೊಂದು ಸಂಖ್ಯೆಯದು ಮೂರನೆಯದು. ನೂರೆಂಟು ಸಂಖ್ಯೆಯದು ನಾಲ್ಕನೆಯದು. ಐದನೆಯದು ನೂರಐವತ್ತಾರು. ಆರನೆಯದು ಇನ್ನೂರ ಹದಿನೇಳು. ಇನ್ನೂರ ಐವತ್ತ ಮೂರು ಏಳನೆಯದು. ಮುನ್ನೂರ ಒಂದು ಕಲಶವು ಎಂಟನೆಯದು. ಒಂಭತ್ತನೆಯ ಪ್ರಕಾರವು ಐನೂರ ಒಂದು ಕಲಶವು. ಸಾವಿರದ ಒಂದು ಕಲಶವು ಹತ್ತನೆಯ ಪ್ರಕಾರವು. ಹೀಗೆ ಕಲಶ ವಿಧಾನವು ಹತ್ತು ವಿಧವಾಗಿ ಸಾಮಾನ್ಯವಾಗಿ ಹೇಳಲ್ಪಟ್ಟಿದೆ. ಈ ವಿಧಾನವು ವಿಷ್ಣುವಿನಲ್ಲಿ ಹೇಳಲ್ಪಟ್ಟಿದೆ.

ಇಪ್ಪತ್ತೈದು ಸಂಖ್ಯೆಯ ಕಲಶಗಳಲ್ಲಿ ಪೂರ್ವಾಭಿಮುಖವಾಗಿ ಹಾಗೂ ಉತ್ತರಾಭಿಮುಖವಾಗಿ ಆರು ರೇಖೆಗಳನ್ನು ಎಳೆದು, ಐದು ಪದದ ಮಂಡಲದಲ್ಲಿ ಶುದ್ಧ ನೀರಿನ ಹೊರತಾಗಿ ಬ್ರಾಹ್ಮ, ದೈವಿಕ, ಮಾನುಷವೆಂಬ ವಿಭಾಗದ ಕ್ರಮದಿಂದ **ಇಪ್ಪತ್ತೈದು ಕಲಶ**ಗಳನ್ನು ಮಾಡಬೇಕು.

ಎರಡನೆಯ ನಲವತ್ತೊಂಭತ್ತು ಕಲಶಗಳಲ್ಲಿ ಪೂರ್ವಾಭಿಮುಖ ಹಾಗೂ ಉತ್ತರಾಭಿಮುಖವಾಗಿ ಪ್ರತ್ಯೇಕವಾಗಿ ಹನ್ನೆರಡು ರೇಖೆಗಳನ್ನೆಳೆದು ಹನ್ನೊಂದು ಪದದ ಮಂಡಲವನ್ನು ಮಾಡಬೇಕು. ಈ ಹನ್ನೊಂದು ಪದದ ಮಂಡಲದಲ್ಲಿ ಎರಡು ಪದದ ಸಾಲುಗಳನ್ನು ನಾಲ್ಕು ದಿಕ್ಕುಗಳಲ್ಲಿ ಹೊರಗಿರಿಸಿ, ಮೂರನೆಯ ಪದವನ್ನು ತೆಗೆದು ವೀಥಿಯನ್ನಾಗಿ ಮಾಡಿ ಮಧ್ಯದ ಇಪ್ಪತ್ತೈದು ಪದಗಳಿಂದ ಎಂಟು ದಳದ ಕಮಲವನ್ನು ಸಿದ್ಧಗೊಳಿಸಿ, ಅದರ ಕರ್ಣಿಕೆಯಲ್ಲಿ ಬ್ರಾಹ್ಮ. ಅದರ ಹೊರಗಿನ ದಳಗಳಲ್ಲಿ ದೈವಿಕಾವರಣ. ಅಲ್ಲಿ ಎಂಟು ಕಲಶಗಳನ್ನು ಮಾಡಬೇಕು. ಅದರಿಂದ ಹೊರಗೆ ದಿಕ್ಕುಗಳಲ್ಲಿ ಎರಡರಂತೆ ಒಟ್ಟು ಎಂಟು ಕಲಶಗಳು. ವಿದಿಕ್ಕುಗಳಲ್ಲಿ ನಾಲ್ಕರಂತೆ ಒಟ್ಟು ಹದಿನಾರು ಕಲಶಗಳು. ಈ ಎರಡರ ನಡುವೆ(ಅಂತರಾಳದಲ್ಲಿ) ಎರಡರಂತೆ ಮೊತ್ತ ಹದಿನಾರು ಕಲಶಗಳು. ಉಳಿದ ಪದಗಳನ್ನು ಬಿಡಬೇಕು. ಹೀಗೆ **ನಲವತ್ತೊಂಭತ್ತು ಕಲಶದ** ವಿಧಾನವು.

ಮೂರನೆಯದಾಗಿ ಎಂಭತ್ತೊಂದು ಕಲಶಗಳಲ್ಲಿ ಪೂರ್ವಾಗ್ರ ಹಾಗೂ ಉತ್ತರಾಗ್ರವಾಗಿ ಹದಿನಾಲ್ಕು ರೇಖೆಗಳನ್ನೆಳೆದು ಹದಿಮೂರು ಪದದ ಮಂಡಲವನ್ನು ಮಾಡಬೇಕು. ಇದರಲ್ಲಿ ಮೂರು ಪದಗಳನ್ನು ಹೊರಗಿಟ್ಟು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕನೆಯ ಪದದ ಸಾಲಿನಲ್ಲಿ ವೀಥಿಯನ್ನಾಗಿ ಮಾಡಿ ನಡುವಿನಲ್ಲಿ ಹಿಂದೆ ಹೇಳಿದಂತೆ ಇಪ್ಪತ್ತೈದು ಪದಗಳಿಂದ ಎಂಟು ದಳದ ಕಮಲವನ್ನು ರಚಿಸಿ ಬ್ರಾಹ್ಮದಲ್ಲಿ ಒಂದು ಕಲಶ, ದೈವಿಕಾವರಣದಲ್ಲಿ ಎಂಟು, ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಮೂರರಂತೆ ಹನ್ನೆರಡು ಕಲಶಗಳು. ವಿದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಕಲಶಗಳು. ಅಂತರಾಳದಲ್ಲಿ ಮೂರರಂತೆ ಇಪ್ಪತ್ತನಾಲ್ಕು ಕಲಶಗಳು. ಉಳಿದ ಪದವಳನ್ನು ಹಾಗೆಯೇ ಬಿಡುವುದು. ಇದು **ಎಂಭತ್ತೊಂದು ಕಲಶದ** ಕ್ರಮವು.

ನಾಲ್ಕನೆಯದಾದ ನೂರೆಂಟು ಕಲಶಗಳಲ್ಲಿ ಪೂರ್ವೋತ್ತರಾಗ್ರವಾಗಿ ಹದಿನಾರು ರೇಖೆಗಳನ್ನೆಳೆದು ಹದಿನೈದು ಪದದ ಮಂಡಲವನ್ನು ಸಿದ್ಧಗೊಳಿಸಬೇಕು. ಮಧ್ಯದ ಒಂಭತ್ತು ಪದಗಳಿಂದ ಅಷ್ಟದಳ ಪದ್ಮವನ್ನು ಬರೆದು ಬ್ರಾಹ್ಮ ಪದದಲ್ಲಿ ಒಂದು ಕಲಶ, ದೈವಿಕಾವರಣದಲ್ಲಿ ದಿಕ್ಕುಗಳಲ್ಲಿ ಮೂರರಂತೆ ಹನ್ನೆರಡು, ವಿದಿಕ್ಕುಗಳಲ್ಲಿ ಒಂದೊಂದರಂತೆ ನಾಲ್ಕು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಕಲಶಗಳು. ವಿದಿಕ್ಕುಗಳಲ್ಲಿ ಎಂಟರಂತೆ ಮೂವತ್ತೆರಡು. ಅಂತರಾಳದಲ್ಲಿ ಮೂರರಂತೆ ಇಪ್ಪತ್ತನಾಲ್ಕು ಕಲಶಗಳು. ಉಳಿದ ಪದಗಳನ್ನು ಅಳಿಸಿಬಿಡಬೇಕು. ಇದು **ನೂರೆಂಟು ಕಲಶದ** ಮಂಡಲಕ್ರಮವು.

ಐದನೆಯದಾದ ನೂರ ಐವತ್ತಾರು ಕಲಶಗಳಲ್ಲಿ ಪೂರ್ವೋತ್ತರವಾಗಿ ಹದಿನೆಂಟು ರೇಖೆಗಳನ್ನೆಳೆದು ಹದಿನೇಳು ಪದದ ಮಂಡಲವನ್ನು ರಚಿಸಬೇಕು. ಮಧ್ಯದಲ್ಲಿ ಒಂಭತ್ತು ಪದಗಳಿಂದ ಕಮಲವನ್ನು ರಚಿಸಿ, ಈ ಬ್ರಾಹ್ಮ ಪದದಲ್ಲಿ ಒಂದು ಕಲಶ. ದೈವಿಕಾವರಣದಲ್ಲಿ ಆರರಂತೆ ಇಪ್ಪತ್ತನಾಲ್ಕು ವಿದಿಕ್ಕುಗಳಲ್ಲಿ ನಾಲ್ಕರಂತೆ ಹದಿನಾರು ಕಲಶಗಳು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು. ವಿದಿಕ್ಕುಗಳಲ್ಲಿ ಎಂಟರಂತೆ ಮೂವತ್ತೆರಡು, ಅಂತರಾಳಗಳಲ್ಲಿ ಆರರಂತೆ ನಲವತ್ತೆಂಟು ಕಲಶಗಳು. ಉಳಿದ ಪದಗಳನ್ನು ಬಿಡಬೇಕು. ಇದು **ನೂರ ಐವತ್ತಾರು ಕಲಶ**ಗಳ ಪ್ರಕಾರವು.

ಆರನೆಯದಾದ ಇನ್ನೂರ ಹದಿನೇಳು ಕಲಶಗಳಲ್ಲಿ ಉದ್ದಗಲವಾಗಿ ಇಪ್ಪತ್ತು ರೇಖೆಗಳನ್ನು ಎಳೆದು ಹತ್ತೊಂಭತ್ತು ಪದದ ಮಂಡಲವನ್ನು ರಚಿಸಬೇಕು. ಮಧ್ಯೆ ಒಂಭತ್ತು ಪದಗಳಿಂದ ಎಂಟು ದಳದ ಕಮಲವನ್ನು ಬರೆದು ಬ್ರಾಹ್ಮ ಪದದಲ್ಲಿ ಒಂದು, (ಮೂರು ಮೂರು ಪದಗಳಿಗೆ ವೀಥಿಯನ್ನು ರಚಿಸಿ) ದೈವಿಕ ಹಾಗೂ ಮಾನುಷಾವರಣಗಳಲ್ಲಿ ದಿಕ್ಕು ವಿದಿಕ್ಕು ಅಂತರಾಳಗಳಲ್ಲಿ ಇಪ್ಪತ್ತನಾಲ್ಕು ನವಕ ಪದಗಳನ್ನು (೨೪ x ೯ = ೨೧೬) ಪರಿಕಲ್ಪಿಸಿ ಉಳಿದ ಕೋಷ್ಠಗಳಿಂದ ವೀಥಿಯನ್ನು ಮಾಡಬೇಕು. ಹೀಗೆ ಇನ್ನೂರ ಹದಿನೇಳು ಕಲಶಗಳು. ಹೀಗೆ **ಇನ್ನೂರ ಹದಿನೇಳು ಕಲಶ** ಮಂಡಲದ ಕ್ರಮವು.

ಏಳನೆಯದಾಗಿ ಇನ್ನೂರ ಐವತ್ತಮೂರು ಪೂರ್ವೋತ್ತರವಾಗಿ ಇಪ್ಪತ್ತೆರಡು ರೇಖೆಗಳನ್ನೆಳೆದು ಇಪ್ಪತ್ತೊಂದು ಪದದ ಮಂಡಲವನ್ನು ಮಾಡಬೇಕು. ಮಧ್ಯದಲ್ಲಿ ಒಂಭತ್ತು ಪದಗಳಿಂದ ಕಮಲವನ್ನು ಬರೆದು ಬ್ರಹ್ಮವನ್ನು ರಚಿಸಿ ದೈವಿಕಾವರಣದಲ್ಲಿ ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಒಂಭತ್ತು ಕಲಶಗಳಂತೆ ಎಪ್ಪತ್ತೆರಡು ಕಲಶಗಳು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಹನ್ನೆರಡರಂತೆ ನಲವತ್ತೆಂಟು ವಿದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಅಂತರಾಳಗಳಲ್ಲಿ ಹನ್ನೆರಡರಂತೆ ತೊಂಭತ್ತಾರು. (ನಾಲ್ಕು ಹಾಗೂ ಮೂರು ಪದಗಳಿಗೆ ವೀಥಿಯನ್ನು ಕಲ್ಪಿಸಿ ಉಳಿದುದನ್ನು ಬಿಡಬೇಕು) ಇದು **ಇನ್ನೂರ ಐವತ್ತಮೂರು ಕಲಶ**ಗಳ ಮಂಡಲ ರಚನಾ ಕ್ರಮವು.

ಎಂಟನೆಯದಾಗಿ ಮುನ್ನೂರ ಒಂದು ಕಲಶಗಳಲ್ಲಿ ಪೂರ್ವೋತ್ತರವಾಗಿ ಇಪ್ಪತ್ತನಾಲ್ಕು ರೇಖೆಗಳನ್ನು ಇಪ್ಪತ್ತ ಮೂರು ಪದದ ಮಂಡಲವನ್ನು ರಚಿಸಬೇಕು. ಆರು ಮತ್ತು ಒಂಭತ್ತನೆ ಪದದ ಸಾಲುಗಳನ್ನು ವೀಥಿಯಾಗಿ ಪರಿಕಲ್ಪಿಸಬೇಕು. ಮಧ್ಯ ಬ್ರಾಹ್ಮದಲ್ಲಿ ಇಪ್ಪತ್ತೈದು ಪದಗಳಿಂದ ಎಂಟು ದಳದ ಕಮಲವನ್ನು ಬರೆದು, ದೈವಿಕಾವರಣದಲ್ಲಿ ದಿಕ್ಕುಗಳಲ್ಲಿ ಹತ್ತರಂತೆ

ನಲವತ್ತು ಕಲಶಗಳು, ವಿದಿಕ್ಕುಗಳಲ್ಲಿ ಮೂರರಂತೆ ಹನ್ನೆರಡು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಇಪ್ಪತ್ತೈದರಂತೆ ನೂರು. ವಿದಿಕ್ಕುಗಳಲ್ಲಿ ಹದಿನೇಳರಂತೆ ಅರವತ್ತೆಂಟು. ಅಂತರಾಳಗಳಲ್ಲಿ ಹತ್ತರಂತೆ ಎಂಭತ್ತು ಕಲಶಗಳು. ಉಳಿದವು ವೀಥಿಗಳು. ಹೀಗೆ **ಮುನ್ನೂರ ಒಂದು ಕಲಶ** ವಿಧಾನವು.

ಒಂಭತ್ತನೆಯದಾದ ಐನೂರ ಒಂದು ಕಲಶಗಳಲ್ಲಿ ಪೂರ್ವಾಗ್ರ ಹಾಗೂ ಉತ್ತರಾಗ್ರವಾಗಿ ಮೂವತ್ತು ರೇಖೆಗಳನ್ನೆಳೆದು ಇಪ್ಪತ್ತೊಂಭತ್ತು ಪದಗಳ ಮಂಡಲವನ್ನು ಮಾಡಬೇಕು. ಐದೈದು ಪದಗಳ ನಂತರ ಆರನೇ ಪದಗಳ ಸಾಲುಗಳನ್ನು ವೀಥಿಯನ್ನಾಗಿ ಪರಿಕಲ್ಪಿಸಬೇಕು. ಇಪ್ಪತ್ತೈದು ಪದಗಳಿಂದ ಮಧ್ಯ ಬ್ರಹ್ಮ ಪದದಲ್ಲಿ ಅಷ್ಟದಳ ಪದ್ಮವನ್ನು ಮಾಡಿ ದೈವಿಕಾವರಣ ದಿಕ್ಕು ವಿದಿಕ್ಕುಗಳಲ್ಲಿ ಹದಿನೇಳರಂತೆ ನೂರಮೂವತ್ತಾರು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಇಪ್ಪತ್ತೈದರಂತೆ ನೂರು, ವಿದಿಕ್ಕುಗಳಲ್ಲಿ ಹದಿನಾರಂತೆ ಅರವತ್ತನಾಲ್ಕು. ಅಂತರಾಳದಲ್ಲಿ ಇಪ್ಪತ್ತೈದರಂತೆ ಇನ್ನೂರು ಕಲಶಗಳು. ಹೀಗೆ **ಐನೂರ ಒಂದು ಕಲಶ** ಮಂಡಲದ ವಿಧಾನವು.

ಹತ್ತನೆಯದಾದ ಸಾವಿರದ ಒಂದು ಕಲಶದಲ್ಲಿ ಪೂರ್ವೋತ್ತರಾಗ್ರವಾಗಿ ನಲವತ್ತು ರೇಖೆಗಳನ್ನೆಳೆದು ಮೂವತ್ತೊಂಭತ್ತು ಪದಗಳ ಮಂಡಲವನ್ನು ಸಿದ್ಧಪಡಿಸಬೇಕು. ಇಲ್ಲಿ ಮೂವತ್ತೊಂಭತ್ತು ಪದಗಳಿಂದ ಕೂಡಿದ ಇಪ್ಪತ್ತೈದು ವಿಭಾಗ(ತುಂಡು)ಗಳನ್ನು ಮಾಡಿ ನಡುವಿನಲ್ಲಿ ಇರುವ ಮೂವತ್ತೊಂಭತ್ತು ಪದಗಳಲ್ಲಿ ಮಧ್ಯದಲ್ಲಿ ಇಪ್ಪತ್ತೈದು ಪದಗಳಿಂದ ಎಂಟುದಳದ ಕಮಲವನ್ನು ರಚಿಸಿ ಉಳಿದ ಪದಗಳನ್ನು ವೀಥಿಯಲ್ಲಿ ಸೇರಿಸಬೇಕು. ದೈವಿಕಾವರಣ ಹಾಗೂ ಮಾನುಷಾವರಣದಲ್ಲಿ ನಲವತ್ತೊಂಭತ್ತು ಪದಗಳಲ್ಲಿ ಮಧ್ಯದಲ್ಲಿ ಒಂಭತ್ತು ಪದಗಳಿಂದ ಅಷ್ಟದಲದ ಪದ್ಮವನ್ನು ಬರೆದು ಬ್ರಾಹ್ಮದಲ್ಲಿ ಒಂದು ಕಲಶವನ್ನಿಡಬೇಕು. ದೈವಿಕ ಹಾಗೂ ಮಾನುಷಾವರಣದಲ್ಲಿ ಪ್ರತ್ಯೇಕವಾಗಿ ನಲವತ್ತೊಂದು ಕಲಶಗಳನ್ನಿರಿಸಬೇಕು. (೪೧ x ೨೪ = ೯೮೪) ಪುನಃ ಮಾನುಷಾವರಣದಲ್ಲಿ ನಾಲ್ಕು ದಿಕ್ಕುಗಳಲ್ಲಿ ಕಮಲದಲ್ಲಿರುವ ನಾಲ್ಕು ದಳಗಳಲ್ಲಿಯೂ ಸೇರಿ ಹದಿನಾರು ಕಲಶಗಳನ್ನಿರಿಸಬೇಕು. ಹೀಗೆ ಸಾವಿರದ ಒಂದು ಕಲಶ ಮಂಡಲದ ಕ್ರಮವು. ಈ ಹತ್ತು ವಿಧವು ಸಾಮಾನ್ಯವಾದರೂ ವಿಷ್ಣುವಿನಲ್ಲಿ ವಿಶೇಷವಾಗಿ ಹೇಳಿದ್ದಾಗಿದೆ. ಈ ಹತ್ತು ಬಗೆಯ ಮಂಡಲಗಳಲ್ಲಿ ಇಪ್ಪತ್ತೈದು ವಿಭಾಗಗಳಾಗುತ್ತವೆ. (ವಿಭಾಗಗಳಿರುತ್ತವೆ)

## ಶಿವನಲ್ಲಿ ಭೇದವು (ವಿಶೇಷವು)

ಐನೂರ ಐದು ಕಲಶದಲ್ಲಿ ಮಾನುಷಾವರಣದಲ್ಲಿ ವಿದಿಕ್ಕುಗಳಲ್ಲಿ ಹದಿನೇಳು. ಉಳಿದುದೆಲ್ಲಾ ಐನೂರು ಒಂದು ಕಲಶಕ್ಕೆ ಹೇಳಿದಂತೆಯೇ ಆಗಿದೆ. ಬ್ರಹ್ಮಪದ– ೧, ದೈವಿಕಾವರಣ ದಿಕ್ಕು, ವಿದಿಕ್ಕುಗಳಲ್ಲಿ– ೧೨೬, ಮಾನುಷಾವರಣ ದಿಕ್ಕುಗಳಲ್ಲಿ– ೧೦೦, ವಿದಿಕ್ಕುಗಳಲ್ಲಿ– ೬೮, ಅಂತರಾಳದಲ್ಲಿ– ೨೦೦, ಒಟ್ಟು ಮೊತ್ತ ೫೦೫.

ಇನ್ನೂರು ಕಲಶಗಳಲ್ಲಿ ಹತ್ತೊಂಭತ್ತು ಪದದ ಮಂಡಲದಲ್ಲಿ ಮಧ್ಯ ಬ್ರಾಹ್ಮದ ನವ ಪದದಲ್ಲಿ ಎಂಟು ದಳದ ಕಮಲವನ್ನು ಬರೆದು ಒಂದು ಕಲಶವನ್ನಿರಿಸಿ, ದೈವಿಕಾವರಣದಲ್ಲಿ ದಿಕ್ಕು, ವಿದಿಕ್ಕುಗಳಲ್ಲಿ ಹನ್ನೆರಡರಂತೆ ತೊಂಭತ್ತಾರು, ಮಾನುಷಾವರಣದ ದಿಕ್ಕುಗಳಲ್ಲಿ ಆರರಂತೆ ಇಪ್ಪತ್ತನಾಲ್ಕು, ವಿದಿಕ್ಕುಗಳಲ್ಲಿ ನಾಲ್ಕರಂತೆ ಹದಿನಾರು. ಅಂತರಾಳದಲ್ಲಿ ಎಂಟರಂತೆ ಅರವತ್ತ ನಾಲ್ಕು ಕಲಶಗಳು. ಇದು ಶಿವನಲ್ಲಿ **ಇನ್ನೂರ ಒಂದು ಕಲಶ**ದ ಕ್ರಮವು.

ಇನ್ನೂರ ಹದಿನೇಳರ ಕಲಶದಲ್ಲಿ ಮೊದಲಿನಂತೆ ಮಂಡಲವನ್ನು ಬರೆದು, ನವ ಪದ ಬ್ರಾಹ್ಮಪದದಲ್ಲಿ ಅಷ್ಟದಳ ಪದ್ಮವನ್ನು ಬರೆದು ಒಂದು ಕಲಶವನ್ನೂ, ದೈವಿಕಾವರಣದಲ್ಲಿ ದಿಕ್ಕುಗಳಲ್ಲಿ ಆರರಂತೆ ಇಪ್ಪತ್ತನಾಲ್ಕು, ವಿದಿಕ್ಕುಗಳಲ್ಲಿ ನಾಲ್ಕರಂತೆ ಹದಿನಾರು, ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಹನ್ನೆರಡರಂತೆ ನಲವತ್ತೆಂಟು, ವಿದಿಕ್ಕುಗಳಲ್ಲಿ ಹದಿನಾರರಂತೆ ಅರವತ್ತನಾಲ್ಕು. ಅಂತರಾಳದಲ್ಲಿ ಎಂಟರಂತೆ ಅರವತ್ತನಾಲ್ಕು ಕಲಶಗಳು. ಹೀಗೆ ಶಿವನಲ್ಲಿ **ಇನ್ನೂರ ಹದಿನೇಳು ಕಲಶ**ದ ವಿಧಾನವು.

ಇನ್ನೂರ ಇಪ್ಪತ್ತೈದು ಕಲಶಗಳಲ್ಲಿ ಹಿಂದಿನ ಹಾಗೆ ಮಂಡಲವನ್ನು ಬರೆದು ಮಧ್ಯ ಬ್ರಾಹ್ಮದಲ್ಲಿ ಒಂಭತ್ತು ಪದಗಳಲ್ಲಿ ಅಷ್ಟದಳ ಕಮಲವನ್ನು ಬರೆದು ಕರ್ಣಿಕೆಯಲ್ಲಿ ಬ್ರಹ್ಮಕಲಶ, ದಳಗಳಲ್ಲಿ ಒಂದರಂತೆ ಎಂಟು ಕಲಶಗಳನ್ನಿರಿಸಿ, ದೈವಿಕ, ಮಾನುಷ, ಅಂತರಾಳಾವರಣದಲ್ಲಿ ಒಂಬತ್ತರಂತೆ ಇನ್ನೂರ ಹದಿನಾರು ಕಲಶಗಳು. ಬ್ರಾಹ್ಮ್ಯಾವರಣದ ಒಂಭತ್ತು ಸೇರಿ ಒಟ್ಟು ಮೊತ್ತ **ಇನ್ನೂರ ಇಪ್ಪತ್ತೈದು ಕಲಶ**ಗಳು.

ಪುನಃ ನೂರನಲವತ್ತೊಂಭತ್ತು ಕಲಶಗಳಲ್ಲಿ ಹದಿನೇಳು ಪದದ ಮಂಡಲದಲ್ಲಿ ಬ್ರಾಹ್ಮದಲ್ಲಿ ಒಂಭತ್ತು ಪದಗಳಿಂದ ಕಮಲವನ್ನು ಬರೆದು ಕರ್ಣಿಕೆ ಹಾಗೂ ದಳದಲ್ಲಿ ಒಟ್ಟು ಒಂಭತ್ತು ಕಲಶಗಳನ್ನಿರಿಸಿ, ದೈವಿಕದಲ್ಲಿ ದಿಕ್ಕುಗಳಲ್ಲಿ ಮೂರರಂತೆ ಹನ್ನೆರಡನ್ನೂ ವಿದಿಕ್ಕುಗಳಲ್ಲಿ ಒಂದರಂತೆ ನಾಲ್ಕು, ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ ಒಂಭತ್ತರಂತೆ ಮೂವತ್ತಾರು ಕಲಶಗಳು ವಿದಿಕ್ಕುಗಳಲ್ಲಿ ಹದಿನಾರರಂತೆ ಅರವತ್ತನಾಲ್ಕು. ಅಂತರಾಳದಲ್ಲಿ ಮೂರರಂತೆ ಇಪ್ಪತ್ತನಾಲ್ಕು ಕಲಶಗಳು. ಹೀಗೆ ಶಿವನಲ್ಲಿ **ನೂರನಲವತ್ತೊಂಬತ್ತು ಕಲಶ**ವಿಧಾನವು. ಬೇರೆಡೆಯಲ್ಲಿ ಶಿವನಿಗೂ ಸಹಸ್ರಕಲಶಾಭಿಷೇಕವು ಹೇಳಲ್ಪಟ್ಟಿದೆ.

ಈ ಕಲಶಮಂಡಲಗಳಲ್ಲಿ ಅನುಕೂಲಕ್ಕೆ ಸರಿಯಾಗಿ ಒಂದು ಕಲಶಮಂಡಲವನ್ನು ರಚಿಸಿ ಬ್ರಹ್ಮಕಲಶಕ್ಕಾಗಿ ಮಧ್ಯದಲ್ಲಿ ಎಂಟು ದಳದ ಕಮಲವನ್ನು ಬರೆದು ಪರಿಖಂಡ(ಸಣ್ಣದಾದ ವಿಭಾಗ)ದಲ್ಲಿ ಬ್ರಹ್ಮಕಲಶಕ್ಕಾಗಿ ಸ್ವಸ್ತಿಕ ಮೊದಲಾದುವನ್ನು ಮಾಡಿ ಮಂಡಲದ ಎಲ್ಲೆಡೆಯಲ್ಲೂ ಅಕ್ಕಿಹಿಟ್ಟೇ ಮೊದಲಾದ ಹಿಟ್ಟು ಯಾ ರಂಗೋಲಿಗಳಿಂದ ಕಮಲವನ್ನು ಅಂದವಾಗಿ ಕಂಗೊಳಿಸುವಂತೆ ತುಂಬಿ ನಡುವೆ ಹದಿನಾರು ಬಳ್ಳ ಯಾ ಸೇರಿನಷ್ಟು ಬತ್ತವನ್ನು ಇರಿಸಿ. ಮನಃ ಅದರರ್ಧ (ಎಂಟು ಬಳ್ಳ) ಅಕ್ಕಿಯನ್ನೂ, ಅದರರ್ಧ (ನಾಲ್ಕು ಬಳ್ಳ) ಎಳ್ಳನ್ನೂ, ಅದರರ್ಧ ಸಾಸಿವೆಚುನ್ನೂ ಈ ರೀತಿಯಾಗಿ ಬಟ್ಟೆಯಿಂದ ಮೂಟೆ ಕಟ್ಟಿ ಬ್ರಹ್ಮಕಲಶದ ಪೀಠವನ್ನು ರಚಿಸಿ ಅಲ್ಲಿ ಕೂರ್ಚನ್ನಿಡಬೇಕು. ಉಳಿದೆಡೆಯಲ್ಲಿ ಬತ್ತವನ್ನು ಸೇರು ಪ್ರಮಾಣದಲ್ಲಿರಿಸಿ ಎರಡೆರಡು ದರ್ಭೆಗಳನ್ನಿರಿಸಿ ಪೀಠಗಳನ್ನು ಮಾಡಬೇಕು. ಬ್ರಾಹ್ಮ ಪದದಲ್ಲಿ ಚಿನ್ನವೇ ಮೊದಲಾದ ಲೋಹಗಳಿಂದ ಸಿದ್ಧಗೊಂಡ ಬಿಂದಿಗೆಯನ್ನೂ ಉಳಿದೆಡೆಯಲ್ಲಿ ಕುರುವೆ ಮೊದಲಾದುವುಗಳನ್ನು ಆಯಾಯ ದೇವತೆಗಳ ಅಸ್ತ್ರಮಂತ್ರದಿಂದ ನೀರಿನಿಂದ ತೊಳೆದು ಕವಚ ಮಂತ್ರದಿಂದ ದಾರದಿಂದ ಸುತ್ತಿ ಬಿಟ್ಟು ಪರಿಖಂಡದ ಪದ್ಮಗಳಲ್ಲಿ ಎಲ್ಲಾ ಕಡೆಗಳಲ್ಲೂ ಕೆಳಮುಖವಾಗಿ ಇರಿಸಬೇಕು. ಆಮೇಲೆ ಬೀಜ ಮೊಳಕೆ ಬರಿಸಿದ ಪಾಲಿಕೆಗಳನ್ನು (ಯಾ ಕುರುವೆ ಯಾ ಶರಾವೆ) ಸುತ್ತಲೂ ಇರಿಸಿ. ಬಲಭಾಗದಲ್ಲಿ ಹೂವು, ಗಂಧ, ಅಕ್ಷತೆ ಮೊದಲಾದುವುಗಳನ್ನೂ ದೀಪ ಮೊದಲಾದುವುಗಳನ್ನೂ ಇರಿಸಿ, ಶೋಧಿಸಿದ ನೀರನ್ನು ಎಡಭಾಗದಲ್ಲಿ ಇರಿಸಬೇಕು.

* * * *

## ನಾಡೀಶೋಧನ ಪ್ರಕಾರ

ಆಚಾರ್ಯನು ಸ್ನಾನ ಸಂಧ್ಯಾವಂದನಾದಿಗಳನ್ನು ನಿರ್ವಹಿಸಿ ಹೊಸ ಬಟ್ಟೆಯನ್ನು ಧರಿಸಿ ಉತ್ತರೀಯ ಬಟ್ಟೆಯನ್ನು ಉಪವೀತದಂತೆ ಧರಿಸಿ, ಮಂತ್ರಾಚಮನ ಮೊದಲಾದುವನ್ನು ಮಾಡಿ, ಚಿನ್ನದ ಉಂಗುರವನ್ನು ಧರಿಸಿ ಗರ್ಭಗುಡಿಯಲ್ಲಿರುವ ದೇವರನ್ನು ನಮಸ್ಕರಿಸಿ ಮಂಟಪದ ಪ್ರಧಾನ ಬಾಗಿಲಿನಿಂದ ಒಳ ಬಂದು ಬ್ರಹ್ಮಕಲಶದ ಹತ್ತಿರದಲ್ಲಿ ಸ್ಥಿರಚಿತ್ತ(ಶಾಂತ)ನಾಗಿ ನಿಜಾಸನದಲ್ಲಿ ಕುಳಿತುಕೊಂಡು ಪವಿತ್ರವನ್ನು ಧರಿಸಿ. ಗುರುಗಳಿಗೆ ಅರ್ಘ್ಯವನ್ನಿತ್ತು ಗಣಪತಿಯನ್ನು ಪೂಜಿಸಿ, ನೈವೇದ್ಯವನ್ನು ಮಾಡಿ ಆಯಾಯ ದೇವತಾ ಸಂಬಂಧಿಸಿದ ಅಸ್ತ್ರಮಂತ್ರದಿಂದ ಕೈಯ ತಳ, ಹಿಂದಿನ ಭಾಗ, ಎರಡು ಪಕ್ಕಗಳಲ್ಲಿ ವ್ಯಾಪನೆಯಿಂದ ಹಸ್ತ ಶುದ್ಧಿಯನ್ನು ಮಾಡಿ ತಾಳತ್ರಯ ದಿಗ್ಬಂಧನ ಅಗ್ನಿಪ್ರಾಕಾರವನ್ನು ಮಾಡಬೇಕು.

**ಸೂಕ್ಷ್ಮಮಧ್ಯಮಹಾಶಬ್ದಾ ದಕ್ಷಸವ್ಯೋಭಯೋದ್ಭವಾಃ ।**

**ಬೋಧಾಸೇಚನಕೋದ್ದಿಪ್ತಿಕರಾವನ್ನೇಸ್ತ್ರಿತಾಲಕಾಃ ॥**

(ಬಲಗೈಯ ಹೊಡೆತದಿಂದ ಅಗ್ನಿಯನ್ನು ಉದ್ಬೋಧಿಸಿ, ಎಡಗೈ ಹೊಡೆತದಿಂದ ಚಿಮುಕಿಸಿ ಎರಡು ಕೈ ತಟ್ಟುವುದರಿಂದ ಉದ್ಬೋಧನ. (ರಂ) ಅಗ್ನಿಬೀಜದಿಂದ ಪ್ರಾಕಾರ)

ಮನಃ ಹನ್ನೆರಡಾವರ್ತಿಯಿಂದ (ಓಂ) ಪ್ರಣವದಿಂದ ಪ್ರಾಣಾಯಾಮವನ್ನು ಜಪಿಸಿ ತನ್ನನ್ನು ಪರಮಾತ್ಮನೆಂದು ಭಾವಿಸಿ, 'ಅಂ' ಎಂದು ಮೂರಾವರ್ತಿ ಜಪಿಸಿ, ಪಿಂಗಲಾ (ಬಲದ ನಾಡಿ)ದಿಂದ ಗಾಳಿಯನ್ನು ಹೊರಗೆ ಬಿಟ್ಟು, ಆರು ಆವರ್ತಿಯಿಂದ ಪಿಂಗಲಾದಿಂದ ವಾಯುವನ್ನು ತುಂಬಿಸಿ, ಹನ್ನೆರಡಾವರ್ತಿಯಿಂದ ತುಂಬಿಸಿ ಇಡಾ (ಎಡನಾಡಿ)ದಿಂದ ಆ ವಾಯುವನ್ನು ಹೊರಗೆ ಬಿಡಬೇಕು. ಮನಃ 'ಉಂ' ಎನ್ನುವುದಾಗಿ ಮೂರಾವರ್ತಿಯಲ್ಲಿ ಜಪಿಸಿ, ಇಡಾ ನಾಡಿಯಿಂದ (ಮೂಗಿನ ಎಡಸೊಳ್ಳೆ) ವಾಯುವನ್ನು ಹೊರಬಿಟ್ಟು, ಆರು ಆವರ್ತಿಯಿಂದ ವಾಯುವನ್ನು (ಇಡಾದಿಂದ) ತುಂಬಿಸಿ, ಹನ್ನೆರಡಾವರ್ತಿಯಿಂದ ಇಡಾವನ್ನು ತುಂಬಿಸಿ, ಆ ವಾಯುವನ್ನು ಪಿಂಗಲಾ(ಮೂಗಿನ ಬಲಸೊಳ್ಳೆ)ದಿಂದ ಹೊರಗೆ ಬಿಡಬೇಕು. ಮನಃ 'ಅಂ', 'ಉಂ' ಎಂದು ಆರು ಆವರ್ತಿಯಲ್ಲಿ ಜಪಿಸಿ, ಪಿಂಗಲಾ ಹಾಗೂ ಇಡಾ ನಾಡಿಗಳಿಂದ ತುಂಬಿಸಿ, ಮನಃ ಆ ವಾಯುವನ್ನು ಸುಷುಮ್ನಾ (ಇಡಾ ಪಿಂಗಲಾ ನಾಡಿಯ ಮಧ್ಯದಲ್ಲಿರುವ ಮೃಣಾಲ ತಂತು ಸದೃಶವಾದ ಒಂದು ಮುಖ್ಯನಾಡಿ) ಮುಖದಲ್ಲಿ ಎಳೆದು ತಂದು, 'ಮಂ' ಎಂದು ಆರು ಆವರ್ತಿ ಜಪಿಸಿ, ಸುಷುಮ್ನಾ ನಾಡಿಯನ್ನು ತುಂಬಿಸಿ ಆ ವಾಯುವನ್ನು ಇಡಾದಿಂದ ತುಂಬಿದ ವಾಯುವನ್ನು ಪಿಂಗಲಾದಿಂದಲೂ, ಪಿಂಗಲಾದಿಂದ ತೂರಿಸಿದುದನ್ನು ಇಡಾದಿಂದಲೂ ವ್ಯತ್ಯಾಸದಿಂದ (ಬದಲಿಕೆಯಿಂದ) ಹೊರಗೆ ಬಿಡಬೇಕು.

**ರೇಚಕಾದಿ ಪ್ರಾಣಾಯಾಮ**ವನ್ನು ಮಾಡಬೇಕು. 'ಓಂ' ಎಂದು ಪ್ರಣವದಿಂದ ಹದಿನಾರು ಬಾರಿ ಪ್ರಾಣಾಯಾಮವನ್ನು ಮಾಡಿ ಪಿಂಗಲ ನಾಡಿಯಿಂದ ಸುಷುಮ್ನಾ ನಾಡಿಯಲ್ಲಿ ಮುಂದುವರಿಯುವ ಪರಮಾತ್ಮನ ಕಾಂತಿಯ ಸ್ಪರ್ಶದಿಂದ ಜೀವಕ್ಕೆ(ಆತ್ಮಕ್ಕೆ) ಅಜ್ಞಾನದ ಕಳೆಯುವಿಕೆಯನ್ನು ಭಾವಿಸುವವನಾಗಿ ಹೊರಗೆ ಬಿಡಬೇಕು. ಮನಃ ಮೂವತ್ತೆರಡು ಬಾರಿ ಪ್ರಾಣಾಯಾಮವನ್ನು ಮಾಡಿ ಇಡಾನಾಡಿಯಿಂದ ತನ್ನ ಸ್ಥಾನವನ್ನು ವಾಯುವಿಗೆ ಅಂತರ್ಮುಖವನ್ನು ಭಾವಿಸುವವನಾಗಿ ತುಂಬಿಸಬೇಕು. ಮನಃ 'ಓಂ' ಎನ್ನುವುದಾಗಿ ಅರವತ್ತನಾಲ್ಕು ಬಾರಿ ಜಪಿಸಿ, ಕುಂಭಕವನ್ನು ಮಾಡಿ ತನ್ನ ಜೀವಕ್ಕೆ ಪರಮಾತ್ಮನಿಂದ ಸರಿಸಮಾನವಾದ ಶ್ರೇಷ್ಠತೆ(ಸಂಪತ್ತು) ಭಾವಿಸುವವನಾಗಬೇಕು. ಇದರಿಂದ ಹೆಚ್ಚಿನ ಪಾಪವು ನಿವೃತ್ತಿಗೊಳ್ಳುತ್ತದೆ.

## ಆತ್ಮಶುದ್ಧಿ

**ಓಂ ಹ್ರೀಂ ಹಂಸಃ** – ಈ ಮಂತ್ರದಿಂದ ಮೂಲಾಧಾರದಲ್ಲಿರುವ ಜೀವನನ್ನು ಸುಷುಮ್ನಾ ನಾಡಿಯ ಮೂಲಕವಾಗಿ ದ್ವಾದಶಾಂತದಲ್ಲಿರುವ ಪರಮಾತ್ಮನಲ್ಲಿ ಸೇರಿಸಿ. 'ಲಂ' ಎಂದು ಪಾದಗಳನ್ನು ಮುಟ್ಟಿ ಭೂಮಂಡಲವನ್ನು ಭಾವಿಸಿ, 'ವಂ' ಎಂದು ಹೊಕ್ಕಳನ್ನು ಮುಟ್ಟಿ ಜಲಮಂಡಲವನ್ನೂ, 'ರಂ' ಎಂದು ಹೃದಯವನ್ನು ಮುಟ್ಟಿ ತೇಜೋ(ಕಾಂತಿ) ಮಂಡಲವನ್ನೂ, 'ಯಂ' ಎಂದು ಕುತ್ತಿಗೆಯನ್ನು ಮುಟ್ಟಿ ವಾಯುಮಂಡಲವನ್ನೂ, 'ಹಂ' ಎಂದು ತಾಲು (ಒಳಬಾಯಿಯ ಮೇಲ್ಭಾಗ) ಭಾಗವನ್ನು ಮುಟ್ಟಿ ಆಕಾಶ ಮಂಡಲವನ್ನು ಭಾವಿಸಬೇಕು. (ಸಂಕಲ್ಪಿಸಬೇಕು)

* * * *

## ಭೂತಸಂಹಾರ

**'ಹ್ಲಾಂ'** ಎಂದು ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮವನ್ನು ಮಾಡಿ, **ಹ್ಲಾಂ ಪೃಥಿವ್ಯಾತ್ಮನೇ ಹುಂಫಟ್**– ಎಂದು ಕಾಲಿನ ತುದಿಯಿಂದ ಹುಕ್ಕುಳು ತನಕ ವ್ಯಾಪಿಸಿ, ಪೃಥಿವೀಮಪ್ಸು ಸಂಹರಾಮಿ । ಪುನಃ **'ಹ್ವೀಂ'** ಎಂದು ಇಪ್ಪತ್ತೈದು ಸಂಖ್ಯೆಯ ನಾಲ್ಕು ಪ್ರಾಣಾಯಾಮವನ್ನು ಮಾಡಿ, **ಹ್ವೀಂ ಅಬಾತ್ಮನೇ ಹುಂಫಟ್**– ಹುಕ್ಕುಳು ಮೊದಲಾಗಿ ಎದೆಯ ಪರ್ಯಂತ ವ್ಯಾಪಿಸಿ, **ಅಪಃ ಅಗ್ನೌ ಸಂಹರಾಮಿ** । ಪುನಃ **'ಹ್ರೂಂ'** ಎಂದು ಇಪ್ಪತ್ತೈದು ಸಂಖ್ಯೆಯ ಮೂರು ಪ್ರಾಣಾಯಾಮವನ್ನು ಮಾಡಿ **ಹ್ರೂಂ ಅಗ್ನ್ಯಾತ್ಮನೇ ಹುಂಫಟ್**– ಎದೆಯಿಂದಾರಂಭಿಸಿ ಕುತ್ತಿಗೆ ಪರ್ಯಂತ ವ್ಯಾಪಿಸಿ, **ಅಗ್ನಿಂ ವಾಯೌ ಸಂಹರಾಮಿ** । ಪುನಃ **'ಹ್ಯೈಂ'** ಎಂದು ಇಪ್ಪತ್ತೈದು ಸಂಖ್ಯೆಯ ಎರಡು ಪ್ರಾಣಾಯಾಮವನ್ನು ಮಾಡಿ, **ಹ್ಯೈಂ ವಾಯ್ವಾತ್ಮನೇ ಹುಂಫಟ್**– ಕುತ್ತಿಗೆಯಿಂದ ತಾಲು ಪರ್ಯಂತ ವ್ಯಾಪಿಸಿ, ವಾಯುಮಾಕಾಶೇ ಸಂಹರಾಮಿ । ಪುನಃ **'ಹೌಂ'** ಎಂದು ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ, **ಹೌಂ ಆಕಾಶಾತ್ಮನೇ ಹುಂಫಟ್**– ತಾಲುವಿನಿಂದಾರಂಭಿಸಿ ದ್ವಾದಶಾಂತ ಪರ್ಯಂತವಾಗಿ ವ್ಯಾಪಿಸಿ, **ಆಕಾಶಂ ಪರಮಾತ್ಮನಿ ಸಂಹರಾಮಿ** । ಇತಿ ಭೂತಸಂಹಾರಃ ॥

ಪುನಃ **ಶೋಷಣ** ಮೊದಲಾದುವನ್ನು ಮಾಡಬೇಕು. **'ಯಂ'** ಎಂದು ವಾಯುಬೀಜದಿಂದ ಹದಿನಾರು ಬಾರಿ ಪ್ರಾಣಾಯಾಮವನ್ನು ಮಾಡಿ ಇಡಾ ಮಾರ್ಗದಿಂದ ವಾಯುವನ್ನು ಹೊರಗೆ ಬಿಟ್ಟು ಇಡಾ ಮುಖದಲ್ಲಿ ನಾಭಿ(ಹೊಕ್ಕಳು) ಕಮಲದಲ್ಲಿಯೂ ಆರು ಚುಕ್ಕಿ(ಬೊಟ್ಟು, ಸೊನ್ನೆ)ಯಿಂದ ಕೂಡಿದ ಬೂದಿ ಬಣ್ಣದ ವಾಯುಮಂಡಲವನ್ನು ಅದರಲ್ಲಿ ಬೂದಿ ಬಣ್ಣದ **'ಯಂ'** ಬೀಜವನ್ನು ಧ್ಯಾನಿಸಿ, ಆ ಬೀಜಾಕ್ಷರದಿಂದ ಮೂವತ್ತೆರಡು ಬಾರಿ ಪ್ರಾಣಾಯಾಮವನ್ನು ಮಾಡಿ, ಇಡಾಮಾರ್ಗದಿಂದ ಆ ವಾಯುಮಂಡಲದಿಂದ ಕೂಡಿ, ವಾಯುವನ್ನು ತುಂಬಿಸಿ, ಮಂಡಲಗಳೆರಡನ್ನು ಒಂದಾಗಿ ಮಾಡಲ್ಪಟ್ಟಂತೆ ಭಾವಿಸಿ, ಅರವತ್ತನಾಲ್ಕು ಬಾರಿ ಪ್ರಾಣಾಯಾಮವನ್ನು ಮಾಡಿ ಪೂರಣ ಮಾಡಿ ಒಂದಾಗಿ ಮಾಡಲ್ಪಟ್ಟ ವಾಯುಮಂಡಲದಿಂದ ಉಂಟಾದ ಮಹಾ ವಾಯುವಿನಿಂದ ಶರೀರವನ್ನು ಒಣಗಿಸಿದಂತೆ ಭಾವಿಸಿ ಆ ವಾಯುವನ್ನು ಪಿಂಗಲಾ ದ್ವಾರದಿಂದ ಹೊರಗೆ ಬಿಡಬೇಕು. ಹೀಗೆ ಶೋಷಣದ ವಿಧಾನವು. ಹೀಗೆ ದಾಹನದಲ್ಲಿಯೂ ತಿಳಿಯಬೇಕು.

**ದಾಹನ**– ಪುನಃ **'ರಂ'** ಎಂದು ಅಗ್ನಿಬೀಜದಿಂದ ಹದಿನಾರು ಬಾರಿ ಪ್ರಾಣಾಯಾಮವನ್ನು ಮಾಡಿ ಪಿಂಗಲಾನಾಡಿಯಿಂದ ವಾಯುವನ್ನು ಹೊರಗೆ ಬಿಟ್ಟು, ಪಿಂಗಲಾ ನಾಡಿಯ ಮುಖದಲ್ಲಿ ಹೃದಯ ಕಮಲದಲ್ಲಿಯೂ ಸ್ವಸ್ತಿಕ ಚಿಹ್ನೆಯಿಂದ ಕೂಡಿದ ತ್ರಿಕೋಣವನ್ನು ಕೆಂಪಾದ ಅಗ್ನಿಮಂಡಲವನ್ನು ಅದರ ನಡುವೆ ಕೆಂಪಾದ 'ರಂ' ಬೀಜವನ್ನು ಭಾವಿಸಿ, ಮೂವತ್ತೆರಡು ಸಾರಿ ಪಿಂಗಲಾ ನಾಡಿಯಿಂದ ವಾಯುವನ್ನು ತುಂಬಿಸಿ, ಮಂಡಲಗಳೆರಡನ್ನು ಒಟ್ಟಿಗೆ ಸೇರಿಸಿ, ಅರವತ್ತನಾಲ್ಕು ಆವರ್ತಿಯಿಂದ ಅಲ್ಲಿ ಶ್ವಾಸ ನಿರೋಧವನ್ನು ಮಾಡಿ ಆ ಮಂಡಲಗಳೆರಡರ ಕೂಡಿಕೆಯಿಂದುಂಟಾದ ಅಗ್ನಿಯಿಂದ(ಸುಟ್ಟ) ದಹಿಸಿದ್ದಾಗಿ ದೇಹವನ್ನು ಭಾವಿಸಿ, ಇಡಾ ಮಾರ್ಗದಿಂದ ವಾಯುವನ್ನು ಹೊರಗೆ ಬಿಡಬೇಕು.

**ಪ್ಲಾವನ**– ಹಿಂದೆ ಹೇಳಿದಂತೆಯೇ ಪ್ಲಾವನದಲ್ಲಿ ತಿಳಿದುಕೊಳ್ಳಬೇಕು. ಪುನಃ 'ವಂ' ಎಂಬ ಜಲಬೀಜದಿಂದ ಹಿಂದೆ ಹೇಳಿದಂತೆ ಇಡಾ ಮಾರ್ಗದಿಂದ ವಾಯುವನ್ನು ಹೊರಗೆ ಬಿಟ್ಟು, ಇಡಾಮುಖದಲ್ಲಿ ದ್ವಾದಶಾಂತ ಪದ್ಮದಲ್ಲಿಯೂ ಕಮಲದಿಂದ ಕೂಡಿದ ಅರ್ಧಚಂದ್ರಾಕಾರದಲ್ಲಿರುವ ಬಿಳಿಯದಾದ ಜಲಮಂಡಲವು, ಅದರ ನಡುವೆ ಬಿಳುಪಾದ(ನಿರ್ಮಲವಾದ) 'ವಂ' ಎಂದು ಭಾವಿಸಿ, ಮೂವತ್ತೆರಡು ಆವರ್ತಿ ಇಡಾದಿಂದ ವಾಯುವನ್ನು ತುಂಬಿಸಿ, ಮಂಡಲಗಳೆರಡನ್ನು ಒಂದಾಗಿ ಭಾವಿಸಿ, ಅರವತ್ತನಾಲ್ಕಾವರ್ತಿ ಜಪಿಸಿ ಅಲ್ಲಿ ತಡೆಹಿಡಿದು, ದ್ವಾದಶಾಂತ ಕಮಲದಿಂದ ಇಳಿಮುಖವಾದ (ಹೊರಸೂಸಿದ) ಪರಸ್ವರೂಪ ಜ್ಞಾನವೆಂಬ ಸುಧಾ ಜಲಗಳಿಂದ ವಿಸ್ತಾರವಾಗಿ ಹರಡಿದ (ಒಂದಾಗಿ ಮಾಡಿದ) ದೇಹವನ್ನು ನೀರಿನ ಪ್ರವಾಹದಲ್ಲಿ ತೇಲಿದಂತೆ ಭಾವಿಸಬೇಕು.

## ಭೂತಸೃಷ್ಟಿ

'ಲಂ' ಎಂಬ ಪೃಥಿವೀ ಬೀಜದಿಂದ ಮೇಲೆದ್ದು ಹೊರಸೂಸುವ ಪ್ರಕಾಶದಿಂದ ಕೂಡಿದ ಬ್ರಹ್ಮಾಂಡವನ್ನು ಭಾವಿಸಿ, **'ಹಂ'** ಎಂದು ವಿವರವುಳ್ಳದ್ದನ್ನಾಗಿ ಮಾಡಿ **'ಸೋऽಹಂ'** ಎಂದು ದ್ವಾದಶಾಂತ ಪದ್ಮದಿಂದ ಜೀವವನ್ನು ತನ್ನ ಹೃದಯದಲ್ಲಿ ಸೇರಿಸಿ, ಪುನಃ 'ಭೂತಸೃಷ್ಟಿ'ಯನ್ನು ಮಾಡಬೇಕು. ಯಾವ ಕ್ರಮದಿಂದ ಸಂಹಾರವು ಮಾಡಲ್ಪಟ್ಟಿದೆಯೋ ಅದರ ವಿರುದ್ಧವಾದ ಕ್ರಮದಿಂದ ಆಯಾಯ ಬೀಜದಿಂದ ಭೂತಸೃಷ್ಟಿಯನ್ನು ಮಾಡಬೇಕು.

**'ಹೌಂ'** ಎಂದು ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ **ಹೌಂ ನಮಃ (ಆಕಾಶಾತ್ಮನೇ ನಮಃ)** ಎಂದು ದ್ವಾದಶಾಂತದಿಂದ ತಾಲು ಪರ್ಯಂತವಾಗಿ ವ್ಯಾಪಿಸಿ– **ಆತ್ಮನಃ ಆಕಾಶಂ ಸೃಜಾಮಿ** । ಪುನಃ **ಹ್ಯೈಂ ನಮಃ** ಎಂದು ಇಪ್ಪತ್ತೈದು ಸಂಖ್ಯೆಯ ಎರಡು ಪ್ರಾಣಾಯಾಮಗಳನ್ನು ಮಾಡಿ **ಹ್ಯೈಂ ನಮಃ (ವಾಯ್ವಾತ್ಮನೇ ನಮಃ)** ತಾಲುವಿನಿಂದ ಆರಂಭಿಸಿ ಕುತ್ತಿಗೆಯವರೆಗೆ ವ್ಯಾಪನ ಮಾಡಿ– **ಆಕಾಶಾದ್ವಾಯುಂ ಸೃಜಾಮಿ** । ಪುನಃ **ಹ್ರೂಂ ನಮಃ** ಎಂದು ಇಪ್ಪತ್ತೈದು ಸಂಖ್ಯೆಯ ಮೂರು ಪ್ರಾಣಾಯಾಮಗಳನ್ನು ಮಾಡಿ ಹ್ರೂಂ ನಮಃ **(ಅಗ್ನ್ಯಾತ್ಮನೇ ನಮಃ)** ಎಂದು ಕತ್ತಿನಿಂದಾರಂಭಿಸಿ ಹೃದಯ ಪರ್ಯಂತವಾಗಿ ವ್ಯಾಪಿಸಿ, **ವಾಯೋಃ ಅಗ್ನಿಂ ಸೃಜಾಮಿ** । ಪುನಃ **'ಹ್ವೀಂ'** ಎಂದು ಇಪ್ಪತ್ತೈದು ಸಂಖ್ಯೆಯ ನಾಲ್ಕು ಪ್ರಾಣಾಯಾಮಗಳನ್ನು ಮಾಡಿ **ಹ್ವೀಂ ನಮಃ (ಅಬಾತ್ಮನೇ ನಮಃ)** ಎಂದು ಹೃದಯದಿಂಧಾರಂಭಿಸಿ ನಾಭಿ ಪರ್ಯಂತವಾಗಿ ವ್ಯಾಪಿಸಿ, **ಅಗ್ನೇಃ ಅಪಃ ಸೃಜಾಮಿ** । ಪುನಃ **'ಹ್ಲಾಂ'** ಎಂದು ಇಪ್ಪತ್ತೈದು ಸಂಖ್ಯೆಯ ಐದು ಪ್ರಾಣಾಯಾಮಗಳನ್ನು ಮಾಡಿ **ಹ್ಲಾಂ ನಮಃ (ಪೃಥಿವ್ಯಾತ್ಮನೇ ನಮಃ)** ಎಂದು ನಾಭಿಯಿಂದಾರಂಭಿಸಿ ಪಾದದ ತುದಿಯ ಪರ್ಯಂತ ವ್ಯಾಪಿಸಿ, **ಅದ್ಭ್ಯಃ ಪೃಥಿವೀಂ ಸೃಜಾಮಿ** । ಪುನಃ ಮುನ್ನೂರ ಅರವತ್ತು ಪ್ರಣವ (ಓಂ)ದಿಂದ ಪ್ರಾಣಾಯಾಮವನ್ನು ಮಾಡಿ ವರ್ಷ ಪರ್ಯಂತ ವಾಸ ಮಾಡಿದ್ದಾಗಿ ಭಾವಿಸಿ 'ಓಂ ಫಟ್' ಎಂದು ಬ್ರಹ್ಮಾಂಡವನ್ನು ಇಬ್ಭಾಗವಾಗಿಸಿ ಆ ತುಂಡು(ಭಾಗ)ಗಳನ್ನು ಸ್ವರ್ಗ ಮತ್ತು ಭೂಮಿಯನ್ನಾಗಿ ಭಾವಿಸಿ ಅದರ ಒಳಗಿರುವ ಜೀವಾತ್ಮನನ್ನು ಸೃಷ್ಟಿಕರ್ತನಾದ ಪರಮಾತ್ಮನನ್ನು ಧ್ಯಾನಿಸಿ ಲಿಪಿ(ಅಕ್ಷರ)ಯಿಂದ ಪ್ರಾಣಾಯಾಮವನ್ನು ಮಾಡಿ ದ್ವಾದಶಾಂತ ಕಮಲದ ಮಧ್ಯದಿಂಧ ಅಕಾರದಿಂದಾರಂಭಿಸಿ ಕ್ಷಕಾರಾಂತವಾದ ಅಕ್ಷರ ಸ್ವರೂಪದ ಅಮೃತ ಜಲಧಾರೆಯನ್ನು ತನ್ನ ತಲೆಯಲ್ಲಿ ಬೀಳಿಸಿ ಲಿಪಿಯಿಂದ ದೇಹವನ್ನು ನ್ಯಾಸ ಮಾಡಬೇಕು.

* * * *

## ಲಿಪಿನ್ಯಾಸಃ

ದಕ್ಷಕರ ತಲೇ– ಓಂ ಅಂ ನಮಃ । ವಾಮಕರ ತಲೇ– ಆಂ ನಮಃ । ದಕ್ಷಕರ ಪೃಷ್ಠೇ– ಇಂ ನಮಃ । ವಾಮಕರ ಪೃಷ್ಠೇ– ಈಂ ನಮಃ । ದಕ್ಷಕರ ಪಾರ್ಶ್ವಯೋಃ– ಉಂ ನಮಃ । ವಾಮಕರ ಪಾರ್ಶ್ವಯೋಃ– ಊಂ ನಮಃ । ದಕ್ಷಾಂಗುಷ್ಠೇ– ಋಂ ನಮಃ । ವಾಮಾಂಗುಷ್ಠೇ– ೠಂ ನಮಃ । ದಕ್ಷ ತರ್ಜನ್ಯಾಂ– ಌಂ ನಮಃ । ವಾಮ ತರ್ಜನ್ಯಾಂ– ೡಂ ನಮಃ । ದಕ್ಷ ಮಧ್ಯಮಾಯಾಂ– ಏಂ ನಮಃ । ವಾಮ ಮಧ್ಯಮಾಯಾಂ– ಐಂ ನಮಃ । ದಕ್ಷಾನಾಮಿಕೇ– ಓಂ ನಮಃ । ವಾಮಾನಾಮಿಕೇ– ಔಂ ನಮಃ । ದಕ್ಷ ಕನಿಷ್ಠಿಕಾಯಾಂ– ಅಂ ನಮಃ । ವಾಮ ಕನಿಷ್ಠಿಕಾಯಾಂ– ಅಃ ನಮಃ । ಬಲದ ತೋರ್ಬೆರಳಿನಿಂದಾರಂಭಿಸಿ ಎಡದ ತೋರ್ಬೆರಳ ಕೊನೆಯ ಪರ್ಯಂತ ಮೂರು ಸಂಧಿ(ಗಿಣ್ಣು) ಹಾಗೂ ತುದಿಯಲ್ಲಿ– ಕಂ ನಮಃ, ಖಂ ನಮಃ, ಗಂ ನಮಃ– ಮೊದಲಾಗಿ ಕಕಾರದಿಂದಾರಂಭಿಸಿ ಸಕಾರ ಕೊನೆಯಾದ ಮೂವತ್ತೆರಡು ಅಕ್ಷರಗಳನ್ನು ನ್ಯಾಸ ಮಾಡಿ, ಹುಂ ನಮಃ, ಳಂ ನಮಃ, ಕ್ಷಂ ನಮಃ– ಎಂದು ಎರಡು ಹೆಬ್ಬೆರಳಿನ ಸಂದು ಹಾಗೂ ತುದಿಯಲ್ಲಿ ಏಕಕಾಲದಲ್ಲಿ ನ್ಯಾಸ ಮಾಡಬೇಕು. ಅಂಗ ಮೊದಲದವುಗಳನ್ನು ಹೆಬ್ಬೆರಳು ಮೊದಲಾಗಿ ಅಂಗ್ಯೆ ಪರ್ಯಂತ ಒಂದೇ ಸಮಯದಲ್ಲಿ ನ್ಯಾಸ ಮಾಡಬೇಕು.

ಶಬ್ದಬ್ರಹ್ಮ ಋಷಿಃ । ಲಿಪಿ ಗಾಯತ್ರೀ ಛಂದಃ । ಮಾತೃಕಾ ಸರಸ್ವತೀ ದೇವತಾ ।

ಓಂ ಅಂ ಕಂ ಖಂ ಗಂ ಘಂ ಙಂ ಆಂ–ಅಂಗುಷ್ಠಾಭ್ಯಾಂ * ಹೃದಯಾಯ ನಮಃ।

ಓಂ ಇಂ ಚಂ ಛಂ ಜಂ ಝಂ ಞಂ ಈಂ–ತರ್ಜನೀಭ್ಯಾಂ * ಶಿರಸೇ ಸ್ವಾಹಾ ।

ಓಂ ಉಂ ಟಂ ಠಂ ಡಂ ಢಂ ಣಂ ಊಂ– ಮಧ್ಯಮಾಭ್ಯಾಂ * ಶಿಖಾಯೈವಷಟ್ ।

ಓಂ ಏಂ ತಂ ಥಂ ದಂ ಧಂ ನಂ ಐಂ– ಅನಾಮಿಕಾಭ್ಯಂ * ಕವಚಾಯಹುಂ ।

ಓಂ ಓಂ ಪಂ ಫಂ ಬಂ ಭಂ ಮಂ ಔಂ- ಕನಿಷ್ಠಿಕಾಭ್ಯಾಂ * ನೇತ್ರತ್ರಯಾಯ * ।

ಓಂ ಲಂ ಯಂ ರಂ ಲಂ ವಂ ಶಂ ಷಂ ಸಂ ಹಂ ಳಂ ಕ್ಷಂ ಅಃ-

ಕರತಲಕರಪೃಷ್ಠಾಭ್ಯಾಂ ನಮಃ- ಅಸ್ತ್ರಾಯ ಫಟ್

**ಧ್ಯಾನಂ-**

**ಐಂಕಾರೇ ಮದನಾತ್ಮಪಂಕಜಶುಕೀ ಶ್ರೀಚಕ್ರಮಧ್ಯಸ್ಥಿತೇ**

**ಈಡಾಪಿಂಗಲಮಧ್ಯದೇಶವಿವರೇ ಬ್ರಮ್ಹಾಂಡಕಾಂಡೇ ಸ್ಥಿತಾ ।**

**ಉದ್ಯದ್ಭಾನುಧನುರ್ಧರಾ ಬಹುವಿಧಾ ಪುಷ್ಪಾಯುಧಾ ಮೋಹಿನೀ**

**ತಾರಾಪೂರ್ಣಮುಖೀ ಸಮಸ್ತವಶಗಾಶ್ಯಂತರ್ಮುಖೀ ಮಾತೃಕಾ ॥**

**ಆಧಾರೇ ಲಿಂಗನಾಭೌ ಹೃದಯಸರಸಿಜೇ ತಾಲುಮೂಲೇ ಲಲಾಟೇ**

**ದ್ವೇ ಪತ್ರೇ ಷೋಡಶಾರೇ ದ್ವಿದಶದಶದಳೇ ದ್ವಾದಶಾರ್ಧೇ ಚತುಷ್ಕೇ ।**

**ವಾಸಂತೇ ಬಾಲಮಧ್ಯೇ ಡಫಖಡಸಹಿತೇ ಕಂಠದೇಶೇ ಸ್ವರಾಣಾಂ**

**ಹಂಸಂ ತತ್ವಾರ್ಥಯುಕ್ತಂ ಸಕಲಗುಣಯುತಂ ವರ್ಣರೂಪಂ ನಮಾಮಿ ॥**

ಆಮೇಲೆ ಅಕಾರ ಮೊದಲುಗೊಂಡು ಕ್ಷಕಾರಾಂತಗಳಿಂದ ಸ್ವರ, ಸ್ಪರ್ಶ ವ್ಯಾಪಕ ಭೇದಗಳಿಂದ ಕೂಡಿದ ಅಕ್ಷರಗಳಿಂದ ದೇಹದಲ್ಲಿ ತಲೆಯಿಂದಾರಂಭಿಸಿ ಕಾಲುತುದಿಯ ಪರ್ಯಂತವಾಗಿ ಮೂರಾವರ್ತಿ ವ್ಯಾಪನೆ ಮಾಡಬೇಕು. ಇತಿ ಲಿಪಿನ್ಯಾಸಃ ।

* * * *

## ಮಾತೃಕಾನ್ಯಾಸಃ

ತಲೆಯಲ್ಲಿ- ಓಂ ಅಂ ನಮಃ । ಮುಖದ ಸುತ್ತ- ಓಂ ಆಂ ನಮಃ (ಈ ರೀತಿಯಾಗಿ ಎಲ್ಲೆಡೆಯೂ (ಓಂ) ಪ್ರಣವ ಮೊದಲುಗೊಂಡು ನ್ಯಾಸವು) ಬಲಗಣ್ಣಿನಲ್ಲಿ- ಇಂ ನಮಃ । ಎಡಗಣ್ಣಿನಲ್ಲಿ- ಈಂ ನಮಃ । ಬಲಗಿವಿಯಲ್ಲಿ- ಓಂ ಉಂ ನಮಃ। ಎಡಗಿವಿಯಲ್ಲಿ- ಊಂ ನಮಃ । ಬಲಮೂಗಿನಲ್ಲಿ- ಋಂ ನಮಃ । ಎಡಮೂಗಿನಲ್ಲಿ- ಓಂ ೠಂ ನಮಃ । ಬಲಕೆನ್ನೆ- ಌಂ ನಮಃ । ಎಡಕೆನ್ನೆ- ೡಂ ನಮಃ । ಮೇಲ್ತುಟಿಯಲ್ಲಿ- ಏಂ ನಮಃ । ಕೆಳತುಟಿಯಲ್ಲಿ- ಐಂ ನಮಃ । ಮೇಲಿನ ಹಲ್ಲು ಸಾಲಿನಲ್ಲಿ- ಓಂ ಓಂ ನಮಃ । ಕೆಳಹಲ್ಲಿನ ಸಾಲಿನಲ್ಲಿ- ಓಂ ಔಂ ನಮಃ । ತಲೆ(ನೆತ್ತಿ)ಯಲ್ಲಿ- ಅಂ ನಮಃ । ಬಾಯಿಯಲ್ಲಿ- ಓಂ ಅಃ ನಮಃ- ಹೀಗೆ ಸ್ವರಾಕ್ಷರಗಳನ್ನು ನ್ಯಾಸ ಮಾಡಿ ಎರಡು ಕೈ ಎರಡು ಕಾಲುಗಳ ಸಂದುಗಳ ತುದಿಯಲ್ಲಿ ಕಚಟತಪವರ್ಗಾಕ್ಷರಗಳನ್ನು ನ್ಯಾಸ ಮಾಡಿ, ಎರಡು ಪಕ್ಕ, ಬೆನ್ನು, ಹುಕ್ಕಳು, ಹೊಟ್ಟೆ, ಹೃದಯ(ಎದ), ಬಲದ ಪಕ್ಕ(ಪಾರ್ಶ್ವ), ಕುತ್ತಿಗೆಯ ಹಿಂಭಾಗ ಎಡಪಕ್ಕೆಗಳಲ್ಲಿ ಪಕಾರದಿಂದಾರಂಭಿಸಿ ವಕಾರದ ತನಕ ನ್ಯಾಸ ಮಾಡಿ, ಹೃದಯ ಮೊದಲುಗೊಂಡು ಎರಡು ಕೈಗಳು ಎರಡು ಪಾದಗಳು ಗುಹ್ಯ ತಲೆಗಳಲ್ಲಿ ಶಕಾರ ಮೊದಲಾಗಿ ಕ್ಷಕಾರವೇ ಕೊನೆಯಾಗಿ ನ್ಯಾಸ ಮಾಡಬೆಕು. ವಿವರಣೆ- ಬಲತೋಳಿನ ಬುಡದಲ್ಲಿ- ಓಂ ಕಂ ನಮಃ । ಮೊಳಕೈಯಲ್ಲಿ(ಮಧ್ಯ ಕೈ ಸಂದಿಯಲ್ಲಿ)- ಓಂ ಖಂ ನಮಃ । ಹಸ್ತದ ಮೂಲಭಾಗದಲ್ಲಿ (ಮಣಿಬಂಧ)- ಓಂ ಗಂ ನಮಃ । ಬೆರಳ ಬುಡದಲ್ಲಿ- ಓಂ ಘಂ ನಮಃ- ಬೆರಳ ತುದಿಯಲ್ಲಿ- ಓಂ ಙ ನಮಃ- ಹೀಗೆ.

(ಹೀಗೆಯೇ ಎಡ ಕೈಯ ಸಂದುತುದಿಗಳಲ್ಲಿ) ಎಡ ತೋಳಿನ ಬುಡದಲ್ಲಿ- ಓಂ ಚಂ ನಮಃ । ಎಡ ಮೊಳಕೈಯಲ್ಲಿ- ಓಂ ಛಂ ನಮಃ । ಕೈಯ ಮೂಲದಲ್ಲಿ- ಓಂ ಜಂ ನಮಃ । ಎಡ ಬೆರಳುಗಳ ಬುಡದಲ್ಲಿ- ಓಂ ಝಂ ನಮಃ । ಎಡ ಬೆರಳುಗಳ ತುದಿಯಲ್ಲಿ- ಓಂ ಞಂ ನಮಃ । (ಬಲದ ಕಾಲಿನ ಬುಡ ಸಂದು ತದಿಯಲ್ಲಿ) ಬಲಗಾಲಿನ ಬುಡದಲ್ಲಿ- ಓಂ ಟಂ ನಮಃ । ಮೊಣಗಾಲಿನ ಸಂದು (ಮಂಡಿ)ಯಲ್ಲಿ ಓಂ ಠಂ ನಮಃ । ಕಾಲುಗಂಟಿನಲ್ಲಿ- ಓಂ ಡಂ ನಮಃ । ಕಾಲಿನ ಬೆರಳು ಬುಡದಲ್ಲಿ- ಓಂ ಢಂ ನಮಃ । ಕಾಲಬೆರಳ ತುದಿಯಲ್ಲಿ- ಓಂ ಣಂ ನಮಃ(ಎಡಗಾಲಿನ ಬುಡ ಸಂದು ತುದಿಗಳಲ್ಲಿ) ಎಡಕಾಲ ಬುಡದಲ್ಲಿ- ಓಂ ತಂ ನಮಃ । ಎಡಕಾಲ ಮಂಡಿಯಲ್ಲಿ- ಓಂ ಥಂ ನಮಃ । ಎಡ ಕಾಲ ಗಂಟಿನಲ್ಲಿ- ಓಂ ದಂ ನಮಃ । ಕಾಲಬೆರಳ ಬುಡದಲ್ಲಿ- ಓಂ ಧಂ ನಮಃ । ಎಡ ಕಾಲಬೆರಳ ತುದಿಯಲ್ಲಿ- ಓಂ ನಂ ನಮಃ । ಬಲಪಕ್ಕದಲ್ಲಿ- ಓಂ ಪಂ ನಮಃ। ಎಡಪಕ್ಕದಲ್ಲಿ- ಓಂ ಫಂ ನಮಃ । ಹಿಂಬದಿಯಲ್ಲಿ- ಓಂ ಬಂ ನಮಃ । ಹುಕ್ಕಳಲ್ಲಿ- ಭಂ ನಮಃ ।

ಹೊಟ್ಟೆಯಲ್ಲಿ- ಓಂ ಮಂ ನಮಃ । ಹೃದಯ(ಎದೆ)ದಲ್ಲಿ- ಓಂ ಯಂ ನಮಃ । ಬಲಪಕ್ಕದಲ್ಲಿ- ಓಂ ರಂ ನಮಃ । ಕುತ್ತಿಗೆ ಹಿಂಬದಿಯಲ್ಲಿ- ಓಂ ಲಂ ನಮಃ । ಎಡಪಾರ್ಶ್ವದಲ್ಲಿ- ಓಂ ವಂ ನಮಃ । ಹೃದಯದಿಂದಾರಂಭಿಸಿ ಬಲದ ಕೈ ತುದಿಯ ಪರ್ಯಂತ- ಓಂ ಶಂ ನಮಃ । ಹೃದಯಾದಿ ಎಡಗೈ ತುದಿಯ ಪರ್ಯಂತ- ಓಂ ಷಂ ನಮಃ । ಹೃದಯಾದಿ ಬಲಗಾಲಿನ ತುದಿಯ ಪರ್ಯಂತ- ಓಂ ಸಂ ನಮಃ । ಹೃದಯಾದಿ ಎಡಗಾಲಿನ ಕೊನೆಯ ತನಕ- ಓಂ ಹಂ ನಮಃ । ಗುಹ್ಯ(ರಹಸ್ಯ)ದಲ್ಲಿ- ಓಂ ಳಂ ನಮಃ । ಮುಖದಲ್ಲಿ- ಓಂ ಕ್ಷಂ ನಮಃ । ಹೀಗೆ ಮಾತೃಕಾ(ವರ್ಣ)ಗಳನ್ನು ನ್ಯಾಸ ಮಾಡಿ ಮಾತೃಕೆಗಳಿಂದ ಪುನಃ ಋಷ್ಯಾದಿಗಳನ್ನು ಹೇಳಿ ಮಾತೃಕೆಗಳಿಂದ ಅಂಗನ್ಯಾಸ ಮಾಡಿ ಧ್ಯಾನಿಸಬೇಕು.

**ಪಂಚಾಶದ್ವರ್ಣಭೇದೈರ್ವಿಹಿತವದನದೋಃ ಪಾದಯುತ್ಕುಕ್ಷಿವಕ್ಷೋ**
**ದೇಹಾಂ ಭಾಸ್ವತ್ಕಪರ್ದಾಲಲಿತಶಶಿಕಲಾಮಿಂದುಕುಂದಾವದಾತಾಂ ।**
**ಅಕ್ಷಸ್ರಕ್ಕುಂಭಚಿಂತಾಲಿಖಿತವರಕರಾಭೀಷ್ಟಪದ್ಮಾಸನಸ್ಥಾ**
**ಮಚ್ಛಾಕಲ್ಪಾವತುಚ್ಛಾಸ್ತನಭರಜಘನಾ ಭಾರತೀಂ ತಾಂ ನಮಾಮಿ ॥**

ಈ ರೀತಿಯಾಗಿ ಧ್ಯಾನಿಸಿ, ಶಕ್ತ್ಯಾನುಸಾರವಾಗಿ ಅಕ್ಷರಗಳನ್ನು ಜಪಿಸಿ, ಶರೀರದಲ್ಲಿ ಮೂರಾವರ್ತಿಯಿಂದ ವ್ಯಾಪಿಸಿ ಲಯಾಂಗವನ್ನು ಮಾಡಿ- **'ಓಂ ಗಣಾನಾಂತ್ವಾ ಗಣಪತಿಂ ಹವಾಮಹೇ'** ಹೀಗೆ ಗಣಪತಿ ಮಂತ್ರವನ್ನೂ, **'ಓಂ ಜಾತವೇದಸೇ ಸುನವಾಮ ಸೋಮಮರಾತೀ'** ಎಂಬ ದುರ್ಗಾ ಮಂತ್ರವನ್ನೂ ಜಪಿಸಿ, ಪುನಃ ಮಂತ್ರೋದಯವನ್ನು ಮಾಡಬೇಕು. ಹ ಹ ಹ ಎಂದು ಜಪಿಸಿ, ಮೂಲಾಧಾರ (ಗುಹ್ಯಸ್ಥಾನ ಮತ್ತು ಜನನೇಂದ್ರಿಯಗಳ ಮಧ್ಯದ ಎರಡು ಅಂಗುಲಗಳ ಪ್ರದೇಶ)ದಲ್ಲಿರುವ ಜೀವವನ್ನು ಪರಮಾತ್ಮನಲ್ಲಿ ವಿಲಯನಗೊಳಿಸಿ, ಆಮಂತ್ರಾತ್ಮಕನೆಂದು ಭಾವಿಸಿ ಪುನಃ ಪ್ರಣವ (ಓಂ)ದಿಂದ ಕೂಡಿದ ಮೂಲಮಂತ್ರವನ್ನು ಹೇಳಿ ಹೃದಯಕಮಲದಲ್ಲಿರಿಸಿ, ಮೂಲಮಂತ್ರದಿಂದ ಇಪ್ಪತ್ತೈದು ಪರಿಗಣನೆಯ ಪ್ರತ್ಯೇಕವಾಗಿ ಮೂರು ಪ್ರಾಣಾಯಾಮಗಳನ್ನು ಮಾಡಿ ಅನುಕ್ರಮವಾಗಿ

ಪರ-ಸೂಕ್ಷ್ಮ-ಸ್ಥೂಲಾತ್ಮಕವಾಗಿ ಧ್ಯಾನಿಸಿ ಆ ವಿರಾಡ್ರೂಪದ (ಸೃಷ್ಟಿಕರ್ತನಾದ ಪರಮಾತ್ಮನ) ಆಶ್ರಯಕ್ಕಾಗಿ ತನ್ನ ಶರೀರದಲ್ಲಿ ಪೀಠಪೂಜೆಯನ್ನು ಮಾಡಬೇಕು. ಇತಿ ಮಾತೃಕನ್ಯಾಸಃ ॥

* * * *

## ಪೀಠನ್ಯಾಸಃ

ತಲೆಯಲ್ಲಿ- ಗುಂ ಗುರಭ್ಯೋ ನಮಃ । ಮೂಲಾಧಾರದಲ್ಲಿ- ಗಂ ಗಣಪತಯೇ ನಮಃ । ಮೂಲಾಧಾರದಿಂದ ಹೃದಯಪರ್ಯಂತ ಮೇಲಿಂದ ಮೇಲಕ್ಕೆ- ಆಧಾರಶಕ್ತ್ಯೈ । ಮೂಲಪ್ರಕೃತ್ಯೈ । ಆದಿಕೂರ್ಮಾಯ । ಅನಂತಾಯ । ಪೃಥಿವ್ಯೈ ನಮಃ । ಹೀಗೆ ನ್ಯಾಸ ಮಾಡಿ, ಬಲದ ತೊಡೆಯಲ್ಲಿ- ಧರ್ಮಾಯ । ಬಲದ ಹೆಗಲಿನಲ್ಲಿ- ಜ್ಞಾನಾಯ ನಮಃ । ಎಡ ಹೆಗಲಿನಲ್ಲಿ- ವೈರಾಗ್ಯಾಯ ನಮಃ । ಎಡತೊಡೆಯಲ್ಲಿ- ಐಶ್ವರ್ಯಾಯ ನಮಃ । ಹುಕ್ಕುಳ ಬುಡದಲ್ಲಿ- ಅಧರ್ಮಾಯ । ಬಲಪಕ್ಕದಲ್ಲಿ- ಅಜ್ಞಾನಾಯ । ಮುಖದಲ್ಲಿ- ಅವೈರಾಗ್ಯಾಯ । ಎಡಪಕ್ಕದಲ್ಲಿ- ಅನೈಶ್ವರ್ಯಾಯ ನಮಃ- ಹೀಗೆ ಧರ್ಮಾದಿ ಎಂಟನ್ನು ನ್ಯಾಸ ಮಾಡಿ, ಹೀಗೆ ಸತ್ವಾದಿ ಮೂರನ್ನು ಮಧ್ಯದಲ್ಲಿ ಸೂತ್ರಾಕಾರದಂತೆ- ಸಂ ಸತ್ವಾಯ ನಮಃ । ರಂ ರಜಸೇ । ತಂ ತಮಸೇ ನಮಃ ॥ ಮಾಯಾ ಹಾಗೂ ವಿದ್ಯೆಯನ್ನು (ಚಪ್ಪರದ) ಮೇಲ್ಗಟ್ಟಿನಂತೆ ನ್ಯಾಸ ಮಾಡಿ- ಮಂ ಮಾಯಾಯೈ । ವಿಂ ವಿದ್ಯಾಯೈ । ಅಂ ಅನಂತಾಯ । ಪಂ ಪದ್ಮಾಯ ನಮಃ- ಮೊದಲಾದುವನ್ನು ಹೃದಯದಲ್ಲಿ ನ್ಯಾಸ ಮಾಡಬೇಕು. ಹೃದಯ ಕಮಲದ ಪೂರ್ವಾದಿ ದಳಗಳಲ್ಲಿ ಹಾಗೂ ಕರ್ಣಿಕೆಯಲ್ಲಿ ನವಶಕ್ತಿಗಳನ್ನು (ಆಯಾಯ ದೇವತೆಗಳಿಗೆ ಸಂಬಂಧಿಸಿದಂತೆ) ನ್ಯಾಸ ಮಾಡಬೇಕು. ಹೃದಯದಲ್ಲಿ- ಅಂ ಅರ್ಕಮಂಡಲಾಯ ನಮಃ । ಉಂ ಸೋಮಮಂಡಲಾಯ । ವಂ ವಹ್ನಿಮಂಡಲಾಯ । ಆಂ ಆತ್ಮನೇ । ಉಂ ಅಂತರಾತ್ಮನೇ । ಮಂ ಪರಮಾತ್ಮನೇ । ಓಂ ಹ್ರೀಂ ಜ್ಞಾನಾತ್ಮನೇ ನಮಃ । ಹೀಗೆ ನ್ಯಾಸ ಮಾಡಿ ಸಮಷ್ಟಿ ಮಂತ್ರದಿಂದ ವ್ಯಾಪನೆಯನ್ನು ಮಾಡಿ ತನ್ನ ಹೃದಯದಲ್ಲಿ ಲಿಪಿಯನ್ನು ಆವಾಹಿಸಿ, ಸಕಲೀಕರಣದೊಂದಿಗೆ ಮಾನಸ ಪೂಜೆಯನ್ನು ಮಾಡಬೇಕು. (ಲಿಪಿಯಿಂದ ಪ್ರಾಣಾಯಾಮವನ್ನು ಮಾಡಿ ದ್ವಾದಶಾಂತದ ಕಮಲದ ಕರ್ಣಿಕೆಯಲ್ಲಿ ಅಕಾರ ಮೊದಲಾಗಿ ಕ್ಷಕಾರಾಂತವಾದ ಅಕ್ಷರರೂಪದ ಅಮೃತಜಲಧಾರೆಯನ್ನು ತನ್ನ ಶರೀರದ ತಲೆಯ ಬೀಳಿಸಿ, ದೇಹವನ್ನು ಸ್ನಾನ ಮಾಡಿಸಿ, ಲಿಪಿನ್ಯಾಸವನ್ನು ಮಾಡಬೇಕು)

ಆಮೇಲೆ, ಶಂಖಪೂರಣ(೧೬೪), ಆತ್ಮಾರಾಧನೆಯನ್ನು(೧೬೫) ಮಾಡಬೇಕು. ಆಮೇಲೆ ಅಲ್ಲಿ ಬಿದ್ದಿರುವ ನಿರ್ಮಾಲ್ಯ ಮೊದಲಾದುವನ್ನು ತೆಗೆದು, ಗೋಮಯದಿಂದ ಶುದ್ಧ ಮಾಡಿ, ಶಂಖಾದಿಗಳನ್ನು ತೊಳೆದು ಅಲ್ಲೇ ಇರಿಸಿ ಅರ್ಘ್ಯದ ಕಲಶ ದ್ರವ್ಯಗಳನ್ನು ಹೊಂದಿಸಿ, ಇರಿಸಿಕೊಂಡು ತಾನು ಕಾಲರೂಪನಾದ ದೇವನೇ ಆಗಿರುವೆನೆಂದು ಭಾವಿಸಿ, ಕಲಶಪೂಜೆಯನ್ನು ಮಾಡಬೇಕು.

ಆಮೇಲೆ ಗುರುಗಳನ್ನು ಗಣಪತಿಯನ್ನು ಪೂಜಿಸಿ, ಗುರುಗಳಿಗೆ ಅರ್ಘ್ಯವನ್ನು, ಗಣಪತಿಗೆ ನೈವೇದ್ಯ ಮಾಡಿ, ದೀಪವನ್ನು ಹೂವಿನಿಂದ ಪೂಜಿಸಿ, ಆಧಾರಶಕ್ತ್ಯಾದಿ ಪೀಠಪೂಜೆಯನ್ನು ಮಾಡಿ **ಓಂ ಹ್ರೀಂ ಭುವನೇಶ್ವರ್ಯೈ ನಮಃ–** ಹೀಗೆ ಶಕ್ತಿಯನ್ನು ಆವಾಹಿಸಿ ಮುದ್ರೆಗಳನ್ನು ಪ್ರದರ್ಶಿಸಿ ಪೀಠಪೂಜೆಯನ್ನು ಮಾಡಿ ನವಶಕ್ತಿ ಪೂಜೆಯನ್ನು ಮಾಡಬೇಕು. ಸಜಯಾಯ್ಯೆ । ವಿಜಯಾಯ್ಯೆ । ಜಿತಾಹ್ವಯಾಯ್ಯೆ । ಅಪರಾಜಿತಾಯ್ಯೆ । ನಿತ್ಯಾಯ್ಯೆ । ವಿಲಾಸಿನ್ಯೈ । ದೋಗ್ಧ್ರ್ಯೈ । ಅಘೋರಾಯ್ಯೆ । ಮಂಗಲಪ್ರದಾಯ್ಯೆ । ಓಂ ನಮೋ ಭಗವತ್ಯೈ ವಜ್ರನಖ ದಂಷ್ಟ್ರಾಯುಧಾಯ ಮಹಾ ಸಿಂಹಾಯ ಹುಂ ನಮಃ– ಇತ್ಯಾದಿ. **ವರಾಹದಂಷ್ಟ್ರಾಯ ವಿದ್ಮಹೇ ವಜ್ರಮುಖಾಯ ಧೀಮಹೀ । ತನ್ನೋ ಭುವನೇಶ್ವರೀ ಪ್ರಚೋದಯಾತ್** ॥ ಇತಿ ಗಾಯತ್ರೀ. ತ್ರಿವಾರಮರ್ಘ್ಯಂ ॥ **ನಾರದ ಋಷಿಃ । ಗಾಯತ್ರೀ ಛಂದಃ । ಭುವನೇಶ್ವರೀ ದೇವತಾ ॥ ಹ್ರಾಂ ಹೃದಯಾಯ ನಮಃ–** ಇತ್ಯಾದಿ ಷಡಂಗನ್ಯಾಸಃ.

**ಧ್ಯಾನಂ–**

**ವರಾಂಕುಶೌ ಪಾಶಮಭೀತಿಮುದ್ರಾಂ ಕರೈರ್ವಹಂತೀಂ ಕಮಲಾಸನಸ್ಥಾಂ ।**

**ಬಾಲಾರ್ಕಕೋಟಿಪ್ರತಿಮಾಂ ತ್ರಿನೇತ್ರಾಂ ಭಜೇಹಮಾದ್ಯಾಂ ಭುವನೇಶ್ವರೀಂ ತಾಂ ॥**

**ಓಂ ಹ್ರೀಂ ಭೂವನೇಶ್ವರ್ಯೈ ನಮಃ–** ಇತಿ ಮೂಲಮಂತ್ರಮಷ್ಟವಾರಂ ಜಪೇತ್ । ಷೋಡಶೋಪಚಾರೈಃ ಸಂಪೂಜ್ಯ, ಅರ್ಘ್ಯಂ ದತ್ವಾ ಸಂಪ್ರಾರ್ಥ್ಯ ಪುಷ್ಪಾಂಜಲಿಂ ಕುರ್ಯಾತ್ ॥

## ಕಲಶಾರಾಧನ

ಪುನಃ ಕಲಶವನ್ನು ತೆಗೆದುಕೊಂಡು ಆಯಾಯ ದೇವತೆಯ ಅಸ್ತ್ರದಿಂದ ತೊಳೆದು, ಕವಚ ಮಂತ್ರದಿಂದ ಮೂರೆಳೆಯ ನೂಲಿನಿಂದ ಸುತ್ತಿ, ಮೂಲಮಂತ್ರದಿಂದ ಅಷ್ಟಗಂಧವನ್ನು ಲೇಪಿಸಿ, ಪ್ರಣವ(ಓಂ)ದಿಂದ ಧೂಪ ಹಿಡಿದು ಮೂಲಮಂತ್ರದಿಂದ ಪೀಠದಲ್ಲಿ ಕೆಳಮುಖವಾಗಿರಿಸಬೇಕು. ಶೋಷಣ, ದಾಹನ, ಪ್ಲಾವನ, ಕಾಠಿನ್ಯ, ಸುಷರೀಕರಣಗಳನ್ನು ಮಾಡಿ, ಪಂಚತತ್ತ್ವಗಳಲ್ಲಿ ಮೊದಲನೆಯ ತತ್ತ್ವದಿಂದ ದರ್ಭವಿನ್ಯಾಸವನ್ನೂ, ಎರಡನೆಯ ತತ್ತ್ವದಿಂದ ಅಷ್ಟಗಂಧ ಪ್ರೋಕ್ಷಣೆಯನ್ನೂ, ಮೂರನೆಯ ತತ್ತ್ವದಿಂದ ಅಕ್ಷತ ತಳಿಯುವಿಕೆಯನ್ನೂ ಮಾಡಿ, ಮೂಲಮಂತ್ರದಿಂದ ಕುಂಭವನ್ನು ಪೂಜಿಸಿ, ನಾಲ್ಕನೆಯ ತತ್ತ್ವದಿಂದ ಮೇಲ್ಮುಖನಾಗಿ ಹಿಡಿದು ಎತ್ತಿ ಐದನೆಯ ತತ್ತ್ವದಿಂದ ಮೂಲಮಂತ್ರವನ್ನೂ ಹೇಳಿ ಪೀಠದಲ್ಲಿಡಬೇಕು. ಶಿವನಲ್ಲಿ ಈ ರೀತಿಯಾಗಿ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರದಿಂದಲೂ ಮಾಡಬಹುದು. ಪ್ರಣವದಿಂದ ಕಲಶದ ಮುಖವನ್ನು ಪ್ರೋಕ್ಷಿಸಿ ಕಲಶದ ಬುಡದಲ್ಲಿ ಹತ್ತು ವಹ್ನಿ ಕಲೆಗಳನ್ನು ನ್ಯಾಸ ಮಾಡಿ ಋಕ್ಕಿನಿಂದಲೂ ಸಮಷ್ಟಿ ಮಂತ್ರದಿಂದಲೂ ವ್ಯಾಪಿಸಬೇಕು. ಪುನಃ ಕುಂಭದ ಮಧ್ಯ ಭಾಗದಲ್ಲಿ ಹನ್ನೆರಡು ದಳವುಳ್ಳ ಪದ್ಮವನ್ನು ಭಾವಿಸಿ, ಪೂರ್ವಾದಿ ದಳಗಳಲ್ಲಿ ಹನ್ನೆರಡು ಸೂರ್ಯಕಲೆಗಳನ್ನು ನ್ಯಾಸ ಮಾಡಿ ಅಲ್ಲಿ ಹೇಳಿದ ಋಕ್ಕಿನಿಂದಲೂ ಸಮಷ್ಟಿಯಿಂದಲೂ ವ್ಯಾಪಿಸಿ, ಪುನಃ ಕುಂಭದ ಮುಖದಲ್ಲಿ ಹದಿನಾರು ದಳದ ಕಮಲವನ್ನು ಭಾವಿಸಿ ಪೂರ್ವಾದಿಯಾಗಿ ದಳಗಳಲ್ಲಿ ಹದಿನಾರು ಸೋಮಕಲೆಗಳನ್ನು ನ್ಯಾಸ ಮಾಡಿ ಅಲ್ಲಿನ ಋಕ್ಕಿನಿಂದಲೂ ಸಮಷ್ಟಿಯಿಂದಲೂ ವ್ಯಾಪಿಸಬೇಕು. ಅವೆಲ್ಲವನ್ನೂ ಜಲಗಂಧಾದಿಗಳಿಂದ ಪೂಜಿಸಿ, ಪುಷ್ಪಾಕ್ಷತೆಗಳಿಂದ ಪೂಜಿಸಬೇಕು. ಓಂ ಹ್ರೀಂ ಹಂಸಃ– ಈ ಮಂತ್ರದಿಂದ ಕುಂಭ ದೇವತೆಯನ್ನು ಆವಾಹಿಸಿ, ಹ್ರಾಂ– ಮೊದಲಾಗಿ ಅಂಗವನ್ನು ಮಾಡಿ ಸಕಲೀಕರಣದೊಂದಿಗೆ ಕುಂಭಮುಖದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ಬಿಂದುಕಲೆಗಳನ್ನು ನ್ಯಾಸ ಮಾಡಿ, ಅಲ್ಲಿಯ ಮಂತ್ರದಿಂದ ಪೂಜಿಸಿ, ಅಗ್ನಿಜನನದ ಕೊನೆಯಲ್ಲಿ ಗಾಯತ್ರಿಯಿಂದ ಆಜ್ಯವನ್ನು ಹೋಮಿಸಿ, ಆ ಸಂಪಾತವನ್ನು ಕಲಶದಲ್ಲಿ ಸಮರ್ಪಿಸಿ, ಕುಂಭಮುದ್ರೆಯನ್ನು ತೋರಿಸಿ, ಕುಂಭವನ್ನು ಪ್ರಪಂಚವೆಂಬ ಮೊಟ್ಟೆಯೆಂದು ಭಾವಿಸಿ, ಇಪ್ಪತ್ತೈದು ದರ್ಭೆಯ ಕೂರ್ಚನ್ನು– ಶಿವನಲ್ಲಿ ಮೂವತ್ತಾರು ದರ್ಭೆಗಳಿಂದ ಕೂರ್ಚನ್ನು ಕಟ್ಟಿ, ಅದಕ್ಕೆ– ಯಂ ರಂ ವಂ ಬೀಜಗಳಿಂದ ಶೋಷಣ ದಾಹನ ಪ್ಲಾವನಗಳನ್ನು ಮಾಡಿ ಅಷ್ಟಗಂಧವನ್ನು ಲೇಪಿಸಿ, ಎಂಟಾವರ್ತಿ ಪ್ರಣವವನ್ನು ಜಪಿಸಿ, ಕೂರ್ಚನ್ನು ರತ್ನಖಚಿತ ಸುವರ್ಣಾಂಗುಲೀಯಕವನ್ನು ಬುಡದಲ್ಲಿರಿಸಿ ಅಧೋಮುಖವಾಗಿ ಕಲಶದಲ್ಲಿ ಹಾಕಿ, ಪ್ರಣವದಿಂದ ಪೂಜಿಸಿ ಆಯಾಯ ಬ್ರಹ್ಮಕಲಶಕ್ಕೆ ಅಲ್ಲಲ್ಲಿ ಹೇಳಿದ ದ್ರವ್ಯವನ್ನು ನವರತ್ನ ಚಿನ್ನ ಸಹಿತ– **ಓಂ ಹ್ರೀಂ ಹಂಸಃ ಸೋಽಹಂ ಸ್ವಾಹಾ** ಎಂದು ಆತ್ಮಾಷ್ಟಾಕ್ಷರವನ್ನು ಆಯಾಯ ಪೂರಣ (ತುಂಬುವ) ಮಂತ್ರವನ್ನು ಹೇಳಿ ಕುಂಭದಲ್ಲಿ ಇರಿಸಿ ಪೂಜಿಸಿ ಮಾನಸ ಪೂರಣವನ್ನು ಮಾಡಬೇಕು. ಕೈಯಲ್ಲಿ ಅಮೃತಬೀಜ (ವಂ)ವನ್ನು ಬರೆದು, ಆ ಕೈಯಿಂದ ಕಲಶದ ಬಾಯಿಯನ್ನು ಮುಚ್ಚಿ ಹಿಡಿದು ಪ್ರಣವದಿಂದ ಕೂರ್ಚೆನ ಬುಡದಲ್ಲಿರುವ ಚೈತನ್ಯವನ್ನು ದ್ವಾದಶಾಂತ ಪದ್ಮದಲ್ಲಿರುವ ಪರಮಾತ್ಮನಲ್ಲಿ ವಿಲಯನಗೊಳಿಸಿ, ಪುನಃ ಪ್ರಣವ ಲಿಪಿ ಪ್ರತಿಲೋಮ (ಕ್ಷ ದಿಂದ ಅಂ ತನಕ) ಶಿರೋಮಂತ್ರವನ್ನೂ ಹೇಳಿ ದ್ವಾದಶಾಂತ ಪದ್ಮದಲ್ಲಿರುವ ಪರಮಾತ್ಮನ ಪರಚೈತನ್ಯ ರೂಪ ಜಲವನ್ನು ಕಲಶದಲ್ಲಿ ಬೀಳಿಸಬೇಕು. ಇದು ಮಾನಸ ಪೂರಣ ಕ್ರಮವು.

ಪುನಃ ಯಾವುದೋ ಎಲೆಯಿಂದ ಕಲಶದ ಬಾಯಿಯನ್ನು ಮುಚ್ಚಿಟ್ಟು, ಇನ್ನೊಂದು ಪಾತ್ರೆ (ಕಟಾರಿ)ಯಲ್ಲಿ ಗಾಳಿಸಿದ ನೀರನ್ನು ಉತ್ತರ ಭಾಗದಲ್ಲಿರಿಸಿ ನೀರಿಗೆ ಶೋಷಣ ದಾಹನ ಪ್ಲಾವನಗಳನ್ನು ಮಾಡಿ ಪೀಠವನ್ನು ಪೂಜಿಸಿ, ಅಲ್ಲಿ ವರುಣನನ್ನು ಆವಾಹಿಸಿ ಪೂಜಿಸಿ ಪುನಃ ಮೂಲಮಂತ್ರದಿಂದ ಆವಾಹಿಸಿ, ಸಕಲೀಕರಣವನ್ನು ಮಾಡಿ ಪೂಜಿಸಿ ನೈವೇದ್ಯಕಾಲದಲ್ಲಿ ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ನಿಷ್ಕಲೀಕರಣ (ಪರಿಶುದ್ಧತೆ)ಯನ್ನು ಮಾಡಿ ಐದು ವಾರುಣ ಮಂತ್ರಗಳನ್ನು (ಅವತೇ ಹೇಳೋ * * ಉದುತ್ತಮಂ * * ಇಮಂ ಮೇ ವರುಣ * * ತತ್ವಾಯಾಮಿ * * ತ್ವಂ ನೋ ಅಗ್ನೇಂ * * ) ಜಪಿಸಿ, **ಇಮಾ ಆಪಃ ಶಿವಾಃ ಸಂತುಶುಭಾಃ ಶುದ್ಧಾಶ್ಚ ನಿರ್ಮಲಾಃ । ಪಾವನಾಃ ಶೀತಲಾಶ್ಚೈವ ಪೂತಾಃ ಸೂರ್ಯಸ್ಯ ರಶ್ಮಿಭಿಃ ।** ಹೀಗೆ ಜಪಿಸಿ ರಕ್ಷಿಸಬೇಕು. ಆ ನೀರನ್ನು ಶಂಖದಲ್ಲಿ ತೆಗೆದುಕೊಂಡು ಅಷ್ಟಗಂಧವನ್ನು ಸೇರಿಸಿ, ಪದ್ಮ ಹಾಗೂ ಮೂರ್ತಿಯನ್ನು ಸಂಕಲ್ಪಿಸಿ, ಮೂಲದಿಂದ ತನ್ನ ಹೃದಯದಿಂದ ದೇವರನ್ನು ಆವಾಹಿಸಿ, ಸ್ವಲ್ಪ ಪೂಜಿಸಿ, ಆ ನೀರನ್ನು ಕಲಶದಲ್ಲಿ ಹಾಕಿ ಉಳಿದ ನೀರಿನಿಂದ ಕಲಶವನ್ನು ಅರ್ಧಕ್ಕೆ ಸ್ವಲ್ಪ ಹೆಚ್ಚಾಗಿ ತುಂಬಿಸಿ ಲಿಪಿಪಂಕಜವನ್ನು ಪೂಜಿಸಬೇಕು.

* * * *

## ಲಿಪಿಪಂಕಜಂ– ಶಿವೇ ಲಿಪಿಕಲಾಃ

ಓಂ ಕ್ಷಂ ನಮಃ ಶಿವಾಯ ಮೂರ್ತ್ಯಾತ್ಮನೇ ನಮಃ । ಓಂ ಳಂ ನಮಃ ಶಿವಾಯ ಶಿಘಾತ್ಮನೇ । ಹಂ * * ನಾಳಾತ್ಮನೇ । ಸಂ * * ಸರ ಆತ್ಮನೇ । ಷಂ * * ಕಂಟಕಾತ್ಮನೇ । ಶಂ * * ರಂಧ್ರಾತ್ಮನೇ । ವಂ * * ಧರ್ಮಾಯಾಗ್ನೇಯ ಗ್ರಂಥ್ಯಾತ್ಮನೇ । ಲಂ * * ಜ್ಞಾನಾಯ ನೈಋುತ್ಯ ಗ್ರಂಥ್ಯಾತ್ಮನೇ । ರಂ * * ವೈರಾಗ್ಯಾಯ ವಾಯವ್ಯ ಗ್ರಂಥ್ಯಾತ್ಮನೇ । ಯಂ * * ಐಶ್ವರ್ಯಾಯೈಶ ಗ್ರಂಥ್ಯಾತ್ಮನೇ । ಋಂ * * ಅಧರ್ಮಾಯ ಪೂರ್ವಗ್ರಂಥ್ಯಾತ್ಮನೇ । ೠಂ * * ಅಜ್ಞಾನಾಯ ದಕ್ಷಿಣ ಗ್ರಂಥ್ಯಾತ್ಮನೇ । ಲೃಂ * * ಅವೈರಾಗ್ಯಾಯ ಪಶ್ಚಿಮ ಗ್ರಂಥ್ಯಾತ್ಮನೇ । ಲೄಂ * * ಅನೈಶ್ವರ್ಯಾಯ ಉತ್ತರ ಗ್ರಂಥ್ಯಾತ್ಮನೇ । ಕಂ ಖಂ ಗಂ * * ಪೂರ್ವ ಪತ್ರಾತ್ಮನೇ । ಘಂ ಙಂ ಚಂ * * ಆಗ್ನೇಯ ಪತ್ರಾತ್ಮನೇ । ಛಂ ಜಂ ಝಂ * * ಯಾಮ್ಯಪತ್ರಾತ್ಮನೇ । ಞಂ ಟಂ ಠಂ * * ನೈಋುತ್ಯ ಪತ್ರಾತ್ಮನೇ । ಡಂ ಢಂ ಣಂ * * ವಾರುಣ ಪತ್ರಾತ್ಮನೇ । ತಂ ಥಂ ದಂ * * ವಾಯುವ್ಯ ಪತ್ರಾತ್ಮನೇ । ಧಂ ನಂ ಪಂ * * ಸೌಮ್ಯಪತ್ರಾತ್ಮನೇ । ಫಂ ಬಂ ಭಂ * * ಐಶಪತ್ರಾತ್ಮನೇ । ಮಂ * * ಕರ್ಣಿಕಾತ್ಮನೇ । ಅಃ ಆಂ * * ಪೂರ್ವಕೇಸರಾತ್ಮನೇ । ಇಃ ಈಂ * * ಆಗ್ನೇಯ ಕೇಸರಾತ್ಮನೇ । ಉಃ ಊಂ * * ಯಾಮ್ಯಕೇಸರಾತ್ಮನೇ । ಋಃ ೠಂ * * ನೈರ್ಋತ ಕೇಸರಾತ್ಮನೇ । ಲೃಃ ಲೄಂ * * ವಾರುಣ ಕೇಸರಾತ್ಮನೇ । ಏಃ ಐಂ * * ವಾಯವ್ಯ ಕೇಸರಾತ್ಮನೇ । ಓಃ ಔಂ * * ಸೌಮ್ಯ ಕೇಸರಾತ್ಮನೇ । ಅಃ ಅಂ * * ಐಶಕೇಸರಾತ್ಮನೇ । ಅಂ ನಮಃ ಶಿವಾಯಾತ್ಮತತ್ವಾತ್ಮನೇ । ಉಂ * * ವಿದ್ಯಾತತ್ವಾತ್ಮನೇ । ಮಂ * * ಶಿವತತ್ವಾತ್ಮನೇ । ಸಂ * * ಬಿಂದ್ವಾತ್ಮನೇ । ಹಂ * * ನಾದಾತ್ಮನೇ । ಹ್ರೀಂ * * ಶಕ್ತ್ಯಾತ್ಮನೇ ನಮಃ । ಓಂ ನಮಃ ಶಿವಾಯ ಶಾಂತಾತ್ಮನೇ ನಮಃ– ಇತಿ ಶಿವೇ ಲಿಪಿಪಂಕಜಂ ॥

* * * *

## ಅನ್ಯೇಷು ದೇವೇಷು ಲಿಪಿಪಂಕಜಂ

ಓಂ ಕ್ಷಂ ನಮಃ ಪರಾಯ ಮೂರ್ತ್ಯಾತ್ಮನೇ ನಮಃ । ಓಂ ಳಂ ನಮಃ ಪರಾಯ ಶಿಘಾತ್ಮನೇ । ಹಂ * * ನಾಳಾತ್ಮನೇ । ಸಂ * * ಸರ ಆತ್ಮನೇ । ಷಂ * * ಕಂಟಕಾತ್ಮನೇ ನಮಃ । ಶಂ * * ರಂಧ್ರಾತ್ಮನೇ । ವಂ * * ಧರ್ಮಾಯ ಆಗ್ನೇಯ ಗ್ರಂಥ್ಯಾತ್ಮನೇ । ಲಂ * * ಜ್ಞಾನಾಯ ನೈಋುತ್ಯ ಗ್ರಂಥ್ಯಾತ್ಮನೇ । ರಂ * * ವೈರಾಗ್ಯಾಯ ವಾಯವ್ಯ ಗ್ರಂಥ್ಯಾತ್ಮನೇ । ಯಂ * * ಐಶ್ವರ್ಯಾಯೈಶ ಗ್ರಂಥ್ಯಾತ್ಮನೇ । ಋಂ * * ಅಧರ್ಮಾಯ ಪೂರ್ವಗ್ರಂಥ್ಯಾತ್ಮನೇ । ೠಂ * * ಅಜ್ಞಾನಾಯ ದಕ್ಷಿಣ ಗ್ರಂಥ್ಯಾತ್ಮನೇ । ಲೃಂ * * ಅವೈರಾಗ್ಯಾಯ ವಾರುಣ ಗ್ರಂಥ್ಯಾತ್ಮನೇ । ಲೄಂ * * ಅನೈಶ್ವರ್ಯಾಯ ಸೌಮ್ಯ ಗ್ರಂಥ್ಯಾತ್ಮನೇ । ಕಂ ಖಂ ಗಂ * * ಪೂರ್ವ ಪತ್ರಾತ್ಮನೇ । ಘಂ ಙಂ ಚಂ * * ಆಗ್ನೇಯ ಪತ್ರಾತ್ಮನೇ । ಛಂ ಜಂ ಝಂ * * ಯಾಮ್ಯ ಪತ್ರಾತ್ಮನೇ । ಞಂ ಟಂ ಠಂ * * ನೈಋುತ್ಯ ಪತ್ರಾತ್ಮನೇ । ಡಂ ಢಂ ಣಂ * * ವಾರುಣ ಪತ್ರಾತ್ಮನೇ । ತಂ ಥಂ ದಂ * * ವಾಯವ್ಯ ಪತ್ರಾತ್ಮನೇ । ಧಂ ನಂ ಪಂ * * ಸೌಮ್ಯ ಪತ್ರಾತ್ಮನೇ । ಫಂ ಬಂ ಭಂ * * ಐಶ ಪತ್ರಾತ್ಮನೇ । ಮಂ * * ಕರ್ಣಿಕಾತ್ಮನೇ । ಅಃ ಆಂ * * ಪೂರ್ವ ಕೇಸರಾತ್ಮನೇ । ಇಃ ಈಂ * * ಆಗ್ನೇಯ ಕೇಸರಾತ್ಮನೇ । ಉಃ ಊಂ * * ಯಾಮ್ಯ ಕೇಸರಾತ್ಮನೇ । ಋ ೠಂ * * ನೈಋುತ್ಯ ಕೇಸರಾತ್ಮನೇ । ಲೃಃ ಲೄಂ * * ವಾರುಣ ಕೇಸರಾತ್ಮನೇ । ಏಃ ಐಂ * * ವಾಯವ್ಯ ಕೇಸರಾತ್ಮನೇ । ಓಃ ಔಂ * * ಸೌಮ್ಯ ಕೇಸರಾತ್ಮನೇ । ಅಃ ಅಂ * * ಐಶ ಕೇಸರಾತ್ಮನೇ । ಅಂ * * ಆತ್ಮತತ್ವಾತ್ಮನೇ । ಉಂ * * ವಿದ್ಯಾತತ್ವಾತ್ಮನೇ । ಮಂ * * ಪರತತ್ವಾತ್ಮನೇ । ಸಂ * * ಬಿಂದ್ವಾತ್ಮನೇ । ಹಂ * * ನಾದಾತ್ಮನೇ । ಹ್ರೀಂ ನಮಃ ಪರಾಯ ಶಕ್ತ್ಯಾತ್ಮನೇ ನಮಃ (ವಿಷ್ಣುವಿನಲ್ಲಿ– ಶ್ರೀಂ) ಓಂ ನಮಃ ಪರಾಯ ಶಾಂತಾತ್ಮನೇ ನಮಃ ಹೀಗೆ ವಿಷ್ಣು ಮೊದಲಾದವರಲ್ಲಿ ಲಿಪಿ ಪಂಕಜವು. ಹೀಗೆ ಲಿಪಿಪಂಕಜದಿಂದ ಪೂಜಿಸಿ, ಪ್ರಣವ, ಉಪಚಾರದ ಕೊನೆಯಲ್ಲಿ ಓಂ ನಮೋ ನಾರಾಯಣಾಯ । ಶ್ರೀ ವಿಷ್ಣುಮೂರ್ತಯೇ ನಮಃ– ಹೀಗೆ ವಿಷ್ಣುವಿನಲ್ಲಿ । ಬೇರೆ ದೇವತೆಗಳಲ್ಲಿ ಆಯಾಯ ದೇವತೆಯ ಹೆಸರಿನ ಕೊನೆಯಲ್ಲಿ

ಮೂರ್ತಯೇ ನಮಃ- ಹೀಗೆ ಮೂರ್ತ್ಯಾವಾಹನೆಯನ್ನು ಮಾಡಿ ಮುದ್ರೆಗಳನ್ನು ತೋರಿಸಿ, ಆ ಮಂತ್ರದಿಂದ ವ್ಯಾಪಿಸಿ, ಮೂಲಾಕ್ಷರಾಂಗನ್ಯಾಸಗಳನ್ನು ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಬೇಕು.

* * * *

## ಕಲಾವಾಹನ

ಶಂಖವನ್ನು ತೊಳೆದು ಅದರಲ್ಲಿ ಹಿಂದಿನ ಹಾಗೆ ವರ್ಧಿನೀ ಪಾತ್ರೆಯಿಂದ ನೀರನ್ನು ತೆಗೆದುಕೊಂಡು ಹೃದಯ ಮಂತ್ರದಿಂದ ಅಷ್ಟಗಂಧವನ್ನು ಕಲಕಿ ಬಿಟ್ಟು ಪ್ರಣವಾಕ್ಷರ (ಅಂ, ಉಂ, ಮಂ), ಪ್ರಣವ(ಓಂ)ದಿಂದ ಪೂಜಿಸಿ ಅಲ್ಲಿ ಕಲಶಗಳನ್ನು ಪ್ರತ್ಯೇಕವಾಗಿ ಆವಾಹಿಸಬೇಕು.

**ವಿಷ್ಣುವಿನಲ್ಲಿ ಕಲಾವಾಹನೆ ವಹ್ನಿಕಲಾ-** ೧) ಓಂ ಶ್ರೀಂ ಯಂ ಧೂಮ್ರಾರ್ಚಿಷೇ ನಮಃ । ಓಂ ಶ್ರೀಂ ಎಂದು ಆದಿಯಲ್ಲಿ ಎಲ್ಲೆಡೆಯಲ್ಲೂ ಹೇಳಬೇಕು. ೨) ಓಂ ಶ್ರೀಂ ರಂ ಊಷ್ಮಾಯೈ । ೩) ಶ್ರೀಂ ಲಂ ಜ್ವಲಿನ್ಯೈ । ೪) ಶ್ರೀಂ ವಂ ಜ್ವಾಲಿನ್ಯೈ । ೫) ಶ್ರೀಂ ಶಂ ವಿಸ್ಫುಲಿಂಗಿನ್ಯೈ । ೬) ಶ್ರೀಂ ಷಂ ಸುಶ್ರಿಯೈ । ೭) ಶ್ರೀಂ ಸಂ ಸುರೂಪಾಯೈ । ೮) ಶ್ರೀಂ ಹಂ ಕಪಿಲಾಯೈ । ೯) ಶ್ರೀಂ ಳಂ ಹವ್ಯವಹಾಯೈ । ೧೦) ಶ್ರೀಂ ಕ್ಷಂ ಕವ್ಯವಹಾಯೈ ।

**ಓಂ ಜಾತವೇದಸೇ ಸುನವಾಮ ಸೋಮಮರಾತೀ ಯತೋನಿದಹಾತಿವೇದಃ ।**

**ಸನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥**

**ಮಂ ವಹ್ನಿಮಂಡಲಾಯ ಧರ್ಮಪ್ರದ ದಶವಹ್ನಿಕಲಾತ್ಮನೇ ನಮಃ-** ಈ ಋಕ್ತಿನಿಂದ ಸಮಷ್ಟಿಯಿಂದಲೂ ಆವಾಹಿಸಿ, ಕೈಯಿಂದ ನೀರನ್ನೂ ಶಂಖವನ್ನೂ ಮುಟ್ಟಿ ಪ್ರಾಣ ಪ್ರತಿಷ್ಠೆಯನ್ನು ಮಾಡಬೇಕು. ಓಂ ಆಂ ಹ್ರೀಂ ಕ್ರೋಂ ಯ ರ ಲ ವ ಶ ಷ ಸ ಹೋಂ ಸಂ ಹಂ ಸಃ- ವಹ್ನಿಕಲಾನಾಂ ಪ್ರಾಣಾ ಇಹ ಪ್ರಾಣಾಃ । ಓಂ ಆಂ ಹ್ರೀಂ ಕ್ರೋಂ ಯ ರ ಲ ವ ಶ ಷ ಸ ಹೋಂ ಸಂ ಹಂ ಸಃ- ವಹ್ನಿಕಲಾನಾಂ ಜೀವ ಇಹಸ್ಥಿತಃ । ಓಂ ಆಂ ಹ್ರೀಂ ಕ್ರೋಂ ಯ ರ ಲ ವ ಶ ಷ ಸ ಹೋಂ ಸಂ ಹಂ ಸಃ- ವಹ್ನಿಕಲಾನಾಂ ಸರ್ವೇಂದ್ರಿಯಾಣಿ ವಾಙ್ಮನಶ್ಚಕ್ಷು ಶ್ರೋತ್ರ ಘ್ರಾಣ ಪ್ರಾಣಾ ಇಹೈವಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ- ಇತಿ ಪ್ರಾಣ ಪ್ರತಿಷ್ಠಾ ಮಂತ್ರಃ ।

**ಸೌರಕಲಾಃ-** ೧) ಓಂ ಶ್ರೀಂ ಕಂ ಭಂ ತ ಪಿನ್ಯೈ । ೨) ಓಂ ಖಂ ಬಂ ತಾ ಪಿನ್ಯೈ । ೩) ಶ್ರೀಂ ಗಂ ಫಂ ಧೂಮ್ರಾಯೈ । ೪) ಶ್ರೀಂ ಘಂ ಪಂ ಮರೀಚ್ಯೈ । ೫) ಶ್ರೀಂ ಙಂ ನಂ ಜ್ವಾಲಿನ್ಯೈ । ೬) ಶ್ರೀ ಚಂ ಧಂ ರುಚ್ಯೈ । ೭) ಶ್ರೀಂ ಛಂ ದಂ ಸುಷುಮ್ನಾಯೈ । ೮) ಶ್ರೀಂ ಜಂ ಥಂ ಭೋಗದಾಯೈ । ೯) ಶ್ರೀಂ ಝಂ ತಂ ವಿಶ್ವಾಯೈ । ೧೦) ಶ್ರೀಂ ಞಂ ಣಂ ಬೋಧಿನ್ಯೈ । ೧೧) ಶ್ರೀಂ ಟಂ ಢಂ ಧಾರಿಣ್ಯೈ । ೧೨) ಶ್ರೀಂ ಠಂ ಡಂ ಕ್ಷಮಾಯೈ ।

ಹೀಗೆ ಆವಾಹಿಸಿ, ಓಂ **ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹೀ ಧಿಯೋ ಯೋ ನಃ ಪ್ರಚೋದಯಾತ್- ಅಂ ಸೂರ್ಯಮಂಡಲಾಯ ದ್ವಾದಶ ವಸುಪ್ರದ ಕಲಾತ್ಮನೇ ನಮಃ-** ಈ ಋಕ್ಕಿನಿಂದಲೂ ಸಮಷ್ಟಿಯಿಂದಲೂ ಆವಾಹಿಸಿ ಕೈಯಿಂದ ಶಂಖ ಜಲವನ್ನು ಮುಟ್ಟಿ ಆಂ ಹ್ರೀಂ ಕ್ರೋಂ ಇತ್ಯಾದಿ ಸೂರ್ಯಕಲಾನಾಂ ಪ್ರಾಣಾ ಮೊದಲಾಗಿ ಮೂರರಿಂದ ಪ್ರಾಣ ಪ್ರತಿಷ್ಠೆಯನ್ನು ಊಹೆಯಿಂದ ಮಾಡಬೇಕು.

**ಸೋಮಕಲಾಃ-** ೧) ಓಂ ಶ್ರೀಂ ಅಂ ಅಮೃತಾಯೈ ನಮಃ । ೨) ಆಂ ಮಾನದಾಯೈ । ೩) ಇಂ ಪೂಷಾಯೈ । ೪)ಈಂ ತುಷ್ಟ್ಯೈ ನಮಃ । ೫) ಉಂ ಪುಷ್ಟ್ಯೈ ನಮಃ । ೬) ಶ್ರೀಂ ಊಂ ರತ್ಯೈ ನಮಃ । ೭) ಶ್ರೀಂ ಋಂ ಧೃತ್ಯೈ ನಮಃ । ೮) ಶ್ರೀಂ ೠಂ ಶಶಿನ್ಯೈ । ೯) ಶ್ರೀಂ ಌಂ ಚಂದ್ರಿಕಾಯೈ । ೧೦) ಶ್ರೀಂ ೡಂ ಕಾಂತ್ಯೈ ನಮಃ । ೧೧) ಶ್ರೀಂ ಏಂ ಜ್ಯೋತ್ಸ್ನಾಯೈ । ೧೨) ಶ್ರೀಂ ಐಂ ಶಿಯೈ ನಮಃ । ೧೩) ಶ್ರೀಂ ಓಂ ಪ್ರೀತ್ಯೈ ನಮಃ । ೧೪) ಶ್ರೀಂ ಔಂ ಅಂಗದಾಯೈ । ೧೫) ಶ್ರೀಂ ಅಂ ಪೂರ್ಣಾಯೈ । ೧೬) ಶ್ರೀಂ ಅಃ ಪೂರ್ಣಾಮೃತಾಯೈ ನಮಃ ।

**ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।**

**ಉರ್ವಾರುಕಮಿವ ಬಂಧಾನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥**

**ಉಂ ಸೋಮಮಂಡಲಾಯ ಕಾಮಪ್ರದ ಷೋಡಶ ಸೋಮಕಲಾತ್ಮನೇ ನಮಃ-** ಹೀಗೆ ಸಮಷ್ಟಿಯಿಂದಲೂ ಆವಾಹಿಸಿ, ಆಂ ಹ್ರೀಂ ಕ್ರೋಂ ಮೊದಲಾಗಿ ಸೋಮಕಲಾನಾಂ ಪ್ರಾಣಾ- ಮೊದಲಾಗಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

**ಅಕಾರಕಲಾ:–** ೧) ಓಂ ಶ್ರೀಂ ಕಂ ಸೃಷ್ಟ್ಯೈ । ೨) ಓಂ ಖಂ ಋದ್ಧ್ಯೈ । ೩) ಶ್ರೀಂ ಗಂ ಸ್ಮೃತ್ಯೈ । ೪) ಘಂ ಮೇಧಾಯ್ಯೈ ನಮಃ । ೫) ಶ್ರೀಂ ಙಂ ಕಾಂತ್ಯೈ । ೬) ಶ್ರೀಂ ಚಂ ಲಕ್ಷ್ಮ್ಯೈ । ೭) ಶ್ರೀಂ ಛಂ ದ್ಯುತ್ಯೈ । ೮) ಶ್ರೀಂ ಜಂ ಸ್ಥಿರಾಯ್ಯೈ ನಮಃ । ೯) ಶ್ರೀಂ ಝಂ ಸ್ಥಿತ್ಯೈ ನಮಃ । ೧೦) ಶ್ರೀಂ ಞಂ ಸಿದ್ಧ್ಯೈ ನಮಃ ।

**ಓಂ ಹಗುಂ ಸಃಶುಚಿಷದ್ವಸುರಂತರಿಕ್ಷ ಸದ್ಧೋತಾ ವೇದಿಷ ದತಿಥಿರ್ದುರೋಣಸತ್ ।**

**ನೃಷದ್ವರಸದೃತ ಸದ್ವ್ಯೋ ಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥**

೧) ಬ್ರಹ್ಮಣೇ * । ೨) ಪೃಥಿವ್ಯಾತ್ಮನೇ ನಮಃ । ೩) ಗಂಧತನ್ಮಾತ್ರಾತ್ಮನೇ । ೪) ಘ್ರಾಣಾತ್ಮನೇ ನಮಃ । ೫) ಉಪಸ್ಥಾನಂದಾತ್ಮನೇ । ೬) ಸೃಷ್ಟ್ಯಾತ್ಮನೇ ನಮಃ । ೭) ನಿವೃತ್ತ್ಯಾತ್ಮನೇ ನಮಃ ।

ಇತಿ ಸಮಷ್ಟಿ ಸಪ್ತಕಂ । ಆಂ ಹ್ರೀಂ ಕ್ರೋಂ ಯ ರ * * ಇತ್ಯಾದಿ ಅಕಾರಕಲಾನಾಂ ಪ್ರಾಣಾ ಇತ್ಯಾದಿ ಪ್ರಾಣಪ್ರತಿಷ್ಠಾಂ ಕುರ್ಯಾತ್ ॥

**ಉಕಾರ ಕಲಾ:–** ೧) ಶ್ರೀಂ ಟಂ ಜಯಾಯ್ಯೈ । ೨) ಶ್ರೀಂ ಠಂ ಪಾಲಿನ್ಯೈ । ೩) ಶ್ರೀಂ ಡಂ ಕಾಂತ್ಯೈ । ೪) ಢಂ ಐಶ್ವರ್ಯ್ಯೈ । ೫) ಶ್ರೀಂ ಣಂ ರತ್ಯೈ । ೬) ತಂ ಕಾಮಿಕಾಯ್ಯೈ । ೭) ಶ್ರೀಂ ಥಂ ವರದಾಯ್ಯೈ ನಮಃ । ೮) ಶ್ರೀಂ ದಂ ಹ್ಲಾದಿನ್ಯೈ ನಮಃ । ೯) ಶ್ರೀಂ ಧಂ ಪ್ರೀತ್ಯೈ ನಮಃ । ೧೦) ಶ್ರಿಂ ನಂ ದೀರ್ಘಾಯ್ಯೈ ನಮಃ ।

**ಓಂ ಪ್ರತದ್ವಿಷ್ಣುಸ್ತವತೇ ವೀರ್ಯಾಯ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।**

**ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ॥**

೧)ವಿಷ್ಣವೇ ನಮಃ । ೨) ಅಬಾತ್ಮನೇ ನಮಃ । ೩) ರಸತನ್ಮಾತ್ರಾತ್ಮನೇ । ೪) ಜಿಹ್ವಾತ್ಮನೇ ನಮಃ । ೫) ಪಾಯುವಿಸರ್ಗಾತ್ಮನೇ । ೬) ಸ್ಥಿತ್ಯಾತ್ಮನೇ ನಮಃ । ೭) ಪ್ರತಿಷ್ಠಾತ್ಮನೇ ನಮಃ । ಇದು ಸಮಷ್ಟಿ ಸಪ್ತಕವು. ಓಂ ಆಂ ಹ್ರೀಂ ಕ್ರೋಂ ಇತ್ಯಾದಿ ಉಕಾರ ಕಲಾನಾಂ ಪ್ರಾಣಾಃ ಮೊದಲಾಗಿ ಪ್ರಾಣ ಪ್ರತಿಷ್ಠೆ ಮಾಡಬೇಕು.

**ಮಕಾರಕಲಾ:–** ೧) ಶ್ರೀಂ ಪಂತೀಕ್ಷ್ಣಾಯ್ಯೈ । ೨) ಫಂ ರೌದ್ರಾಯ್ಯೈ ನಮಃ ।೩) ಬಂ ಭಯಾಯ್ಯೈ ನಮಃ । ೪) ಭಂ ನಿದ್ರಾಯ್ಯೈ । ೫) ಮಂತಂದ್ರ್ಯೈ । ೬) ಯಂ ಕ್ಷುದೇನ । ೭) ರಂ ಕ್ರೋಧಿನ್ಯೈ । ೮) ಲಂ ಕ್ರಿಯಾಯ್ಯೈ ನಮಃ । ೯) ವಂ ಉತ್ಕಾರ್ಯ್ಯೈ ನಮಃ । ೧೦) ಶಂ ಮೃತ್ಯುರೂಪಾಯ್ಯೈ ।

**ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।**

**ಉರ್ವಾರುಕಮಿವ * * * ಮಾಮೃತಾತ್ ॥**

೧)**ರುದ್ರಾಯ ನಮಃ** । ೨) ಅಗ್ನ್ಯಾತ್ಮನೇ ನಮಃ । ೩) ರೂಪತನ್ಮಾತ್ರಾತ್ಮನೇ । ೪) ಚಕ್ಷುರಾತ್ಮನೇ ನಮಃ । ೫) ಪಾದಗಮನಾತ್ಮನೇ । ೬) ಸಂಹಾರಾತ್ಮನೇ ನಮಃ । ೭) ವಿದ್ಯಾತ್ಮನೇ ನಮಃ । ಇದು ಸಮಷ್ಟಿ ಸಪ್ತಕವು. ಓಂ ಆಂ ಹ್ರಿಂ ಕ್ರೋಂ ಇತ್ಯಾದಿ ಮಕಾರ ಕಲಾನಾಂ ಪ್ರಾಣಾಃ– ಇತ್ಯಾದಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

**ಬಿಂದುಕಲಾ:–** ೧) ಶ್ರೀಂ ಷಂ ಪೀತಾಯ್ಯೈ । ೨) ಶ್ರೀಂ ಸಂ ಶ್ವೇತಾಯ್ಯೈ । ೩) ಶ್ರೀಂ ಹಂ ಅರುಣಾಯ್ಯೈ । ೪) ಶ್ರೀಂ ಳಂ ಅನಿತಾಯ್ಯೈ । ೫) ಶ್ರೀಂ ಕ್ಷಂ ಅನಂತಾಯ್ಯೈ ।

**ಓಂ ತತ್ಸ ವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।**

**ಧಿಯೋ ಯೋನಃ ಪ್ರಚೋದಯಾತ್ ॥**

೧)ಮಹಾವಿಷ್ಣವೇ ನಮಃ । ೨) ವಾಯ್ವಾತ್ಮನೇ ನಮಃ । ೩) ಸ್ಪರ್ಶತನ್ಮಾತ್ರಾತ್ಮನೇ । ೪) ತ್ವಗಾತ್ಮನೇ ನಮಃ । ೫) ಪಾಣ್ಯಾದಾನಾತ್ಮನೇ । ೬) ಶಿರೋ ಭವಾತ್ಮನೇ । ೭) ಶಾಂತ್ಯಾತ್ಮನೇ ನಮಃ । ಓಂ ಆಂ ಹ್ರೀಂ ಕ್ರೋಂ * * ಇತ್ಯಾದಿ ಬೈಂದವ ಕಲಾನಾಂ ಪ್ರಾಣಾ * * * ಮೊದಲಾಗಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

**ನಾದಕಲಾ:–** ೧) ಶ್ರೀಂ ಅಂ ನಿವೃತ್ತ್ಯೈ । ೨) ಆಂ ಪ್ರತಿಷ್ಠಾಯ್ಯೈ । ೩) ಇಂ ವಿದ್ಯಾಯ್ಯೈ । ೪) ಈಂ ಶಾಂತ್ಯೈ ನಮಃ। ೫) ಉಂ ಇಂಧಿಕಾಯ್ಯೈ । ೬) ಊಂ ದೀಪಿಕಾಯ್ಯೈ । ೭) ಋಂ ರೇಚಿಕಾಯ್ಯೈ । ೮) ೠಂ ಮೋಚಿಕಾಯ್ಯೈ । ೯) ಶ್ರೀಂ ಲೃಂ ಪರಾಯ್ಯೈ । ೧೦) ಶ್ರೀಂ ಲೄಂ ಸೂಕ್ಷ್ಮಾಯ್ಯೈ । ೧೧) ಏಂ ಸೂಕ್ಷ್ಮಾಮೃತಾಯ್ಯೈ । ೧೨) ಐಂ ಜ್ಞಾನಾಮೃತಾಯ್ಯೈ । ೧೩) ಓಂ ಆಪ್ಯಾಯಿನ್ಯೈ । ೧೪) ಶ್ರೀಂ ಔಂ ವ್ಯಾಪಿನ್ಯೈ । ೧೫) ಅಂ ವ್ಯೋಮರೂಪಾಯ್ಯೈ । ೧೬) ಅಃ ಅನಂತಾಯ್ಯೈ ।

**ಓಂ ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾರೂಪಾಣಿಪಿಂಶತು ।**

**ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ॥**

೧)ಸದಾವಿಷ್ಣವೇ ನಮಃ । ೨) ಆಕಾಶಾತ್ಮನೇ ನಮಃ । ೩) ಶಬ್ದ ತನ್ಮಾತ್ರಾತ್ಮನೇ । ೪) ಓಂ ಶ್ರೋತ್ರಾತ್ಮನೇ । ೫) ವಾಗ್ವಾಚನಾತ್ಮನೇ । ೬) ಅನುಗ್ರಹಾತ್ಮನೇ । ೭) ಶಾಂತ್ಯತೀತಾತ್ಮನೇ ನಮಃ । ಓಂ ಆಂ ಹ್ರೀಂ ಕ್ರೋಂ * * ಮೊದಲಾಗಿ * * ನಾದಕಲಾನಾಂ ಪ್ರಣಾ * * * ಮೊದಲಾಗಿ ಪ್ರಾಣಪ್ರತಿಷ್ಠೆ ಮಾಡಬೇಕು.

**ಶಕ್ತಿಕಲಾಃ–** ೧) ಶ್ರೀಂ ಇಚ್ಛಾಶಕ್ತ್ಯೈ । ೨) ಶ್ರೀಂ ಜ್ಞಾನಶಕ್ತ್ಯೈ । ೩) ಶ್ರೀಂ ಕ್ರಿಯಾಶಕ್ತ್ಯೈ ನಮಃ । ಓಂ ಶಕ್ತ್ಯಾತ್ಮನೇ ನಮಃ– ಇದು ಸಮಷ್ಟಿಯು. ಆಂ ಹ್ರೀಂ ಕ್ರೋಂ * * ಮೊದಲಾಗಿ ಶಕ್ತಿಕಲಾನಾಂ ಪ್ರಾಣಾ– ಪ್ರಾಣಪ್ರತಿಷ್ಠೆ ಮಾಡಬೇಕು.

**ಶಾಂತಿಕಲಾಃ–** ೧) ಓಂ ಚಿದಾತ್ಮನೇ । ೨) ಶ್ರೀಂ ಸದಾತ್ಮನೇ । ೩) ಶ್ರೀಂ ಆನಂದಾತ್ಮನೇ ನಮಃ । ಓಂ ಶಾಂತ್ಯಾತ್ಮನೇ ನಮಃ– ಇದು ಸಮಷ್ಟಿಯು. ಆಂ ಹ್ರಿಂ ಕ್ರೋಂ * * ಮೊದಲಾಗಿ ಶಾಂತಿಕಲಾನಾಂ ಪ್ರಾಣಾ– ಮೊದಲಾಗಿ ಪ್ರಾಣಪ್ರತಿಷ್ಠೆ ಮಾಡಬೇಕು.

ಮೂಲಮಂತ್ರದಿಂದ ದೇವತೆಯನ್ನು ಆವಾಹಿಸಿ ಪಂಚೋಪಚಾರದಿಂದ ಪೂಜಿಸಿ, ಮೂಲಮಂತ್ರವನ್ನು ಉಚ್ಚರಿಸುತ್ತಾ ಆ ನೀರನ್ನು ಕಲಶದಲ್ಲಿ ಹಾಕಿ ಪುಷ್ಪಾಂಜಲಿಯನ್ನು ಮಾಡಿ ವ್ಯಾಪಿಸಿ ಕಲಾನ್ಯಾಸ ಮಾಡಬೇಕು. ಇದು ವಿಷ್ಣುವಿನಲ್ಲಿ ಕಲಾನ್ಯಾಸವು.

ಉಳಿದ ದೇವತೆಗಳಲ್ಲಿ– ಓಂ ಹ್ರೀಂ ಯಂ ಧೂಮ್ರಾರ್ಚಿಷೇ ನಮಃ– ಮಡದಲಾಗಿ 'ಶ್ರೀಂ' ಬೀಜಸ್ಥಾನದಲ್ಲಿ 'ಹ್ರೀಂ' ಎಂದು ಭುವನೇಶ್ವರೀ ಬೀಜವನ್ನು ಹೇಳಬೇಕು. ಈ ವಿಶೇಷ(ಬದಲಾವಣೆ) ಹೊರತಾಗಿ ಉಳಿದೆಲ್ಲವೂ ಸರಿಸಮನಾಗಿದೆ. ಉಳಿದವುಗಳಲ್ಲಿ ಬಿಂದು ಕಲಾ ಸಮಷ್ಟಿಯಲ್ಲಿ 'ಈಶ್ವರಾಯ ನಮಃ' ಇತ್ಯಾದಿ ಉಳಿದದು ಸಮನಾಗಿದೆ. ನಾದಕಲಾ ಸಮಷ್ಟಿಯಲ್ಲಿ 'ಸದಾಶಿವಾಯ ನಮಃ' ಇತ್ಯಾದಿ. ಉಳಿದುದು ಸಮನಾದುದು. ಶಾಂತಿಕಲೆಯಲ್ಲಿ ಚಿದಾತ್ಮನೇ । ಆನಂದಾತ್ಮನೇ– ಮೊದಲಾಗಿ ಸಮನಾದುದು. ದುರ್ಗಿಯಲ್ಲಿ ಬಿಂದು ಸಮಷ್ಟಿಯಲ್ಲಿ ಮಹಾವಿಷ್ಣವೇ । ನಾದಕಲಾ ಸಮಷ್ಟಿಯಲ್ಲಿ 'ಸದಾವಿಷ್ಣವೇ ನಮಃ' ಎಂದು ವಿಶೇಷವು. ಶಂಕರನಾರಾಯಣ, ಶಾಸ್ತಾರರಲ್ಲಿ ಹೀಗೆಯೇ ಮಾಡಬೇಕು. ಸುಬ್ರಮ್ಹಣ್ಯ, ಗಣಪತಿಯರಲ್ಲಿ ಶಿವನ ಹಾಗೆಯೇ ಮಾಡಬೇಕು. ಇಲ್ಲಿ ಹೇಳಿರುವುದು ಸಂಹಾರ ಕ್ರಮವು. ಸೋಮ ಸೂರ್ಯ ವನ್ಹಿ ನಾದ ಬಿಂದು ಮಕಾರೋಕಾರಾಕಾರ ಕ್ರಮವಾಗಿ ಸೃಷ್ಟಿಯು. ಸೋಮ ಸೂರ್ಯ ವನ್ಹಿ ಬಿಂದು ನಾದ ಮಕಾರೋಕಾರಾಕಾರ ಕಲಾಕ್ರಮದಿಂದ ಸ್ಥಿತಿಯು. ತೊಂಬತ್ತನಾಲ್ಕಕ್ಕಾಗಿ ಬಿಂದುಕಲೆಗಳಲ್ಲಿ ಅನಂತಕಲೆಯು ಸ್ವೀಕರಿಸಲ್ಪಟಿದೆ. ಹಾಗೆ ಒಪ್ಪಿಕೊಳ್ಳದಿರುವಲ್ಲಿ ಲಿಪಿ ಯಾ ಮೂಲದಿಂದ ಸಂಖ್ಯಾಪೂರಣವು. ಶಿವನ ಕಲಾವಾಹನೆಯಲ್ಲಿ ಪ್ರಣವ ಶಕ್ತಿ ಬೀಜದೊಡನೆ ಪ್ರಾಸಾದ ಬೀಜದಿಂದಲೂ ಕಲೆಯನ್ನು ಹೇಳಿ ಕೊನೆಯಲ್ಲಿ ಕಲಾಶಕ್ತ್ಯೈ ನಮಃ ಎಂದು ಹೇಳಬೇಕು. ಹಾಗೆ ಅದರ ಕ್ರಮವು. ಓಂ ಹ್ರೀಂ ಹೌಂ ಯಂ ಧೂಮ್ರಾರ್ಚಿಷೇ ಕಲಾಶಕ್ತ್ಯೈ ನಮಃ– ಮೊದಲಾಗಿ ವಿಶೇಷವು ತಿಳಿಯಬೇಕು.

* * * *

## ಕಲಾನ್ಯಾಸಃ

ಮೂಲಾಧಾರೇ ದಶದಲ ಪದ್ಮವನ್ನು ಭಾವಿಸಿ ಆಗ್ನೇಯ ದಳದಿಂದ ಪ್ರದಕ್ಷಿಣ ಕ್ರಮದಿಂದ ಹತ್ತು ಆಗ್ನೇಯ ಕಲೆಗಳನ್ನು ಮಾಡಿ ಆ ಸ್ಥಾನದಲ್ಲಿ 'ಓಂ ಜಾತವೇದಸೇ' ಈ ಋಕ್ಕಿನಿಂದ ಮಂ ವನ್ಹಿಮಂಡಲಾಯ ಧರ್ಮಪ್ರದ ದಶ ವನ್ಹಿಕಲಾತ್ಮನೇ ನಮಃ– ಈ ಸಮಷ್ಟಿ ಮಂತ್ರದಿಂದಲೂ ವ್ಯಾಪಿಸಿ ಓಂ ಆಂ ಹ್ರೀಂ ಕ್ರೋಂ– ಮೊದಲಾದ ಪ್ರಾಣಪ್ರತಿಷ್ಠಾಮಂತ್ರದಿಂದಲೂ ವ್ಯಾಪಿಸಿ, ತೊಡೆಗಳನ್ನು ಮುಟ್ಟಿ, ಓಂ ಓಂ ಓಂ ಹೀಗೆ ಮೂರಾವರ್ತಿ ಪ್ರಣವವನ್ನು ಜಪಿಸಿ, ಹೃದಯವನ್ನು ಮುಟ್ಟಿಕೊಂಡು 'ಓಂ ಹ್ರೀಂ ಹಂಸಃ ಸೋಽಹಂ ಹಂಸಃ'– ಹೀಗೆ ಅಜಪಾವನ್ನು ಮೂರಾವರ್ತಿ ಜಪಿಸಿ,

**ಹೃದಿಸ್ಥಾ ದೇವತಾಃ ಸರ್ವಾಃ ಹೃದಯೇ ನಿತ್ಯಸಂಸ್ಥಿತಾಃ ।**

**ಹೃದಿ ಸರ್ವಂ ಸಮರ್ಪಯಾಮಿ, ಹೃದಿ ಪ್ರಾಣಾಃ ಪ್ರತಿಷ್ಠಿತಾಃ ॥**

–ಹೀಗೆ ಜಪಿಸಬೇಕು. । ೧ ।

ಪುನಃ ಹೃದಯದಲ್ಲಿ ಹನ್ನೆರಡು ದಳದ ಪದ್ಮವನ್ನು ಭಾವಿಸಿ, ಹಿಂದಿನಂತೆ ಪ್ರದಕ್ಷಿಣಾಕಾರದಲ್ಲಿ ಹನ್ನೆರಡು ಸೌರಕಳೆಗಳನ್ನು ನ್ಯಾಸ ಮಾಡಿ, ಆಸ್ಥಾನದಲ್ಲಿ 'ಓಂ ತತ್ಸವಿತುರ್ವರೇಣ್ಯಂ' ಈ ಋಕ್ಕಿನಿಂದ **'ಅಂ ಅರ್ಕಮಂಡಲಾಯ ವಸುಪ್ರದ ದ್ವಾದಶ ಸೌರಕಲಾತ್ಮನೇ ನಮಃ'** ಈ ಸಮಷ್ಟಿ ಮಂತ್ರದಿಂದಲೂ 'ಓಂ ಆಂ ಹ್ರೀಂ ಕ್ರೋಂ' ಮೊದಲಾದ ಪ್ರಾಣ ಪ್ರತಿಷ್ಠಾಮಂತ್ರದಿಂದಲೂ ವ್ಯಾಪನೆ ಮಾಡಿ ತೊಡೆಯನ್ನು ಮುಟ್ಟಿ ಮೂರಾವರ್ತಿ ಪ್ರಣವವನ್ನು ಜಪಿಸಿ, ಹೃದಯವನ್ನು ಮುಟ್ಟಿ ಮೂರಾವರ್ತಿ ಅಜಪಾವನ್ನು ಜಪಿಸಿ 'ಹೃದಿಸ್ಥಾ ದೇವತಾಃ' ಜಪಿಸಿಬೇಕು. । ೨ ।

ಪುನಃ ದ್ವಾದಶಾಂತ (ನೆತ್ತಿ)ದಲ್ಲಿ ಹದಿನಾರು ದಳದ ಕಮಲವನ್ನು ಭಾವಿಸಿ ಹಿಂದಿನ ಹಾಗೆ ಹದಿನಾರು ಸೋಮಕಲೆಗಳನ್ನು ನ್ಯಾಸ ಮಾಡಿ ತ್ರ್ಯಂಬಕಂ ಯಜಾಮಹೇ' ಈ ಋಕ್ಕಿನಿಂದಲೂ **'ಓಂ ಸೋಮಮಂಡಲಾಯ ಕಾಮಪ್ರದ ಷೋಡಶ ಸೋಮಕಲಾತ್ಮನೇ ನಮಃ'** ಈ ಸಮಷ್ಟಿಯಿಂದಲೂ, 'ಆಂ ಹ್ರೀಂ ಕ್ರೋಂ' ಮೊದಲಾಗಿ ಪ್ರಾಣ ಪ್ರತಿಷ್ಠಾಮಂತ್ರದಿಂದಲೂ ವ್ಯಾಪಿಸಿ, ತೊಡೆಗಳನ್ನು ಮುಟ್ಟಿ ಮೂರಾವರ್ತಿ ಪ್ರಣವವನ್ನು ಜಪಿಸಿ, ಹೃದಯವನ್ನು ಸ್ಪರ್ಶಿಸಿ ಅಜಪಾವನ್ನು ಮೂರಾವರ್ತಿ ಜಪಿಸಿ, 'ಹೃದಿಸ್ಥಾ ದೇವತಾಃ ಸರ್ವಾಃ' ಎಂದು ಜಪಿಸಬೇಕು. । ೩ ।

ಎರಡು ಕಾಲುಗಳು, ಸಂದುಗಳಲ್ಲಿ ಹತ್ತು ಅಕಾರಕಲೆಗಳನ್ನಿಡಬೇಕು. ೧) ಓಂ ಶ್ರೀಂ ಕಂ ಸೃಷ್ಟ್ಯೈ– ದಕ್ಷಪಾದಮೂಲೇ । ೨) ಶ್ರೀಂ ಖಂ ಋದ್ಧ್ಯೈ– ಜಾನುನಿ ೩) ಶ್ರೀಂ ಗಂ ಸ್ಮೃತ್ಯೈ– ಗುಲ್ಫೇ । ೪) ಘಂ ಮೇಧಾಯ್ಯೈ– ಅಂಗುಲಿಮೂಲೇ । ೫) ಙಂ ಕಾಂತ್ಯೈ– ಅಂಗುಲ್ಯಗ್ರೇ । ೬) ಶ್ರೀಂ ಚಂ ಲಕ್ಷ್ಮ್ಯೈ– ವಾಮಪಾದಮೂಲೇ । ೭) ಶ್ರೀಂ ಛಂ ದ್ಯುತ್ಯೈ– ವಾಮಜಾನುನಿ । ೮) ಜಂ ಸ್ಥಿರಾಯ್ಯೈ– ವಾಮಗುಲ್ಫೇ । ೯) ಝಂ ಸ್ಥಿತ್ಯೈ– ಅಂಗುಲಿಮೂಲೇ । ೧೦) ಞಂ ಸಿದ್ಧ್ಯೈ– ವಾಮಾಂಗುಲ್ಯಗ್ರೇ ।

ಆ ಸ್ಥಾನದಲ್ಲಿ– ಹಗುಂ ಸಃ ಶುಚಿಷದ್ವಸುಃ– ಇತಿ ಋಚಾ– ಬ್ರಹ್ಮಣೇ ನಮಃ– ಮೊದಲಾದ ಸಮಷ್ಟಿಯಿಂದ ಪ್ರಾಣ ಪ್ರತಿಷ್ಠಾ ಮಂತ್ರಗಳಿಂದಲೂ ವ್ಯಾಪಿಸಿ ತೊಡೆಯನ್ನು ಮುಟ್ಟಿ ಪ್ರಣವಾದಿ ಜಪ– ಮೊದಲಾಗಿ ಎಲ್ಲವೂ ಹಿಂದಿನಂತೆ ಮಾಡಬೇಕು. । ೪ ।

ಎರಡು ಕೈಗಳ ಸಂದು, ತುದಿಗಳಲ್ಲಿ ಹತ್ತು ಉಕಾರ ಕಲೆಗಳನ್ನು ಇರಿಸಬೇಕು. ೧) ಓಂ ಶ್ರೀಂ ಟಂ ಜರಾಯ್ಯೈ– ದಕ್ಷಬಾಹು ಮೂಲದಲ್ಲಿ । ೨) ಶ್ರೀಂ ಠಂ ಪಾಲಿನ್ಯೈ– ದಕ್ಷಕೂರ್ಪರೇ । ೩) ಶ್ರೀಂ ಡಂ ಕಾಂತ್ಯೈ– ದಕ್ಷ ಮಣಿಬಂಧೇ । ೪) ಢಂ ಐಶ್ವರ್ಯೈ– ಅಂಗುಲಿಸಂಧಿಷು । ೫) ಣಂ ರತ್ಯೈ– ಅಂಗುಲ್ಯಗ್ರೇ । ೬) ತಂಕಾಮಿಕಾಯ್ಯೈ– ವಾಮಬಾಹುಮೂಲೆ । ೭) ಥಂ ವರದಾಯ್ಯೈ– ವಾಮಕೂರ್ಪರೇ । ೮) ದಂ ಹ್ಲಾದಿನ್ಯೈ– ವಾಮಮಣಿಬಂಧೇ । ೯) ಧಂ ಪ್ರೀತ್ಯೈ– ವಾಮಅಂಗುಲಿ ಸಂಧಿಷು । ೧೦) ಶ್ರೀಂ ನಂ ದೀರ್ಘಾಯ್ಯೈ– ವಾಮಅಂಗುಲ್ಯಗ್ರೇ ।

ಓಂ ಪ್ರತದ್ವಿಷ್ಣುಸ್ತವತೇವೀರ್ಯಾಯ– ಈ ಋಕ್ಕಿನಿಂದ ವಿಷ್ಣವೇ ನಮಃ ಮೊದಲಾದ ಸಮಷ್ಟಿಯಿಂದ ಪ್ರಾಣ ಪ್ರತಿಷ್ಠಾಮಂತ್ರಗಳಿಂದ ವ್ಯಾಪಿಸಿ, ತೊಡೆಯನ್ನು ಮುಟ್ಟಿ, ಪ್ರಣವ ಅಜಪಾವನ್ನು ಮೂರಾವರ್ತಿ ಜಪಿಸಿ ಹೃದಿಸ್ಥಾ ಮೊದಲಾಗಿ ಜಪಿಸಬೇಕು । ೫ ।

ಪಾಯು, ವೃಷಣ, ಅಂಧು, ನಾಭಿ, ಕುಕ್ಷಿ, ಹೃದಯ, ಪಾರ್ಶ್ವ, ಭುಜ, ಪೃಷ್ಠ, ಕುಕುತ್‌ಗಳಲ್ಲಿ ಹತ್ತು ಮಕಾರ ಕಲೆಗಳನ್ನು ನ್ಯಾಸ ಮಾಡಬೇಕು. ೧) ಓಂ ಶ್ರೀಂ ಪಂ ತೀಕ್ಷ್ಣಾಯ್ಯೈ– ಪಾಯೌ । ೨) ಓಂ ಫಂ ರೌದ್ರಾಯ್ಯೈ– ವೃಷಣೇ । ೩) ಶ್ರೀಂ ಬಂ ಭಯಾಯ್ಯೈ– ಅಂಧೌ । ೪) ಶ್ರೀಂ ಭಂ ನಿದ್ರಾಯ್ಯೈ– ನಾಭೌ । ೫) ಶ್ರೀಂ ಮಂ ತಂದ್ರ್ಯೈ– ಕುಕ್ಷೌ । ೬) ಶ್ರೀಂ ಯಂ ಕ್ಷುಧಾಯ್ಯೈ– ಹೃದಯೇ । ೭) ಶ್ರೀಂ ರಂ ಕ್ರೋಧಿನ್ಯೈ– ದಕ್ಷಪಾರ್ಶ್ವೇ । ೮) ಶ್ರೀಂ ವಂ ಉತ್ಕಾರ್ಯೈ– ಭುಜೋಪಸ್ಥೇ । ೯) ಶ್ರೀಂ ಲಂ ಕ್ರಿಯಾಯ್ಯೈ– ವಾಮಪಾರ್ಶ್ವೇ । ೧೦) ಶ್ರೀಂ ಶಂ ಮೃತ್ಯುರೂಪಾಯ್ಯೈ– ಕಕುದಿ.

'ತ್ರ್ಯಂಬಕಂ ಯಜಾಮಹೇ' ಈ ಋಕ್ಕಿನಿಂದ, ರುದ್ರಾಯ ನಮಃ ಮೊದಲಾದ ಸಮಷ್ಟಿಯಿಂದ ಪ್ರಾಣ ಪ್ರತಿಷ್ಠಾಮಂತ್ರಗಳಿಂದ ವ್ಯಾಪಿಸಿ, ತೊಡೆಗಳನ್ನು ಮುಟ್ಟಿ ಮೂರಾವರ್ತಿ ಪ್ರಣವ ಮೊದಲಾಗಿ ಜಪಿಸಿ, ಹೃದಯವನ್ನು ಮುಟ್ಟಿ, ಅಜಪಾವನ್ನು ಮೂರಾವರ್ತಿ ಜಪಿಸಿ, ಹೃದಿಷ್ಠಾ ದೇವತಾ ಮೊದಲಾಗಿ ಜಪಿಸಬೇಕು. । ೬ ।

ಕಂಠ, ಆಸ್ಯ, ಹುಬ್ಬುಗಳೆರಡು, ಮೂರ್ಧಗಳಲ್ಲಿ ಬಿಂದು ಕಲಾಪಂಚಕವನ್ನು ಇರಿಸಬೇಕು. ೧) ಶ್ರೀಂ ಷಂ ಪೀತಾಯ್ಯೈ– ಕಂಠೇ । ೨) ಶ್ರೀಂ ಸಂ ಶ್ವೇತಾಯ್ಯೈ– ಆಸ್ಯೇ । ೩) ಶ್ರೀಂ ಹಂ ಅರುಣಾಯ್ಯೈ– ದಕ್ಷಭ್ರುವೇ । ೪) ಶ್ರೀಂ ಳಂ ಅಸಿತಾಯ್ಯೈ– ವಾಮಭ್ರುವೇ । ೫) ಶ್ರೀಂ ಕ್ಷಂ ಅನಂತಾಯ್ಯೈ– ಮೂರ್ಧ್ನಿ । ಹೀಗೆ ನ್ಯಾಸ ಮಾಡಿ 'ಓಂ ತತ್ಸವಿತುರ್ವರೇಣ್ಯಂ' ಈ ಋಕ್ಕಿನಿಂದ, ಮಹಾವಿಷ್ಣವೇ– ಮೊದಲಾದ ಸಮಷ್ಟಿಯಿಂದ ಪ್ರಾಣಪ್ರತಿಷ್ಠಾ ಮಂತ್ರಗಳಿಂದಲೂ, ವ್ಯಾಪಿಸಿ ತೊಡೆಗಳನ್ನು ಮುಟ್ಟಿ, ಪ್ರಣವ ಜಪ ಮೊದಲಾದುವನ್ನು ಮಾಡಬೇಕು । ೭ ।

ಪುನಃ ಆಸ್ಯ, ಮೂರ್ಧ, ದಂತದ್ವಯ, ಓಷ್ಠದ್ವಯ, ಮುಖವೃತ್ತ ಮೂರ್ಧಾಗಳಲ್ಲಿ ಹದಿನಾರು ನಾದ ಕಲೆಗಳನ್ನು ನ್ಯಾಸ ಮಾಡಬೇಕು. ೧) ಓಂ ಶ್ರೀಂ ಅಂ ನಿವೃತ್ತ್ಯೈ ನಮಃ– ಆಸ್ಯೇ । ೨) ಓಂ ಆಂ ಪ್ರತಿಷ್ಠಾಯ್ಯೈ– ಮೂರ್ಧ್ನಿ । ೩) ಶ್ರೀಂ ಇಂ ವಿದ್ಯಾಯ್ಯೈ– ಅಧೋ ದಂತಪಂಕ್ತೌ । ೪) ಶ್ರೀಂ ಈಂ ಶಾಂತ್ಯೈ– ಊರ್ಧ್ವ ದಂತಪಂಕ್ತೌ । ೫) ಉಂ ಇಂಧಿಕಾಯ್ಯೈ– ಅಧರೋಷ್ಠೇ । ೬) ಊಂ ದೀಪಿಕಾಯ್ಯೈ– ಊರ್ಧ್ವೋಷ್ಠೇ । ೭) ಋಂ ರೇಚಿಕಾಯ್ಯೈ– ದಕ್ಷ ಕಪೋಲೇ । ೮) ೠಂ ಮೋಚಿಕಾಯ್ಯೈ– ವಾಮ ಕಪೋಲೇ । ೯) ಶ್ರೀಂ ಲೃಂ ಪರಾಯ್ಯೈ– ದಕ್ಷನಸಿ । ೧೦) ಶ್ರೀಂ ಲೄಂ ಸೂಕ್ಷ್ಮಾಯ್ಯೈ– ವಾಮನಸಿ । ೧೧) ಏಂ ಸೂಕ್ಷ್ಮಾಮೃತಾಯ್ಯೈ– ದಕ್ಷಕರ್ಣೇ । ೧೨) ಐಂ ಜ್ಞಾನಾಮೃತಾಯ್ಯೈ– ವಾಮಶ್ರೋತ್ರೇ । ೧೩) ಓಂ ಆಪ್ಯಾಯಿನ್ಯೈ– ದಕ್ಷನೇತ್ರೇ । ೧೪) ಶ್ರೀಂ ಔಂ ವ್ಯಾಪಿನ್ಯೈ– ವಾಮನೇತ್ರೇ । ೧೫) ಅಂ ವ್ಯೋಮರೂಪಾಯ್ಯೈ– ಮುಖವೃತ್ತೇ । ೧೬) ಅಃ ಅನಂತಾಯ್ಯೈ– ಮೂರ್ಧ್ನಿ ।

ಹೀಗೆ ನ್ಯಾಸ ಮಾಡಿ 'ವಿಷ್ಣುರ್ಯೋನಿಂ ಕಲ್ಪಯತು'– ಈ ಋಕ್ಕಿನಿಂದ, ಸದಾವಿಷ್ಣವೇ– ಮೊದಲಾದ ಸಮಷ್ಟಿಯಿಂದಲೂ ಪ್ರಾಣಪ್ರತಿಷ್ಠಾ ಮಂತ್ರದಿಂದಲೂ ವ್ಯಾಪಿಸಿ ತೊಡೆಗಳನ್ನು ಮುಟ್ಟಿ ಮೊದಲಾಗಿ ಎಲ್ಲವೂ ಹಿಂದಿನಂತೆ ಮಾಡಬೇಕು. । ೮ ।

ಮೂಲಾಧಾರ, ಹೃದಯ, ಮೂರ್ಧಾಗಳಲ್ಲಿ ಮೂರು ಶಕ್ತಿಗಳನ್ನಿರಿಸಬೇಕು. ೧) ಓಂ ಶ್ರೀಂ ಇಚ್ಛಾಶಕ್ತ್ಯೈ– ಮೂಲಾಧಾರೇ। ೨) ಓಂ ಶ್ರೀಂ ಜ್ಞಾನಶಕ್ತ್ಯೈ– ಹೃದಯೇ । ೩) ಶ್ರೀಂ ಕ್ರಿಯಾಶಕ್ತ್ಯೈ– ಮೂರ್ಧ್ನಿ– ಹೀಗೆ ನ್ಯಾಸ ಮಾಡಿ ಶಕ್ತ್ಯಾತ್ಮನೇ ನಮಃ– ಈ ಸಮಷ್ಟಿ ಮಂತ್ರದಿಂದ ಪ್ರಾಣ ಪ್ರತಿಷ್ಠಾ ಮಂತ್ರಗಳಿಂದಲೂ ವ್ಯಾಪಿಸಿ ತೊಡೆಯನ್ನು ಮುಟ್ಟಿ ಪ್ರಣವ ಮೊದಲಾದುದನ್ನು ಜಪಿಸಬೇಕು. । ೯ ।

ಹೃದಯದಲ್ಲಿ ಶಾಂತ ಕಲೆಗಳನ್ನು ನ್ಯಾಸ ಮಾಡಬೇಕು. ೧) ಶ್ರೀಂ ಚಿದಾತ್ಮನೇ ನಮಃ । ೨) ಓಂ ಶ್ರೀಂ ಸದಾತ್ಮನೇ ನಮಃ । ೩) ಓಂ ಶ್ರೀ ಆನಂದಾತ್ಮನೇ ನಮಃ । ಹೀಗೆ ನ್ಯಾಸ ಮಾಡಿ ಶಾಂತಾತ್ಮನೇ ನಮಃ– ಈ ಸಮಷ್ಟಿಯಿಂದ ಎಲ್ಲಾ ಅಂಗಗಳಲ್ಲೂ ವ್ಯಾಪಿಸಿ, ಪ್ರಾಣಪ್ರತಿಷ್ಠಾ ಮಂತ್ರಗಳಿಂದಲೂ ವ್ಯಾಪಿಸಿ ತೊಡೆಗಳನ್ನು ಮುಟ್ಟಿ ಪ್ರಣವ ಜಪಾದಿಗಳನ್ನು ಹಿಂದಿನಂತೆ ಮಾಡಬೇಕು । ೧೦ ।

ಪುನಃ ಲಿಪಿನ್ಯಾಸವನ್ನು ಮಾಡಬೇಕು. (ನಾಲ್ಕನೆಯ ದಿನದಲ್ಲಿ ಕಲಶಾಭಿಷೇಕದಲ್ಲಿ ಸಂಹಾರ ಕ್ರಮದಿಂದ ಕಲಾವಾಹನವು. ಅಭಿಷೇಕಾ ನಂತರದಲ್ಲಿ ಸೃಷ್ಟಿಕ್ರಮದಿಂದ ನ್ಯಾಸವು. ಕಲಶದಲ್ಲಿ ನ್ಯಾಸವು ಸಂಹಾರ ಕ್ರಮ ಯಾ ಸರ್ಗ ಕ್ರಮವನ್ನಾದರೂ ಅನುಸರಿಸಬಹುದು. ದೋಷ ಸಂಹಾರ ಪ್ರಾಧಾನ್ಯತೆಯಲ್ಲಿ ದೇವತೆಯಲ್ಲಿ ನ್ಯಾಸವಾದರೂ ಸಂಹಾರ ಕ್ರಮದಿಂದಲೇ. ಗುಣಾಧಾನ ಪ್ರಾಧಾನ್ಯದಲ್ಲಿ ಆವಾಹನವು ಕೂಡ ಸರ್ಗ ಕ್ರಮದಿಂದಲೇ. ಉತ್ಸವ ಮೊದಲಾದ ಸ್ನಪನ ವಿಧಿಯಲ್ಲಿ ಕಲಾ ವಾಹನವು ನ್ಯಾಸವೆಂಬ ಎರಡೂ ಸ್ಥಿತಿ ಕ್ರಮದಿಂದಲೇ.

ಆಮೇಲೆ ಮೂಲಾಕ್ಷರಾಂಗ ನ್ಯಾಸವನ್ನು ಮಾಡಿ ಸಕಲೀಕರಣ ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಬೇಕು. ಆಯಾಯ ನಿಜಮೂಲದ ಕೊನೆಯಲ್ಲಿ ವಿದ್ಯಾಮೂರ್ತಯೇ ನಮಃ– ಎಂದು ವಿದ್ಯಾಮೂರ್ತಿಯನ್ನಾವಾಹಿಸಿ, ಅದರಿಂದ ವ್ಯಾಪಿಸಿ, ಮೂಲಾಕ್ಷರಾಂಗನ್ಯಾಸವನ್ನು ಮಾಡಿ ಉಪಹಾರವನ್ನು ಕೊಟ್ಟು, ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಬೇಕು. ಇತಿ ಕಲಾವಾಹನಂ ॥

* * * *

## ತತ್ತ್ವಾವಾಹನಂ

ಪುನಃ ಶಂಖವನ್ನು ತೊಳೆದು ಹಿಂದಿನಂತೆ ಪೂಜಿಸಲ್ಪಟ್ಟ ನೀರನ್ನು ಶಂಖದಲ್ಲಿ ತೆಗೆದುಕೊಂಡು ಅಷ್ಟಗಂಧವನ್ನು ಸೇರಿಸಿ, ಮೂರ್ತಿಯನ್ನು ಸಂಕಲ್ಪಿಸಿ ಸ್ವಲ್ಪ ಪೂಜಿಸಿ ಎಲ್ಲಾ ತತ್ತ್ವಮಂತ್ರಗಳಿಂದ ಸೃಷ್ಟಿ ಕ್ರಮದಿಂದ ಆವಾಹಿಸಬೇಕು. ಓಂ ಮಂ ನಮಃ ಪರಾಯ ಜೀವತತ್ತ್ವಾತ್ಮನೇ ನಮಃ– ಜೀವತತ್ತ್ವಮಾವಾಹಯಾಮಿ– ಹೀಗೆ ಪ್ರತಿ ತತ್ತ್ವವನ್ನು ಆವಾಹಿಸಬೇಕು. ಓಂ ಭಂ ನಮಃ ಪರಾಯ ಪ್ರಾಣ ತತ್ತ್ವಾತ್ಮನೇ ನಮಃ– ಪ್ರಾಣತತ್ತ್ವಮಾವಾಹಯಾಮಿ– ಹೀಗೆ ಆರಂಭಿಸಿ– ಓಂ ರಂ ನಮಃ ಪರಾಯ ವಹ್ನಿಮಂಡಲಾಯ ದಶವಹ್ನಿಕಲಾತ್ಮನೇ ನಮಃ ವಹ್ನಿಕಲಾಮಾವಾಹಯಾಮಿ ( ) ಆಯಾಯ ದೇವತೆಯ ಪಂಚತತ್ತ್ವಗಳಿಂದ ಆವಾಹಿಸಿ, ( ) ಆಯಾಯ ದೇವತೆಯ ಮೂಲ ಮಂತ್ರದಿಂದ ಪೂಜಿಸಿ, ಪಂಚೋಪಚಾರ ಪೂಜೆಯನ್ನು ಮಾಡಿ ಪೂಜಿಸಿ, ಪುಷ್ಪಾಂಜಲಿಯನ್ನು ಮಾಡಬೇಕು. ಪುನಃ ಪರಾವಾಹನವನ್ನು ಜೀವಾವಾಹವನ್ನೂ ಸ್ಥೂಲಾವಾಹನೆಯನ್ನೂ ಮಾಡಿ, ಮೂಲ ಮಂತ್ರೋಚ್ಚಾರಣೆಯನ್ನು ಮಾಡುತ್ತಾ ಮಂತ್ರಚೈತನ್ಯದಿಂದ ಹೆಚ್ಚಿದ ಆ ನೀರನ್ನು ಕಲಶದಲ್ಲಿ ಸೇರಿಸಿ, ಹೂವಿನಿಂದ ಪೂಜಿಸಿ, ಆವಾಹನಾದಿ ಮುದ್ರೆಗಳನ್ನು ತೋರಿಸಿ ವ್ಯಾಪಿಸಿ, ತತ್ತ್ವನ್ಯಾಸವನ್ನು ಮಾಡಬೇಕು. ಷಡಧ್ವನ್ಯಾಸದಲ್ಲಿ ಹೇಳಿದಂತೆ ತತ್ತ್ವನ್ಯಾಸ ( ) ವನ್ನು ಮಾಡಿ ಪೂಜಿಸಿ, ಪುಷ್ಪಾಂಜಲಿಯನ್ನು ಮಾಡಬೇಕು. ಇಲ್ಲಿ ಪರಾವಾಹನ ( ) ಜೀವಾವಾಹನ ( ) ಸ್ಥೂಲಾವಾಹನ ( ) ವನ್ನೂ ಮಾಡಬೇಕು. ಪುನಃ ಉಳಿದ ಭಾಗದಲ್ಲಿ ನೀರನ್ನು ತುಂಬಿ ಅಸ್ತ್ರ ಮಂತ್ರದಿಂದ ಚೂತ ಬೋಧಿ ಪಲ್ಲವ ಚಕ್ರಿಕಾದಿಗಳನ್ನಿರಿಸಿ, ಅಲಂಕರಿಸಿ, ಕವಚ ಮಂತ್ರದಿಂದ ಎರಡು ಬಟ್ಟೆಗಳಿಂದ ಸುತ್ತಿ, ಪ್ರಣವ ಉಪಚಾರ ಮೂಲದಿಂದಾವಾಹಿಸಿ ಷಡಧ್ವನ್ಯಾಸವನ್ನು ಮಾಡಿ ಪರಿವಾರದೊಂದಿಗೆ ಪೂಜಿಸಿ ಪ್ರಸನ್ನ ಪೂಜೆಯನ್ನು ಮಾಡಿ ಸಮಾಪ್ತಿಗೊಳಸಿ ರಕ್ಷಿಸಬೇಕು.

* * * *

## ಪರಿಕಲಶಪೂಜಾ

ಎಲ್ಲಾ ಎಡೆಯಲ್ಲಿಯೂ ಪ್ರತಿಯೊಂದು ಖಂಡ (ವಿಭಾಗದಲ್ಲೂ) ಪೀಠಪೂಜೆಯನ್ನು ಮಾಡಿ ಕಲಶದ ಸಂಸ್ಕಾರವನ್ನು ಮಾಡಿ ಮೇಲ್ಮುಖನಾಗಿಸಿ, ಕೂರ್ಚಗಳನ್ನಿರಿಸಿ, ಕ್ರಮದಂತೆ ದ್ರವ್ಯಪೂರಣವನ್ನು ಮಾಡಬೇಕು. ಮಾನುಷಾವರಣದಲ್ಲಿ ಪೂರ್ವದಿಕ್ಕಿನಲ್ಲಿ–

ಶ್ಯಾಮಾಕ, ಅಂಬುಜ, ವಿಷ್ಣುಕ್ರಾಂತಿ, ದೂರ್ವೆಗಳಿಂದ ತುಂಬಿಸಬೇಕು. ಇದು ಪಾದ್ಯ ದ್ರವ್ಯವು. ತುಂಬಲು ದ್ವಾದಶಾಕ್ಷರ ಮಂತ್ರ ( ಓಂ ನಮೋ ಭಗವತೇ ವಾಸುದೇವಾಯ) ಪಿತೃಭ್ಯೋ ನಮಃ– ಪೂರಣ ದ್ರವ್ಯ ಮಂತ್ರ । ೧ ।

**ದಕ್ಷಿಣದಲ್ಲಿ**– ಸರ್ಷಪ, ಕಟುಕ, ಪುಷ್ಪ, ಜಂಬೀರಫಲ, ಅಕ್ಷತ, ಯವ, ಗಂಧ, ತಿಲ, ಕುಶಗಳಿಂದ ತುಂಬಿಸಬೇಕು. (ಅರ್ಘ್ಯ ದ್ರವ್ಯ) ದ್ವಾದಶಾಕ್ಷರ । ಶ್ರಿಯೈ । ೨ ।

**ಪಶ್ಚಿಮದಲ್ಲಿ**–ತಕ್ಕೋಲ, ಕರ್ಪೂರ, ಲವಂಗ, ಜಾತೀಫಲ– ಇದು ಆಚಮನ ದ್ರವ್ಯ– ದ್ವಾದಶಾಕ್ಷರ । ಸರಸ್ವತ್ಯೈ ನಮಃ । ೩ ।

**ಉತ್ತರದಿಕ್ಕಿನಲ್ಲಿ**– ಪಂಚಗವ್ಯದಿಂದ ಪೂರಣ– ದ್ವಾದಶಾಕ್ಷರ । ದಕ್ಷಾಯ । ೪ । ಮಾನುಷಾವರಣದಲ್ಲಿ

**ಆಗ್ನೇಯ ಕೋಣ**– ತುಪ್ಪದಿಂದ । ದ್ವಾದಶಾಕ್ಷರ । ವಿಷ್ಣವೇ । ೫ ।

**ನಿಋತಿಕೋಣದಲ್ಲಿ**– ಮೊಸರಿನಿಂದ । ದ್ವಾದಶಾಕ್ಷರೇಣ । ಶುಕ್ರಾಯ ನಮಃ । ೬ ।

**ವಾಯವ್ಯ ಕೋಣದಲ್ಲಿ**– ಕ್ಷೀರದಿಂದ । ದ್ವಾದಶಾಕ್ಷರೇಣ । ಸೋಮಾಯ ನಮಃ । ೭ ।

**ಈಶಕೋಣದಲ್ಲಿ**– ಜೇನಿನಿಂದ । ದ್ವಾದಶಾಕ್ಷರೇಣ । ಇಂದ್ರಾಯ ನಮಃ । ೮ ।

**ಇಂದ್ರಾಗ್ನಿಯ ನಡುವೆ**– ಅಂತರಾಳದಲ್ಲಿ– ಗಾಯತ್ರಿಯಿಂದ । ಅರ್ಕಾಯ ನಮಃ ।– ಎಂದು ಉಷ್ಣೋದಕದಿಂದ (ಬಿಸಿನೀರಿನಿಂದ) ತುಂಬಿಸಬೇಕು । ೯ ।

**ಅಗ್ನಿಯಮರ ನಡುವೆ**– ಗಾಯತ್ರಿಯಿಂದ– ಯಮಾಯ ನಮಃ । ಎಂದು ಅಶ್ವತ್ಥ ಉದುಂಬರ ವಟ ಬದಿರ ಶಮೀ ಬಿಲ್ವ ಪಲಾಶ ವೈಕಂಕತ ಗ್ರಂಥಿಲ ಇವುಗಳ ತೊಪ್ಪೆಗಳಿಂದ ಕಷಾಯವನ್ನು ಸಿದ್ಧಗೊಳಿಸಿ ತುಂಬಬೇಕು । ೧೦ ।

**ಯಮ ನಿಋತಿಯ ಅಂತರಾಳದಲ್ಲಿ**– ಗಾಯತ್ರಿಯಿಂದ– ವಿಶ್ವಸ್ಯೈ ನಮಃ– ಎಂದು ನಿಶಾಚೂರ್ಣ (ಅರಸಿನ) ಸಹದೇವೀ ಶಿರೀಷ ಭದ್ರ ಮುಸ್ತ ಕುಶ ಸೂರ್ಯವರ್ತಿನೀ ಈ ಮಾರ್ಜನ ದ್ರವ್ಯಗಳಿಂದ ತುಂಬಿಸಬೇಕು । ೧೧ ।

**ನಿಋತಿ ವರುಣರ ಮಧ್ಯೆ**– ಆಮ್ರ ಬಿಲ್ವ ಧಾತ್ರೀ ದಾಡಿಮ ಮಾತುಳಂಗ ನಾಳಿಕೇರ ಭವ್ಯಪನಸ ಕದಲೀ ಫಲಗಳಿಂದ– ಗಾಯತ್ರಿಯಿಂದ– ವೈಶ್ರವಣಾಯ ನಮಃ ಎಂದು ತುಂಬಿಸಬೇಕು । ೧೨ ।

**ವರುಣವಾಯುವಿನ ಮಧ್ಯೆ**– ಯವೋದಕದಿಂದ– ಗಾಯತ್ರಿಯಿಂದ– ವಾಯವೇ ನಮಃ ಎಂದು ತುಂಬಿಸಬೇಕು । ೧೩ ।

**ವಾಯು ಸೋಮರ ನಡುವೆ**– ಮುಕ್ತಾ ಪದ್ಮರಾಗ ವಿದ್ರುಮ ವಜ್ರವೈಡೂರ್ಯ ರತ್ನಗಳಿಂದ– ಗಾಯತ್ರಿಯಿಂದ– ಬ್ರಹ್ಮಣೇ ನಮಃ ಹೀಗೆ ತುಂಬಿಸಬೇಕು । ೧೪ ।

**ಸೋಮೇಶಾನರ ಮಧ್ಯೆ**– ಸುವರ್ಣ ರಜತ ತಾಮ್ರಾಯಸ್ತ್ರಪು ಲೋಹಗಳಿಂದ– ಗಾಯತ್ರಿಯಿಂದ– ವಸುಭ್ಯೋ ನಮಃ ಎಂದು ತುಂಬಿಸಬೇಕು ।೧೫।

**ಈಶಾನೈಂದ್ರಯೋರ್ಮಧ್ಯೆ**– ಕುಶಜಲೇನ– ಗಾಯತ್ರ್ಯಾ– ಸಾವಿತ್ರ್ಯೈ ನಮಃ ಎಂದೂ ಪೂರ್ತಿ ಮಾಡಬೇಕು । ೧೬ ।

**ದೈವಿಕೀ– ಪೂರ್ವದಿಕ್ಕಿನಲ್ಲಿ**– ಚಂದನ, ಅಗರು, ಕುಷ್ಠ, ಕೇಸರಿ, ಪಚ್ಚಕರ್ಪೂರ, ಮುರಾ, ಸೇವ್ಯ, ಲವಂಗ, ವಾರೀ (ಮುಡಿವಾಳ) ಹೀಗೆ ಅಷ್ಟಗಂಧಜಲದಿಂದ (ಓಂ ನಮೋ ನಾರಾಯಣಾಯ) ಅಷ್ಟಾಕ್ಷರದಿಂದ– ಗಂಧರ್ವಾಯ ನಮಃ ಎಂದು ತುಂಬಬೇಕು । ೧೭ ।

**ಆಗ್ನೇಯದಲ್ಲಿ**– ಮಲ್ಲಿಕಾ, ಚಂಪಕಾ, ಜಾತೀ, ನಂದ್ಯಾವರ್ತ, ಬಕುಳ, ಕುಂದ, ಯೂಥಿಕಾ, ಪದ್ಮಗಳಿಂದ– ಅಷ್ಟಾಕ್ಷರದಿಂದ– ವರುಣಾಯ ನಮಃ ಎಂದು ಪೂರ್ತಿಗೊಳಿಸಬೇಕು । ೧೮ ।

**ಯಾಮ್ಯ ದಿಕ್ಕಿನಲ್ಲಿ**– ಚಿನ್ನದಿಂದ ಸಿದ್ಧಗೊಳಿಸಿದ– ಗರುಡ, ಶಂಖ, ಚಕ್ರ, ಕಮಠ(ಆಮೆ) ಈ ಔಪಮಾನ ದ್ರವ್ಯಗಳಿಂದ– ಅಷ್ಟಾಕ್ಷರೇಣ ಗರುಡಾಯ ನಮಃ ಎಂದು ತುಂಬಿಸಬೇಕು । ೧೯ ।

**ನೈರುತ್ಯದಲ್ಲಿ**– ಜಟಾಮಾಂಸಿ ಮುರಾರ್ಚಧಾತ್ರೀರಸದಿಂದ ಪುಡಿ ಮಾಡಿ ಸೇರಿಸಿದ ಧಾತ್ರಿ ರಸದಿಂದ– ಅಷ್ಟಾಕ್ಷರದಿಂದ– ಪೃಥಿವ್ಯೈ ನಮಃ ಎಂದು ತುಂಬಬೇಕು. । ೨೦ ।

**ಪಶ್ಚಿಮದಲ್ಲಿ**– ಯವ ತಂಡುಲ ಮಾಷ ನೀವಾರ ಶಾಲಿ, ವೈಣವ (ಬಿದಿರಕ್ಕಿ) ಈ ಅಕ್ಷತ ದ್ರವ್ಯಗಳಿಂದ– ಅಷ್ಟಾಕ್ಷರಗಳಿಂದ– ನಿರ್ಋತಯೇ ನಮಃ ಎಂದು ತುಂಬಬೇಕು । ೨೧ ।

**ವಾಯವ್ಯದಲ್ಲಿ–** ನಾಳಿಕೇರೋದಕದಿಂದ– ಅಷ್ಟಾಕ್ಷರೇಣ– ಶ್ರೀಧರಾಯ ನಮಃ ಹೀಗೆ ತುಂಬಬೇಕು । ೨೨ ।

**ಉತ್ತರದಿಕ್ಕಿನಲ್ಲಿ–** ಇಕ್ಷುಜಲೇನ (ಕಬ್ಬಿನ ನೀರಿನಿಂದ) ಅಷ್ಟಾಕ್ಷರೇಣ– ನೃಸಿಂಹಾಯ ನಮಃ ಎಂದು ತುಂಬಬೇಕು । ೨೩ ।

**ಈಶಾನ್ಯದಲ್ಲಿ–** ತಂಡುಲೋದಕದಿಂದ– ಅಷ್ಟಾಕ್ಷರದಿಂದ– ಅಶ್ವಮುಖಾಯ ನಮಃ ಎಂದು ತುಂಬಿಸಬೇಕು । ೨೪ ।

**ಬ್ರಮ್ಹ ಕಲಶದಲ್ಲಿ–** ಶಾಲೀ ಪಿಷ್ಟ, ಸುವರ್ಣ, ನವರತ್ನ, ರಜನೀಚೂರ್ಣಗಳಿಂದ– ಷಡಕ್ಷರದಿಂದ (ಓಂ ನಮೋ ವಿಷ್ಣವೇ)– ಪರಮಪುರುಷಾಯ ನಮಃ ಎಂದು ತುಂಬಿಸಬೇಕು. ಹೀಗೆ ತುಂಬಿಸಿ, ಪೂಜಿಸಿ, ನೈವೇದ್ಯ ಮಾಡಿ, ನೀರಾಜನ ಮಾಡಿ ರಕ್ಷಿಸಬೇಕು.

* * * *

## ಅಭಿಷೇಕ ಮಂತ್ರಾಃ

ಪ್ರಣವ, ಉಪಚಾರ ಮೂಲ ಮಂತ್ರಗಳನ್ನು ಎಲ್ಲಾ ಕಡೆಗಳಲ್ಲೂ ಹೇಳಬೇಕು.

೧) **ಪಾದ್ಯದಲ್ಲಿ–** ಇದಂ ವಿಷ್ಣುರ್ವಿಚಕ್ರಮೇ ತ್ರೇಧಾನಿದಧೇ ಪದಂ । ಸಮೂಳ್ಹ ಮಸ್ಯ ಪಾಂ ಸುರೇ ॥ ದ್ವಾದಶಾಕ್ಷರ ಮಂತ್ರ (ಓಂ ನಮೋ ಭಗವತೇ ವಾಸುದೇವಾಯ)॥ ಪಿತೃಭ್ಯೋ ನಮಃ ಮೂಲಂ (ಓಂ ನಮೋ ನಾರಾಯಣಾಯ)॥ ಪ್ರಣವಂ ಚ (ಓಂ) । ೧ ।

೨) **ಅರ್ಘ್ಯೇ–** ಹಿರಣ್ಯವರ್ಣಾಃ ಶುಚಯಃ ಪಾವಕಾಃ ಯಾ ಸುಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಂ ಯಾ ಗರ್ಭಂ ದಧಿರೇ ವಿರೂಪಾ ಸ್ತಾನ ಆಪಃ ಶಗುಂ ಸ್ಯೋನಾಭವಂತು ॥ ದ್ವಾದಶಾಕ್ಷರಂ ॥ ಶ್ರಿಯೈ ನಮಃ । ಮೂಲಂ (ಓಂ ನಮೋ ನಾರಾಯಣಾಯ)॥ ಪ್ರಣವಂ ಚ (ಓಂ) । ೨ ।

೩) **ಆಚಾಮಕೇ–** ಆಪೋ ಹಿಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ ॥ ದ್ವಾದಶಾಕ್ಷರಂ ॥ ಸರಸ್ವತ್ಯೈ ನಮಃ । ಮೂಲಂ । ಓಂ । ೩ ।

೪) **ಪಂಚಗವ್ಯೇ–** ಪ್ರಜಾಪತೇ ನ ತ್ವದೇತಾ ನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತಂ ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ॥ ದ್ವಾದಶಾಕ್ಷರಂ ॥ ದಕ್ಷಾಯ । ಮೂಲಂ । ಓಂ । ೪ ।

೫) **ಆಜ್ಯೇ–** ತೇಜೋಽಸಿ ತೇಜೋಽನುಪ್ರೇಹಿ ಅಗ್ನಿಷ್ಟೇತೇಜೋ ಮಾ ವಿನೈತ್ । ಅಗ್ನೇರ್ಜುಹ್ವಾಸಿ ಸುಭೂರ್ದೇವಾನಾಂ ಧಾಮ್ನೆಧಾಮ್ನೇ ದೇವೇಭ್ಯೋ ಯಜುಷೇ ಯಜುಷೇ ಭವ । ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥ ದ್ವಾದಶಾಕ್ಷರಂ ॥ ವಿಷ್ಣವೇ । ಮೂಲಂ ಪ್ರಣವಂ ಚ । ೫ ।

೬) **ದಧ್ನಿ–** ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜನಃ । ಸುರಭಿನೋ ಮುಖಾಕರತ್ಪ್ರಣ ಆಯೂಂಷಿ ತಾರಿಷತ್ ॥ ದ್ವಾದಶಾಕ್ಷರಂ ॥ ಶುಕ್ರಾಯ ನಮಃ । ಮೂಲಂ ಪ್ರಣವಂ ಚ । ೬ ।

೭) **ಕ್ಷೀರೇ–** ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ । ಭವಾ ವಾಜಸ್ಯ ಸಂಗಥೇ ॥ ದ್ವಾದಶಾಕ್ಷರಂ ॥ ಸೋಮಾಯ । ಮೂಲಂ ಪ್ರಣವಂ ಚ । ೭ ।

೮) **ಮಧುನಿ–** ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನ ಸಂತ್ವೋಷಧೀಃ ॥ ಮಧುನಕ್ತಮುತೋಷಸೋ ಮಧುಮತ್ಪಾರ್ಥಿವಂ ರಜಃ । ಮಧುದ್ಯೌರಸ್ತು ನಃ ಪಿತಾ ॥ ಮಧುಮಾಂನೋ ವನಸ್ಪತಿರ್ಮಧುಮಾಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ದ್ವಾದಶಾಕ್ಷರಂ ॥ ಇಂದ್ರಾಯ ನಮಃ । ಮೂಲಂ ಪ್ರಣವಂ ಚ । ೮ ।

೯) **ಉಷ್ಣೋದಕೇ–** ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ ಹಿರಣ್ಯಯೇನ ಸವಿತಾರಥೇನಾ ದೇವೋಯಾತಿ ಭುವನಾನಿ ಪಶ್ಯನ್ ॥ ಗಾಯತ್ರೀ । ಅರ್ಕಾಯ । ಮೂಲಂ ಪ್ರಣವಂ ಚ । ೯ ।

೧೦) **ಕಷಾಯೋದಕೇ–** ಅಶ್ವತ್ಥೇವೋ ನಿಷದನಂ ಪರ್ಣೇವೋ ವಸತಿಷ್ಕೃತಾ । ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರುಷಂ ॥ ಗಾಯತ್ರೀ । ಯಮಾಯ ನಮಃ । ಮೂಲಂ ಪ್ರಣವಂ ಚ । ೧೦ ।

೧೧) **ಮಾರ್ಜನೇ–** ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯತ್ರಾಃ । ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿ ರ್ವ್ಯಶೇಮ ದೇವಹಿತಂ ಯದಾಯುಃ । ಗಾಯತ್ರೀ ।ವಿಶ್ವಸ್ಮೈ । ಮೂಲಂ ಪ್ರಣವಂ ಚ । ೧೧ ।

೧೨) **ಫಲೋದಕೇ–** ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ ಜ್ಯೇಷ್ಠರಾಜಂ ಬ್ರಮ್ಹಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದ ಸಾದನಂ ॥ ಗಾಯತ್ರೀ । ವೈಶ್ರವಣಾಯ ನಮಃ । ಮೂಲಂ ಪ್ರಣವಂ ಚ । ೧೨ ।

೧೩) **ಯವೋದಕೇ–** ವಾಯವಾಯಾಹಿ ದರ್ಶತೇ ಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ॥ ಗಾಯತ್ರೀ । ವಾಯವೇ ನಮಃ । ಮೂಲಂ ಪ್ರಣವಂ ಚ । ೧೩ ।

೧೪) **ರತ್ನೋದಕೇ–** ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾದ್ವಿಶೀಮತಃ ಸುರುಚೋ ವೇನ ಆವಃ । ಸಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥ ಗಾಯತ್ರೀ । ಬ್ರಹ್ಮಣೇ । ಮೂಲಂ ಪ್ರಣವಂ ಚ । ೧೪ ।

೧೫) **ಲೋಹೋದಕೇ–** ಉಪತ್ವಾಗ್ನೇ ದಿವೇ ದಿವೇ ದೋಷಾವಸ್ತರ್ಧಿಯಾ ವಯಂ । ನಮೋ ಭರಂತ ಏಮಸಿ ॥ ಗಾಯತ್ರೀ । ವಸುಭ್ಯೋ ನಮಃ । ಮೂಲಂ ಪ್ರಣವಂ ಚ । ೧೫ ।

೧೬) **ಕುಶೋದಕೇ–** ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಂ । ಅಗ್ನೇಸ್ತ್ವಾ ಸಾಮ್ರಾಜ್ಯೇನಾಭಿಷಿಂಚಾಮಿ ॥ ಗಾಯತ್ರೀ । ಸಾವಿತ್ರ್ಯೈ ನಮಃ । ಮೂಲಂ ಪ್ರಣವಂ ಚ । ೧೬ ।

೧೭) **ಗಂಧೋದಕೇ–** ವಿಷ್ಣೋರರಾಟಮಸಿ ವಿಷ್ಣೋಃ ಪೃಷ್ಠಮಸು ವಿಷ್ಣೋಃಸ್ಮಪ್ತ್ರೇಸ್ಥೋ ವಿಷ್ಣೋರ್ಧ್ರುವಮಸಿ ವೈಷ್ಣವಮಸಿ ವಿಷ್ಣವೇತ್ವಾ ॥ ಅಷ್ಟಾಕ್ಷರಂ ಗಂಧರ್ವಾಯ ನಮಃ ॥ ಮೂಲಂ ಪ್ರಣವಂ ಚ । ೧೭ ।

೧೮) **ಪುಷ್ಪೋದಕೇ–** ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾನ ಆಯುಃ ಪ್ರಮೋಷೀಃ ॥ ಅಷ್ಟಾಕ್ಷರಂ ॥ ವರುಣಾಯ । ೧೮ ।

೧೯) **ಔಪಮಾನದ್ರವ್ಯೇ–** ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ । ಯತ್ರಾ ನರಃ ಸಂ ಚ ವಿಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮಯಂಸನ್ । ಅಷ್ಟಾಕ್ಷರಂ । ಗರುಡಾಯ । ೧೯ ।

೨೦) **ಧಾತ್ರೀಜಲೇ–**ಸ್ಯೋನಾ ಪೃಥಿವಿ ಭವಾ ನೃಕ್ಷರಾ ನಿವೇಶನೀ। ಉಚ್ಛಾ ನಃ ಶರ್ಮ ಸಪ್ರಥಃ । ಅಷ್ಟಾಕ್ಷರಂ। ಪೃಥಿವ್ಯೈ । ೨೦ ।

೨೧) **ಅಕ್ಷತೋದಕೇ–** ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋ ರಭಿಸ್ರವಂತು ನಃ ॥ ಅಷ್ಟಾಕ್ಷರಂ । ನಿರ್ಋತಯೇ । ೨೧ ।

೨೨) **ನಾಳಿಕೇರೋದಕೇ–** ಯಾ ದಿವ್ಯಾ ಆಪಃ ಪಯಸಾ ಸಂಬಭೂವು ರ್ಯಾ ಅಂತರಿಕ್ಷ ಉತಪಾರ್ಥಿವೀ ರ್ಯಾಃ । ಯಾಸಾ ಮಾಷಾಢಾ ಅನುಯಂತಿ ಕಾಮಂ । ತಾನ ಆಪಃ ಶುಗುಂಸ್ಯೋನಾ ಭವಂತು ॥ ಅಷ್ಟಾಕ್ಷರಂ । ಶ್ರೀಧರಾಯ । ೨೨ ।

೨೩) **ಇಕ್ಷುಜಲೇ–** ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಂ । ಮಧುಶ್ಚುತಃ ಶುಚಯೋ ಯಾಃ ಪಾವಕಾ ಸ್ತಾ ಆಪೋದೇವೀರಿಹ ಮಾಮವಂತು ॥ ಅಷ್ಟಾಕ್ಷರಂ ನೃಸಿಂಹಾಯ ನಮಃ । ೨೩ ।

೨೪) **ತಂಡುಲೋದಕೇ–** ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವ ಮನ್ವಶ್ನುವಂತಿ । ಉಭೇ ತೇ ವಿದ್ಮ ರಜಸೀ ಪೃಥಿವ್ಯಾ ವಿಷ್ಣೋ ದೇವತ್ವಂ ಪರಮಸ್ಯ ವಿತ್ಸೇ ॥ ಅಷ್ಟಾಕ್ಷರಂ ॥ ಅಶ್ವಮುಖಾಯ ನಮಃ । ೨೪ ।

೨೫) **ಬ್ರಮ್ಹಕಲಶೇ–** ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತ ಧಾಮಭಿಃ । ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಳ್ಹ ಮಸ್ಯ ಪಾಂ ಸುರೇ ॥ ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ । ಅತೋ ಧರ್ಮಾಣಿ ಧಾರಯನ್ ॥ ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಃ ಸಖಾ ॥ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ । ವಿಷ್ಣೋರ್ಯತ್ಪರಮಂ ಪದಂ । ಷಡಕ್ಷರಂ (ಓಂ ನಮೋ ವಿಷ್ಣವೇ) ಪರಮಪುರುಷಾಯ ನಮಃ॥ ಪುನಃ ಹೇಳಲ್ಪಟ್ಟ ಮಂತ್ರಗಳು.

## ವಿಷ್ಣುವಿನಲ್ಲಿ ಹದಿನೇಳು ದ್ರವ್ಯಗಳಿಂದಭಿಷೇಕವು

ಬ್ರಹ್ಮಕಲಶದಲ್ಲಿ ತುಪ್ಪವನ್ನು ತುಂಬಿಸಬೇಕು. ದೈವಿಕಾವರಣದಲ್ಲಿ ಪೂರ್ವಾದಿ ಕ್ರಮದಿಂದ ಉಷ್ಣೋದಕ, ರತ್ನೋದಕ, (೪) ಫಲೋದಕ (೫) ಲೋಹೋದಕ (೬) ಮಾರ್ಜನ (೭) ಗಂಧ (೮) ಅಕ್ಷತ (೯)ಯವ– ಆಯಾಯ ದೇವತೆಗಳಿಂದ ಕೂಡಿ ತುಂಬಿಸಬೇಕು. ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ (೧೦)ಪಾದ್ಯ (೧೧)ಅರ್ಘ್ಯ (೧೨)ಆಚಮನೀಯ (೧೩)ಗವ್ಯಗಳು. ಕೋಣಗಳಲ್ಲಿ– (೧೪)ಮೊಸರು, (೧೫)ಹಾಲು, (೧೬)ಜೇನು, (೧೭)ಕಷಾಯ– ಆಯಾಯ ದೇವತೆಗಳಿಂದ ತುಂಬಿಸಬೇಕು. ಉಳಿದ ಕಲಶಗಳಲ್ಲಿ ಪ್ರಣವದಿಂದ ಶುದ್ಧಗಾಳಿತ ಜಲದಿಂದ ತುಂಬಿಸಬೇಕು. ವಿಷ್ಣವೇ । ಸೂರ್ಯಾಯ । ಬ್ರಹ್ಮಣೇ ।

ವೈಶ್ರವಣಾಯ । ವಸುಭ್ಯೋ । ವಿಶ್ವೇಭ್ಯೋ ದೇವೇಭ್ಯೋ । ಗಂಧರ್ವೇಭ್ಯೋ । ನಿರ್ಋತಯೇ । ದುರ್ಗಾಯೈ । ಪಿತೃಭ್ಯೋ ಶ್ರಿಯೈ । ಸರಸ್ವತ್ಯೈ । ದಕ್ಷಾಯ । ಶುಕ್ರಾಯ । ಸೋಮಾಯ । ಇಂದ್ರಾಯ । ಯಮಾಯ– ಹೀಗೆ ಆಜ್ಯ (ತುಪ್ಪ) ಮೊದಲಾದ ದ್ರವ್ಯ ದೇವತೆಗಳು.

**ಸ್ನಾನಮಂತ್ರಾಃ**– ಪಾದ್ಯೇ– ಸಹಸ್ರಶೀರ್ಷಾ * * ಪಿತೃಭ್ಯೋ ನಮಃ । **ಅರ್ಘ್ಯೇ**– ಪುರುಷ ಏವೇದಂ * * ಶ್ರಿಯೈ । **ಆಚಮನೇ**– ಏತಾವಾನಸ್ಯ ಮಹಿಮಾ * * ಸರಸ್ವತ್ಯೈ । **ಪಂಚಗವ್ಯೇ**– ತ್ರಿಪಾದೂರ್ಧ್ವ ಉದೈತ್ಪುರುಷಃ * * ದಕ್ಷಾಯ । **ಆಜ್ಯೇ**– ತಸ್ಮಾದ್ವಿರಾಡಜಾಯತ * * ವಿಷ್ಣವೇ । ದಧ್ನಿ– ಯತ್ಪುರುಷೇಣ ಹವಿಷಾ * * ಶುಕ್ರಾಯ । **ಕ್ಷೀರೇ**– ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ * * ಸೋಮಾಯ । ಮಧುನಿ– ತಸ್ಮಾದ್ಯಜ್ಞಾತ್ಸರ್ವಹುತಃ * * ಇಂದ್ರಾಯ । **ಕಷಾಯೇ**– ತಸ್ಮಾದ್ಯಜ್ಞತ್ಸರ್ವಹುತ ಋಚಃ * * ಯಮಾಯ । **ಉಷ್ಣೋದಕೇ**– ತಸ್ಮಾದಶ್ವಾ ಅಜಾಯಂತ * * ಸೂರ್ಯಾಯ । **ಫಲೇ**– ಯತ್ಪುರುಷಂ ವ್ಯದಧುಃ * * ವೈಶ್ರವಣಾಯ । **ಮಾರ್ಜನೇ**– ಬ್ರಾಹ್ಮಣೋಽಸ್ಯಮುಖಮಾಸೀತ್ * * ವಿಶ್ವೇಭ್ಯೋ ದೇವೇಭ್ಯೋ । **ಅಕ್ಷತೇ**– ಚಂದ್ರಮಾಮನಸೋಜಾತಃ * * ನಿರ್ಋತಯೇ । **ರತ್ನೋದಕೇ**– ನಾಭ್ಯಾ ಆಸೀದಂತರಿಕ್ಷಂ * * ಬ್ರಹ್ಮಣೇ । **ಲೌಹೇ**– ಸಪ್ತಾಸ್ಯಾಸನ್ಪರಿಧಯಃ * * ವಸುಭ್ಯೋ । **ಗಂಧಕೇ**– ಯಜ್ಞೇನ ಯಜ್ಞಮ ಯಜಂತ * * ಗಂಧರ್ವೇಭ್ಯೋ । **ಯವೇ**– ಇದಂ ವಿಷ್ಣುರ್ವಿಚಕ್ರಮೇ * * ದುರ್ಗಾಯೈ । ಮಾನುಷ ದಿಕ್ಪಂದಘಟೈರಿತಿಕ್ರಮಃ । ಇತಿ ಸಪ್ತದಶದ್ರವ್ಯ ಪ್ರಕಾರಃ ॥

* * * *

## ಶಂಕರನಾರಾಯಣ ಕಲಶ ಪ್ರಕಾರಃ

ಅಲ್ಲಿ ಅಧಮಾಧಮ, ಅಧಮಮಧ್ಯಮ, ಅಧಮೋತ್ತಮ, ಮಧ್ಯಮಾಧಮ, ಮಧ್ಯಮಮಧ್ಯಮ, ಮಧ್ಯಮೋತ್ತಮ, ಉತ್ತಮಾಧಮ, ಉತ್ತಮಮಧ್ಯಮ ಉತ್ತಮೋತ್ತಮ ಎಂದು ಒಂಭತ್ತು ವಿಧವಾಗಿ ಅಭಿಷೇಕ ಕ್ರಮವನ್ನು ಹೇಳುತ್ತಾರೆ. ಅಲ್ಲಿ ಇಪ್ಪತ್ತೈದು ಕಲಶಗಳಿಂದ ಅಧಮಾಧಮ, ನಲವತ್ತೊಂಭತ್ತು ಕಲಶಗಳಿಂದ ಅಧಮ ಮಧ್ಯಮ, ಎಂಭತ್ತೊಂದು ಕಲಶಗಳಿಂದ ಅಧಮೋತ್ತಮ ಪ್ರಕಾರವು. ತೊಂಭತ್ತೇಳು ಕಲಶಗಳಿಂದ ಮಧ್ಯಮಾಧಮ, ನೂರಿಪ್ಪತೊಂಭತ್ತು ಕಲಶಗಳಿಂದ ಮಧ್ಯಮ ಮಧ್ಯಮವು. ಇನ್ನೂರ ಇಪ್ಪತ್ತೈದು ಕಲಶಗಳಿಂದ ಮಧ್ಯಮೋತ್ತಮವು. ಇನ್ನೂರ ಹದಿಮೂರು ಕಲಶಗಳಿಂದ ಉತ್ತಮಾಧಮ, ಇನ್ನೂರ ಎಪ್ಪತ್ತೇಳು ಕಲಶಗಳಿಂದ ಉತ್ತಮ ಮಧ್ಯಮ. ಮುನ್ನೂರ ನಲವತ್ತೊಂಭತ್ತು ಕಲಶಗಳಿಂದ ಉತ್ತಮೋತ್ತಮವೆಂದು ಕಲಶದ ವಿಧಗಳು.

ವಿಷ್ಣುವಿನಲ್ಲಿ ಹೇಳಿದ ಕ್ರಮದಂತೆ ಆಜ್ಯ ಮೊದಲಾಗಿ ಕಷಾಯದಲ್ಲಿ ಕೊನೆಗೊಳ್ಳುವ ಹದಿನೇಳು ದ್ರವ್ಯಗಳಿಂದ, ಏಳುಪುಟ (ಚಚ್ಚೌಕದ ಮಣೆ), ನವಪುಟ, ಹನ್ನೊಂದು ಪುಟದ ಮನೆಯಲ್ಲಿ ಕ್ರಮವಾಗಿ ಇಪ್ಪತ್ತೈದು, ನಲವತ್ತೊಂಭತ್ತು, ಎಂಭತ್ತೊಂದು ಕಲಶಗಳಿಂದ ಅಧಮತ್ರಯಗಳನ್ನು ಮಾಡಬೇಕು.

**ಕಲಶದ್ರವ್ಯಗಳು** – ಮುಕ್ತಾಫಲ, ಕುಲಿಶ(ವಜ್ರಾಯುಧ), ವಿದ್ರುಮ, ಅಂಬುಜ, ಪುಷ್ಯರಾಗ, ಬ್ರಹ್ಮರಾಗ, ಚಂದ್ರಕಾಂತ, ಸೂರ್ಯಕಾಂತ, ವೈಡೂರ್ಯ, ಗಾರುತ್ಮತ, ಇಂದ್ರನೀಲ, ಅಯಸ್ಕಾಂತ, ಸ್ಫಟಿಕಗಳೆಂದು ಹದಿಮೂರು ರತ್ನಗಳು.

ವಿಷ್ಣುಕ್ರಾಂತಿ ಶ್ಯಾಮಾಕ ಪದ್ಮಕುಶ ತುಲಸೀ ಬಿಲ್ವ (ಫಲ ಯಾ ಹೂ) ಗಂಧಾಕ್ಷತಗಳಿಂದು ಕೂಡಿದುದು– ಪಾದ್ಯ । ಕ್ಷೀರ ರಾಜಿ ತಿಲ ಕುಶ ಗಂಧಾಕ್ಷತೋದಕ ದಧಿ ಯವ ಫಲ ವಚಾ– ಅರ್ಘ್ಯ । (ಸರ್ವದೇವಾರ್ಘ್ಯವು– ವಚಾಸಹಿತ ಹೇಳಲ್ಪಟ್ಟಿದೆ) ಬಿಲ್ವ, ಪಲಾಶ, ಗ್ರಂಥಿಲ, ಖದಿರ, ಶಮೀರ, ಜಂಬೂ, ನೀಪ, ಅಭ್ರಕ, ಆರಗ್ವಧ, ಪನಸಮಧೂಕ– ಇವುಗಳ ತೊಪ್ಪೆಗಳಿಂದ ಕಷಾಯ । ರಾತ್ರೀ ಸಹದೇವೀ ಶಿರೀಷ ಕುಶ ಭದ್ರಮುಷ್ಟಿ, ಸೂರ್ಯವರ್ತಿ ಭೂಸ್ತೃಣ ಗಂಧ ತುಲಸೀದ್ವಯ ಪನಸಗಳಿಂದ ಮಾರ್ಜನ । (ಇಲ್ಲಿ ಪಲ್ಲವಗಳು ತೆಗೆದುಕೊಳ್ಳಲ್ಪಡಬೇಕು) ತಿಲ ರಾಜಿ ಯವ ವೈಣವ ನೀವಾರ ತುಲಸೀ ಪಲಾಶ ಪದ್ಮದಲಗಳಿಂದ ಶಾಂತಿಜಲ. ಬ್ರಹ್ಮಾಶೋಕಕುಶಾರ್ಜುನೇಂದ್ರಲತಾಶ್ವತ್ಥಾಂಕುರ ಪದ್ಮೈಕಪದ್ಮೈ– ಮಂಗಲ ಜಲಂ । ತಕ್ಕೋಲ ಜಾತೀ ಲವಂಗ ಕರ್ಪೂರ ಗಂಧ ಪುಷ್ಪೈರಾಚಮನಂ । ದಾತ್ರ್ಯಾಮ್ರ ಬಿಲ್ವ ನಾರಿಕೇಲ ಪನಸ ದಾಡಿಮ ಭವ್ಯರಂಭಾ ಕುಟಜ ಬದರೀ ಮಾತುಲಂಗ ಕಪಿತ್ಥ– ಈ ಫಲಗಳು । ಸುವರ್ಣ ರಜತ ತಾಮ್ರಾಯಸತ್ರಪುಸೀಸಂಕಾಂಸ್ಯ ಪಿತ್ತಲಾರಗಳು ಕೂಡಿ ಲೋಹ ದ್ರವ್ಯ । ಚಂದನ ಜಲ ಅಗರು ಕುಂಕುಮ ಮುರಾ ಸೇವ್ಯ ಜಟಾಮಾಂಸೀಕಂಕುಷ್ಠ ಸುರದ್ರು ಶಶಿ ನಾಗಾಬ್ದಗಳಿಂದ ಗಂಧದ್ರವ್ಯ । ಮಲ್ಲಿಕಾ ಚಂಪಕಾ ಜಾತೀ ನಂದ್ಯಾವರ್ತದ್ವಯ ಒಕುಲ ಪದ್ಮ ಸೌಗಂಧಿಕ ಕುಂದಫಲಿನೀಕುಸುಮಗಳು ಪುಷ್ಪೋದಕ ದ್ರವ್ಯ । ನೀವಾರ ಶಾಲಿ ಯವ ತಂಡುಲ ವೇಣು ಬೀಜ ಮಾಷ ಸಿದ್ಧಾರ್ಥ ಕಂಕುಗಳಿಂದ ಅಕ್ಷತ ದ್ರವ್ಯ । ಕಷಾಯಕ್ಕೆ ಹೇಳಿದ ತೊಪ್ಪೆಗಳ ಸುಟ್ಟ ಒಣಸಗಣಿಯು ಭಸ್ಮದ್ರವ್ಯ । ವೇದಿಕ್ಷೇತ್ರ ಗಜ ಉಕ್ಷ ಶೃಂಗ ಗಿರಿ ವಲ್ಮೀಕಗಳದ್ದು ಹಂದಿಕೋರದದ್ದು ನದಿಯ ಎರಡು ದಡದ್ದು ತಟಾಕ ಹಳ್ಳದ ಮಣ್ಣುಗಳು. ಯವ ತಿಲ ಗೋಧೂಮಶಾಲೀ ಮುದ್ಗ ಶ್ಯಾಮಾಕ ಚಣಕ ಕಂಕುವೈಣವ ನೀವಾರ– ಈ ಬೀಜಗಳು. ಮಾನುಷ ದಿಕ್ಪಂಡಗಳಲ್ಲಿನವು ವಿಷ್ಣುವಿಗೆ ಹೇಳಿದಂತೆ ಅಭಿಷೇಕ ಕ್ರಮವು. ವಿಷ್ಣುವಿನಲ್ಲಿ ಹೇಳಿದ ದ್ರವ್ಯಗಳನ್ನೇ ಶಂಕರನಾರಾಯಣನಲ್ಲೆಂದು ಸಂಗ್ರಹಿಸಿ ಬರೆದಿದೆ.

**ಅಭಿಷೇಕ ಮಂತ್ರಾಃ – ಪಾದ್ಯೇ–** ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ ॥ ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋ ಜಾತಾಯ ವೈ ನಮೋ ನಮಃ । ಭವೇ ಭವೇನಾತಿ ಭವೇಭವಸ್ವ ಮಾಂ ಭವೋದ್ಭವಾಯ ನಮಃ ॥ ಪಿತೃಭ್ಯೋ । ಮೂಲಂ ಪ್ರಣವಂ ಚ ॥ ೧ ॥

**ಅರ್ಘ್ಯೇ–** ಓಂ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಂ । ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತ ದಮನಾಯ ನಮೋ ಮನೋನ್ಮನಾಯ ನಮಃ । ಶ್ರಿಯೈ ನಮಃ । ಮೂಲಂ ಪ್ರಣವಂ ಚ ॥ ೨ ॥

**ಆಚಮನೀಯೇ–** ಓಂ ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ । ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾ ಮೃತಂ ದಿವಿ ॥ ತತ್ಪುರುಷಾಯ ವಿದ್ಮಹೇ ಮಹಾದೇವಾಯ ದೀಮಹೀ । ತನ್ನೋ ರುದ್ರಃ ಪ್ರಚೋದಯಾತ್ ॥ ಸರಸ್ವತ್ಯೈ ನಮಃ । ಮೂಲಂ ಪ್ರಣವಂ ಚ ॥ ೩ ॥

**ಪಂಚಗವ್ಯೇ–** ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾ ಭವತ್ಪುನಃ । ತತೋ ವಿಶ್ವಂ ವ್ಯಕ್ರಾಮತ್ಸಾಶನಾನ ಶನೇ ಅಭಿ ॥ ಅಘೋರೇಭ್ಯೋಽಥಘೋರೇಭ್ಯೋಃ ಘೋರ ಘೋರತರೇಭ್ಯಃ । ಸರ್ವೇಭ್ಯಃ ಶರ್ವ ಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥ ದಕ್ಷಾಯ ನಮಃ । ಮೂಲಂ ಪ್ರಣವಂ ಚ ॥ ೪ ॥

**ಬ್ರಹ್ಮಕಲಶೇ–** ಓಂ ತಸ್ಮಾದ್ವಿರಾಡ ಜಾಯತ ವಿರಾಜೋ ಅಧಿಪೂರುಷಃ । ಸಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ಈಶಾನಃ ಸರ್ವವಿದ್ಯಾನಾ ಮೀಶ್ವರ ಸರ್ವಭೂತಾನಾಂ ಬ್ರಹ್ಮಾಧಿಪತಿ ಬ್ರಹ್ಮಣೋಽಧಿಪತಿ ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ ॥ ವಿಷ್ಣವೇ ನಮಃ । ಮೂಲಂ ಪ್ರಣವಂ ಚ ॥ ೫ ॥

**ದಧ್ನಿ–** ಓಂ ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾ ಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ಓಮ ನಮಃ ಶಿವಾಯ । ಶುಕ್ರಾಯ ನಮಃ । ಸರ್ವತ್ರ ಮೂಲಂ ಪ್ರಣವಂ ಚ ॥ ೬ ॥

**ಕ್ಷೀರೇ–** ಓಂ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚಯೇ ॥ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ । ಭವಾ ವಾಜಸ್ಯ ಸಂಗಥೇ ॥ ಸೋಮಾಯ ನಮಃ । ಮೂಲಂ ಪ್ರಣವಂ ಚ ॥ ೭ ॥

**ಮಧುನಿ–** ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂಪೃಷದಾಜ್ಯಂ । ಪಶೂಂತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ಗ್ರಾಮ್ಯಾಶ್ಚಯೇ ॥ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ಮಧುನಕ್ತ ಮುತೋಷಸೋ ಮಧುಮತ್ಪಾರ್ಥಿವಂ ರಜಃ । ಮಧುದ್ಯೌರಸ್ತುನಃಪಿತಾ ॥ ಮಧುಮಾಂನೋ ವನಸ್ಪತಿ ರ್ಮಧುಮಾಂ ಅಸ್ತುಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ಓಂ ಓಂ ಓಂ ಓಂ ಓಂ ಸರ್ವಜ್ಞಾಯ ಹೃದಯಾಯ ನಮಃ ॥ ಇಂದ್ರಾಯ ನಮಃ ॥ ೮ ॥

**ಕಷಾಯೋದಕೇ–** ಓಂ ತಸ್ಮಾದ್ಯಜ್ಞಾತ್ಸರ್ವಹುತ ಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ಅಶ್ವತ್ಥೇವೋ ನಿಷದನಂ ಪರ್ಣೇ ವೋ ವಸತಿ ಷ್ಕೃತಾ । ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರೂಷಂ ॥ ಅಮೃತತೇಜೋಮಾಲಿನಿ ತೃಪ್ತಾಯೈಬ್ರಹ್ಮ ಶಿರಸೇ ಸ್ವಾಹಾ ॥ ಯಮಾಯ ನಮಃ । ಮೂಲಂ ಪ್ರಣವಂ ಚ ॥ ೯ ॥

**ಉಷ್ಣೋದಕೇ–** ಓಂ ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ । ಗಾವೋಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ಶಂಕರಾಯ ವಿದ್ಮಹೇ ನಾರಾಯಣಾಯ ಧೀಮಹೇ ॥ ತನ್ನಃ ಪುರುಷಃ ಪ್ರಚೋದಯಾತ್ ॥ ಜ್ವಲಿತ ಶಿಖಿ ಶಿಖೇ ಅನಾದಿಬೋಧಾಯ್ಯೈ ಶಿಖಾಯ್ಯೈ ವಷಟ್ । ಸೂರ್ಯಾಯ ನಮಃ । ಮೂಲಂ ಪ್ರಣವಂ ಚ ॥ ೧೦ ॥

**ಫಲೋದಕೇ–** ಓಂ ಯತ್ಪುರುಷಂ ವ್ಯದಧುಃ ಕವಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯತೇ ॥ ಪುಷ್ಪಾವತೀ ಪ್ರಸೂವತೀ ಫಲಿನೀ ರಫಲಾ ಉತ । ಅಶ್ವಾ ಇವ ಸಜಿತ್ವರೀರ್ವೀರುಧಃ ಪಾರಯಿಷ್ಣವಃ । ಸೌಂ ಚೌಂ ಹೌಂ ಅಲುಪ್ತ ಶಕ್ತಯೇ ನೇತ್ರತ್ರಯಾಯವೌಷಟ್ ॥ ವೈಶ್ರವಣಾಯ ನಮಃ । ಮೂಲಂ ಪ್ರಣವಂ ಚ ॥ ೧೧ ॥

**ಮಾರ್ಜನೇ–** ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ಆಪೋ ಹಿಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ ॥ ಯೋವಃ ಶಿವತಮೋ ರಸಸ್ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ ॥ ಓಂ ಶ್ಲೀಂ ಪಶು ಹುಂಫಟ್ ಅನಂತಶಕ್ತಯೇ ಅಸ್ತ್ರಾಯಫಟ್ । ವಿಶ್ವೇಭ್ಯೋ ದೇವೇಭ್ಯೋ ನಮಃ । ಮೂಲಂ ಪ್ರಣವಂ ಚ ॥ ೧೨ ॥

**ಅಕ್ಷತೋದಕೇ–** ಓಂ ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ । ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹೀ । ತನ್ನೋ ರುದ್ರಃ ಪ್ರಚೋದಯಾತ್ । ಓಂ ಆಂ ಈಂ ಊಂ ವ್ಯೋಮ ವ್ಯಾಪಿನೇ ಓಂ ವೌಷಟ್ ।(ವ್ಯೋಮವ್ಯಾಪಿ ದಶಾಕ್ಷರಂ) ನಿರ್ಋತಯೇ ನಮಃ । ಮೂಲಂ ಪ್ರಣವಂ ಚ ॥ ೧೩ ॥

**ರತ್ನೋದಕೇ–** ಓಂ ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋರ್ದ್ಯೌಃ ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾ ತ್ತಥಾ ಲೋಕಾಂ ಅಕಲ್ಪಯನ್ । ತನ್ಮಹೇಶಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹೇ । ತನ್ನಃ ಶಿವಃ ಪ್ರಚೋದಯಾತ್ ॥ ಓಂ ಆಂ ಈಂ ಊಂ ವ್ಯೋಮವ್ಯಾಪಿನೇ ಓಂ ವೌಷಟ್ । ಬ್ರಹ್ಮಣೇ ನಮಃ । ಮೂಲಂ ಪ್ರಣವಂ ಚ ॥ ೧೪ ॥

**ಲೋಹೋದಕೇ–** ಓಂ ಸಪ್ತಾಸ್ಯಾಸನ್ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ । ದೇವಾ ಯದ್ಯಜ್ಞಂ ತನ್ವಾನಾ ಅಬಧ್ನಂ ಪುರುಷಂ ಪಶುಂ ॥ ವ್ಯೋಮ ವ್ಯೋಮಾಯ ವಿದ್ಮಹೇ ವ್ಯೋಮೇಶ್ವರಾಯ ಧೀಮಹೇ । ತನ್ನೋ ವ್ಯೋಮಃ ಪ್ರಚೋದಯಾತ್ ॥ ವ್ಯೋಮವ್ಯಾಪಿ ದಶಾಕ್ಷರಂ ॥ ವಸುಭ್ಯೋ ನಮಃ । ಮೂಲಂ ಪ್ರಣವಂ ಚ ॥ ೧೫ ॥

**ಗಂಧೋದಕೇ–** ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ಉರ್ವಾರುಕಮಿವ ಬಂಧನಾನ್ಮೃತ್ಯೋ ರ್ಮುಕ್ಷೀಯ ಮಾಮೃತಾತ್ । ವಜ್ರಣೇ ವಜ್ರಧರಾಯ ಸ್ವಾಹಾ । ಸ್ವತಂತ್ರಾಯ ಕವಚಾಯಹುಂ। ಗಂಧರ್ವೇಭ್ಯೋ ನಮಃ ॥ ಮೂಲಂ ಪ್ರಣವಂ ಚ ॥ ೧೬ ॥

**ಯವೋದಕೇ–** ಓಂ ಇದಂ ವಿಷ್ಣು ರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಢ ಮಸ್ಯಪಾಂ ಸುರೇ ॥ ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ । ವೀರಾನ್ಮನೋ ರುದ್ರಭಾ ಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮ ತೇ ॥ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮ ಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ॥ ದುರ್ಗಾಯೈ ॥ ೧೭ ॥

ಎಲ್ಲಾ ಕಲಶಗಳ ಅಭಿಷೇಕಾ ನಂತರದಲ್ಲಿ ದ್ರೋಣ ಕಲಶದಿಂದ ಯಜ್ಞಾ ಯಜ್ಞಾ ವಃ, ಪುರುಷ ಸೂಕ್ತ, ಶ್ರೀರುದ್ರ ವ್ಯೋಮವ್ಯಾಪಿ ಮಂತ್ರಗಳಿಂದ ಅಭಿಷೇಕಿಸಿ ಎಲ್ಲವನ್ನೂ ಹೇಳಿದಂತೆ ಮಾಡಬೇಕು.

* * * *

## ಏಕೋನಪಂಚಾಶತ್ಕಲಶಕ್ರಮಃ

ಹತ್ತು ರೇಖೆಯ ಒಂಭತ್ತುಪುಟದ ಕ್ಷೇತ್ರದಲ್ಲಿ ಮಧ್ಯದಲ್ಲಿ ಒಂಭತ್ತು ಪುಟಗಳಿಂದ ಅಷ್ಟದಳ ಕಮಲವನ್ನು ಬರೆದು ದಳ ಕರ್ಣಿಕೆಗಳಲ್ಲಿ ಹಿಂದೆ ಹೇಳಿದ ಕ್ರಮದಂತೆ ಒಂಭತ್ತು ಕಲಶಗಳನ್ನು, ಅದರ ಹೊರಭಾಗದಲ್ಲಿ ವೀಥಿಯ ನಾಲ್ಕು (ಪೂರ್ವಾದಿ) ದಿಕ್ಕುಗಳಲ್ಲಿ ಆರು, ವಿದಿಕ್ಕುಗಳಲ್ಲಿ ನಾಲ್ಕು ಹೀಗೆ ನಲವತ್ತೊಂಭತ್ತು ಕಲಶಗಳನ್ನಿಡಬೇಕು. ಇಲ್ಲಿ ಮಧ್ಯದಲ್ಲಿರುವ ಹದಿನಾರು ಪುಟಗಳಿಂದ ವೀಥಿಯನ್ನು ಕಲ್ಪಿಸಬೇಕು. ಮಧ್ಯದ ದಳ ಕಲಶಗಳಲ್ಲಿ ಪೂರ್ವಾದಿ ಪ್ರದಕ್ಷಿಣ ಕ್ರಮದಿಂದ ಆಜ್ಯ ಮೊದಲಾಗಿ ಯವೋದಕವು ಕೊನೆಯಾದ ಒಂಭತ್ತು ದ್ರವ್ಯಗಳು ಹೊರಗಿನ ಮಾನುಷಾವರಣದಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ಇರುವ ಆರರಲ್ಲಿ ಆಗ್ನೇಯಾದಿಕೋಣದಲ್ಲಿರುವ ನಾಲ್ಕರಲ್ಲಿ, ಮಧ್ಯದ ಕಲಶದಲ್ಲಿ ಪಾದ್ಯ ದ್ರವ್ಯ ಮೊದಲಾಗಿ ಕಷಾಯ ಕೊನೆಯಾದ ಎಂಟು ದ್ರವ್ಯಗಳನ್ನು ಆಯಾಯ ಮಂತ್ರಗಳಿಂದ ಅದಕ್ಕೆ ಸಂಬಂದಿಸಿದ ಉಪಕಲಶಗಳಲ್ಲಿ ಪ್ರಣವದಿಂದ ಶುದ್ಧ ಜಲವನ್ನು ತುಂಬಿಸಬೇಕು.

* * * *

## ಅಧಮೋತ್ತಮ ವಿಧಿಃ

ಎಂಭತ್ತೊಂದು ಕಲಶದ ಕ್ರಮವು. ಹನ್ನೆರಡು ರೇಖೆಯ ಹನ್ನೊಂದು ಪುಟದ ಮಂಡಲದಲ್ಲಿ ಮಧ್ಯೆ ಒಂಭತ್ತು ಪದಗಳಲ್ಲಿ ಕಮಲವನ್ನು ಬರೆದು ಅಲ್ಲಿ ಹಿಂದೆ ಹೇಳಿದಂತೆ ಒಂಭತ್ತು ಕಲಶಗಳು. ಅದರ ಸುತ್ತಲೂ ವೀಥಿಯ ಹೊರಗೆ ದಿಕ್ಕು ವಿದಿಕ್ಕುಗಳಲ್ಲಿ ಎಂಟು ನವಕಗಳನ್ನು ಮಾಡಬೇಕು. ಅವುಗಳಲ್ಲಿ ಹಿಂದೆ ಹೇಳಿದ ಕ್ರಮದಿಂದ ಮಧ್ಯೆ ದೈವಿಕದಲ್ಲಿಯೂ ಆಜ್ಯ ಮೊದಲಾಗಿ ಯವೋದಕವೇ ಕೊನೆಯಾದ ದ್ರವ್ಯಗಳನ್ನು ಮಾನುಷಾವರಣದಲ್ಲಿ ದಿಕ್ಕೋಣ ಕ್ರಮದಿಂದ ಖಂಡದಲ್ಲಿರುವ ಮಧ್ಯದ ಕಲಶದಲ್ಲಿ ಪಾದ್ಯಾದಿಯಾಗಿ ಕಷಾಯಾಂತವಾದ ದ್ರವ್ಯಗಳನ್ನು ಆಯಾಯ ಮಂತ್ರಗಳಿಂದ ಉಳಿದ ಕಲಶಗಳಲ್ಲಿ ಪ್ರಣವದಿಂದ ಶುದ್ಧಜಲವನ್ನು ತುಂಬಿಸಬೇಕು. ಹೀಗೆ ಅಧಮತ್ರಯವು.

## ಮಧ್ಯಮಾಧಮ

ಹದಿನಾರು ರೇಖೆಯ ಹದಿನೈದು ಪುಟದ ಮಂಡಲದಲ್ಲಿ ನಡುವೆ ಹದಿನೇಳು ಪದಗಳಿಂದ ಇಪ್ಪತ್ತೈದು ಕಲಶಗಳನ್ನು ಮಾಡಬೇಕು. ಅದರ ಹೊರಭಾಗದಲ್ಲಿ ದಿಕ್ಕು ವಿದಿಕ್ಕುಗಳಲ್ಲಿ ಒಂಭತ್ತರ ಎಂಟು ಗುಂಪುಗಳನ್ನು ಮಾಡಬೇಕು. ಅಜ್ಯಾದಿ ಕಷಾಯಾಂತವಾಗಿ ಹದಿನೇಳು ದ್ರವ್ಯಗಳಿಂದ ಮಧ್ಯೆ ಅಧಮಾಧಮವನ್ನು ಹಿಂದಿನಂತೆ ತುಂಬಿಸಿ, ಹೊರಗೆ ದಿಕ್ಕುವಿದಿಕ್ಕುಗಳಲ್ಲಿನ ನವಕಗಳಿಂದ ಪ್ರಣವದಿಂದ ಗುಳ ಇಕ್ಷು ನಾಳಿಕೇರೋದಕ ತೈಲ ಶಾಂತಿಜಲ, ಮಂಗಲಜಲ, ಮೃಜ್ಜಲ, ಭಸ್ಮೋದಕಗಳಿಂದ ತುಂಬಿಸಬೇಕು. ಕಂ ಎಂಬ ಬ್ರಾಹ್ಮ ಬೀಜದಿಂದ (ಓಂ ಕಂ ನಮಃ) ತುಂಬಬೇಕು. ಪರಿಕಲಶಗಳನ್ನು ಪ್ರಣವದಿಂದ ಶುದ್ಧಜಲವನ್ನು ತುಂಬಿಸಬೇಕು. ಬ್ರಹ್ಮಕಲಶದಲ್ಲಿ ತುಪ್ಪ ಯಾ ಪಂಚಗವ್ಯವನ್ನು ತುಂಬಿಸುವ ಸಂದರ್ಭ ಅದನ್ನೇ ಶಂಖದಲ್ಲಿ ತೆಗೆದುಕೊಂಡು ಅದರಲ್ಲಿ ಕಲಾವಾಹನೆ ತತ್ತ್ವಾವಾಹನೆಗಳನ್ನು ಮಾಡಿ ಕುಂಭದಲ್ಲಿ ಹಾಕಬೇಕು.

## ಅಭಿಷೇಕ ಮಂತ್ರಾಃ

ತ್ವಂ ವಿಷ್ಣೋಃ ಸುಮತಿಂ ವಿಶ್ವಜನ್ಯಾ ಮಪ್ರಯುತಾಮೇವ ಯಾ ವೋ ಮತಿಂ ದಾಃ । ಪರ್ಚೋರ್ಣ ಯಥಾ ನಃ ಸುವಿತಸ್ಯ ಭೂರೇರಶ್ವಾವತಃ ಪುರುಶ್ಚಂದ್ರಸ್ಯ ರಾಯಃ ॥ ಈಶಾನಾದಿ ಸದ್ಯೋಜಾತ ಪರ್ಯಂತವಾಗಿ ಮೂಲಪ್ರಣವವನ್ನು ಹೇಳಿ ಗುಳದಿಂದ (ಬೆಲ್ಲ), ಕಬ್ಬಿನ ಹಾಲು(ಇಕ್ಷುಜಲ), ನಾಳಿಕೇರ ಜಲದಿಂದ ಅಭಿಷೇಕ ಮಾಡಬೇಕು. ಪುನಃ– ತ್ವಂ ವಿಷ್ಣೋಃ * * ಈಶಾನಃ ಸರ್ವವಿದ್ಯಾನಾ ಮೊದಲಾಗಿ ಮೂಲ ಪ್ರಣವವನ್ನು ಹೇಳಿ ಉತ್ತರದಲ್ಲಿರುವ ತೈಲದಿಂದ ಅಭಿಷೇಕಿಸಬೇಕು. ಪುನಃ– ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ * * ತತ್ಪುರುಷಾಯ ವಿದ್ಮಹೇ * * ಮೂಲ ಪ್ರಣವವನ್ನು ಹೇಳಿ ಅಗ್ನಿಖಂಡದಲ್ಲಿರುವ ಶಾಂತಿಜಲದಿಂದ ಅಭಿಷೇಕಿಸಬೇಕು. ಶಂ ನೋ ಹೇವಿರಭಿಷ್ಟಯೇ * * ಅಘೋರೇಭ್ಯೋರಥ * * ಮೂಲಂ ಪ್ರಣವವನ್ನೂ ಹೇಳಿ, ನಿರ್ಋತಿ ಖಂಡದ ಮಾಂಗಲ್ಯ ಜಲದಿಂದ ಅಭಿಷೇಕ ಮಾಡಬೇಕು.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥ ಮೃತ್ತಿಕೇ ದೇಹಿಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಂ ॥ ವಾಮದೇವಾಯ ನಮೋ * * ಮೂಲ ಪ್ರಣವವನ್ನು ಹೇಳಿ ವಾಯು ಖಂಡದಲ್ಲಿರುವ ಮೃಜ್ಜಲದಿಂದ ಅಭಿಷೇಕ ಮಾಡಬೇಕು.

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಶಿರಸಾ ಧಾರಿತೇ ದೇವಿ ರಕ್ಷಸ್ವ ಮಾಂ ಪದೇ ಪದೇ ॥**

ಸದ್ಯೋಜಾತಂ ಪ್ರಪದ್ಯಾಮಿ * * ಮೂಲ ಪ್ರಣವವನ್ನು ಹೇಳಿ ಈಶಾನ್ಯ ಖಂಡದಲ್ಲಿರುವ ಭಸ್ಮ ಜಲದಿಂದ ಅಭಿಷೇಕಿಸಬೇಕು. ಅಲ್ಲಲ್ಲಿರುವ ಉಪಕಲಶಗಳಿಂದ ಆಯಾಯ ದ್ರವ್ಯಕಲಶದ ಜೊತೆಯಲ್ಲಿ(ಸಮನಂತರದಲ್ಲಿ) ಅಭಿಷೇಕಿಸಬೇಕು. ಆಜ್ಯ ಮೊದಲಾಗಿ ಯವೋದಕ ಪರ್ಯಂತವಾದ ಹದಿನೇಳು ದ್ರವ್ಯಗಳಿಂದ ಅಭಿಷೇಕಾ ನಂತರದಲ್ಲಿ ಗುಳ ಮೊದಲಾದ ದ್ರವ್ಯಗಳಿಂದ ಅಭಿಷೇಕ ಮಾಡಿ ದ್ರೋಣ ಕಲಶದಿಂದ ಅಭಿಷೇಕಿಸಬೇಕು. ಇತಿ ಮಧ್ಯಮಾಧಮ ಪ್ರಕಾರಃ ॥

* * * *

## ಮಧ್ಯಮ ಮಧ್ಯಮ ಮಧ್ಯಮೋತ್ತಮಪದ ಕ್ಲೃಪ್ತಿಃ

ಇಪ್ಪತ್ತು ಗೆರೆಯ ಮಂಡಲದಲ್ಲಿ ಒಳಗೆ ಒಂಭತ್ತು ಪದಗಳಿಂದ ನಲವತ್ತೊಂಭತ್ತು ಕಲಶಗಳನ್ನು ಮಾಡಿ ಅದರ ಸುತ್ತಲೂ ಎರಡು ಸಾಲುಗಳಿಂದ ವೀಥಿಯನ್ನು ಮಾಡಿ ದಿಕ್ಕುಗಳಲ್ಲಿ ವಿದಿಕ್ಕುಗಳಲ್ಲಿ ಅಂತರಾಳಗಳಲ್ಲಿ ಹದಿನಾರು ಐದರ ಗುಂಪನ್ನು ಮಾಡಬೇಕು. ಹೀಗೆ ಮಧ್ಯಮ ಮಧ್ಯಮದಲ್ಲಿ ಪದದ ಕ್ರಮವು. ಮಧ್ಯಮೋತ್ತಮದಲ್ಲಿಯಾದರೂ ಇಪ್ಪತ್ತು ರೇಖೆಯ ಮಂಡಲದ ಒಳಗೆ ಹನ್ನೊಂದು ಪದಗಳಿಂದ ಎಂಭತ್ತೊಂದು ಕಲಶಗಳನ್ನು ಮಾಡಿ ಅದರ ಸುತ್ತಲೂ ಒಂದು ಸಾಲಿನಿಂದ ವೀಥಿಯನ್ನು ಮಾಡಿ ಅದರ ಹೊರಗೆ ದಿಕ್ಕು ವಿದಿಕ್ಕು ಅಂತರಾಳಗಳಲ್ಲಿ ಹದಿನಾರು ಒಂಭತ್ತು ಗುಂಪುಗಳನ್ನು ಮಾಡಬೇಕು. ಹೀಗೆ **ಮಧ್ಯಮೋತ್ತಮದಲ್ಲಿ** ಪದಕ್ರಮವು. ಎರಡೂ ಕಡೆ ಅಂತರಾಳಗಳಲ್ಲಿ ವೈಷ್ಣವಾಕ್ಷರದಿಂದ ಗಂಧೋದಕದಿಂದ ತುಂಬಬೇಕು. ತುಪ್ಪ ಮೊದಲಾಗಿ ಕಷಾಯ ಕೊನೆಯಾದ, ಗುಳಾದಿ ಭಸ್ಮಜರಾಂತವಾದ ದ್ರವ್ಯಗಳಿಂದ (ಮೊದಲೇ) ತುಂಬಿಸಬೇಕು. ಹೀಗೆ ಮಧ್ಯಮಮಧ್ಯಮ ಮಧ್ಯಮೋತ್ತಮದಲ್ಲಿ ಕ್ರಮವು.

## ಉತ್ತಮಾಧಮೇ ಉತ್ತಮ ಮಧ್ಯಮೇಚ ಪದಕ್ಲೃಪ್ತಿಃ

ಇಪ್ಪತ್ತನಾಲ್ಕು ರೇಖೆಯ ಇಪ್ಪತ್ತುಮೂರು ಪದದ ಮಂಡಲದಲ್ಲಿ ನಡುವೆ ಹದಿನೈದು ಪದಗಳಿಂದ ಇಪ್ಪತ್ತೈದು ದ್ರವ್ಯದ ನ್ಯಾಯದಂತೆ ನೂರೆಂಟು ಕಲಶಗಳನ್ನು ಮಾಡಿ ಅದರ ಹೊರಗೆ ದಿಕ್ಕಿನಲ್ಲಿ ವಿದಿಕ್ಕುಗಳಲ್ಲಿ ಅಂತರಾಳಗಳಲ್ಲಿ ಹದಿನಾರು ಪಂಚಕಗಳನ್ನು ಮಾಡಬೇಕು. ಇದು ಉತ್ತಮಾಧಮದಲ್ಲಿ. ಉತ್ತಮ ಮಧ್ಯಮದಲ್ಲಿಯಾದರೂ ದಿಕ್ಕು(ಕೋಣ)ವಿದಿಕ್ಕು ಅಂತರಾಳಗಳಲ್ಲಿ ಹದಿನಾರು ನವಕಗಳನ್ನು ಮಾಡಬೇಕು. ಎರಡೂ ಕಡೆಯಲ್ಲಿ ಸತ್ಯಕಾದಿ ಅಂತರಾಳಗಳಲ್ಲಿ ಎಂಟು ಮೂರರ ಗುಂಪುಗಳನ್ನು ಮಾಡಬೇಕು. ಹೀಗೆ ಉತ್ತಮಾಧಮದಲ್ಲಿ ಉತ್ತಮ ಮಧ್ಯಮಗಳಲ್ಲಿ ಪದಕ್ರಮವು.

* * * *

## ಉತ್ತಮೋತ್ತಮೇಪದಕ್ಲೃಪ್ತಿಃ

ಇಪ್ಪತ್ತಾರು ರೇಖೆಯ ಇಪ್ಪತ್ತೈದು ಪದಗಳ ಮಂಡಲದ ನಡುವೆ ಹದಿನೈದು ಪದಗಳಿಂದ ಇಪ್ಪತ್ತೈದು ದ್ರವ್ಯಗಳ ಕ್ರಮದಿಂದ ನೂರ ಎಂಟು ಕಲಶಗಳನ್ನು ಮಾಡಿ ಅದರ ಸುತ್ತಲೂ ಒಂದು ಪಂಕ್ತಿಯಿಂದ ವೀಥಿಯನ್ನು ಮಾಡಿ ಅದರ ಹೊರಗೆ ದಿಕ್ಕುಗಳಲ್ಲಿ ಹನ್ನೆರಡು, ವಿದಿಕ್ಕುಗಳಲ್ಲಿ ಹದಿನಾರು, ಅಂತರಾಳಗಳಲ್ಲಿಯೂ ಹನ್ನೆರಡು ಸತ್ಯಕಾದಿ ಅಂತರಾಳಗಳಲ್ಲಿ ಎಂಟು ನಾಲ್ಕರ ಗುಂಪನ್ನು ಮಾಡಬೇಕು. ಹೀಗೆ ಉತ್ತಮೋತ್ತಮೇ ಪದಕ್ಲೃಪ್ತಿಃ ॥ ಉತ್ತಮತ್ರಯದಲ್ಲಿ ದ್ರವ್ಯಪೂರಣ ಕ್ರಮವು. ಅಲ್ಲಿ ನಡುವೆ ನೂರ ಎಂಟರಲ್ಲಿ ಹಿಂದೆ ಹೇಳಿದಂತೆ ಆಜ್ಯ ಮೊದಲಾಗಿ ಕಷಾಯ ಪರ್ಯಂತವಾದ ದ್ರವ್ಯಗಳಿಂದ ತುಂಬಿಸಿ ಅಲ್ಲಿ ಅಂತರಾಳದಲ್ಲಿರುವವುಗಳಲ್ಲಿ ಪಂಚಬ್ರಹ್ಮಾಂಗಗಳಿಂದ (ಸಮಸ್ತಗಳಿಂದಲೂ) ಬಲಾ, ವಚಾ, ಅತಿಬಲಾ, ಶಂಖಪುಷ್ಪೀ, ಸಕ್ಷೂದಕ, ಸಿಂಹಿಕಾ, ವ್ಯಾಘ್ರೀ, ಕುಶೋದಕ ಹೀಗೆ ಎಂಟು ದ್ರವ್ಯಗಳನ್ನು ತುಂಬಿಸಬೇಕು. ಅದರ ಹೊರಗೆ ದಿಕ್ಕು ವಿದಿಕ್ಕುಗಳಲ್ಲಿ ಹನ್ನೆರಡು ಮೊದಲಾದುವುಗಳಲ್ಲಿ ಹಿಂದೆ ಹೇಳಿದಂತೆ ಗುಡ ಮೊದಲಾದುವನ್ನು ತುಂಬಿಸಿ, ಸತ್ಯಕಾದಿಗಳಲ್ಲಿರುವ ನಾಲ್ಕು ಪದಗಳಲ್ಲಿ ವೈಷ್ಣವಾಷ್ಟಾಕ್ಷರದಿಂದ ಕ್ರಮವಾಗಿ ನದೀ, ಸಮುದ್ರ, ವಾಪೀ, ಅಂಧುವರ್ಷಾಹಿಮತೀರ್ಥ ನಿರ್ಝರದ ನೀರುಗಳನ್ನು ತುಂಬಿಸಬೇಕು. ಪುನಃ ಅಂತರಿಕ್ಷಾದಿಗಳಲ್ಲಿರುವ ದ್ವಾದಶಾದಿಗಳಲ್ಲಿ ನಿಜಮೂಲಮಂತ್ರದಿಂದ ನೀವಾರ ಮೊದಲಾದ ಬೀಜಗಳನ್ನು, ಸ್ವರ್ಣ ತಿಲ ದೂರ್ವಾ ಶಾಲೀ ತಂಡುಲ ಕ್ಷಪಾಮಂಜೂಷ ಪುಷ್ಪಗಳನ್ನು ಕ್ರಮವಾಗಿ ತುಂಬಿಸಬೇಕು. ಮೂರು ಬಗೆಯ ಉತ್ತಮ ಪ್ರಕಾರಗಳಲ್ಲಿ ದ್ರವ್ಯ ಪೂರಣ ಕ್ರಮವು ಹೇಳಲ್ಪಟ್ಟಿತು. ಪುನಃ ಬೆಳಿಗ್ಗೆ ಆಯಾಯ ಪೂರಣ ಮಂತ್ರ ಆ ಕಲಶಗಳಿಂದ ಅಭಿಷೇಕವನ್ನು ಮಾಡಬೇಕು.

* * * *

## ದ್ರೋಣಕಲಶ ಪ್ರಕಾರಃ

ಒಂಭತ್ತು ಬಗೆಯಲ್ಲಿ ಹೇಳಲ್ಪಟ್ಟ ಶಂಕರನಾರಾಯಣನ ಕಲಶ ವಿಧಾನದಲ್ಲಿ ಕಲಶ ಮಂಡಲದ ಉತ್ತರಭಾಗದಲ್ಲಿ ಅಷ್ಟದಳ ಪದ್ಮದಲ್ಲಿ ಪೀಠವನ್ನು ಮಾಡಿ ದೊಡ್ಡ ಗಾತ್ರದ ಕಲಶವನ್ನಿರಿಸಿ, ಪೀಠಪೂಜೆ ಮೊದಲಾಗಿ ಕುಂಭ ಸಂಸ್ಕಾರಗಳನ್ನು ಮಾಡಿ ಎಲ್ಲಾ ಮಂತ್ರಗಳಿಂದ ಎಲ್ಲಾ ದ್ರವ್ಯಗಳನ್ನು ಹಾಕಿ ಅಷ್ಟಗಂಧೋದಕದಿಂದ ತುಂಬಿಸಿ ಕ್ರಮದಂತೆ ಪೂಜಿಸಿ ಎಲ್ಲಾ ಕಲಶಾಭಿಷೇಕದ ಕೊನೆಯಲ್ಲಿ ಯಜ್ಞಾಯಜ್ಞಾವೋ * * ಪುರುಷಸೂಕ್ತ ಶ್ರೀ ರುದ್ರವ್ಯೋಮ ವ್ಯಾಪಿ ಮಂತ್ರಗಳಿಂದ ಅಭಿಷೇಕವನ್ನು ಮಾಡಬೇಕು.

## ಶೈವ ಕಲಶಪ್ರಕಾರಃ

ಹದಿನೇಳು ದ್ರವ್ಯಗಳಿಂದ ಇಪ್ಪತ್ತೈದು ದ್ರವ್ಯಗಳಿಂದಲೂ ಪುನಃ ಕ್ರಮವಾಗಿ ತೈಲಾದಿಗಳಿಂದ, ಗಂಧ ಮೊದಲಾದುವುಗಳಿಂದ, ಕರ್ಪೂರ ಮೊದಲಾದುವುಗಳಿಂದ ಕೂಡಿದ ಇಪ್ಪತ್ತೈದು ದ್ರವ್ಯಗಳಿಂದ ಅಭಿಷೇಕ ಪ್ರಕಾರವು ವಿವರಿಸಲ್ಪಡುತ್ತದೆ. ಸಪ್ತದಶ ದ್ರವ್ಯಗಳ ಮಂಡಲವನ್ನು ಬರೆದು ಬ್ರಹ್ಮಕಲಶದಲ್ಲಿ ಶಾಂತಿ ಜಲವು ಹೊರಗೆ ಮಾನುಷಾವರಣದಲ್ಲಿ ಪೂರ್ವಾದಿ ಕ್ರಮದಿಂದ ಪಂಚಗವ್ಯ, ಹಾಲು, ಮೊಸರು, ತುಪ್ಪ, ಜೇನು, ರತ್ನ, ಕುಶ ಜಲ, ಗಂಧಜಲ– ಹೀಗೆ ಆಯಾಯ ಮಂತ್ರಗಳಿಂದ ತುಂಬಿಸಬೇಕು. ದೈವಾವರಣ (ದಲಕಲಶದಲ್ಲಿ)– ಪೂರ್ವಾದಿಕ್ರಮದಿಂದ ಲವಣ ಗುಡ ಸುರಾಸರ್ಪಿ ದಧಿ ಕ್ಷೀರ ಶುದ್ಧಜಲ(ದ ಹೆಸರಿನ ಸಮುದ್ರಗಳನ್ನು ಸಂಕಲ್ಪಿಸಿ) ನಿಜಮಂತ್ರಗಳಿಂದ ಶುದ್ಧಜಲದಿಂದ ತುಂಬಿಸಬೇಕು. ಬ್ರಹ್ಮಕಲಶದಲ್ಲಿ– ಈಶಾನಾಯ ನಮಃ– ಇದು ಮಂತ್ರವು. ಪಂಚಗವ್ಯ ಮೊದಲಾದ ಎಂಟು ದ್ರವ್ಯಗಳಲ್ಲಿ– ಸಾವಿತ್ರ್ಯೈ । ಸೋಮಾಯ । ರುದ್ರಾಯ । ಅಗ್ನಯೇ । ಸ್ಕಂದಾಯ । ವೈಶ್ರವಣಾಯ । ಸಪ್ತಋಷಿಭ್ಯೋ । ಇಂದ್ರಾಯ । ಇದು ಪೂರಣ ಮಂತ್ರಗಳು. ಕ್ಷೀರ ಮೊದಲಾಗಿ ಎಂಟು ಸಮುದ್ರಗಳಲ್ಲಿ– ವರುಣಾಯ ನಮಃ– ಎಂದು ಮಂತ್ರವು.

## ಅಭಿಷೇಕ ಮಂತ್ರಗಳು–

ಪಂಚಗವ್ಯೇ– ಸದ್ಯೋಜಾತಾದಿ ಮಂತ್ರಃ । ಕ್ಷೀರೇ– ಆಪಾಯಸ್ವ ಸಮೇತು ತೇ– ಇತಿ ಮಂತ್ರಃ । ದಧ್ನಿ– ದಧಿಕ್ರಾವ್ಣೋ ಅಕಾರಿಷಂ– ಇತಿ ಮಂತ್ರಃ । ಆಜ್ಯೇ– ತೇಜೋಽಸಿ ತೇಜೋನುಪ್ರೇಹಿ– ಇತಿ ಮಂತ್ರಃ । ಮಧುನಿ– ಮಧುವಾತಾ ಋತಾಯತೇ– ಇತ್ಯಾದಿ ಮಂತ್ರಃ । ರತ್ನೇ– ಆಸತ್ಯೇನ ರಜಸಾ ವರ್ತಮಾನಃ– ಇತಿ ಮಂತ್ರಃ । ಕುಶಜಲೇ– ದೇವಸ್ಯತ್ವಾ ಸವಿತುಃ– ಇತಿ ಮಂತ್ರಃ । ಗಂಧಜಲೇ– ಗಂಧದ್ವಾರಾಂ ದುರಾದರ್ಷಾಂ– ಇತಿ ಮಂತ್ರಃ । ಎಂಟು ಸಮುದ್ರಗಳಲ್ಲಿ– ಸಮುದ್ರಜ್ಯೇಷ್ಠಾಃ ಸಲಿಲಸ್ಯ– ಇತ್ಯಾದಿ ಮಂತ್ರಾಃ । ಬ್ರಹ್ಮಕಲಶೇ– ವ್ಯೋಮವ್ಯಾಪಿ ಮಂತ್ರಃ । ಇತಿ ಸಪ್ತದಶದ್ರವ್ಯದ್ರವ್ಯಪ್ರಕಾರಃ ॥ ಇಲ್ಲಿ ಪ್ರದಕ್ಷಿಣ ಕ್ರಮದಿಂದ ಮಾನುಷ ದೈವ ಬ್ರಹ್ಮಕಲಶಗಳಿಂದ ಅಭಿಷೇಕ ಕ್ರಮವು. ಅಭಿಷೇಕದಲ್ಲಿ ಎಲ್ಲಾ ಕಡೆಗಳಲ್ಲೂ ಮೂಲಪ್ರಣವ ದ್ರವ್ಯದೇವತೆಗಳ ಸೇರುವಿಕೆಯು ಇಲ್ಲಿಯೂ ಸರಿಸಮನಾಗಿದೆ.

## ಪಂಚವಿಂಶತಿ ದ್ರವ್ಯಪ್ರಕಾರಃ

ಅಲ್ಲಿ ಬ್ರಹ್ಮಕಲಶದಲ್ಲಿ– ಈಶಾನಾಯ ನಮಃ– ಈ ಮಂತ್ರದಿಂದ ಸ್ವರ್ಣ ರತ್ನ ಗಂಧ ಜಲಗಳಿಂದ ತುಂಬಬೇಕು. ಅದಕ್ಕೆ ಶಾಂತಿ ಜಲವೆಂದು ಹೆಸರು. **ದೈವಿಕಾವರಣದಲ್ಲಿ** ಪೂರ್ವದಿಕ್ಕಿನಲ್ಲಿ– ಪಿತೃಭ್ಯೋ ನಮಃ ಎಂದು ಪರ್ವತದ ಮಣ್ಣು, ಗರಿಕೆ, ಸಾಸಿವೆ, ಎಳ್ಳುಗಳಿಂದ ತುಂಬಬೇಕು. ಇದಕ್ಕೆ ಪಾದ್ಯವೆಂದು ಹೆಸರು. ದಕ್ಷಿಣದ ದಿಕ್ಕಿನಲ್ಲಿ ಸ್ವಾಹಾಯೈ ನಮಃ– ಎಂದು ತಕ್ಕೋಲ, ಜಾತೀ ಲವಂಗಗಳಿಂದ ತುಂಬಿಸಬೇಕು. ಇದಕ್ಕೆ ಆಚಮನವೆಂದು ಹೆಸರು. ಪಶ್ಚಿಮದಲ್ಲಿ– ಸರಸ್ವತ್ಯೈ ನಮಃ– ಎಂದು ದಧಿ, ಜಲ, ಕ್ಷೀರ, ಅಕ್ಷತ, ಯವ, ತಿಲ, ಸರ್ಷಪ, ಕುಶಾಗ್ರಗಳಿಂದ ತುಂಬಬೇಕು. ಇದಕ್ಕೆ ಅರ್ಘ್ಯವೆಂದು ಹೆಸರು. ಪುನಃ ಇನ್ನೊಂದು ಪಾತ್ರೆಯಲ್ಲಿ ಹೇಳಿದ ಕ್ರಮದಲ್ಲಿ ಗೋಮೂತ್ರಾದಿ ಪಂಚಗವ್ಯವನ್ನು ಸೇರಿಸಿ, ಉತ್ತರ ದಿಕ್ಕಿನಲ್ಲಿ– ಸಾವಿತ್ರ್ಯೈ ನಮಃ ಎಂದು ಆ ಪಂಚಗವ್ಯದಿಂದ ತುಂಬಿಸಬೇಕು. ಅಗ್ನಿಕೋಣದಲ್ಲಿ– ಅಗ್ನಯೇ ನಮಃ ಎಂದು ಘೃತ(ತುಪ್ಪ)ವನ್ನು ತುಂಬಬೇಕು. ನಿರ್ಋತಿಕೋಣದಲ್ಲಿ– ಷಣ್ಮುಖಾಯ ನಮಃ ಎಂದು ಜೇನಿನಿಂದ ತುಂಬಬೇಕು. ವಾಯು ಕೋಣದಲ್ಲಿ– ಸೋಮಾಯ ನಮಃ ಎಂದು ಹಾಲಿನಿಂದ ತುಂಬಿಸಬೇಕು. ಈಶಕೋಣದಲ್ಲಿ– ರುದ್ರಾಯ ನಮಃ ಎಂದು ಮೊಸರಿನಿಂದ ತುಂಬಿಸಬೇಕು. ಪುನಃ **ಮಾನುಷಾವರಣದಲ್ಲಿ** ಪೂರ್ವದಿಕ್ಕಿನಲ್ಲಿ– ದುರ್ಗಾಯೈ ನಮಃ ಎಂದು ಕಬ್ಬಿನ ರಸ (ಇಕ್ಷುಜಲ)ದಿಂದ ತುಂಬಿಸಬೇಕು. ದಕ್ಷಿಣದಲ್ಲಿ– ಗಣಪತಯೇ ನಮಃ– ಎಂದು ಭವ್ಯಶ್ರೀಬೀಜಾಪೂರ ಆಮಲಕ ದಾಡಿಮ ಪನಸ ಕದಲೀ ನಾಳಿಕೇರ ಆಮ್ರ– ಈ ಫಲಗಳಿಂದ ತುಂಬಬೇಕು. ಇದಕ್ಕೆ ಫಲೋದಕವೆಂದು ಹೆಸರು. ಪಶ್ಚಿಮದಿಕ್ಕಿನಲ್ಲಿ– ವಿದ್ಯೇಶ್ವರಾಯ ನಮಃ– ಎಂದು ಅಶ್ವತ್ಥ ಉದುಂಬರ ವಟ ಶಿರೀಷ ಪನ ಸಮಧೂಕ ದ್ವಿಜ, ಆಮ್ರ– ಈ ಮರದ ತೊಪ್ಪೆಗಳಿಂದ ಕಷಾಯವನ್ನು ಮಾಡಿ ಅದರಿಂದ ತುಂಬಿಸಬೇಕು. ಉತ್ತರದಲ್ಲಿ– ಜ್ಯೇಷ್ಠಾಯೈ ನಮಃ– ಎಂದು ಸಕ್ತೂದಕೇನ(ಅರಳುಪುಡಿ) ತುಂಬಿಸಬೇಕು. ಅಗ್ನಿಕೋಣದಲ್ಲಿ– ಇಂದ್ರಾಯ ನಮಃ ಎಂದು ಚಂದನ ಕುಂಕುಮ ಸೇವ್ಯ ಅಂಬು ಅಗರು ಮುರ ಗದ ಮಾಂಸಿ ಈ ಪುಡಿಯ ಅಷ್ಟಗಂಧಗಳಿಂದ ತುಂಬಿಸಬೇಕು. ನಿರ್ಋತಿ ಕೋಣದಲ್ಲಿ– ವಿಷ್ಣವೇ ನಮಃ ಎಂದು ಜಾತೀ ನಚಿದ್ಯಾವರ್ತ (ಎರಡು ಬಗೆ) ಮಲ್ಲಿಕಾ ಚಂಪಕಾ ಬಕುಲ ಸೌಗಂಧಿಕ ಪದ್ಮಗಳಿಂದ ತುಂಬಿಸಬೇಕು. ವಾಯುಕೋಣದಲ್ಲಿ– ಬ್ರಹ್ಮಣೇ ನಮಃ ಎಂದು ಸ್ವರ್ಣ ಜಲದಿಂದ ತುಂಬಿಸಬೇಕು. ಈಶ ಕೋಣದಲ್ಲಿ– ವೈಶ್ರವಣಾಯ ನಮಃ ಮುಕ್ತಾ ವೈಡೂರ್ಯ ವಜ್ರಮಣಿ, ಮರಕತ ಗೋಮೇದ ಪುಷ್ಯರಾಗ ಇಂದ್ರನೀಲಗಳಿಂದ ತುಂಬಿಸಬೇಕು. ಇಂದ್ರಾಗ್ನಿಯರ ಅಂತರಾಳದಲ್ಲಿ– ವರುಣಾಯ ನಮಃ– ಎಂದು ಮುಕ್ತಾರತ್ನದಿಂದ ತುಂಬಿಸಬೇಕು. ಅಗ್ನಿಯಮರ ಮಧ್ಯೇ– ದಿವಾಕರಾಯ ನಮಃ ಎಂದು ಪ್ರವಾಳ(ಹವಳ)ದಿಂದ ತುಂಬಬೇಕು. ಯಮ ನಿಋತಿಯರ ನಡುವೆ– ವಾಯವೇ ನಮಃ ಎಂದು ಯವೋದಕದಿಂದ ತುಂಬಿಸಬೇಕು. ನಿರ್ಋತಿ ವರುಣರ ಮಧ್ಯೇ– ಯಮಾಯ ನಮಃ ಎಂದು ತಿಲೋದಕದಿಂದ ತುಂಬಬೇಕು. ವಾಯು ವರುಣರ ನಡುವೆ ಶ್ರಿಯೈ ನಮಃ ಎಂದು ದೂರ್ವೋದಕದಿಂದ ತುಂಬಬೇಕು. ವಾಯು ಸೋಮರ ಅಂತರಾಳದಲ್ಲಿ– ಪೃಥಿವ್ಯೈ ನಮಃ ಎಂದು ಉತ್ಪಲ ಜಲದಿಂದ ತುಂಬಿಸಬೇಕು. ಸೋಮ ಈಶಾನರ ನಡುವೆ ಸಪ್ತರ್ಷಿಭ್ಯೋ ನಮಃ– ಎಂದು ಕುಶೋದಕದಿಂದ ತುಂಬಿಸಬೇಕು. ಇಂದ್ರೇಶಾನರ ಮಧ್ಯದಲ್ಲಿ– ವಿಶ್ವೇಭ್ಯೋ ದೇವೇಭ್ಯೋ ನಮಃ ಅಥವಾ ವಿಶ್ವಾಯ ನಮಃ ಎಂದು ಶಾಲ್ಯುದಕದಿಂದ ತುಂಬಿಸಬೇಕು.

**ಅಭಿಷೇಕಮಂತ್ರಾಃ**– ದೈವಿಕದಲ್ಲಿ ದಿಕ್ಕು ವಿದಿಕ್ಕು ಕ್ರಮದಿಂದ ಮಾನುಷದಲ್ಲಿ ದಿಕ್ಕು ವಿದಿಕ್ಕು ಅಂತರಾಳ ಕ್ರಮದಿಂದ ಕೊನೆಯಲ್ಲಿ ಬ್ರಹ್ಮಕಲಶದಿಂದಲೂ ಅಭಿಷೇಕಿಸಬೇಕು. ಪ್ರಣವ ಉಪಚಾರ ಮೂಲಮಂತ್ರಗಳನ್ನು ಎಲ್ಲೆಡೆಯೂ ಹೇಳಬೇಕು. **ಪಾದ್ಯೇ**– ಇದಂ ವಿಷ್ಣುಃ * * ಪಿತೃಭ್ಯೋ ನಮಃ– ಮೂಲಂ ಪ್ರಣವಶ್ಚ ಮಂತ್ರಾಃ ॥ ಶುದ್ಧಜಲದಲ್ಲಿ ದೇವತೆಯ ಹೊರತಾಗಿ ಈ ಮಂತ್ರಗಳು. **ಆಚಾಮಕೇ**– ಆಪಃ ಪುನಂತು * * ಸ್ವಾಹಾಯೈ ನಮಃ ॥ **ಅರ್ಘ್ಯೇ**– ಆಪೋ ಹಿಷ್ಠಾ * * ಸರಸ್ವತ್ಯೈ ನಮಃ ॥ **ಪಂಚಗವ್ಯೇ**– ಅಗ್ನಿಮೀಳೇ * * ಸಾವಿತ್ರ್ಯೈ ನಮಃ ॥ **ಆಜ್ಯೇ**– ಇಷೇತ್ವೋರ್ಜೇತ್ವಾ * * ಅಗ್ನಯೇ ನಮಃ ॥ **ಮಧೌ**– ಮಧುವಾತಾ ಋತಾಯತೇ * * ಷಣ್ಮುಖಾಯ ॥ **ಕ್ಷೀರೇ**– ಆಪ್ಯಾಯಸ್ವ ಸಮೇತು * * ಸೋಮಾಯ ॥

**ದಧ್ನಿ**- ದಧಿಕದ್ರಾವ್ಣೋ ಅಕಾರಿಷಂ- ರುದ್ರಾಯ ॥ **ಇಕ್ಷುಜಲೇ**- ಉಪತ್ವಾಗ್ನೇ ದಿವೇ ದಿವೇ * * ದುರ್ಗಾಯೈ ನಮಃ ॥ **ಫಲೋದಕೇ**- ಮಾನಸ್ತೋಕೇ ತನಯೇ * * ವಿಘ್ನಾಯ ॥ **ಕಷಾಯೇ**- ಅಶ್ವತ್ಥೇವೋ ನಿಷದನಂ * * ವಿದ್ಯೇಶ್ವರಾಯ ॥ **ಸಕ್ತುಜಲೇ**- ಸುಮಿತ್ರ್ಯಾನ ಆಪ ಓಷಧಯಃ * * ಜ್ಯೇಷ್ಠಾಯೈ ॥ ಗಂಧೋದಕೇ- ಅಗ್ನ ಆಯಾಹಿ ವೀತಯೇ * * ಇಂದ್ರಾಯ ॥ **ಪುಷ್ಪೋದಕೇ**- ಪುಷ್ಪಾವತೀಃ ಪ್ರಸೂವರೀಃ * * ವಿಷ್ಣವೇ ॥ **ಸ್ವರ್ಣೋದಕೇ**- ಬ್ರಹ್ಮ ಜಜ್ಞಾನಂ * * ಬ್ರಹ್ಮಣೇ ॥ **ರತ್ನೋದಕೇ**- ಹಿರಣ್ಯವರ್ಣಾಃ ಶುಚಯಃ ಪಾವಕಾ * * ವೈಶ್ರವಣಾಯ ॥ **ಮುಕ್ತೋದಕೇ**- ಸಮುದ್ರಜ್ಯೇಷ್ಠಾಃ ಸಲಿಲಸ್ಯ * * ವರುಣಾಯ ॥ **ವಿದ್ರುಮೋದಕೇ**- ರಕ್ಷೋಹಣಂ ಪಾಜಿನಮಾಜಿಘರ್ಮಿ * * ಆದಿತ್ಯಾಯ ॥ **ಯವೋದಕೇ**- ಓಷಧಯಃ ಸಂವದಂತೇ * * ವಾಯವೇ ॥ **ತಿಲೋದಕೇ**- ಪಿತರಃ ಪಿತಾಮಹಾಃ ಪರೇ * * ದೇವಹೂತ್ಯಾಂ ಯಮಾಯ ॥ **ದೂರ್ವೋದಕೇ**- ಶ್ರಿಯೇ ಜಾತಃ ಶ್ರಿಯ * * ಶ್ರಿಯೈ ॥ **ಉತ್ಪಲೋದಕೇ**- ಜಾತವೇದಸೇ ಸುನವಾಮ ಸೋಮ ** ಪೃಥಿವ್ಯೈ ॥ **ಕುಶೋದಕೇ**- ದೇವಸ್ಯತ್ವಾ ಸವಿತುಃ * * ಸಪ್ತಋಷಿಭ್ಯೋ ॥ **ಶಾಲ್ಯುದಕೇ**- ಆಶುಃ ಶಿಶಾನೋ ವೃಷಭೋ ನ * * ವಿಶ್ವಾಯ ॥ **ಬ್ರಹ್ಮಕಲಶೇ**- ವ್ಯೋಮವ್ಯಾಪಿ ಮಂತ್ರಾಃ ಈಶಾನಾಯ ಎಂದು ಇಪ್ಪತ್ತೈದು ದ್ರವ್ಯಗಳಿಂದ ಕಲಶಪ್ರಕಾರವು.

ತೈಲ ಮೊದಲಾದುವುಗಳಿಂದ ಹದಿನಾರು ದ್ರವ್ಯಗಳಿಂದ ಇಪ್ಪತ್ತೈದು ದ್ರವ್ಯಗಳಿಂದ ಮುನ್ನೂರು ಕಲಶಗಳಾಗುತ್ತವೆ. ಅಥವಾ ಇನ್ನೂರ ಐವತ್ತಮೂರು. ಗಂಧ ಜಲಗಳಿಂದ ತೈಲ ಮೊದಲಾದುವುಗಳಿಂದ ಕೂಡಿದ ಇಪ್ಪತ್ತೈದು ದ್ರವ್ಯಗಳಿಂದ ಮುನ್ನೂರ ಇಪ್ಪತ್ತು ಕಲಶಗಳಾಗುತ್ತವೆ. ಕರ್ಪೂರ ಮೊದಲಾದುವುಗಳಿಂದ ಗಂಧ ಜಲಗಳಿಂದ ತೈಲಾದಿಗಳಿಂದ ಕೂಡಿದ ಇಪ್ಪತ್ತೈದು ದ್ರವ್ಯಗಳಿಂದ ಐನೂರ ಐದು ಕಲಶಗಳಾಗುತ್ತವೆ.

* * * *

## ತೈಲಾದಿಗಳಿಂದ ಕೂಡಿದ ಇಪ್ಪತ್ತೈದು ದ್ರವ್ಯಗಳಲ್ಲಿ

ಮುನ್ನೂರ ಕಲಶಗಳಲ್ಲಿ ಇಪ್ಪತ್ತನಾಲ್ಕು ರೇಖೆಯ ಮಧ್ಯದಲ್ಲಿ ಇಪ್ಪತ್ತೈದು ದ್ರವ್ಯದ ಕ್ರಮದಂತೆ ಹದಿನೈದು ಪದಗಳಿಂದ ನೂರೆಂಟರಂತೆ ಮಂಡಲವನ್ನು ಬರೆದು ಮಧ್ಯದ ಪದ್ಮದ ಹೊರಗೆ ವೀಥಿಯನ್ನು ಮಾಡಿ ಅದರ ಹೊರಭಾಗದಲ್ಲಿ ಸುತ್ತಲೂ ಮೂರು ಪದಗಳಿಂದ ದಿಕ್ಕುಗಳಲ್ಲಿ ಹದಿನೈದು ವಿದಿಕ್ಕುಗಳಲ್ಲಿ ಒಂಭತ್ತು ಅಂತರಾಳಗಳಲ್ಲಿ ಹನ್ನೆರಡು ಕಲಶಗಳನ್ನು ಮಾಡಿ ಉಳಿದ ಪದಗಳನ್ನು ಬಿಡಬೇಕು. ಅಥವಾ ಹಿಂದೆ ಹೇಳಿದ ತೈಲ ದ್ರವ್ಯದಲ್ಲಿ ಇನ್ನೂರ ಐವತ್ತ ಮೂರರ ಹಿಂದೆ ಹೇಳಿದ ಮಂಡಲದಲ್ಲಿ ಒಳಗೆ ಹಿಂದಿನಂತೆ ನೂರ ಎಂಟು ಹೊರಗೆ ಹದಿನಾರು ನವಕವನ್ನು ಮಾಡಬೇಕು. ಉಳಿದ ಪದಗಳನ್ನು ಬಿಡಬೇಕು. ಒಳಗೆ ನೂರೆಂಟು ಕಲಶಗಳನ್ನು ಇಪ್ಪತ್ತೈದು ದ್ರವ್ಯಗಳಿಂದ ಹಿಂದಿನಂತೆ ತುಂಬಿಸಬೇಕು. ಹೊರಗೆ ಕಲಶಗಳನ್ನು ತೈಲ ಮೊದಲಾಗಿ ಹದಿನಾರು ದ್ರವ್ಯಗಳಿಂದ ತುಂಬಿಸಬೇಕು. ತೈಲ, ಗುಡ, ಶರ್ಕರಾ, ನಾಳಿಕೇರರಸ, ತೀರ್ಥ ಜಲ, ಸರಿದ್ವಾರಿ, ತಟಾಕವಾರಿ, ಕೂಪಾಂಬು, ಪೂರ್ವಾದಿ ದಿಕ್ಕುಗಳಲ್ಲಿ ಆಗ್ನೇಯಾದಿ ವಿದಿಕ್ಕುಗಳಲ್ಲಿ ಶರ್ವಾದಿ ಓಜ (ಬೆಸ) ಮಂತ್ರಗಳಿಂದಲೂ ಯುಗ್ಮ ಮಂತ್ರಗಳಿಂದಲೂ ತುಂಬಬೇಕು. ಶರ್ವಾಯ । ಪಶುಪತಯೇ । ಭವಾಯ । ಮಹಾದೇವಾಯ । ರುದ್ರಾಯ । ಈಶಾನಾಯ । ಉಗ್ರಾಯ । ಭೀಮಾಯ । ಇದು ಶರ್ವಾದಿ ಓಜಯುಗ್ಮ ಮಂತ್ರಗಳು. ಪರ್ವತ, ಉಕ್ಷಶೃಂಗ, ಆನೆಯ ದಂತದ್ದು, ಯಜ್ಞವೇದಿ, ಉಳಗದ್ದೆ, ಸವಳು ಭೂಮಿ, ಹೊಳೆಯ ದಡದ್ದು, ಸಮುದ್ರದ್ದು ತೀರ್ಥದ ಸಂಗ್ರಹಿಸಿದ ಮಣ್ಣಿನಿಂದ ಅನಂತಾದಿ ಮಂತ್ರಗಳಿಂದ ಭೃಶ ಮೊದಲಾದ ಅಂತರಾಳಗಳಲ್ಲಿ ಕ್ರಮವಾಗಿ ತುಂಬಬೇಕು.

ಪುನಃ **ಗಂಧಯುಕ್ತ ತೈಲಾದಿ ಸಹಿತ ಪಂಚವಿಂಶತಿ ದ್ರವ್ಯದಲ್ಲಿ**- ಮುನ್ನೂರ ಇಪ್ಪತ್ತು ಕಲಶದಲ್ಲಿ ಇಪ್ಪತ್ತಾರು ರೇಖೆಯ ಮಂಡಲದಲ್ಲಿ ಮಧ್ಯದಲ್ಲಿ ಹದಿನೈದು ಪದಗಳಿಂದ ನೂರೆಂಟಕ್ಕೆ ಹೇಳಿದ ಮಾನುಷಾವರಣಪದಗಳಲ್ಲಿ ಬಿಟ್ಟ ನಾಲ್ಕು ಕಲಶಗಳನ್ನು ಸೇರಿಸಿ ನೂರಹನ್ನೆರಡನ್ನಾಗಿ ಮಾಡಿ ಅದರ ಹೊರಗಡೆ ಸುತ್ತಲೂ ವೀಥಿಯನ್ನು ಮಾಡಿ ಹೊರಗಡೆ ನಾಲ್ಕು ಪದಗಳಿಂದ ದಿಕ್ಕುಗಳಲ್ಲಿ ಹನ್ನೆರಡು, ವಿದಿಕ್ಕುಗಳಲ್ಲಿ ಹದಿನಾರು ಅಂತರಾಳಗಳಲ್ಲಿ ಮೂರು ಮೂರು ನಾಲ್ಕರ ಗುಂಪುಗಳನ್ನು ಮಾಡಬೇಕು. ಉಳಿದ ಪದಗಳನ್ನು ಬಿಡಬೇಕು. ಇಲ್ಲಿ ಮಧ್ಯದಲ್ಲಿ ನೂರಹನ್ನೆರಡನ್ನು ಇಪ್ಪತ್ತೈದು ದ್ರವ್ಯಗಳಿಂದ ಹೇಳಲ್ಪಟ್ಟ ಕ್ರಮದಂತೆ ತುಂಬಿ ಅದರ ಹೊರಗಿನ ದಿಕ್ಕುಗಳಲ್ಲಿ, ವಿದಿಕ್ಕುಗಳಲ್ಲಿ ಅಂತರಳಗಳಲ್ಲಿ ತೈಲಾದಿ ಹದಿನಾರು ದ್ರವ್ಯಗಳಿಂದ ತುಂಬಿಸಿ ಮಣ್ಣುಗಳ ಉತ್ತರ ದಕ್ಷಿಣಾದಿ ಪಾರ್ಶ್ವ ಕ್ರಮದಿಂದ ಮೂಲ ಮಂತ್ರದಿಂದ ಗಂಧೋದಕವನ್ನು ತುಂಬಬೇಕು.

**ಕರ್ಪೂರ ಮೊದಲಾದುವುಗಳಿಂದ ತೈಲ** ಮೊದಲಾದವುಗಳಿಂದ ಕೂಡಿದ ಇಪ್ಪತ್ತೈದು ದ್ರವ್ಯಗಳಿಂದ ಐನೂರ ಐದು ಕಲಶದಲ್ಲಿ ಮೂವತ್ತೆರಡು ರೇಖೆಯ ಮಂಡಲದಲ್ಲಿ ಒಳಗೆ ಹಿಂದಿನಂತೆ ಹದಿನೈದು ಪದಗಳಿಂದ ನೂರ ಒಂಭತ್ತು ಕಲಶಗಳನ್ನು ಮಾಡಿ ಪುನಃ ಅದರ ಹೊರಗೆ ಸುತ್ತಲೂ ವೀಥಿಯನ್ನು ಮಾಡಿ ಅದರ ಹೊರಗೆ ಮೂರು ಪುಟಗಳಿಂದ ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಎಂಟು ನವಕಗಳನ್ನು ಕಲ್ಪಿಸಿ ಅಂತರಾಳಗಳಲ್ಲಿ ಮೂರು ಮೂರು ಮೂರರ ಗುಂಪನ್ನು ಕಲ್ಪಿಸಿ ಅದರ ಹೊರಗೆ ಸುತ್ತಲೂ ವೀಥಿಯನ್ನು ಮಾಡಿ ಅದರ ಹೊರಗಡೆ ಮೂರು ಪುಟಗಳಿಂದ ಪ್ರತ್ಯೇಕ ದಿಕ್ಕುಗಳಲ್ಲಿ ಏಳೇಳು(ಹೀಗೆ ಇಪ್ಪತ್ತೆಂಟು)

ನವಕಗಳನ್ನು ಮಾಡಬೇಕು. ಅಲ್ಲಿ ಮಧ್ಯದಲ್ಲಿರುವ ನೂರ ಒಂಭತ್ತನ್ನು ಹಿಂದಿನಂತೆ ಇಪ್ಪತ್ತೈದು ದ್ರವ್ಯಗಳಿಂದ ತುಂಬಿಸಬೇಕು. ಅದರ ಹೊರಗಿನಲ್ಲಿರುವ ನವಕಾದಿಗಳನ್ನೂ ಹಿಂದಿನಂತೆ ತೈಲ ಮೊದಲಾದ ಹದಿನಾರು ದ್ರವ್ಯಗಳಿಂದ ಮೃತ್ಕಲಶದ ಪಕ್ಕದಲ್ಲಿರುವ ಗಂಧಗಳಿಂದ ತುಂಬಬೇಕು. ಅದರ ಹೊರಭಾಗದಲ್ಲಿ ಕರ್ಪೂರ ಮೊದಲಾದ ಇಪ್ಪತ್ತೆಂಟು ದ್ರವ್ಯಗಳಿಂದ ನಾಲ್ಕು ದಿಕ್ಕುಗಳಲ್ಲಿ ಇಪ್ಪತ್ತೆಂಟು ನವಕಗಳನ್ನು ಕ್ರಮವಾಗಿ ತುಂಬಬೇಕು. ಅಲ್ಲಿ ಪೂರ್ವಭಾಗದಲ್ಲಿ ಏಳು ನವಕಗಳಲ್ಲಿ ಈಶಾನ ಮೊದಲಾಗಿ ಕ್ರಮದಿಂದ ಪರ್ಜನ್ಯಾದಿ ಕ್ರಮದಿಂದಲಾಗಲೀ ಇಂದು (ಕರ್ಪೂರ) ವಾನರ ಪಯೋದ ಪಟೀರ (ಚಂದನ) ವಾರಿ ಕುಷ್ಠ ಅಗರು- ಈ ದ್ರವ್ಯಗಳನ್ನು ತುಂಬಬೇಕು. ಪುನಃ ದಕ್ಷಿಣ ಭಾಗದಲ್ಲಿ ಅಗ್ನ್ಯಾದಿಯಾಗಲೀ ಪೂಷಾದಿಯಾಗಲೀ ಕ್ರಮದಿಂದ ಅಘೋರದಿಂದ ವೈಡೂರ್ಯ ನೀಲ ಮಾಣಿಕ್ಯ ವಿದ್ರುವ ವಜ್ರ ಮುಕ್ತಾಗಾರುತ್ಮತಗಳನ್ನು (ದ್ರವ್ಯಗಳನ್ನು) ತುಂಬಬೇಕು. ಪಶ್ಚಿಮ ಭಾಗದಲ್ಲಿ ನೈರ್ಋತ್ಯಾದಿಯಾಗಲೀ ದೌವಾರಿಕಾದಿಯಾಗಲೀ ಕ್ರಮದಿಂದ ಸದ್ಯೋಜಾತ ಮಂತ್ರದಿಂದ ನ್ಯಗ್ರೋಧ ಪಿಪ್ಪಲ ಶಿರೀಷ ನೀವಾಕ (ಪ್ಲಕ್ಷ) ಪಲಾಶ ಬಿಲ್ವ ಆಮ್ರಗಳ ತೊಪ್ಪೆಗಳಿಂದ ಪ್ರತ್ಯೇಕವಾಗಿ ಕಷಾಯವನ್ನು ಮಾಡಿ ಕ್ರಮವಾಗಿ ತುಂಬಬೇಕು. ಉತ್ತರಭಾಗದಲ್ಲಿ ವಾಯ್ವಾದಿಯಾಗಲೀ ನಾಗಾದಿಯಾಗಲೀ ಕ್ರಮದಿಂದ ವಾಮದೇವ ಮಂತ್ರದಿಂದ ಗೋಧೂಮಶಾಲಿ ಯವ ಮುದ್ಗ ತಿಲ ಪ್ರಿಯಂಗು ನಿಷ್ಪಾವ ಬೀಜಗಳನ್ನು ತುಂಬಬೇಕು. ಪುನಃ ದ್ರವ್ಯದ ಹೊರತಾಗಿ ಉಳಿದುವನ್ನು ಶುದ್ಧಜಲದಿಂದ ತುಂಬಿಸಿ ಪಲ್ಲವ ಮೊದಲಾದುವನ್ನಿರಿಸಿ, ಕ್ರಮವಾಗಿ ಪೂಜಿಸಿ, ಅಧಿವಾಸ ಮಾಡಿ ಪುನಃ ಬೆಳಿಗ್ಗೆ ಅಭಿಷೇಕ ಕಾಲದಲ್ಲಿ ಇಪ್ಪತ್ತೈದು ದ್ರವ್ಯಗಳಲ್ಲಿ ಆಯಾಯ ದ್ರವ್ಯಗಳಲ್ಲಿ ಹೇಳಿದ ಮಂತ್ರಗಳೇ ಆಗಿವೆ. ತೈಲ ಮೊದಲಾದುವುಗಳ ಗಂಧ ಸಹಿತ ತೈಲ ಕರ್ಪೂರಾದಿಗಳಿಂದ ಕೂಡಿದವುಗಳಿಗೂ ಹೀಗೆ ಮೂರು ಬಗೆಯಾದ ಕಲಶಗಳ ತುಂಬುವಿಕೆಯಲ್ಲಿ ಮಂತ್ರಗಳು ಶರ್ವ ಮೊದಲಾಗಿ ಅನಂತ ಮೊದಲಾಗಿ ಮೂಲ ತತ್ಪುರುಷ ಮೊದಲಾದವುಗಳು ಅಭಿಷೇಕ ಮಂತ್ರಗಳಾಗಿರುತ್ತವೆ. ಶಿವನಲ್ಲಿ- ಹದಿನೇಳು ದ್ರವ್ಯಗಳಿಂದ, ಇಪ್ಪತ್ತೈದು ದ್ರವ್ಯಗಳಿಂದಲೂ ತೈಲಾದಿ ದ್ರವ್ಯಗಳಿಂದ ಗಂಧ ಸಹಿತ ತೈಲಾದಿ ದ್ರವ್ಯಗಳಿಂದ ಕರ್ಪೂರಾದಿ ದ್ರವ್ಯಗಳಿಂದಲೂ ಹೀಗೆ ಐದು ಬಗೆಯಾಗಿ ಕಲಶದ ಬಗೆಯಾಗಿರುತ್ತದೆ.

## ಇಪ್ಪತ್ತೈದು ದ್ರವ್ಯಗಳಿಂದ ದುರ್ಗಿಯಲ್ಲಿ ಅಭಿಷೇಕವು

ಅಲ್ಲಿ ಕಲಶಗಳು ಮಂಡಲದ ಕ್ರಮವು ಸಾಮಾನ್ಯವಾಗಿ ಹೇಳಿದುದೆ ಆಗಿರುತ್ತದೆ. ದ್ರವ್ಯಗಳಲ್ಲಿನ ಭೇದವು ಮಂತ್ರಗಳಲ್ಲಿನ ವ್ಯತ್ಯಾಸವು ಅಭಿಷೇಕ ಪೂರಣದ ಕ್ರಮದ ವ್ಯತ್ಯಾಸವು ಅಭಿಷೇಕದಲ್ಲಿನ ವ್ಯತ್ಯಾಸವೂ ಹೇಳಲ್ಪಡುತ್ತದೆ. ಬ್ರಹ್ಮಕಲಶದಲ್ಲಿ ಗಂಧ ಪುಷ್ಪ ಓಷಧಿ ಫಲ ರತ್ನ ಸ್ವರ್ಣೋದಕದಿಂದ ತುಂಬಬೇಕು. ದೈವಿಕಾವರಣದಲ್ಲಿ ಈಶಾನ್ಯ ಕೋಣದಿಂದಾರಂಭಿಸಿ, ಪ್ರದಕ್ಷಿಣ ಕ್ರಮದಿಂದ ಸಕ್ತು ಜಲ ಭಸ್ಮ ಮಧು ತೈಲ ಗುಡ ಅಶ್ವತ್ಥ ದೂರ್ವಾಜಲ ಬೆಳ್ಳಿ ಈ ದ್ರವ್ಯಗಳಿಂದ ಸೋಮಾಂತವಾಗಿ ತುಂಬಬೇಕು. ಮಾನುಷಾವರಣದಲ್ಲಿ ದಿಕ್ಕು ವಿದಿಕ್ಕು ಅಂತರಾಳಗಳಲ್ಲಿ ಪಾದ್ಯ ಅರ್ಘ್ಯ ಪಂಚಗವ್ಯ ಗೋಮೂತ್ರ ಗೋಮಯ ಹಾಲು ಮೊಸರು ತುಪ್ಪ ಕುಶೋದಕ ಕಷಾಯ ರತ್ನ ಸ್ವರ್ಣ ಧಾತು ಗಂಧ ಪುಷ್ಪ ಫಲಗಳೆಂದು ಹದಿನಾರು ದ್ರವ್ಯಗಳನ್ನು ತುಂಬಿಸಬೇಕು. ದೂರ್ವಾಸಿಂಹೀಕುಶಶತಗುಣವ್ಯಾಘ್ರಿಗಳು ಔಷಧ ಗುಣಗಳು. ರಾಜ ಶ್ಯಾಮಾಕ ನವದೂರ್ವೆಗಳು ಪಾದ್ಯ ದ್ರವ್ಯಗಳು. ಕುಶಾಗ್ರ ರಾಜಿ ಕ್ಷೀರ ಅಕ್ಷತ ತಿಲ ಗಂಧ ಪುಷ್ಪಗಳು ಅರ್ಘ್ಯ ದ್ರವ್ಯಗಳು. ಪ್ಲಕ್ಷ ಉದುಂಬರ ವಟಾಶ್ವತ್ಥ ಖದಿರಗಳ ತೊಪ್ಪೆಗಳಿಂದ ಕಷಾಯವು. ವಜ್ರ ಮುಕ್ತಾ ವೈಡೂರ್ಯ ವಿದ್ರುಮ ಮಾಣಿಕ್ಯ ಮಹಾನೀಲ ನೀಲ ಬ್ರಹ್ಮರಾಗಗಳೆಂದು ಎಂಟು ಬಗೆಯ ರತ್ನಗಳು. ಶ್ಯಾಮರಸ ಹರಿತಾಲ ಅಂಜನ ಗೋರೋಚನ ಸೌರಾಷ್ಟ್ರಿಗೈರಿಕ ಸೀಸಮನೋಹ್ವಾ ಈ ಒಂಭತ್ತು ಧಾತು ದ್ರವ್ಯಗಳು. ಪಟೀರ, ಅಸ್ರ, ಆಯಸಕಪಿ ಜಟಾರೋಚನ ಇಂದು ಚೋರ ಇವು ಅಷ್ಟಗಂಧ ದ್ರವ್ಯಗಳು. ನಂದ್ಯಾವರ್ತ ಬಕುಲ ಚಂಪಕ ಅಶೋಕ ನಾಗಮಲ್ಲಿಕಾ ಜಾತೀ ಕುಸುಮಗಳೆಂದು ಏಳು ಹೂಗಳು. ನಾರಂಗ ಬದರ ಕದಲೀ ಬೀಜಾಪೂರ ಮಾತುಲಂಗಗಳೆಂಬ ಆರು ಬಗೆಯ ಫಲಗಳು.

**ಅಭಿಷೇಕಮಂತ್ರಾ:**- ಪಾದ್ಯೇ- ಇದಂ ವಿಷ್ಣುಃ * * ಪಾಂ ಸುರೇ- ಜಾ ॥ ೧ ॥ ಅರ್ಘ್ಯೇ- ಆಪೋಹಿಷ್ಠಾ * * ಚನಃ । ತ ॥ ೨ ॥ ಪಂಚಗವ್ಯೇ- ಅಗ್ನಿಮೀಳೇ ಪುರೋ * * ಧಾತಮಂ । ವೇ ॥ ೩ ॥ ಗೋಮೂತ್ರೇ- ತತ್ಸವಿತುರ್ವರೇ * * ಯಾತ್ । ದ ॥ ೪ ॥ ಗೋಮಯೇ- ಗಂಧ ದ್ವಾರಾಂ * * ಶ್ರಿಯಂ । ಸೇ ॥ ೫ ॥ ಕ್ಷೀರೇ- ಆಪ್ಯಾಯಸ್ವ * * ಸಂಗಥೇ । ಸು ॥ ೬ ॥ ದಧ್ನಿ- ದಧಿಕ್ರಾವ್ಣೋ ಅಕಾ * * ತಾರಿಷತ್ । ನ ॥ ೭ ॥ ಆಜ್ಯೇಃ- ಇಷೇತ್ವೋರ್ಜೇತ್ವಾ * * ಕರ್ಮಣೆ । ವಾ ॥ ೮ ॥ ಕುಶೋದಕೇ- ಓಂ ತತ್ಸವಿತುಃ * * ಯಾತ್ । ಮ ॥ ೯ ॥ ಕಷಾಯೇ- ಅಶ್ವತ್ಥೇವೋ ನಿಷದನಂ * * ಪೂರುಷಂ । ಸೋ ॥ ೧೦ ॥ ರತ್ನಜಲೇ- ತ್ರ್ಯಂಬಕಂ ಯಜಾ * * ತಾತ್ । ಮ ॥ ೧೧ ॥ ಸ್ವರ್ಣಜಲೇ- ಹಿರಣ್ಯಗರ್ಭಃ ಸಮ * * ವಿಧೇಮ । ಮ ॥ ೧೨ ॥ ಧಾತೌ- ಮಾನಸ್ತೋಕೇತನಯೇ * * ಹವಾಮಹೇ । ರಾ ॥ ೧೩ ॥ ಗಂಧಜಲೇ- (ಶಂನ ಇಂದ್ರಾಗ್ನಿ * * ವಾಜಸಾತೌ । ತೀ ।) ಅಥವಾ ಶಂನೋದೇವೀರಭಿ * * ವಂತುನಃ । ತೀ ॥ ೧೪ ॥ ಪುಷ್ಪೋದಕೇ- ಪುಷ್ಪಾವತೀಃ ಪ್ರಸೂವತೀ * * ಯಿಷ್ಣವಃ । ಯ ॥ ೧೫ ॥ ಫಲೋದಕೇ- ಪುಷ್ಪಾವತೀಃ * * ಯಿಷ್ಣವಃ । ತೋ ॥ ೧೬ ॥ ಹೀಗೆ ಮಾನುಷಾವರಣದ ಹದಿನಾರು ಕಲಶಗಳಿಂದ ಅಭಿಷೇಕವು.

**ಸಕ್ತುಜಲೇ–** ಸುಮಿತ್ರ್ಯಾ ನ ಆಪ ಓಷಧಯಃ * * ದ್ವಿಷ್ಮಃ । ನಿ ॥ ೧೭ ॥ ಭಸ್ಮಜಲೇ– ಭೂತಿಃ ಶ್ರೀ ಪಿಂಗಲೋ ಬಭ್ರೂ * * ದೇವತಾಃ । ದ ॥ ೧೮ ॥ ಮಧುನಿಃ– ಮಧುವಾತಾ ಋತಾಯತೇ * * ಭವಂತುನಃ । ಹಾ ॥ ೧೯ ॥ ತೈಲೇ– ವಿಶ್ವಾನಿ ನೋ ದುರ್ಗಹಾ * * ತನೂ ನಾಂ । ತಿ ॥ ೨೦ ॥ ಗೌಳೇ– ಅಗ್ನೇ ತ್ವಂ ಪಾರಯಾ ನವ್ಯೋ * * ಶಂ ಯೋಃ । ವೇ ॥ ೨೧ ॥ ಪೈಪ್ಪಲೇ– ಅಶ್ವತ್ಥೇವೋ ನಿಷದನಂ ಪರ್ಣೇ * * ಪೂರುಷಂ । ದಃ ॥ ೨೨ ॥ ದೂರ್ವೋದಕೇ– ಶಂ ನೋ ದೇವೀ * * ಸ್ರವಂತು ನಃ । ಸ ॥ ೨೩ ॥ ರಜತಜಲೇ– ಅಗ್ನೇ ತ್ವಂ ಪಾರಯಾ ನವ್ಯೋ * * ಶಂಯೋಃ । ನಃ ॥ ೨೪ ॥

**ಬ್ರಹ್ಮಕಲಶೇ–** ಚಿತ್ತಿಃ ಸ್ರುಕ್ । ಚಿತ್ತಮಾಜ್ಯಂ । ವಾಗ್ವೇದಿಃ । ಆಧೀತಂ ಬರ್ಹಿಃ । ಕೇತೋ ಅಗ್ನಿಃ । ವಿಜ್ಞಾತಮಗ್ನಿಃ । ವಾಕ್ಪತಿರ್ಹೋತಾ । ಮನ ಉಪವಕ್ತಾ । ಪ್ರಾಣೋ ಹವಿಃ । ಸಾಮಾಧ್ವರ್ಯುಃ ॥ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ । ಹೀಗೆ ಪರಿಖಂಡದ ದ್ರವ್ಯಕಲಶಗಳಲ್ಲಿ ತ್ರಿಷ್ಟುಪ್ ಮಂತ್ರದ ಒಂದೊಂದು ಅಕ್ಷರಗಳಿಂದ ಕೂಡಿ 'ಇದಂ ವಿಷ್ಣು' ಮೊದಲಾಗಿ ಇಪ್ಪತ್ತನಾಲ್ಕು ಮಂತ್ರಗಳು. ಬ್ರಹ್ಮಕಲಶದಲ್ಲಿ – ಪರ್ಷದತಿ ಮೊದಲಾದ ಉಳಿದ ಭಾಗದೊಡನೆ ಚಿತ್ತಿ ಸ್ರುಕ್ ಮೊದಲಾದ ಮಂತ್ರಗಳು. ಪರಿಖಂಡದ ಉಪಕಲಶಗಳಿಂದ ಪಂಚದುರ್ಗಾ ಮಂತ್ರಗಳಿಂದ ಅಭಿಷೇಕಿಸಬೇಕು. ಬ್ರಹ್ಮಜಜ್ಞಾನಂ– ಈ ಮಂತ್ರದಿಂದ ನಡು ನಡುವೆ ಅಬಿಷೇಕಿಸಬೇಕು. ಇಲ್ಲಿ ದುರ್ಗಿಯಲ್ಲಿ ಪೂರಣ ಮಂತ್ರಗಳು ಹೇಳಲ್ಪಡಲಿಲ್ಲ. ಅಲ್ಲಿ ಬ್ರಾಹ್ಮದಲ್ಲಿ- ಮೂಲವು ದೈವಿಕದಲ್ಲಿ ಎಂಟಕ್ಕೆ ಮೂಲಾಕ್ಷರಗಳು. ಮಾನುಷದಲ್ಲಿ ದಿಕ್ಕಿನಲ್ಲಿ ಹೃದಯಾದಿ, ಅಸ್ತ್ರವು ವಿದಿಕ್ಕುಗಳಲ್ಲಿ ನೇತ್ರವು ಅಂತರಾಳದಲ್ಲಿ ಎಂದು ವಿವರಣಕಾರನ ಅಭಿಪ್ರಾಯ. ಸಪ್ತದಶ ದ್ರವ್ಯಾಭಿಷೇಕದಲ್ಲಿ ವಿಷ್ಣುವಿನಂತೆ ಆದರೆ ಬ್ರಾಹ್ಮದಲ್ಲಿ ವಿಷ್ಣು ಸ್ಥಾನದಲ್ಲಿ ದುರ್ಗಿಯು. ಅಭಿಷೇಕ ಮಂತ್ರದಲ್ಲಿ ನಿಜ ಮೂಲಮಂತ್ರದಿಂದ ಕೂಡಿರುತ್ತದೆ.

**ಭೂತಿಃ ಶ್ರೀಃ ಪಿಂಗಲೋ ಬಭ್ರುರ್ಭೂತಿರ್ವಿಷ್ಣುಃ ಸನಾತನಃ ।**

**ಅಗ್ನಿರ್ಮಾರುತಯೋ ಭೂರ್ತಿ ಭೂರ್ತಿಃ ಸೇಂದ್ರಾಶ್ಚದೇವತಾಃ ॥**

ಹೀಗೆ ದುರ್ಗಿಯಲ್ಲಿ ಅಭಿಷೇಕ ಪ್ರಕಾರವು.

* * * *

## ಸುಬ್ರಹ್ಮಣ್ಯೇ ಕಲಶವಿಧಿಃ

ಅಲ್ಲಿ ಪಂಡಿತರು ಒಂಭತ್ತು ವಿಧದ ಕಲಶದ ಕ್ರಮವನ್ನು ಹೇಳುತ್ತಾರೆ. ಅದು ಹೇಗೆಂದರೆ– ಉತ್ತಮ ತ್ರಿತಯ, ಪುನಃ ಉತ್ತಮದ್ವಯ, ಮಧ್ಯಮದ್ವಯ, ಅಧಮ ದ್ವಯ ಹೀಗೆ ಒಂಭತ್ತು ಬಗೆ. ಮೊದಲನೆಯದು ಐನೂರು ಕಲಶಗಳಿಂದ ೧, ಎರಡನೆಯದು ಇನ್ನೂರ ಐವತ್ತು ಕಲಶಗಳಿಂದ ೨, ಮೂರನೆಯದು ನೂರ ಇಪ್ಪತ್ತೈದು ಕಲಶಗಳಿಂದ ೩, ನಾಲ್ಕನೆಯದು ನೂರ ಒಂಭತ್ತು ಕಲಶಗಳಿಂದ ೪, ಐದನೆಯದು ತೊಂಭತ್ತೇಳು ಕಲಶಗಳಿಂದ ೫– ಇದು ಉತ್ತಮ ಪಂಚಕ ಕ್ರಮವು. ಆರನೆಯದು ಎಂಭತ್ತೊಂದು ಕಲಶಗಳಿಂದ ೬, ಅರವತ್ತೈದು ಕಲಶಗಳಿಂದ ಏಳನೇಯದು ೭, ನಲವತ್ತೊಂಭತ್ತು ಕಲಶಗಳಿಂದ ಎಂಟನೆಯ ಬಗೆಯು ೮, ಇಪ್ಪತ್ತೈದು ಕಲಶಗಳಿಂದ ಒಂಭತ್ತನೆಯ ಬಗೆಯು ೯– ಹೀಗೆ ಅಧಮದ್ವಯದ ಕ್ರಮವು. ಇಲ್ಲಿ ಪ್ರತ್ಯೇಕವಾಗಿ ದ್ರವ್ಯಗಳಲ್ಲಿ ವ್ಯತ್ಯಾಸವಿರುತ್ತದೆ. ಹೀಗೆ ಒಂಭತ್ತು ಬಗೆಯ ಕಲಶಗಳ ಕ್ರಮವು. ಐನೂರು ಕಲಶಗಳಲ್ಲಿ ಮೂವತ್ತು ರೇಖೆಗಳಿಂದ ಕೂಡಿದ ಮಂಡಲದಲ್ಲಿ ಐದೈದು ಪದದ ಅಂತರದಲ್ಲಿ ನಾಲ್ಕು ವೀಥಿಗಳನ್ನು ಮಾಡಿ ಇಪ್ಪತ್ತೈದು ಖಂಡಗಳು ಪ್ರತ್ಯೇಕವಾಗಿ ಇಪ್ಪತ್ತೈದು ಪದಗಳನ್ನು ಮಾಡಿ ಅಲ್ಲಿ ಮಾನುಷ ಕೋಣಗಳಲ್ಲಿ ಹೊರಗಿನ ಕೋಣಗಳಲ್ಲಿ ಒಂದೊಂದು ಪದ್ಮಗಳನ್ನು ಬರೆದು ಇಪ್ಪತ್ತಾರು ಕಲಶಗಳನ್ನು ಮಾಡಬೇಕು. ಎಂಟು ಅಂತರಾಳಗಳಲ್ಲಿ ಒಂಭತ್ತು ಕಲಶಗಳನ್ನು ಮಾಡಬೇಕು. ಹೀಗೆ ಐನೂರು ಕಲಶದಲ್ಲಿ ಮಂಡಲ ಕ್ರಮವು. ಎಲ್ಲೆಡೆಯೂ ಮೂಲಮಂತ್ರದಿಂದ ಪೂರಣ (ತುಂಬುವಿಕೆಯು) ಆಗಿರುತ್ತದೆ. ಬ್ರಹ್ಮಕಲಶದಲ್ಲಿ ಪಂಚಗವ್ಯದಿಂದ ತುಂಬಬೇಕು. ದೈವಿಕಾವರಣದಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ಆಜ್ಯ, ಕ್ಷೀರ, ದಧಿ, ಮಧು, ಅಗ್ನ್ಯಾದಿ ಕೋಣಗಳಲ್ಲಿ ತೈಲ, ಗುಳ, ಇಕ್ಷುಜಲ, ತೀರ್ಥಜಲವನ್ನೂ ತುಂಬಿಸಬೇಕು. ಅಲ್ಲಿ ಪಂಚಗವ್ಯವನ್ನು ತುಂಬಿಸಿದ ನಂತರದಲ್ಲಿ ಅದರ ಸುತ್ತಲೂ ಎಂಟು ಕಲಶಗಳಲ್ಲಿ ದಿಕ್ಕು ವಿದಿಕ್ಕುಗಳ ಕ್ರಮದಿಂದ ರತ್ನಾಷ್ಟಕವನ್ನು ತುಂಬಿಸಬೇಕು. ಅದರ ಸುತ್ತಲೂ ದಿಗ್ವಿ ದಿಕ್ಕುಗಳಲ್ಲಿ ಪರ್ಜ್ಯನ್ಯ ಕೋಷ್ಠದಿಂದ ಆರಂಭಿಸಿ ಅದಿತಿಯಲ್ಲಿ ಕೊನೆಗೊಳ್ಳುವ ಅಂತರಾಳಗಳಲ್ಲಿ ಶುದ್ಧಜಲದಿಂದ ತುಂಬಿಸಬೇಕು. ಹೀಗೆ ಎಲ್ಲಾ ಕಡೆಯೂ ದ್ರವ್ಯವ್ಯವಸ್ಥೆಯು. ಪೂರ್ವ ಖಂಡದಲ್ಲಿ ಆಜ್ಯವನ್ನು ತುಂಬಿದ ನಂತರ ಅದರ ಸುತ್ತಲೂ ಹಿಂದಿನಂತೆ ಬೀಜಾಷ್ಟಕವನ್ನು ಅದರ ಸುತ್ತಲೂ ಹಿಂದಿನಂತೆ ಶುದ್ಧೋದಕದಿಂದ ತುಂಬಿಸಬೇಕು. ದಕ್ಷಿಣದ ಖಂಡದಲ್ಲಿ ಕ್ಷೀರ ಪೂರಣಾ ನಂತರದಲ್ಲಿ ಅದರ ಸುತ್ತಲೂ ಹಿಂದಿನಂತೆಯೇ ಕಷಾಯಷ್ಟಕ ಅದರ ಸುತ್ತಲೂ ಶುದ್ಧೋದಕದಿಂದ ತುಂಬಿಸಬೇಕು. ಪಶ್ಚಿಮ ಖಂಡದಲ್ಲಿ ಮೊಸರು ತುಂಬಿದ ನಂತರದಲ್ಲಿ ಅದರ ಸುತ್ತಲೂ ಪುಷ್ಪಾಷ್ಟಕವನ್ನೂ ಶುದ್ಧಜಲವನ್ನೂ ಅದರ ಸುತ್ತಲೂ ತುಂಬಿಸಬೇಕು. ಉತ್ತರದ ಖಂಡದಲ್ಲಿ ಮಧು(ಜೇನು) ತುಂಬಿದ ನಂತರ ಸುತ್ತಲೂ ಫಲಾಷ್ಟಕವನ್ನೂ ಅದರ ಸುತ್ತಲೂ

ಶುದ್ಧೋದಕವನ್ನೂ ತುಂಬಬೇಕು. ಅಗ್ನಿಖಂಡದಲ್ಲಿ ತೈಲಪೂರಣಾ ನಂತರದಲ್ಲಿ ಗಂಧಾಷ್ಟಕವನ್ನೂ ಅದರ ಸುತ್ತಲೂ ಶುದ್ಧ ಜಲವನ್ನೂ ತುಂಬಿಸಬೇಕು. ನಿರ್ಋತಿ ಕೋಣದಲ್ಲಿ ಗುಡಪೂರಣಾ ನಂತರದಲ್ಲಿ ಅದರ ಸುತ್ತಲೂ ಲೋಹಾಷ್ಟಕವನ್ನೂ ಅದರ ಸುತ್ತಲೂ ಶುದ್ಧೋದಕದಿಂದಲೂ ತುಂಬಿಸಬೇಕು ವಾಯು ಖಂಡದಲ್ಲಿ ಕಬ್ಬಿನ ಹಾಲನ್ನು ತುಂಬಿಸಿದ ನಂತರದಲ್ಲಿ ಸುತ್ತಲೂ ಓಷಧ್ಯಷ್ಟಕವನ್ನೂ ಅದರ ಸುತ್ತಲೂ ಶುದ್ಧಜಲವನ್ನೂ ತುಂಬಿಸಬೇಕು. ಈಶಾನ್ಯಖಂಡದಲ್ಲಿ ತೀರ್ಥಜಲ ಪೂರಣಾ ನಂತರದಲ್ಲಿ ಸುತ್ತಲೂ ಜಲಾಷ್ಟಕವನ್ನೂ ಅದರ ಸುತ್ತಲೂ ಶುದ್ಧೋದಕವನ್ನೂ ತುಂಬಿಸಬೇಕು. ಹೀಗೆ ಬ್ರಾಹ್ಮ ಮತ್ತು ದೈವಿಕದಲ್ಲಿ ಪೂರಣ ಕ್ರಮವು. ಪುನಃ ಮಾನುಷಾವರಣದಲ್ಲಿ ಪೂರ್ವ ಮೊದಲಾದ ದಿಕ್ಕುಗಳಲ್ಲಿ ಧಾತ್ರೀ, ರಾತ್ರೀಪಿಷ್ಟ, ಆಚಾಮನ, ಅರ್ಘ್ಯಗಳನ್ನು ತುಂಬಬೇಕು. ಅಗ್ನ್ಯಾದಿ ಕೋಣಗಲ್ಲಿ ಕುಶೋದಕ, ಕಾಶ(ಜೊಂಡು ಹುಲ್ಲು), ಸೇವ್ಯ(ಲಾವಂಚ), ದೂರ್ವಾ(ಗರಿಕೆ)ಗಳನ್ನು ತುಂಬಬೇಕು. ಆಯಾಯ ದ್ರವ್ಯಗಳನ್ನು ತುಂಬಿಸಿದ ನಂತರದಲ್ಲಿ ಆಯಾಯ ಉಪಕಲಶಗಳನ್ನು ಹೇಳಿದ ಕ್ರಮದಂತೆ ಶುದ್ಧೋದಕದಿಂದ ತುಂಬಿಸಬೇಕು. ಅಯಾಯ ಸಂದರ್ಭಗಳಲ್ಲಿ ಕೋಣ(ವಿದಿಕ್ಕು)ಗಳಲ್ಲಿರುವ ಕಲಶವನ್ನೂ ಶುದ್ಧಜಲದಿಂದ ತುಂಬಿಸಬೇಕು. ಆಮೇಲೆ ಪರ್ಜನ್ಯ ಮೊದಲಾಗಿ ಅದಿತಿ ಅಂತಿಮ(ಕೊನೆ)ದಲ್ಲಿ ಅಂತರಾಳದಲ್ಲಿರುವ ನವಕಗಳಲ್ಲಿ ಒಂದೊಂದು ಅಂಕುರಗಳನ್ನು ತುಂಬಬೇಕು. ಕ್ಷೀರ ರಾಜೀ ಯವ ತಿಲ ಕುಶ ದ್ರವ್ಯಗಳಿಂದ ಅರ್ಘ್ಯವು. ತಕ್ಕೋಲ ಜಾತೀ ಲವಂಗಗಳಿಂದ ಆಚಮನವು. ಶಿವನಿಗೆ ಹೇಳಿದ ಪಾದ್ಯವು– ಪದ್ಮರಾಗ ನೀಲ ಮುಕ್ತಾ, ಚಂದ್ರಕಾಂತ, ಕುರುವಿಂದ, ವೈಡೂರ್ಯ ಪ್ರವಾಳ ವಜ್ರಗಳೆಂದು ರತ್ನಾಷ್ಟಕಗಳು. ಯವಾಃ ತಿಲಾಃ ಗೋಧೂಮಾಃ ಸರ್ಷಪಾಃ ಶಾಲಯಃ ಮುದ್ಗಾಃ, ಮಾಷಾಃ ನೀವಾರಾಃ– ಇವು ಎಂಟು ಬೀಜಗಳು. ವಟೌದುಂಬರಾಶ್ವತ್ಥ ಪ್ಲಕ್ಷಾಮ್ರ ಪಲಾಶ ಶಿರೀಷ ಮಧೂಕ ಈ ಎಂಟು ತೊಪ್ಪೆಗಳಿಂದ ಕಷಾಯಾಷ್ಟಕ. ಉತ್ಪಲ ಕಲ್ಹಾರ ಅಂಬುಜ ಕುಮುದ ಸೌಗಂಧಿಕ ಕಶೇರು ಉತ್ಪಲದ್ವಯ– ಹೀಗೆ ಎಂಟು ಹೂವುಗಳು. ಹೂವುಗಳು ಸರಿಯಾಗಿರದಲ್ಲಿ ಕೆಂಪು ಕರವೀರ ಹೂವನ್ನು ಉಪಯೋಗಿಸುವುದು. ಮಾತುಲಂಗ ಆಮ್ರ ಬಿಲ್ವ ಜಂಬೂ ಪನಸ ದಾಡಿಮ ಭವ್ಯ ಕದಲೀ ಫಲಗಳೆಂದು ಎಂಟು ಫಲಗಳು. ಕುಂಕುಮ ಅಯಃ ಶಶಿ(ಕರ್ಪೂರ) ಕುಷ್ಠ ಕೀಶ ಪಾಥೋಮುರ ಮಲಯ– ಈ ಅಷ್ಟಗಂಧ ದ್ರವ್ಯಗಳು. ಸುವರ್ಣ ರಜತ ತಾಮ್ರ ಅಯಃ ತ್ರಪು ಸೀಸ ಕಾಂಸ್ಯ ಪಿತ್ತಲ ಹೀಗೆ ಲೋಹಕಾಷ್ಟಕಗಳು. ಸುವರ್ಚಲಾ ಸಹದೇವೀ ವಚಾ ಬ್ರಾಹ್ಮೀ ಶಂಖಪುಷ್ಪೀ ಶತಾವರೀ ವಿಷ್ಣುಕ್ರಾಂತೀ ಲಕ್ಷ್ಮೀ ಈ ಔಷಧ್ಯಷ್ಟಕಗಳು. ಸಾಗರ ನದೀಜ ನಿರ್ಝರಜ ವಾಪೀಜ ತಟಾಕಜ ಹ್ರದಜ ಕೂಪಜ ಸೇತುಜ ಈ ಎಂಟು ಜಲ(ತೀರ್ಥ)ಗಳು ಮಂತ್ರ ದೀಕ್ಷಿತರಿಂದ ತರಲ್ಪಡಬೇಕು. ಈ ಜಲಗಳನ್ನು ಹೊಂದಲಸಾಧ್ಯವಾದಾಗ ಆ ಭಾವನೆಯೊಂದಿಗೆ ಶುದ್ಧ ಜಲವನ್ನೇ ಪರಿಗ್ರಹಿಸಬೇಕು. ನ್ಯಗ್ರೋಧ ಉದುಂಬರ ಅಶ್ವತ್ಥ ಪ್ಲಕ್ಷ ಬಿಲ್ವ ಪಲಾಶ ಶಮೀ ಅಪಾಮಾರ್ಗಗಳ ಅಂಕುರಾಷ್ಟಕವು. ಹೀಗೆ ಐನೂರು ಕಲಶಗಳ ಪ್ರಕಾರವು. ವೇದೀಕ್ಷೇತ್ರ ಗಜಶೃಂಗ ವೃಷಶೃಂಗ ಗಿರಿ ವಲ್ಮೀಕ ನದೀ ಸಮುದ್ರಗಳಿಂದ ಸಂಗ್ರಹಿಸಿದ ಅಷ್ಟ ಮೃತ್ತು(ಮಣ್ಣು)ಗಳು.

* * * *

## ದ್ವಿಶತೋತ್ತರ ಪಂಚಾಶತ್ಕಲಶವಿಧಿಃ

ಹದಿನೆಂಟು ರೇಖೆಯ ಹದಿನೇಳು ಪದದ ಮಂಡಲವನ್ನು ಮಾಡಿ ಐದು ಪದದ ಅಂತರದಲ್ಲಿ ವೀಥಿಯನ್ನು ಮಾಡಿ ಇಪ್ಪತ್ತೈದು ಪದಗಳಿಂದ ಕೂಡಿದ ಒಂಭತ್ತು ಖಂಡಗಳನ್ನು ಮಾಡಿ ಪೂರ್ವಾದಿ ಖಂಡಗಳಲ್ಲಿ ಹೊರಗೆ ಐದೈದು ಕಲಶಗಳನ್ನು ಜೋಡಿಸಿ ಮೂವತ್ತು ಕಲಶಗಳನ್ನು ಮಾಡಬೇಕು. ಕೋಣದ ಖಂಡಗಳಲ್ಲಿ ಹೊರಗೆ ಒಂದೊಂದು ಕಲಶವನ್ನು ಜೋಡಿಸಿ, ಇಪ್ಪತ್ತಾರು ಕಲಶಗಳನ್ನು ಮಾಡಬೇಕು. ಹೀಗೆ ಇನ್ನೂರ ಐವತ್ತು ಕಲಶದಲ್ಲಿ ಮಂಡಲ ಕ್ರಮವು. ಅಲ್ಲಿ ಬ್ರಾಹ್ಮದಲ್ಲಿ ಪಂಚಗವ್ಯವನ್ನೂ ಅದರ ಸುತ್ತಲೂ ದಿಗ್ವಿ ದಿಕ್ಕ್ರಮದಿಂದ ಪದ್ಮರಾಗಾಷ್ಟಕವನ್ನು ಪೂರ್ವಖಂಡದ ಮಧ್ಯೆ ಆಜ್ಯವನ್ನು ಅದರ ಸುತ್ತಲೂ ಯವ ಮೊದಲಾದ ಎಂಟನ್ನು, ದಕ್ಷಿಣದ ಮಧ್ಯ ಕಲಶದಲ್ಲಿ ಕ್ಷೀರವನ್ನು ಅದರ ಸುತ್ತಲೂ ದಿಕ್ಕು ವಿದಿಕ್ಕುಗಳಲ್ಲಿ ವಟ ಔದುಂಬರಾದಿ ಕಷಾಯಾಷ್ಟಕಗಳನ್ನು ಪಶ್ಚಿಮ ಖಂಡದ ಮಧ್ಯಕಲಶದಲ್ಲಿ ದಧಿಯನ್ನು ಅದರ ಸುತ್ತಲೂ ದಿಗ್ವಿದಿಕ್ಕುಗಳಲ್ಲಿ ಉತ್ಪಲಾದಿ ಪುಷ್ಪಾಷ್ಟಕವನ್ನೂ ಉತ್ತರ ಖಂಡದ ಮಧ್ಯ ಕಲಶದಲ್ಲಿ ಮಧುವನ್ನೂ ಅದರ ಸುತ್ತಲೂ ದಿಗ್ವಿದಿಕ್ಕುಗಳಲ್ಲಿ ಮಾತುಲಂಗಾದಿ ಫಲಾಷ್ಟಕವನ್ನೂ, ಅಗ್ನಿಖಂಡದ ಮಧ್ಯ ಕಲಶದಲ್ಲಿ ತೈಲವನ್ನೂ ಅದರ ಸುತ್ತಲೂ ಕುಂಕುಮಾದಿ ಗಂಧಾದ್ಯಷ್ಟಕವನ್ನು, ನಿರ್ಋತಿ ಖಂಡದ ಮಧ್ಯ ಕಲಶದಲ್ಲಿ ಗುಳವನ್ನೂ ಅದರ ಸುತ್ತಲೂ ಸ್ವರ್ಣಾದಿ ಲೋಹಾಷ್ಟಕವನ್ನೂ , ವಾಯುಖಂಡದ ಮಧ್ಯದ ಕಲಶದಲ್ಲಿ ಕಬ್ಬಿನ ರಸವನ್ನೂ ಅದರ ಸುತ್ತಲೂ ಸುವರ್ಚಲಾ ಮೊದಲಾದ ಔಷಧಾಷ್ಟಕವನ್ನು, ಈಶ ಖಂಡದ ಮಧ್ಯ ಕಲಶದಲ್ಲಿ ತೀರ್ಥಜಲವನ್ನೂ ಅದರ ಸುತ್ತಲೂ ಸಮುದ್ರ ಮೊದಲಾದ ಜಲಾಷ್ಟಕಗಳು. ಹೀಗೆ ಬ್ರಾಹ್ಮ ಹಾಗೂ ದೈವಿಕದಲ್ಲಿ ತುಂಬಿಸಿ ಹೊರಗೆ ಸೇರಿಸಲ್ಪಟ್ಟ ಐದನ್ನೂ ಒಂದನ್ನೂ ಮಾನುಷವೆಂದು ಭಾವಿಸಿ ಧಾತ್ರ್ಯಾದಿ ಎಂಟು ದ್ರವ್ಯಗಳನ್ನು ದಿಕ್ಕು ಕೋಣಗಳ ಕ್ರಮದಿಂದ ತುಂಬಿಸಬೇಕು. ಪುನಃ ದ್ರವ್ಯಕಲಶಗಳನ್ನು ಹೊರತು ಪಡಿಸಿ ಉಳಿದವುಗಳನ್ನು ಶುದ್ಧೋದಕದಿಂದ ಪರ್ಜನ್ಯಾದಿ ಉದಿತ್ಯಂತವಾಗಿ ತುಂಬಿಸಬೇಕು. ಇದು ಇನ್ನೂರ ಐವತ್ತು ಕಲಶದ ವಿಧಾನವು.

## ಶತೋತ್ತರ ಪಂಚವಿಂಶತಿ ಕಲಶವಿಧಿಃ

ಅಲ್ಲಿ ಹಿಂದೆ ಹೇಳಿದ ಮಂಡಲದಲ್ಲಿ ಹೊರಗೆ ಸೇರಿಸಲ್ಪಟ್ಟ ದಿಕ್ಕುಗಳಲ್ಲಿ ಹಾಗೂ ಕೋಣಗಳಲ್ಲಿ ಸೇರಿಸಲ್ಪಟ್ಟ ಐದು ಪದ ಮತ್ತು ಒಂದನ್ನು ಪುನಃ ಕೋಣಗತವಾದ ಖಂಡಗಳನ್ನು ಬಿಟ್ಟು ಮಧ್ಯದಲ್ಲಿ ನಾಲ್ಕು ದಿಕ್ಕುಗಳಲ್ಲಿ ಇಪ್ಪತ್ತೈದರಂತೆ ಪದಗಳನ್ನು ಮಾಡಬೇಕು. ಹೀಗೆ ಈ ಮಂಡಲವು. ತುಂಬುವಿಕೆಯಲ್ಲಿ ಮಧ್ಯದ ಇಪ್ಪತ್ತೈದರಲ್ಲಿ ಪಂಚಗವ್ಯ ಪದ್ಮರಾಗಾಷ್ಟಕಗಳಿಂದಲೂ, ಪೂರ್ವದ ಇಪ್ಪತ್ತೈದರಲ್ಲಿ ಆಜ್ಯ ಯವಾದ್ಯಷ್ಟಕಗಳಿಂದಲೂ, ದಕ್ಷಿಣದ ಇಪ್ಪತ್ತೈದರಲ್ಲಿ ಕ್ಷೀರ ವಟಾದ್ಯಷ್ಟಕದಿಂದಲೂ ಪಶ್ಚಿಮದ ಇಪ್ಪತ್ತೈದರಲ್ಲಿ ದಧಿ ಉತ್ಪಲಾಷ್ಟಕಗಳಿಂದಲೂ, ಉತ್ತರದ ಇಪ್ಪತ್ತೈದರಲ್ಲಿ ಮಧು ಮಾತುಲಂಗಾದ್ಯಷ್ಟಕಗಳಿಂದಲೂ ತುಂಬಿಸಿ, ದ್ರವ್ಯಗಳಿಂದ ಹೊರತಾದ ಉಳಿದವುಗಳನ್ನು ದಿಕ್ಕು ವಿದಿಕ್ಕು ಅಂತರಾಳಗಳಲ್ಲಿ ಪರ್ಜನ್ಯಾದಿ ಉದಿತ್ಯಂತವಾಗಿ ಶುದ್ಧ ಜಲದಿಂದ ತುಂಬಿಸಬೇಕು. ಅನಂತರ ನೂರ ಇಪ್ಪತ್ತೈದು ಪಕ್ಷಾಂತರವಿದೆ. ಅದನ್ನೂ ಹೇಳಲಾಗುವುದು. ಹದಿಮೂರು ಪದದ ಮಂಡಲದಲ್ಲಿ ಹೊರಗಿನಿಂದಾರಂಭಿಸಿ, ನಾಲ್ಕನೆಯ ಪದದಿಂದ ಸುತ್ತಲೂ ವೀಥಿಯನ್ನು ಮಾಡಿ ಕೋಣಗಳಲ್ಲಿ ಒಂದೊಂದು ಪದವನ್ನು ಸೇರಿಸಿ ದಶಕವನ್ನಾಗಿಸಬೇಕು. ದಿಕ್ಕುಗಳಲ್ಲಿ ಹದಿನೈದು ಮಧ್ಯದಲ್ಲಿ ಇಪ್ಪತ್ತೈದು– ಹೀಗೆ ಮಂಡಲವು. ಇಲ್ಲಿ ಪಂಚಗವ್ಯ, ಪದ್ಮರಾಗಾದ್ಯಷ್ಟಕ, ಆಜ್ಯ, ಯವಾದ್ಯಷ್ಟಕ, ಕ್ಷೀರ, ವಟಾದ್ಯಷ್ಟಕ, ದಧಿ, ಉತ್ಪಲಾದ್ಯಷ್ಟಕ, ಮಧು, ಮಾತುಲಂಗಾದ್ಯಷ್ಟಕ, ತೈಲ, ಕುಂಕುಮಾದ್ಯಷ್ಟಕ, ಗುಳ, ಸುವರ್ಣಾದ್ಯಷ್ಟಕ ಇಕ್ಷುರಸ, ಸುವರ್ಚಲಾದ್ಯಷ್ಟಕ, ತೀರ್ಥಜಲ, ಸಮುದ್ರಜಲಾದ್ಯಷ್ಟಕ ಮಧ್ಯ ದಿಕ್ಕು ವಿದಿಕ್ಕುಗಳಲ್ಲಿ ತುಂಬಿಸಬೇಕು. ಉಳಿದವುಗಳನ್ನು ಶುದ್ಧೋದಕಗಳಿಂದ ಹಿಂದಿನಂತೆ ತುಂಬಿಸಬೇಕು. ಹೀಗೆ ಉತ್ತಮದಲ್ಲಿ ಅಧಮವು.

## ಅಷ್ಟೋತ್ತರ ಶತ, ಸಪ್ತನವತಿಯಲ್ಲಿ ಪದಕ್ರಮವು

ಹಿಂದಿನಂತೆ ಮಂಡಲವನ್ನೂ ವೀಥಿಯನ್ನೂ ಮಾಡಿ ಕೋಣಗಳಲ್ಲಿರುವ ನವಕಗಳಲ್ಲಿ ಮೂರು ಪದಗಳನ್ನು ತೆಗೆದು ಆರು ಪದಗಳನಾಗಿ ಮಾಡಬೇಕು. ದಿಕ್ಕುಗಳಲ್ಲಿ ಹಿಂದಿನ ಹಾಗೆ ಹದಿನೈದು. ನಡುವೆ ಇಪ್ಪತ್ತೈದು– ಹೀಗೆ ನೂರ ಒಂಭತ್ತು. ತೊಂಭತ್ತೇಳರಲ್ಲಿ ಹೊರಗೆ ದಿಕ್ಕುಗಳಲ್ಲಿ ನಾಲ್ಕು ಪದಗಳನ್ನು ತೆಗೆದು ಹನ್ನೊಂದನ್ನು ಕೋಣಗಳಲ್ಲಿ ಎರಡು ಪದಗಳನ್ನು ತೆಗೆದು ಏಳನ್ನು ಮಾಡಬೇಕು. ಒಳಗೆಡೆ ಹಿಂದಿನ ಹಾಗೆ ಇಪ್ಪತ್ತೈದು– ಹೀಗೆ ಉತ್ತರದ್ವಯದಲ್ಲಿ ಪದಕ್ರಮವು. ಇಲ್ಲಿ ಪೂರಣದಲ್ಲಿ ಬ್ರಾಹ್ಮ ಮಂಡಲದ ಮಧ್ಯ ಕಲಶದಲ್ಲಿ ಮೂಲ ಮಂತ್ರದಿಂದ ರತ್ನಾದ್ಯಷ್ಟಕವನ್ನು ಅದರ ಹೊರಗೆ ದಿಗ್ವಿದಿಕ್ಕುಗಳ ಮಂತ್ರದಿಂದ ರತ್ನಾದ್ಯಷ್ಟಕವನ್ನು ಅದರ ಹೊರಗೆ ದಿಗ್ವಿದಿಕ್ಕುಗಳಲ್ಲಿ ಪಂಚಗವ್ಯ ಹಾಲು, ಮೊಸರು, ತುಪ್ಪ, ಜೇನು, ಗುಡ, ಇಕ್ಷುಜಲ, ತೈಲ ಹೀಗೆ ಅದರ ಹೊರಗೆ ಹರಿದ್ರಾಜಲ, ಧಾತ್ರೀಜಲ, ಫಲೋದಕ, ಕಷಾಯ, ಕುಶಜಲ, ಕಾಶಜಲ, ಸೇವ್ಯಜಲ, ದೂರ್ವಾಜಲ ಹೀಗೆ ದಿಗ್ವಿದಿಕ್ಕುಗಳಲ್ಲಿ– ಒಟ್ಟಿನಲ್ಲಿ ಹದಿನೇಳು ದ್ರವ್ಯಗಳನ್ನು ಅಲ್ಲಿ ಪರ್ಜನ್ಯಾದ್ಯಂತರಾಳಗಳಲ್ಲಿ ಚಂದನ ಕುಂಕುಮಗಳು ಆಯಸವಾನರಗಳು ಮುರಾಮಾಂಸಗಳು ಜಲಮುಸ್ತಗಳು ಅಂಬುಮುಕ್ಕೋರಗಳು ಏಲಾಶಿಗಳು ಜಾತೀಕುಂಠಗಳು ಲವಂಗ ತ್ವಕ್ಫಲಗಳು ಹೀಗೆ ಹದಿನಾರು ಗಂಧಗಳು. ಅವುಗಳಲ್ಲಿ ಎರಡೆರಡು ಪರ್ಜನ್ಯಾದಿ ಅಂತರಾಳಗಳಲ್ಲಿ ತುಂಬಬೇಕು. ಹೊರಗೆ ದಿಕ್ಕು ವಿದಿಕ್ಕುಗಳಲ್ಲಿ ಖಂಡಗಳಲ್ಲಿ ನ್ಯಗ್ರೋಧ ಮೊದಲಾದ ಅಂಕುರಗಳನ್ನು ತುಂಬಬೇಕು. ಹೀಗೆ ನವೋತ್ತರಶತ ತೊಂಭತ್ತೇಳು ಕಲಶಗಳಲ್ಲಿ ಪೂರಣ ಕ್ರಮವು.

## ಏಕಾಶೀತಿ ಕಲಶೇ

ಹನ್ನೊಂದು ಪದದ ಮಂಡಲದಲ್ಲಿ ಹಿಂದಿನಂತೆ ನವಕಗಳನ್ನು ಒಂಭತ್ತನ್ನಾಗಿಬೇಕು. ಪಂಚಷಷ್ಟಿ (ಅರವತ್ತೈದು) ಕಲಶದಲ್ಲಿ ಹನ್ನೊಂದು ಪದದ ಮಂಡಲದಲ್ಲಿ ಹಿಂದಿನಂತೆ ನವಕಗಳನ್ನು ಮಾಡಿ ಹೊರಗಿನ ಎಂಟು ನವಕಗಳಲ್ಲಿ ಎರಡು ಪದಗಳನ್ನು ತೆಗೆದು ಎಂಟು ಸಪ್ತಕಗಳನ್ನು ಮಾಡಬೇಕು. ಹೀಗೆ ಮಧ್ಯಮ ದ್ವಂದ್ವದಲ್ಲಿ ಪದ ಕ್ರಮವು. ಅಲ್ಲಿ ಬ್ರಹ್ಮ ಕಲಶದಲ್ಲಿ ಆಜ್ಯದಿಂದ ತುಂಬಿಸಬೇಕು. ಅದರ ಹೊರಗೆ ದಲಕಲಶಗಳ ದಿಕ್ಕು ವಿದಿಕ್ಕುಗಳ ಕ್ರಮದಿಂದ ಗೋಮೂತ್ರ, ಗೋಮಯ, ಹಾಲು, ಮೊಸರು, ಗೋರೋಚನಜಲ, ಕೌಶ(ಕುಶಜಲ) ರತ್ನ, ಗಂಧ ಇವುಗಳನ್ನೂ , ಹೊರಗೆ ಎಂಟು ಖಂಡಗಳಲ್ಲಿ ದಿಕ್ಕು ವಿದಿಕ್ಕುಗಳ ಕ್ರಮದಿಂದ ಮಧು ಗುಳ, ಕಷಾಯ, ಬೀಜಗಳು, ಮೃಜ್ಜಲ, ತಿಲ ಪುಷ್ಪಗಳು, ಸ್ವರ್ಣ ಹೀಗೆ ಎಂಟು ದ್ರವ್ಯಗಳು. ಹೀಗೆ ಮಧ್ಯಮ ದ್ವಂದ್ವಗಳಲ್ಲಿ ಹದಿನೇಳು ದ್ರವ್ಯಗಳಿಂದ ತುಂಬಬೇಕು.

* * * *

## ಏಕೋನಪಂಚಾಶತ್ಕಲಶದಲ್ಲಿ

ನವಪದದ ಮಂಡಲದಲ್ಲಿ ಮಧ್ಯದಲ್ಲಿ ನವಕವು. ಹೊರಗಿನ ದಿಕ್ಕುಗಳಲ್ಲಿ ಆರು ವಿದಿಕ್ಕುಗಳಲ್ಲಿ ನಾಲ್ಕು ಮಾಡಬೇಕು. ಇಪ್ಪತ್ತೈದು ಕಲಶದಲ್ಲಿ ನಡುವೆ ನವಕ, ಹೊರಗೆ ದಿಕ್ಕುಗಳಲ್ಲಿ ಮೂರು, ಕೋಣಗಳಲ್ಲಿ ಒಂದೊಂದನ್ನು ಮಾಡೇಕು. ಹೀಗೆ

ಅಧಮಗಳೆರಡರಲ್ಲಿ ಪದಕ್ರಮವು. ಇಲ್ಲಿ ಅಧಮ ದ್ವಂದ್ವದಲ್ಲಿ ಬ್ರಹ್ಮಕಲಶದಲ್ಲಿ ಪಂಚಗವ್ಯವು. ಅದರ ದಲ ಕಲಶಗಳಲ್ಲಿ ದಿಕ್ಕೋಣ ಕ್ರಮದಿಂದ ಮಧು, ಕ್ಷೀರ, ಘೃತ, ದಧಿ, ಗುಡ, ಇಕ್ಷುಜಲ, ತೈಲ ನಾಳಿಕೇರ ಜಲ ಹೀಗೆ ಎಂಟು ದ್ರವ್ಯಗಳನ್ನು ತುಂಬಬೇಕು. ಅದರ ಹೊರಗಡೆಯಲ್ಲಿ ಎಂಟು ಖಂಡಗಳಲ್ಲಿ ದಿಕ್ಕೋಣ ಕ್ರಮದಿಂದ

ಪಾದ್ಯ, ಅರ್ಘ್ಯ, ಆಚಮನ, ಕಷಾಯ, ರತ್ನಜಲ, ಪಲ್ಲವಜಲ(ಫಲಜಲ?), ಗಂಧಜಲ, ಪುಷ್ಪಜಲ ಹೀಗೆ ಎಂಟು ದ್ರವ್ಯಗಳನ್ನು ತುಂಬಬೇಕು. ಹೀಗೆ ಅಧಮ ದ್ವಂದ್ವದಲ್ಲಿ ಸಪ್ತದಶ ದ್ರವ್ಯಗಳು. ಹೀಗೆ ಒಂಭತ್ತು ಬಗೆಯ ಕಲಶಗಳಲ್ಲಿ ತುಂಬುವ ಕ್ರಮವು. ಸರ್ವಬ್ರಹ್ಮಕಲಶದಲ್ಲಿ ಗಾಯತ್ರಿ ಮಂತ್ರವು. ದ್ರವ್ಯಪೂರ್ಣ ಪರಿಕಲಶಗಳಲ್ಲಿ ಮೂಲಮಂತ್ರವು. ಉಳಿದ ಶುದ್ಧ ಜಲದಿಂದ ತುಂಬಿದ ಕಲಶಗಳಲ್ಲಿ ಅಂಗಮಂತ್ರವು. ಮಧ್ಯದಿಂದ ತುಂಬಿದ ಕ್ರಮದಿಂದಲೇ ಅಭಿಷೇಕಕ್ರಮವು. ಅಥವಾ ಬ್ರಹ್ಮ ಕಲಶದಲ್ಲಿ ಮೂಲಷಣ್ಮುಖ ವಿದ್ಯೆ (ಉಪಚಾರಮಂತ್ರ) ತಮರ್ವಂತಂ ನ– ಮೊದಲಾಗಿ ಸೂತ್ರೋಕ್ತ ಮಂತ್ರವು. ಪರಿಖಂಡದ ಬ್ರಹ್ಮಕಲಶಗಳಲ್ಲಿ ಮೂಲಮಂತ್ರವು. ದ್ರವ್ಯಪೂರ್ಣ ಪರಿಕಲಶಗಳಲ್ಲಿ ಗಾಯತ್ರೀ ಮಂತ್ರವು. ಉಳಿದ ಶುದ್ಧ ಜಲ ತುಂಬಿದ ಪರಿಕಲಶಗಳಲ್ಲಿ ಹೃದಯ ಮಂತ್ರವು. ಐನೂರು ಸಂಖ್ಯಾ ಪೂರಣವಾಗಿ ಹೊರಗೆ ಕೋಣಗಳಲ್ಲಿ ಯಾವ ಉಪಕಲಶವು ಸೇರಿಸಲ್ಪಟ್ಟಿದೆಯೋ ಆ ಖಂಡದ ಕೊನೆಯಲ್ಲಿ ಅದನ್ನೂ ಅಭಿಷೇಕ ಮಾಡಬೇಕು. ಪುನಃ ಇನ್ನೂರ ಐವತ್ತು ಕಲಶಗಳಲ್ಲಿ ಹೊರಗೆ ದಿಕ್ಕು ಹಾಗೂ ಕೋಣಗಳಲ್ಲಿ ಯಾವ ಪಂಚಕ ಒಂದೊಂದು ಸೇರಿಸಲ್ಪಟ್ಟಿದೆ ಆ ಖಂಡದಲ್ಲಿ ಸೇರಿದ್ದಾದರೂ ಮಾನುಷಾಂಶ ದ್ರವ್ಯ ತುಂಬಿದುದರಿಂದ ಆ ಸಂಯುಕ್ತ ಕಲಶಗಳಿಂದ ಮಾನುಷಾವರಣದ ಕಾರಣವಾಗಿ ಪ್ರತ್ಯೇಕವಾಗಿ ದೇವರಿಗೆ ಅಭಿಷೇಕ ಮಾಡಬೇಕು. ಹೀಗೆ ಒಂಭತ್ತು ಬಗೆಯ ಕಲಶವು.

* * * *

## ವಿಘ್ನೇಶೇ ಕಲಶ ಪ್ರಕಾರಃ

ಅಲ್ಲಿ ಕಲಶ ಸಂಖ್ಯೆಯನ್ನು ಮಂಡಲ ಕ್ರಮವನ್ನೂ ಶಿವನಿಗೆ ಹೇಳಿದಂತೆ ಮಾಡಬೇಕು. ಅಲ್ಲಿ ಬ್ರಹ್ಮಕಲಶದಲ್ಲಿ ಮುಕ್ತಾಫಲ ಮೊದಲಾಗಿ ಅಯಸ್ಕಾಂತ ಪರ್ಯಂತವಾಗಿ ಶಂಕರನಾರಾಯಣನಿಗೆ ಹೇಳಿದ ಹನ್ನೆರಡು ರತ್ನಗಳನ್ನು ತುಂಬಬೇಕು. ಪುನಃ ದೈವಿಕ ಹಾಗೂ ಮಾನುಷಾವರಣದಲ್ಲಿ ದಿಕ್ಕು ವಿದಿಕ್ಕುಗಳ ಕ್ರಮದಿಂದ ಪಾದ್ಯ ಮೊದಲಾದ ಹದಿನಾರು ದ್ರವ್ಯಗಳಿಂದ ತುಂಬಬೇಕು. ಇದು ಹದಿನೇಳು ದ್ರವ್ಯಪೂರಣ ಕ್ರಮವು.

ಇಪ್ಪತ್ತೈದು ದ್ರವ್ಯಗಳಲ್ಲಿ ಮಾನುಷಾಂತರಾಳದಲ್ಲಿ ಗುಡ ಮೊದಲಾದ ಎಂಟು ದ್ರವ್ಯಗಳಿಂದ ತುಂಬಬೇಕು. ಹೀಗೆ ಪಂಚವಿಂಶತಿ ದ್ರವ್ಯಪೂರಣ ಕ್ರಮವು. ಅಲ್ಲಿ ಪಾದ್ಯ ಅರ್ಘ್ಯ ಆಚಮನೀಯ ಕ್ಷೀರ ದೈವಿಕೆಯಲ್ಲಿ ದಿಕ್ಕುಗಳಲ್ಲಾಗಿರುತ್ತವೆ. ದಧಿ ಘೃತ ಮಧು ಪಂಚಗವ್ಯವು ದೈವಿಕದಲ್ಲಿ ಕೋಣಗಳಲ್ಲಿ. ಫಲ ಭಕ್ಷ್ಯ ಯವ ವ್ರೀಹಿಗಳು ಮಾನುಷದಲ್ಲಿ ದಿಕ್ಕುಗಳಲ್ಲಿ. ತಿಲ ರತ್ನ ಸುವರ್ಣ ವಿದ್ರುಮಗಳು ಮಾನುಷದಲ್ಲಿ ವಿದಿಕ್ಕುಗಳಲ್ಲಿ– ಹೀಗೆ ಹದನೇಳು ದ್ರವ್ಯಗಳು. ಗುಳ, ಪುಷ್ಪಜಲ, ದೂರ್ವಾಜಲ, ಧಾತುಜಲ, ಮೃಜ್ಜಲ, ಕುಶಜಲ, ಮುಕ್ತಾರತ್ನ, ನಾಳಿಕೇರ ಕ್ಷೀರ– ಹೀಗೆ ಎಂಟು ದ್ರವ್ಯಗಳನ್ನು ಅಂತರಾಳದ ಎಂಟರಲ್ಲಿ ತುಂಬಬೇಕು. ಹೀಗೆ ಇಪ್ಪತ್ತೈದು ದ್ರವ್ಯಗಳನ್ನು ಆಯಾಯ ದೇವತಾ ಮಂತ್ರಗಳಿಂದ ತುಂಬಬೇಕು. ಬ್ರಹ್ಮಕಲಶದಲ್ಲಿ ಗಣೇಶಾಯ ನಮಃ । ಪಾದ್ಯಾದಿ ದ್ರವ್ಯಗಳಲ್ಲಿ ಪಿತೃಭ್ಯೋ । ಸರಸ್ವತ್ಯೈ । ಸ್ವಾಹಾಯೈ । ಸೋಮಾಯ । ರುದ್ರಾಯ । ಅಗ್ನಯೇ ನಮಃ । ಗುಹಾಯ । ಸಾವಿತ್ರ್ಯೈ । ಗಣೇಶಾಯ । ಗಜಸ್ಯಾಯ । ವಾಯವೇನಮಃ । ವಿಶ್ವೇಭ್ಯೋ ದೇವೇಭ್ಯೋ । ಯಮಾಯ । ವೈಶ್ರವಣಾಯ । ಬ್ರಹ್ಮಣೇ । ರವಯೇ ॥ ೧೬ ॥ ದುರ್ಗಾಯೈ । ವಿಷ್ಣವೇ । ಲಕ್ಷ್ಮ್ಯೈ । ಸಪ್ತ ಋಷಿಭ್ಯೋ । ಪೃಥಿವ್ಯೈ । ಅಗ್ನಯೇ । ವರುಣಾಯ । ಸೋಮಾಯ । ಹೀಗೆ ದ್ರವ್ಯದೇವತೆಗಳು ತುಂಬಲು ಹೇಳಲ್ಪಟ್ಟವು. ಆಮೇಲೆ ಕಲಶದ್ರವ್ಯಗಳು ಮುಕ್ತಾಫಲ ಮೊದಲಾದುವುಗಳು ಶಂಕರನಾರಾಯಣನಿಗೆ ಹೇಳಿದುವುಗಳೇ ಸ್ಫಟಿಕರಹಿತವಾದ ಹನ್ನೆರಡು ರತ್ನಗಳು. ಪುನಃ ಪಾದ್ಯ ಅರ್ಘ್ಯ ಆಚಮನ ಪುಷ್ಪ ಫಲರತ್ನ ಹೀಗೆ ಆರು ದ್ರವ್ಯಗಳು. (ಶೈಲಮೃತ್ಸ್ನಾದಿ) ಶಿವನಿಗೆ ಹೇಳಿದವುಗಳಾಗಿವೆ. ಧಾತುಗಳು ಶ್ಯಾಮಾದಿ ದುರ್ಗಿಗಳಿಗೆ ಹೇಳಿದವುಗಳು. ಪೃಥುಕ ಅಪೂಪ ಲಡ್ಡುಕ ಶಷ್ಕುಲಿಗಳು ಭಕ್ಷ್ಯದ್ರವ್ಯಗಳು. ವೇದಿಕ್ಷೇತ್ರ ಗಜ ಉಕ್ಷ ಶೃಂಗ ಗಿರಿ ವಲ್ಮೀಕ ಮೂಷಿಕಾಲಯ ತೀರ್ಥಗಳ– ಎಂಟು ಬಗೆಯ ಮಣ್ಣುಗಳು ಇವು ಕಲಶ ದ್ರವ್ಯಗಳು. ಇಪ್ಪತ್ತೈದು ದ್ರವ್ಯಗಳ ಮಂತ್ರಗಳು– ಇದಂ ವಿಷ್ಣುಃ * * ಸುರೇ । ಪಾದ್ಯೇ ಪಿತೃಭ್ಯೋ ॥ ೧ ॥ ಮೂಲೋಪಚಾರ ಪ್ರಣವಾನಿ ಸರ್ವತ್ರ ॥ ಅರ್ಘ್ಯೇ– ಆಪೋಹಿಷ್ಠಾ * * ಚಕ್ಷಸೇ । ಸರಸ್ವತ್ಯೈ ನಮಃ ॥ ೨ ॥ ಆಚಮನೇ– ಆಪಃ ಪುನಂತು * * ಸ್ವಾಹಾ । ಸ್ವಾಹಾಯೈ ॥ ೩ ॥ ಕ್ಷೀರೇ– ಆಪ್ಯಾಯಸ್ವ * * ಸಂಗಥೇ । ಸೋಮಾಯ ॥ ೪ ॥ ದಧ್ನಿ– ದಧಿಕ್ರಾವ್ಣೋ * * ತಾರಿಷತ್ । ರುದ್ರಾಯ ॥ ೫ ॥ ಘೃತೇ– ತತ್ಸವಿತುಃ * * ಚೋದಯಾತ್ । ಅಗ್ನಯೇ ॥ ೬ ॥ ಮಧುನಿ– ಮಧುವಾತಾ * * ಭವಂತು ನಃ । ಗುಹಾಯ ॥ ೭ ॥ ಪಂಚಗವ್ಯೇ– ಅಗ್ನಿಮೀಳೇ * * ಧಾತಮಂ । ಸಾವಿತ್ರ್ಯೈ ನಮಃ ॥ ೮ ॥ ಇತಿ ದೈವಿಕೆ । ಮಾನುಷಾವರಣದಲ್ಲಿ– ಫಲೋದಕೇ– ಮಾನಸ್ತೋಕೇ * * ಹವಾಮಹೇ ॥ ಗಣೇಶಾಯ ನಮಃ ॥ ೯ ॥ ಭಕ್ಷ್ಯದ್ರವ್ಯೇ– ಓಂ ಗಂ ಗಣಪತಯೇ ನಮಃ (ಮೂಲಮಂತ್ರಃ) ವಾಯವೇ ನಮಃ ॥ ೧೦ ॥ ಯವೋದಕೇ– ಓಷಧೀರಿತಿ * * ಪೂರುಷ । ವಿಶ್ವೇಭ್ಯೋ ದೇವೇಭ್ಯೋ ನಮಃ ॥ ೧೧ ॥

ಶಾಲ್ಯುದಕೇ– ಆಶುಃ ಶಿಶಾನೋ * * ಮಿಂದ್ರಃ । ಯಮಾಯ ॥ ೧೨ ॥ ತಿಲೋದಕೇ– ಪಿತರಃ ಪಿತಾಮಹಾಃ * * ದೂತ್ಯಾಂ। ವೈಶ್ರವಣಾಯ ನಮಃ ॥ ೧೩ ॥ ರತ್ನಜಲೇ– ಹಿರಣ್ಯವರ್ಣಾ * * ಭವಂತು । ಬ್ರಹ್ಮಣೇ ॥ ೧೪ ॥ ಸ್ವರ್ಣಜಲೇ- ಬ್ರಹ್ಮಜಜ್ಞಾನಂ * * ತಶ್ಚವಿವಃ । ರವಯೇ ॥ ೧೫ ॥ ವಿದ್ರುಮ ಜಲೇ– ರಕ್ಷೋಹಣಂ ವಾಜಿನ * * ನಕ್ತಂ । ದುರ್ಗಾಯ್ಯೈ ನಮಃ ॥ ೧೬ ॥ ಗುಡೇ– ಅಗ್ನೇತ್ವಂಪಾರಯಾ * * ಶಂಯೋಃ । ವಿಷ್ಣವೇ ॥ ೧೭ ॥ ಪುಷ್ಪಜಲೇ– ಪುಷ್ಪಾವತೀಃ * * ಯಿಷ್ಣವಃ । ಲಕ್ಷ್ಮ್ಯೈ ॥ ೧೮ ॥ ದೂರ್ವಾಜಲೇ– ಶಂನೋ ದೇವೀ * * ವಂತು ನಃ । ಸರ್ಪಶೀರ್ಭ್ಯೋ ನಮಃ ॥ ೧೯ ॥ ಧಾತುಜಲೇ- ದೇವಸ್ಯತ್ವಾ * * ಭಿಷಿಂ ಚಾಮಿ । ಪೃಥಿವ್ಯೈ ॥ ೨೦ ॥ ಮೃಜ್ಜಲೇ– ಉದ್ಧೃತಾಸಿವರಾಹೇಣ * * ಪ್ರತಿಷ್ಠಿತಃ । ಅಗ್ನಯೇ ನಮಃ ॥ ೨೧ ॥ ಕುಶಜಲೇ– ಅಗ್ನ ಆಯಾಹಿವೀತಯೇ * * ಬರ್ಹಿಷಿ । ವರುಣಾಯ ನಮಃ ॥ ೨೨ ॥ ಮುಕ್ತಾರತ್ನಜಲೇ- ಸುಮುದ್ರಂ ಗಚ್ಛಸ್ವಾಹಾ । ಸೋಮಾಯ ॥ ೨೩ ॥ ನಾಳಿಕೇರ ಕ್ಷೀರೇ– ಯಾಃ ಫಲಿನೀರ್ಯಾ * * ತ್ವಂ ಹಸಃ । ಈಶಾನಾಯ ನಮಃ ॥ ೨೪ ॥ ಬ್ರಹ್ಮಕಲಶೇ– ಗಣಾನಾಂತ್ವ ಗಣಪತಿಂ * * ಸೀದಸಾದನಂ । ಪಂಚ ತತ್ತ್ವಾದಯಃ । ಗಂ ಗಣೇಶಾಯ ನಮಃ ॥ ಇತಿತತ್ತದ್ದೇವತಾಯುಕ್ತಾಃ ಕಲಶಾಭಿಷೇಕ ಮಂತ್ರಾಃ । ಹೀಗೆ ಪಂಚವಿಂಶತಿ ದ್ರವ್ಯದಿಂದಾಗಲೀ ಹದಿನೇಳು ದ್ರವ್ಯದಿಂದಾಗಲೀ ಗಣಪತಿಯನ್ನು ಅಭಿಷೇಕಿಸಬೇಕು. ಗಜಾನನನಲ್ಲಿ ಶಿವನಿಗೆ ಹೇಳಿದ ಅಷ್ಟಗಂಧವೇ(ದ್ರವ್ಯ)ವಾಗಿದೆ. ಇತಿ ವಿಘ್ನೇಶ್ವರ ಕಲಶ ಪ್ರಕಾರಃ.

* * * *

## ಶಾಸ್ತರಿ ಕಲಶಪ್ರಕಾರಃ

ಅಲ್ಲಿ ಕಲಶ ಸಂಖ್ಯೆಯು ಸಾಧಾರಣವಾಗಿ ಹೇಳಿದುದೇ ಆಗಿದೆ. ಶಿವನಲ್ಲಿ ಯಾ ವಿಷ್ಣುವಿನಲ್ಲಿ ಹೇಳಿದಂತೆ ಮಂಡಲವನ್ನು ಮಾಡಬೇಕು. ಬ್ರಹ್ಮಕಲಶವನ್ನು ಪಾದ್ಯ ದ್ರವ್ಯಗಳಿಂದ ತುಂಬಬೇಕು. ದೈವಿಕಾವರಣದಲ್ಲಿ ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಅರ್ಘ್ಯ, ಆಚಮನ ಪಂಚಗವ್ಯ ಗೋಮೂತ್ರ ಕ್ಷೀರ ದಧಿ ಆಜ್ಯ ಮಧು ಹೀಗೆ ಎಂಟು ದ್ರವ್ಯಗಳು. ಮಾನುಷಾವರಣದಲ್ಲಿ ದಿಕ್ಕು ವಿದಿಕ್ಕುಗಳಲ್ಲಿ ಕಷಾಯ, ಫಲ, ಮಾರ್ಜನ, ಮೃದ, ಸಕ್ತುಜಲ, ಗಂಧಜಲ, ಪುಷ್ಪಜಲ, ಯವಜಲ, । ೧೬ । ಅಂತರಾಳಗಳಲ್ಲಿ ಕ್ರಮವಾಗಿ ಗುಡ, ಇಕ್ಷುಜಲ, ನಾಳಿಕೇರ ಕ್ಷೀರ, ನಾಳಿಕೇರ ಜಲ, ರತ್ನ, ಲೋಹ ತೀರ್ಥಜಲ, ಅಕ್ಷತ ಜಲವನ್ನು ಹೀಗೆ ಹದಿನಾರು ದ್ರವ್ಯಗಳನ್ನು ತುಂಬಬೇಕು.

* * * *

## ದ್ರವ್ಯಪೂರಣ ದೇವತೆಗಳು

ಪಿತೃಭ್ಯೋ ನಮಃ– ಹೀಗೆ ಬ್ರಹ್ಮ ಕಲಶದಲ್ಲಿ ತುಂಬಿಸಬೇಕು. ಅರ್ಘ್ಯಾದಿ ಪರಿಖಂಡ ದೇವತೆಗಳು– ಶ್ರಿಯೈ । ಸರಸ್ವತ್ಯೈ । ಸಾವಿತ್ರ್ಯೈ । ಗಾಯತ್ರ್ಯೈ । ಸೋಮಾಯ । ರುದ್ರಾಯ । ಅಗ್ನಯೇ । ಸ್ಕಂದಾಯ ಇದು ದೈವಿಕಾವರಣದಲ್ಲಿ. ಮಾನುಷಾವರಣದಲ್ಲಿ- ವಿಶ್ವಾಯ ಅಥವಾ ವಿಶ್ವೇಭ್ಯೋ ದೇವೇಭ್ಯೋ । ವಿಘ್ನೇಶಾಯ । ಪೃಥಿವ್ಯೈ । ಜ್ಯೇಷ್ಠಾಯ್ಯೈ । ಇಂದ್ರಾಯ । ಸಪ್ತ ಋಷಿಭ್ಯೋ । ವಾಯವೇ । ನರಸಿಂಹಾಯ । ದುರ್ಗಾಯ್ಯೈ । ಶ್ರೀಧರಾಯ । ಬ್ರಹ್ಮಣೇ । ವೈಶ್ರವಣಾಯ । ಪುರುಷಾಯ । ನಿರ್ಋತಯೇ । ಪರಾಯ । ಹೀಗೆ ಇಪ್ಪತ್ತೈದು ದ್ರವ್ಯಗಳಲ್ಲಿ ದೇವತೆಗಳು. ಅಷ್ಟಗಂಧ ನಿಶಾಚೂರ್ಣ ಅಕ್ಷತ ಪುಷ್ಪ ತಿಲಗಳಿಂದ ಪಾದ್ಯವು ಬ್ರಹ್ಮ ಕಲಶದಲ್ಲಿ ತುಂಬಬೇಕು. ದೈವಿಕಾದಿಗಳಲ್ಲಿ ಕ್ರಮವಾಗಿ ಸರ್ಷಪ ತಿಲ ಕ್ಷೀರ ಕುಶ ಅಷ್ಟಗಂಧ ಪುಷ್ಪಗಳಿಂದ ಅರ್ಘ್ಯವು. ಲವಂಗ ಪದ್ಮ ಅಷ್ಟಗಂಧಜಲಗಳಿಂದ ಆಚಮನವು. ಹಾಲು ಮರದ ತೊಪ್ಪೆಗಳಿಂದ ಕಷಾಯವು. ರಾತ್ರಿ ಐಂದ್ರೀ ಅಕ್ಷತ ಗಂಧ ಪುಷ್ಪ ಸಹಾಭದ್ರ ಕುಶಾಗ್ರ ಇವುಗಳಿಂದ ಮಾರ್ಜನ. ಕ್ಷೇತ್ರ ಅದ್ರಿ ವೇದಿ ವೃಷಶೃಂಗ, ನದೀದ್ವಿತೀರ– ಇಲ್ಲಿಯ ಮಣ್ಣುಗಳು. ವಿಷ್ಣುವಿನಲ್ಲಿ ಹೇಳಿದ ಲೋಹಗಳು. (ಚಿನ್ನ ಬೆಳ್ಳಿ ತಾಮ್ರ ಕಬ್ಬಿಣ ತವರ) ಮುಕ್ತಾ ವೈಡೂರ್ಯ ವಜ್ರಮಣಿ ಮರಕತ ಗೋಮೇದ ಪುಷ್ಯರಾಗ ಇಂದ್ರನೀಲ ವಿದ್ರುಮ ಸಹಿತವಾದ ಶಿವನಿಗೆ ಹೇಳಿದ ಒಂಭತ್ತು ರತ್ನಗಳು. ಗಂಧ ಪುಷ್ಪ ಫಲಗಳು ಶಿವನಿಗೆ ಯಾ ವಿಷ್ಣುವಿಗೆ ಹೇಳಿದುದು ಸ್ವೀಕರಿಸಬೇಕು.

* * * *

## ಅಭಿಷೇಕ ಮಂತ್ರಗಳು

ಷಣ್ಮಂತ್ರ ಮೂಲಪ್ರಣವ ದ್ರವ್ಯಪೂರಣ ನಾಮಮಂತ್ರಗಳಿಂದಲೂ ಪಾದ್ಯ ಮೊದಲಾದ ದ್ರವ್ಯಪೂರ್ಣ ಕಲಶಗಳಿಂದ ತುಂಬಿದ ಕ್ರಮದಿಂದಲೇ ಅಭಿಷೇಕ ಮಾಡಬೇಕು. ಆಯಾಯ ದ್ರವ್ಯಕಲಶದ ಅಭಿಷೇಕಾನಂತರದಲ್ಲಿ ಆಯಾಯ ಖಂಡಗಳಲ್ಲಿರುವ ಶುದ್ಧ ಜಲ ಪೂರ್ಣ ಕಲಶಗಳಿಂದ ಪೂರಣ ಕ್ರಮದಿಂದಲೇ ಅಭಿಷೇಕಿಸಬೇಕು. ಅಲ್ಲಿ ಪಂಚಗವ್ಯದಿಂದ ತತ್ಸವಿತುಃ– ಮೊದಲಾಗಿ ಐದು ಮಂತ್ರಗಳಿಂದ ಷಣ್ಮಂತ್ರ ಮೊದಲಾದುವುಗಳಿಂದ ಅಭಿಷೇಕವು. ಷಣ್ಮಂತ್ರಗಳು– ರೇವಂತಾಯ । ಮಹಾಶಾಸ್ತ್ರೇ । ಗೋಪ್ತ್ರೇ । ಪ್ರಭವೇ । ದೀಪ್ತ್ರೇ । ಪ್ರಶಾಸ್ತ್ರೇ । (ಮೂಲ) ಓಂ ಘ್ರೂಂ ನಮಃ ಪರಾಯ ಗೋಪ್ತ್ರೇ । ಪಿತೃಭ್ಯಃ ॥ ಗೋಮೂತ್ರದಿಂದ-

ತತ್ಸವಿತುಃ * * ಷಣ್ಮಂತ್ರ ಮೊದಲಾದುವುಗಳಿಂದ ॥ ಕ್ಷೀರದಲ್ಲಿ– ಆಪ್ಯಾಯಸ್ವ * * ಷಣ್ಮಂತ್ರ ಮೊದಲಾದುವು ॥ ದಧ್ನಾ– ದಧಿಕ್ರಾವ್ಣೋ * * ಷಣ್ಮಂತ್ರಾದಿಗಳಿಂದ ॥ ಆಜ್ಯೇ– ತೇಜೋಽಸಿತೇಜೋ * * ಷಣ್ಮಂತ್ರಾದಿಗಳು ॥ ಮಧುನಿ– ಮಧುವಾತಾಋತಾ * * ಷಣ್ಮಂತ್ರಾದಿಗಳು. ಆಮೇಲೆ ಕಷಾಯಾದಿ ಹದಿನಾರು ದ್ರವ್ಯಕಲಶಗಳಿಂದ ಅಭಿಷೇಕಿಸಬೇಕು. ಇಲ್ಲಿ ಪಾದ್ಯಾದಿ ಮಧು ಕೊನೆಯದಾದ ಒಂಭತ್ತು ಕಲಶಗಳಿಂದ ಅಭಿಷೇಕವು ಅಧಮವಿಧಿ ಎಂದು ಹೇಳಲ್ಪಟ್ಟಿದೆ. ಪಾದ್ಯಾದಿ ಅಕ್ಷತೆಯು ಕೊನೆಯಾದ ಇಪ್ಪತ್ತೈದು ದ್ರವ್ಯಗಳಿಂದ ಅಭಿಷೇಕವು ಉತ್ತಮಾಭಿಷೇಕವೆನಿಸಿಕೊಳ್ಳುತ್ತದೆ. ಪಾದ್ಯಾದಿ ಯವೋದಕಾಂತಿಮವಾದ ಹದಿನೇಳು ದ್ರವ್ಯಗಳಿಂದ ಅಭಿಷೇಕವು ಮಧ್ಯಮಾಭಿಷೇಕ ವಿಧಿ ಎನಿಸಿಕೊಳ್ಳುತ್ತದೆ. ಹೀಗೆ ಮೂರು ವಿಧವಾದ ಕಲಶಾಭಿಷೇಕದಲ್ಲಿ ಅವರವರಿಗೆ ಸರಿ ಹೊಂದುವಂತೆ ಸಂದರ್ಭಕ್ಕನುಗುಣವಾಗಿ ಶಾಸ್ತಾರನನ್ನು ಅಭಿಷೇಕಿಸಬೇಕು. ಇತಿ ಶಾಸ್ತರಿ ಕಲಶವಿಧಿಃ.

ಈ ರೀತಿಯಾಗಿ ಅಲ್ಲಲ್ಲಿ ಹೇಳಿದ ದ್ರವ್ಯದ ಪೂರಣವನ್ನು ಮಾಡಿ ಪಂಚಗವ್ಯಾದಿ ಪ್ರತಿ ದ್ರವಕಲಶದಲ್ಲಿ ಪಲ್ಲವ ಮೊದಲಾದುವನ್ನಿರಿಸಿ ಪ್ರತ್ಯೇಕಿಸಿ ಉಳಿದ ದ್ರವ್ಯ ತುಂಬಿದ ಕಲಶಗಳನ್ನು ಆಯಾಯ ಪರಿಕಲಶಗಳನ್ನೂ ಪೂಜಿಸಲ್ಪಟ್ಟ ನೀರಿನಿಂದ ತುಂಬಿಸಿ, ಪಲ್ಲವ ಚಕ್ರಿಕಾದಿಗಳನ್ನಿರಿಸಿ ಪ್ರತಿಖಂಡದಲ್ಲೂ ಪೂರಣ ಕ್ರಮದಿಂದಾವಾಹಿಸಿ ಸಕಲೀಕರಣದೊಡನೆ ಆಯಾಯ ಮೂಲದಿಂದಾವಾಹಿಸಿ. ಪೂಜಿಸಿ ನೈವೇದ್ಯ ಮಾಡಿ ಪ್ರಸನ್ನ ಪೂಜೆ ಮಾಡಿ ವ್ಯಾಪಿಸಿ ಲಯಾಂಗ ಮಾಡಿ ರಕ್ಷಿಸಬೇಕು. ಬ್ರಹ್ಮಕಲಶದಲ್ಲಿ ಎರಡು ಬಟ್ಟೆಯಿಂದ ಸುತ್ತವೇಕು. ಎಲ್ಲಾ ಕಲಶಗಳನ್ನೂ ಬಟ್ಟೆ ದರ್ಭೆಗಳಿಂದ ಮುಚ್ಚಬೇಕು. ಅಧಿವಾಸ(ಹೋಮ)ವನ್ನು ಮಾಡಬೇಕು.

* * * *

## ಉತ್ಸವ ಪ್ರಕರಣ

ಗುರುಗಣಪತಿಯರನ್ನು ನಮಸ್ಕರಿಸಿ, ಪುಣ್ಯಾಹವಾಚನವನ್ನು ಮಾಡಿ ನಾಂದೀ ಸಮಾರಾಧನೆಯನ್ನು ಮಾಡಿ ಋತ್ವಿಜರನ್ನು ವರಿಸಬೇಕು. ಅಲ್ಲಿ ಮೊದಲು ಅಂಕುರಾರ್ಪಣವನ್ನು ಮಾಡಬೇಕು. ಅಂಕುರಾರ್ಪಣವನ್ನು ಹಿಂದೆ ಹೇಳಲಾಗಿದೆ. ಮುಂದೆ ಭೇರೀತಾಡನವು ಹೇಳಲ್ಪಡುತ್ತದೆ. ರಾತ್ರಿಯಲ್ಲಿ ಭೇರೀತಾಡನವನ್ನು ಮಾಡಬೇಕು. ದೇವರ ಸಮೀಪದಲ್ಲಿ ಸ್ಥಂಡಿಲವನ್ನು ಬರೆದು ಪತ್ರಸ್ನ ಆಸನವನ್ನು ಮಾಡಿ ಆ ಭೇರಿಯನ್ನು ಹೊಸ ಬಟ್ಟೆಯಿಂದ ಸುತ್ತಿ ಸ್ಥಂಡಿಲದಲ್ಲಿರಿಸಿ, ಪೀಠ ಪೂಜೆ ಮೊದಲಾದುವನ್ನು ಮಾಡಿ ಗಂಧ ಪುಷ್ಪಾಕ್ಷತಾದಿಗಳಿಂದ ಪೂಜಿಸಿ ದೇವತೆಗಳನ್ನು ಆವಾಹಿಸಬೇಕು. ಮಧ್ಯದಲ್ಲಿ– ರುದ್ರಾಯ ನಮಃ । ದಕ್ಷಿಣವಕ್ತ್ರೇ– ಬ್ರಹ್ಮಣೇ ನಮಃ । ವಾಮಮುಖೇ– ವಿಷ್ಣವೇ ನಮಃ । ದಕ್ಷವಲಯೇ– ಸೂರ್ಯಾಯ । ಉತ್ತರ ವಲಯೇ– ಚಂದ್ರಾಯ । ಸಪ್ತಕೀಲೇಷು ಕ್ರಮಶಃ– ಬ್ರಾಹ್ಮ್ಯೈ । ಮಾಹೇಶ್ವರ್ಯೈ । ಕೌಮಾರ್ಯೈ । ವೈಷ್ಣವ್ಯೈ । ವಾರಾಹ್ಯೈ । ಇಂದ್ರಾಣ್ಯೈ । ಚಾಮುಂಡಾಯೈ । ಹೀಗೆ ಏಳು ಮಾತೃಕೆಗಳು. ನವಕೀಲೇಷು– ಆದಿತ್ಯಾಯ । ಚಂದ್ರಮಸೇ । ಅಂಗಾರಕಾಯ । ಬುಧಾಯ । ಬೃಹಸ್ಪತಯೇ । ಶುಕ್ರಾಯ । ಶನೈಶ್ಚರಾಯ । ರಾಹವೇ । ಕೇತವೇ । ಏಕಾದಶ ಕೀಲೇಷು– ಏಕಾದಶ ರುದ್ರೇಭ್ಯಃ । (ಅಜೈಕಪದೇ । ಅಹಿರ್ಬುಧ್ನ್ಯಾಯ । ವಿರೂಪಾಕ್ಷಾಯ । ಸುರೇಶ್ವರಾಯ । ಜಯಂತಾಯ । ಬಹುರೂಪಾಯ । ತ್ರ್ಯಂಬಕಾಯ । ಅಪರಾಜಿತಾಯ । ವೈವಸ್ವತಾಯ । ಸಾವಿತ್ರಾಯ । ಹರಾಯ ನಮಃ) ಚರ್ಮಸೂತ್ರೇ– ವಾಸುಕಯೇ । ಪ್ರಹಾರೇ– ಷಣ್ಮುಖಾಯ । ಪಟಹೇ– ವಿಷ್ಣವೇ । ಸುಷಿರೇ– ವಾಯವೇ । ಶಬ್ದೇ– ಬ್ರಹ್ಮಣೇ । ರಸನಾವಾಸೇ– ಈಶ್ವರಾಯ ನಮಃ– ಈ ರೀತಿಯ ಕ್ರಮದಿಂದ ಆವಾಹಿಸಿ ಗಂಧ ಪುಷ್ಪಾದಿಗಳಿಂದ ಷೋಡಶೋಪಚಾರಗಳಿಂದ ಪೂಜಿಸಿ ನೈವೇದ್ಯ ಮಾಡಿ ನೀರಾಜನವನ್ನು ಮಾಡಿ ಪುಷ್ಪಾಂಜಲಿಯನ್ನು ಮಾಡಿ ಅಸ್ತ್ರರಾಜನನ್ನು ಸ್ಮರಿಸಿ ಭೇರೀತಾಡನ ಮಾಡಬೇಕು.

ಆಮೇಲೆ ಗಂಧ ಮಾಲ್ಯಾದಿಗಳಿಂದ ಅಲಂಕರಿಸಲ್ಪಟ್ಟ ಬಟ್ಟೆಯನ್ನು ತೊಟ್ಟ ಉತ್ತರೀಯವನ್ನು ಧರಿಸಿದ ಉಪವೀತವನ್ನು ಹೊಂದಿದ ಸ್ನಾನಾದಿಗಳಿಂದ ಪರಿಶುದ್ಧನಾದ ವಾದಕನನ್ನು ಕರೆದು ಪಂಚಾಕ್ಷರಿಯನ್ನು ಸ್ಮರಿಸುತ್ತಾ ಶುದ್ಧವಾದ ನೀರಿನಿಂದ ಅವನನ್ನು ಪ್ರೋಕ್ಷಿಸಬೇಕು. ಅವನು ಕೈ ತೊಳೆದುಕೊಂಡ ನಂತರ ಅವನಿಗೆ ಹೂವು ಅಕ್ಷತೆಯನ್ನು ಕೊಟ್ಟು ದೇಶಿಕನು ಅಸ್ತ್ರರಾಜನನ್ನು ಸ್ಮರಿಸಬೇಕು. ವಾದಕನು ಕೈಯಲ್ಲಿರುವ ಪುಷ್ಪಾಕ್ಷತೆಯನ್ನು ಭೇರಿಯ ಮೇಲೆ ಹಾಕಬೇಕು. ಆಮೇಲೆ ವಾದಕನು ದೇಶಿಕನ ಅನುಮತಿಯೊಡನೆ ಭೇರಿಯನ್ನು ಹೆಗಲಲ್ಲಿ ಏರಿಸಿ ಶಿವ ಮೊದಲಾದ ದೇವರನ್ನು ಇಂದ್ರಾದಿ ಲೋಕಪಾಲರನ್ನೂ ಸ್ಮರಿಸುತ್ತಾ ಉತ್ಸವಕ್ಕಾಗಿ ಆಮಂತ್ರಿಸಿ ವಿಶೇಷವಾಗಿ ಬಲಿತಾಳವೆಲ್ಲವನ್ನೂ ಬಾರಿಸಬೇಕು.

**ಕಹಾಳಃ ಪಟಹಃ ಶಂಖೋ ಜಯಭೇರೀ ಚ ಘಂಟಿಕಾ ।**

**ಏತೇ ಪಂಚ ಮಹಾಶಬ್ದಾಃ ಪಂಚವಾದ್ಯಾಃ ಪ್ರಕೀರ್ತಿತಾಃ ॥**

**ವಾದ್ಯರಾಜ ನಮಸ್ತೇಽಸ್ತು ಮಹಾಗಂಭೀರನಿಸ್ವನಾ ।**

**ದೇವಸಂತೋಷಕಾರಾಯ ಪಟಹಾಯ ನಮೋ ನಮಃ ॥**

ಇತಿ ಭೇರೀತಾಡನಂ.

* * * *

## ಬಲಿತಾಳಂ

ವಾದಕಸ್ತಾಡಯೇತ್ಪಶ್ಚಾದ್ಬಲಿತಾಳಂ ವಿಶೇಷತಃ ।
ಗೇಯ ನೃತ್ಯಾದಿ ಸಂಯುಕ್ತಂ ದಿಶಾತಾಳಂ ತು ಲಂಬಯೇತ್ ॥
ಚಚ್ಚಾಪುಟಂ ತು ಪ್ರಥಮೇ ಚಾಪುಟಂ ತುದ್ವಿತೀಯಕೇ ।
ಇಂದ್ರಸ್ಯ ಸಮತಾಳಂ ತು ಅಗ್ನೇರ್ಬಧ್ವಾ ಪಣಂ ಭವೇತ್ ॥
ಯಮಸ್ಯ ಭೃಂಗಿಣೀ ಪ್ರೋಕ್ತಾ ನೈರ್ಋತಂ ಮಲ್ಲತಾಳಕಂ ।
ವಾರುಣ್ಯಾಂ ತತ್ಪ್ರಹರಕಂ ವಾಯವ್ಯಾಂ ಮಂಜರೀ ಭವೇತ್ ॥
ಸೋಮೇ ತು ಬಲಿತಾಳಂ ಚ ಈಶಾನ್ಯಾಂ ಡಮರೀ ತಥಾ ।
ಏತೈ ಸ್ತಾಳೈಶ್ಚ ಸಂಯುಕ್ತಂ ವಾದಕ ಸ್ತಾಡಯೇತ್ತತಃ ॥
ವೃಷತಾಳಂ ತತಃ ಪಶ್ಚಾತ್ಸರ್ವೇಷಾಮಪಿ ತಾಡಯೇತ್ ।
ನೃತ್ತಂ ಚಾಪ್ಯಷ್ಟದಿಗ್ಭಾಗೇ ಸಂಸ್ಥಿತಾಸ್ತು ಭವೇದಿಹ ॥
ಶಿವಾಯತನಯೋಃಪಿದ್ಭ್ಯಃ ಸರ್ವವಾದ್ಯ ಸಮನ್ವಿತಂ ।
ಗೃಹೀತ್ವಾ ಶಸ್ತ್ರರಾಜಾನಂ ಛತ್ರ ಚಾಮರ ಸಂಯುತಂ ॥
ಧೂಪದೀಪ ಸಮಾಯುಕ್ತಂ ದ್ವಾರಪಾಲ ಸಮನ್ವಿತಂ ।
ಇಂದ್ರಸ್ಥಾನಾದಿ ತೋವಾಪಿ ಬಲಿಂ ದದ್ಯಾತ್ಸ್ವವಾಮತಃ ॥
ಧ್ವಜಪೀಠೇ ಬಲಿಂ ದದ್ಯಾತ್ಪರಿವಾರ ಬಲಿಂ ಹರೇತ್ ।
ಬ್ರಹ್ಮಾದೀಶಾನಪರ್ಯಂತಂ ಗ್ರಾಮೇ ಚೈವ ಬಲಿಂ ಹರೇತ್ ॥
ಸರ್ವೇಷಾಂ ಚ ಗಣಾನಾಂತು ಭೂತಾನಾಂ ಚ ಪಿಶಾಚಕೇ ।
ಬಲಿದಾನಾವಸಾನೇ ಚ ತಾಳಗೇಯ ಸಮನ್ವಿತಂ ॥
ನೃತ್ತೇನ ಚ ಸಮಾಯುಕ್ತಂ ಕಾರಯೇತ್ಸ್ವಸ್ವದಿಕ್ಷು ಚ ।
ಬ್ರಹ್ಮಾಣೇ ಬ್ರಹ್ಮತಾಳಂ ಸ್ಯಾದ್ಭೂತಾಳಂ ತು ಪಿಶಾಚಕೇ ॥
ಸಮತಾಳಂ ತು ಗಂಧಾರಂ ಕೋಲ್ಪಂಬಧ್ವಾಪಣಂ ತತಃ ।
ಶ್ರೀಕ್ರಮೇ ನವ ತಾಳಂ ತು ಕರ್ಕರೀ ಬಲಿತಾಳಕಂ ॥
ಧಕ್ಕರೀ ಕರ್ಕರಾಗೇಣ ವಾಳಿಪಾಣಿಂ ತು ಢಕ್ಕರೀ ।
ಪೂರ್ವಾದಿ ದಿಕ್ಷು ಸಂಯೋಜ್ಯಂ ಪೂರ್ವತಾಳಂ ಯಥಾ ತಥಾ ॥
ಮಧ್ಯಮೇ ದಂಡಪಾಣಿಂ ಸ್ಯಾತ್ಪೂರ್ವೇಸ್ಯಾದೂರ್ಧ್ವತಾಳಕಂ ।
ಆಗ್ನೇಯ್ಯಾಂ ನವತಾಳಂತು ಭೃಂಗಾ ತತ್ರ ಸಿತಾ ಯಮೇ ॥
ನೈರ್ಋತ್ಯಾಂಜಗನಾಗಂ ಚ ವಾರುಣ್ಯಾಂ ನೃತ್ತನೀ ತಥಾ ।
ವಾಯವ್ಯಾಂ ಭ್ರಮರೀ ಚೈವ ಆಲೀಗಂ ಚ ತಥೋತ್ತರೇ ॥

**ಪ್ರತ್ಯಾಲೀ ಭವ ಈಶಾನೇ ಇಂದ್ರಾದಿ ಕ್ರಮತಃ ಸ್ಮೃತಃ ।**

**ಅಥ ಪ್ರದಕ್ಷಿಣಂ ಕೃತ್ವಾ ಪ್ರವಿಶೇದಂಗಣಂ ಪ್ರತಿ ॥**

**ಧ್ವಜಮೂಲೇ ತಥಾ ಬಾಹ್ಯೇ ಬಲಿಂ ತತ್ರಾಪಿ ನಿಕ್ಷಿಪೇತ್ ।**

**ಏವಂಕ್ಷಿತೀ ಮಹಾಶಾಂತಿಂ ರಾಜ್ಞಾಂ ರಾಷ್ಟ್ರವಿವರ್ಧನಂ ॥**

* * * *

## ಕೌತುಕಬಂಧನ

ಉತ್ಸವದ ಆರಂಭದಲ್ಲಿ ಕೌತುಕಬಂಧನವನ್ನು ಮಾಡಬೇಕು. ಪಟ್ಟೆ(ನಾರು) ನೂಲಿನ ಏಳು ದಾರಗಳಿಂದ ತಯಾರಿಸಿದ ಹನ್ನೆರಡು ಅಂಗುಲ ಉದ್ದ ಮೂರು ಗಂಟಿನಿಂದ ಕೂಡಿದ ಕುಂಡ ಅಳತೆಯ ಪರಿಮಿತಿಯದಾಗಲೀ ಗ್ರಂಥಿಯಿಂದ ಕೂಡಿದ ಅರಸಿನದ ಕೊಂಬಿನಿಂದ ಕೂಡಿದ ಕೌತುಕ (ಚಿನ್ನ ಮೊದಲಾದ ದಾರದಿಂದ ನಿರ್ಮಿತ) ಸಂಪಾದಿಸಿ ಸ್ವಸ್ತಿಕ ಪೀಠದಲ್ಲಿರಿಸಿ ಪೀಠ ಪೂಜಾದಿಗಳನ್ನು ಮಾಡಿ ಮೂಲಮಂತ್ರದಿಂದ ದೇವತೆಯನ್ನು ಆವಾಹಿಸಬೇಕು. ಪುನಃ ದಾರಗಳಲ್ಲಿ– ಮಹಾಶೇಷಾಯ ನಮಃ– ಮಹಾಶೇಷಮವಾಹಯಾಮಿ । ಗ್ರಂಥಿಷು– ಗೌತಮಾಯ ನಮಃ । ನಿಶಾಮೂಲೇ– ಚಂದ್ರಾಯ ನಮಃ(ಹಿಮಾಂಶವೇ ನಮಃ) । ಏವಮಾವಾಹ್ಯ ಅಸ್ತ್ರಮಂತ್ರದಿಂದಾವಾಹಿಸಿ ಪ್ರೋಕ್ಷಣೆ ಮಾಡಿ ದಾರವನ್ನು ಮುಟ್ಟಿಕೊಂಡು ಮೂಲಮಂತ್ರವನ್ನು ಎಂಟಾವರ್ತಿ ಜಪಿಸಬೇಕು. ಷೋಡಶೋಪಚಾರಗಳಿಂದಾಗಿ ಯಾ ಗಂಧಾದಿ ಪಂಚೋಪಚಾರಗಳಿಂದಾಗಲೀ ಪೂಜಿಸಿ ಪ್ರಾರ್ಥಿಸಬೇಕು.

**ಶೇಷರಾಜ ನಮಸ್ತೇಽಸ್ತು ನಮಸ್ತೇ ಧರಣೀಧರ ।**
**ಸೂತ್ರರೂಪ ನಮಸ್ತೇಽಸ್ತು ಸರ್ವಮಂಗಲದಾಯಕ ॥**

ಆಮೇಲೆ ಮೂಲಮಂತ್ರವನ್ನು ಜಪಿಸಿ, ಮೂಲಮಂತ್ರವನ್ನು ಜಪಿಸುತ್ತಾ ಸೂತ್ರವನ್ನು ಕಟ್ಟಬೇಕು. **ಓಂ ವಿಶ್ವೇತ್ತಾ ತೇ ಸವನೇಷು ಪ್ರವಾಚ್ಯಾ ಯಾ ಚಕರ್ಥ ಮಘವನ್ನಿಂದ್ರ ಸುನ್ವತೇ। ಪಾರಾವತಂ ಯತ್ಪುರುಸಂಭೃತಂ ವಸ್ವಪಾವೃಣೋಃ ಶರಭಾಯ ಋಷಿಬಂಧವೇ ॥** ಪ್ರಾಸಾದದಲ್ಲಿ ಸೂತ್ರವನ್ನು ಕಟ್ಟಿ, ಆಮೇಲೆ ಮೊದಲು ಆಚಾರ್ಯನಿಗೂ, ಎರಡನೆಯದಾಗಿ ಯಜಮಾನನಿಗೆ, ಮೂರನೆಯದಾಗಿ ಸದಸ್ಯನಿಗೆ, ನಾಲ್ಕನೆಯದಾಗಿ ಬ್ರಹ್ಮನಿಗೆ ಐದನೆಯದಾಗಿ ಹೋತೃಗಳಿಗೆ ಈ ಕ್ರಮದಿಂದ ಸೂತ್ರವನ್ನು ಕಟ್ಟಬೇಕು. ದೇವರಿಗೂ ತ್ರಿಶೂಲಕ್ಕೂ ಮೊದಲು ಕಂಕಣ(ಸೂತ್ರ)ವನ್ನು ಕಟ್ಟಬೇಕು.

**ಶಾಂತಿರಸ್ತು ಶಿವಂ ಮೇಽಸ್ತು ಗ್ರಹಾಃ ಕುರ್ವಂತು ಮಂಗಲಂ ।**

**ಅರಿಷ್ಟಾನಿ ಪ್ರಣಶ್ಯಂತು ದುರಿತಾನಿ ಭಯಾನಿಚ ॥**

ಇತಿ ಕೌತುಕಬಂಧನಂ.

* * * *

## ಬಲಿಕ್ರಿಯಾ ಪ್ರಯೋಗಃ

ಉತ್ಸವವನ್ನಾರಂಭಿಸಿ ರಾತ್ರಿಯಲ್ಲಿ ದೇವರನ್ನು ಪೂಜಿಸಿ, ಶ್ರೀ ಭೂತ ಬಲಿಯನ್ನು ಮಾಡಬೇಕು. ಎರಡನೆಯ ಮೊದಲಾದ ದಿನಗಳಲ್ಲಿ ಬೆಳಿಗ್ಗೆ ಮಧ್ಯಾನ್ಹ ರಾತ್ರಿಯಲ್ಲಿ (ತ್ರಿಕಾಲದಲ್ಲಿ ದೇವರನ್ನು ಪೂಜಿಸಬೇಕು) ಹಗಲೂ ರಾತ್ರಿಯಲ್ಲಿ ಬಲಿಯನ್ನು ಹಾಕಬೇಕು. ಅಲ್ಲಿ ಮಧ್ಯಾನ್ಹದ ಪೂಜೆಯಲ್ಲಿ ಅಭಿಷೇಕ ಕಾಲದಲ್ಲಿ ಶುದ್ಧೋದಕದಿಂದ ಅಭಿಷೇಕಿಸಿ ಪುನಃ ಹಾಲಿನಿಂದ, ಮೊಸರಿನಿಂದ, ತುಪ್ಪದಿಂದ, ಗಂಧೋದಕದಿಂದ ಕ್ರಮವಾಗಿ ಅಭಿಷೇಕಿಸಿ, ಪೂಜಿಸಲ್ಪಟ್ಟ ಪಂಚಗವ್ಯದಿಂದ, ನಾಳಿಕೇರೋದಕದಿಂದ ಪೂಜಿಸಲ್ಪಟ್ಟ ಕಲಶಗಳಿಂದಲೂ ಅಭಿಷೇಕ ಮಾಡಬೇಕು. ಮಧ್ಯ ಮಧ್ಯದಲ್ಲಿ ನೈವೇದ್ಯವನ್ನು ಮಾಡಬಹುದು. ಎರಡು ಬಟ್ಟೆಗಳಿಂದ ಸುಂದರವಾಗಿ ಮನ ಒಪ್ಪುವಂತೆ ತೊಡಿಸಿ ಯಜ್ಞೋಪವೀತವನ್ನು ಸಮರ್ಪಿಸಿ,ಕಿರೀಟ ಮೊದಲಾದ ಆಯಾಯ ಸರಿಹೊಂದುವ ಆಭರಣಗಳಿಂದ ಅಲಂಕರಿಸಬೇಕು. ಪುನಃ ಅಷ್ಟಗಂಧದಿಂದ ಹೂವಿನ ಮಾಲೆಯಿಂದ ಅಲಂಕರಿಸಬೇಕು. ಮೂರು ಕಾಲಗಳಲ್ಲಿಯೂ ಯಾಗದ ಸ್ನಾನದಲ್ಲಿ ಹೇಳುವ ಮಂತ್ರದಿಂದಲಾಗಲೀ ತಮ್ಮ ನಿಜಮೂಲಮಂತ್ರದಿಂದಾಗಲೀ ದೇವರನ್ನು ಪೂಜಿಸಿ, ತುಪ್ಪದಿಂದ ಕೂಡಿ ಗುಡ, ಉಪದಂಶ (ನಂಚಿಕೊಳ್ಳುವುದು) ಮೊದಲಾಗಿ ಬಾಳೆಹಣ್ಣು, ನಾಳಿಕೇರ ಮೊದಲಾದುವುಗಳಿಂದ ಕೂಡಿ ಪಾಯಸ ಮೊದಲಾದ ಹವಿಸ್ಸನ್ನು ನೈವೇದ್ಯ ಮಾಡಬೇಕು. ಶಿವನಲ್ಲಿ ಮಧ್ಯಾಹ್ನದ ಪೂಜೆಯಲ್ಲಿ ಪಂಚಬ್ರಮ್ಹ ಪೂಜಾ ಪಕ್ಷದಲ್ಲಿ ಐದೂ ಮುಖದಲ್ಲಿ ಮೊಸರನ್ನ ಮೊದಲಾಗಿ ನೈವೇದ್ಯ ಮಾಡಬೇಕು. ಅಲ್ಲಿ ಈಶಾನ ಮುಖದಲ್ಲಿ ಹಾಲನ್ನವನ್ನು ನೈವೇದ್ಯ ಮಾಡಬೇಕು.

ಮುಖದಲ್ಲಿ ಸಾಧಾರಣವಾದ ನೈವೇದ್ಯವನ್ನೂ ಮಾಡಬೇಕು. ಅಘೋರ ತತ್ಪುರುಷ ಮುಖದಲ್ಲಿ ಹರಿದ್ರಾನ್ನವನ್ನು ಅಲ್ಲೇ ಮುಖದಲ್ಲಿ ಗುಳಾನ್ನವನ್ನೂ, ಸದ್ಯೋಜಾತ ಮುಖದಲ್ಲಿ ವಾಮದೇವ ಮುಖದಲ್ಲಿ ತಿಲಮಿಶ್ರವಾದ ಅನ್ನ(ಕೃಸರಾನ್ನ)ವನ್ನೂ, ನೈವೇದ್ಯ ಮಾಡಬೇಕೆನ್ನುವುದು ವಿಶೇಷವು. ಅಲ್ಲಿ ಬೆಳಿಗ್ಗೆ ರಾತ್ರಿ ಹಾಲನ್ನ ಹರಿದ್ರಾನ್ನ ಕೃಸರಾನ್ನ ಗುಡಾನ್ನಗಳನ್ನು ಒಂದಾಗಿಸಿ ನೈವೇದ್ಯ ಮಾಡಬಹುದು. ಅಥವಾ ಬೆಳಿಗ್ಗೆ ಉತ್ಸವ ಬಲಿಯನ್ನೂ ರಾತ್ರಿ ಉತ್ಸವ ಬಲಿಯನ್ನಾಗಲೀ ಅಥವಾ ಭೂತ ಬಲಿಯನ್ನಾಗಲೀ ಮಾಡಬಹುದು. ಅಥವಾ ಬೆಳಿಗ್ಗೆ ಉತ್ಸವ ಬಲಿಯನ್ನೂ ರಾತ್ರಿ ಭೂತ ಬಲಿಯನ್ನೂ ಮಾಡಬಹುದು.

ಅಲ್ಲಿ ಮೊದಲು **ಶ್ರೀಭೂತ ಬಲಿಯು** ಬರೆಯಲ್ಪಡುತ್ತದೆ. ಅನಂತರ **ಉತ್ಸವಬಲಿಯು**. ಅಲ್ಲಿ ಮೊದಲು ಹೆಚ್ಚಿನ ಹವಿಸ್ಸನ್ನು ಸಂಪಾದಿಸಿ ಒಂದು ಸ್ಥಳದಲ್ಲಿ ಅಥವಾ ಒಂದು ಪಾತ್ರೆಯಲ್ಲಿ ಹರಡಿ ಇಟ್ಟು ಅಲಂಕರಿಸಿ, ಉಪಸ್ತರಣ ಮಾಡಿ, ಬಾಳೆಹಣ್ಣು ನಾಳಿಕೇರ, ಸಕ್ಕರೆ ಮೊದಲಾದುವನ್ನು ಸೇರಿಸಿ ಅಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಂಡು ದೇಹಶುದ್ಧಿ, ಶಂಖಪೂರಣ ಆತ್ಮಾರಾಧನೆಯನ್ನು ಮಾಡಿ ಗಣಪತಿಯನ್ನು ಪೂಜಿಸಿ ಆಯಾಯ ನಿಜಾಸ್ತ್ರದಿಂದ ನೀರಿನ ಪ್ರೋಕ್ಷಣೆಯನ್ನು ಮಾಡಿ ಮುಚ್ಚಿದ್ದ ಪಾತ್ರವನ್ನು ತೆಗೆದು ತಾಲತ್ರಯ ಮೊದಲಾದುವುಗಳಿಂದ ಸಂರಕ್ಷಣೆ ಮಾಡಿ ತಿರುಗಿ ಪ್ರೋಕ್ಷಣೆಯನ್ನು ಮಾಡಿ ದರ್ಭೆಯಿಂದ ಮುಟ್ಟಿಕೊಂಡು ಶೋಷಣ, ದಾಹನ, ಪ್ಲಾವನಗಳನ್ನು ಮಾಡಿ, ಪೀಠಪೂಜೆಯನ್ನು ಮಾಡಿ ಮೂಲಮಂತ್ರ ಆವಾಹಿಸಿ, ಸಕಲೀಕರಣ ಮಾಡಿ ಪೂಜಿಸಿ ನೈವೇದ್ಯವನ್ನು (ವಿನಂತಿಸಿ)ಮಾಡಿ ಅರ್ಘ್ಯ ಪ್ರದಾನ ಮಾಡಿದರೂ ಮಾಡಬಹುದು. ಪುನಃ ಪ್ರಸನ್ನಗೊಳಿಸಿ, ಲಯಾಂಗವನ್ನು ಮಾಡಿ, ಅದನ್ನು ಮೂರಾಗಿ ವಿಭಾಗಿಸಿ ಮೊದಲನೆಯ ಭಾಗವನ್ನು 'ದೇವೇಭ್ಯೋ ನಮಃ' ಎಂದು ಪೂಜಿಸಿ, ದೈವಿಕವಾಗಿ ಕಲ್ಪಿಸಬೇಕು. ಅರಸಿನ ಪುಡಿ ಮೊಸರು ಅರಳು, ಅರಳು ಹಿಟ್ಟು(ಪುಡಿ) ಮಾಂಸಗಳನ್ನು ಐದು ಭೂತಕ್ರೂರಗಳನ್ನೂ ಎರಡನೆಯ ಭಾಗದಲ್ಲಿ, ಮೂರನೆಯ ಭಾಗದಲ್ಲಿಯೂ ಸೇರಿಸಿ, ಪಾರ್ಷದ್ಭ್ಯೋ ನಮಃ, ಭೂತೇಭ್ಯೋ ನಮಃ– ಹೀಗೆ ಕ್ರಮವಾಗಿ ಪೂಜಿಸಿ ಪಾರ್ಷದ ಹಾಗೂ ಭೌತಿಕಕ್ಕಾಗಿಯೂ ಕಲ್ಪಿಸಬೇಕು. ಅಲ್ಲಿ ದ್ವಾಸ್ಥಾದಿ(ದ್ವಾರಪಾಲರು) ನಿರ್ಮಾಲ್ಯಧಾರಿ ಪರ್ಯಂತವಾಗಿ ಪ್ರಧಾನ ದೇವತೆಗಳೇ ದೇವರು. ಪಾರ್ಷದರು ಭೌತಿಕರು ಪ್ರಸಿದ್ಧರು ಎಂದು ಹವಿಸ್ಸಿನ ಪೂಜೆಯನ್ನು ಮಾಡಿ ಅದನ್ನು ರಕ್ಷಿಸಬೇಕು. ಗಣಪತಿಯನ್ನು ವಿಸರ್ಜಿಸಬೇಕು. ಹೊರಗೆ ದೀಪಾದಿಗಳನ್ನಿರಿಸಿ ವಾದ್ಯಗಳಲ್ಲಿ ಶಕ್ತಿಯಿಂದ ಶಬ್ದ ತತ್ತ್ವದಿಂದಲೂ ಪುಷ್ಪಾಂಜಲಿಯನ್ನು ಮಾಡಿಯಾಗಲೀ ಪೂಜಿಸಲ್ಪಟ್ಟ ವಾದ್ಯಗಳಿಂದ ವಾದಕರಿಂದ ಕೈಯಿಂದ ಹೊಡೆಯುವಿಕೆಯನ್ನು ಮಾಡಿಸಿ, ಬಿಟ್ಟು ಮಂತ್ರಾರ್ಥಗಳ ಜ್ಞಾಪಿಸಿಕೊಳ್ಳುವುದರಿಂದ ಭೂತಗಣಗಳನ್ನು ಆಮಂತ್ರಿಸಬೇಕು. ದ್ವಾರದ ಸಮೀಪದಲ್ಲಿ ನಿಂತು ಪುಷ್ಪಾಂಜಲಿಯನ್ನು ಮಾಡಿ ಅಂಜಲಿ ಮುದ್ರೆಯನ್ನು ಮಾಡಿ

**ಸೃಷ್ಟಿ ಸ್ಥಿತಿ ವಿನಾಶಾನಾಂ ಕರ್ತೃರ್ಭೂತಪತೇ ಪ್ರಭೋ ।**
**ತತ್ಪಾರ್ಷದಾನಾಂ ಮುಖ್ಯಾನಾಂ ಬಲಿದಾನಾಯ ಶಾಧಿಮಾಂ ॥**

ಹೀಗೆ ಪ್ರಾರ್ಥಿಸಿ ಒಳಗೆ ಹೋಗಿ ಬಲಿಕೌತುಕಕ್ಕೆ ಸ್ವಲ್ಪ ಪೀಠವನ್ನು ಪೂಜಿಸಿ ಮೂಲಮಂತ್ರದಿಂದ ಮೂಲಬಿಂಬದಿಂದ ದೇವರನ್ನು ಆವಾಹಿಸಿ (ಉತ್ಸವಮೂರ್ತಿಯಲ್ಲಿ) ಸಕಲೀಕರಣವನ್ನು ಮಾಡಿ ಪೂಜಿಸಿ ಅರ್ಘ್ಯವನ್ನು ಕೊಡಬೇಕು ಅಥವಾ ದೇವರನ್ನು ಪ್ರಾರ್ಥಿಸಿ ಉತ್ಸವ ಮೂರ್ತಿಯಲ್ಲಿ ದೇವರನ್ನು ಮನಸ್ಸಿನಿಂದ ಸೇರಿಸಬೇಕು. ಮೂರ್ತಿಪರಿಂದ ದೇವರನ್ನು ಹಿಡಿಸಿಕೊಂಡು ಹೊರಗೆ ಹೋಗಿ ದೀಪದೊಡನೆ ಆಯಾಯ ಬಲಿಸ್ಥಾನವನ್ನು ಹೊಂದಿ ಉತ್ಸವಮೂರ್ತಿಯನ್ನು ಇದುರಿನಲ್ಲಿರಿಸಿಕೊಂಡು ವಾದ್ಯ ಘೋಷಗಳೊಂದಿಗೆ ಆಯಾಯ ಸ್ಥಾನದಲ್ಲಿ ಬಲಿಯನ್ನು ಹಾಕಬೇಕು. ಆ ಬಲಿಸ್ಥಾನವನ್ನು ಪ್ರೋಕ್ಷಿಸಿ ಹೂವಿನಿಂದ ಪೂಜಿಸಿ ಅಷ್ಟದಳ ಪದ್ಮದಲ್ಲಿ ಆಯಾಯ ದೇವರನ್ನು ಭಾವಿಸಿ ಪಾದ್ಯ ಅರ್ಘ್ಯ ಆಚಮನಗಳನ್ನು ಕೊಟ್ಟು ಆಯಾಯ ಮಂತ್ರದಿಂದ ಜಲಗಂಧಾದಿಗಳಿಂದ ಪೂಜಿಸಿ ಮೂರಾವರ್ತಿ ಬಲಿಯನ್ನು ಹಾಕಬೇಕು. ಆಯಾಯ ಪಕ್ಕದ ಪದದಲ್ಲಿ ತತ್ತತ್ಪಾರ್ಷದೇಭ್ಯೋ ನಮಃ ಎಂದು ಮೂರಾವರ್ತಿ, ಮೂಲದಿಂದ ಒಂದು ಬಾರಿ ಬಲಿಯನ್ನು ಕೊಟ್ಟು, ಒಮ್ಮೆ ನೀರನ್ನು ಕೊಟ್ಟು ಹೂವಿನಿಂದ ಆರಾಧಿಸಿ ಬಲಿಮುದ್ರೆಯನ್ನು ತೋರಿಸಿ ಸಂತೋಷಗೊಳಿಸಬೇಕು. ಹೀಗೆ ಎಲ್ಲಾ ಕಡೆಯಲ್ಲೂ ಬಲಿದಾನದ ವಿಧಾನವು. ವಿಷ್ಣು ಹಾಗೂ ಶಂಕರನಾರಾಯಣರಲ್ಲಿ ಬಾಗಿಲಿನಲ್ಲಿ ಎರಡು ಪಕ್ಕದಲ್ಲಿ ದ್ವಾರಪಾಲಕರನ್ನು ಇದುರಿನ ಮಂಟಪದಲ್ಲಿ ವಾಹನವವನ್ನು ಗರ್ಭಗುಡಿಯ ಹಿಂಭಾಗದಲ್ಲಿ ಅನಂತನನ್ನು ದಕ್ಷಿಣದ ಬಾಗಿಲಿನಲ್ಲಿ ಪಶ್ಚಿಮ ಪೂರ್ವ ಕ್ರಮದಿಂದ ಗಣಪತಿಯನ್ನು ದಕ್ಷಿಣಾ ಮೂರ್ತಿಯನ್ನು ಪೂಜಿಸಬೇಕು. ಶಿವ ಮೊದಲಾದ ಐದು ದೇವತೆಗಳಲ್ಲಿ ಹಿಂಭಾಗದಲ್ಲಿ ಅನಂತನನ್ನು ಹೊರತು ಪಡಿಸಿ, ಹಿಂದೆ ಹೇಳಿದ ದ್ವಾರಪಾಲಕ ಮೊದಲಾದವರನ್ನು ಪೂಜಿಸಬೇಕು. ಶಿವನಲ್ಲಿ ವಾಹನ ಅನಂತರನ್ನು ಹೊರತು ಪಡಿಸಿ ಹಿಂದೆ ಹೇಳಿದ ದ್ವಾರಪಾಲಕ ಮೊದಲಾದವರನ್ನು ಪೂಜಿಸಬೇಕು. ಗರ್ಭಗುಡಿಯ ಹೊರಗೆ ದ್ವಾರಪಾಲಕರಿರುವುದಾದರೆ ದಕ್ಷಿಣಾಮೂರ್ತಿಯ ನಂತರದಲ್ಲಿ ಆ ದ್ವಾರಪಾಲಕರನ್ನು ಪೂಜಿಸಬೇಕು. ಪುನಃ ಎಲ್ಲಾ ದೇವತೆಗಳಲ್ಲಿ ಪೂರ್ವದ್ವಾರದ ಗರ್ಭಗೃಹದಲ್ಲಿ ಇಂದ್ರ ಮೊದಲಾದವರನ್ನು ಗರ್ಭಗುಡಿಯ ಬಾಗಲು ಪಶ್ಚಿಮದಲ್ಲಿದ್ದರೆ ವರುಣ ಮೊದಲಾದ ದಿಕ್ಪಾಲಕರನ್ನೂ ಪೂಜಿಸಬೇಕು. ಶಿವನಲ್ಲಿ ಲೋಕಪಾಲರ ಬಲಿಯ ನಂತರ ಎದುರಿನ ಮಂಟಪದಲ್ಲಿ ನಂದಿಯನ್ನು ಪೂಜಿಸಬೇಕು. ಲೋಕಪಾಲಾ ನಂತರದಲ್ಲಿ ಎಲ್ಲಾ ದೇವತೆಗಳಲ್ಲೂ ದಕ್ಷಿಣ ಭಾಗದಲ್ಲಿ ಗಂಧರ್ವಪದದಲ್ಲಿ ಮಾತೃಕೆಗಳನ್ನೂ, ಭೃಂಗರಾಜ

ಪದದಲ್ಲಿ ಶಾಸ್ತಾರನನ್ನೂ ವಾಯು ದಿಕ್ಕಿನಲ್ಲಿ ದುರ್ಗಿಯನ್ನೂ , ಮುಖ್ಯಪದದಲ್ಲಿ ಸ್ಕಂದನನ್ನೂ ಸೋಮನ ಉತ್ತರದಲ್ಲಿ ವೈಶ್ರವಣನನ್ನು ಉದಿತಿಯ ಸ್ಥಾನದಲ್ಲಿ ನಿರ್ಮಾಲ್ಯಧಾರಿಯನ್ನೂ ಪೂಜಿಸಬೇಕು. ಅಥವಾ ಸೋಮ ಪೂಜಾ ನಂತರ ವೈಶ್ರವಣ ಪೂಜೆ ಎಂದು ವಿಕಲ್ಪವು. ಪ್ರಾಸಾದದ ಒಳಭಾಗದಲ್ಲಿ ಹೊರಭಾಗದಲ್ಲಿಯೂ ದ್ವಾರಪಾಲರನ್ನು ಪೂಜಿಸಿ ವಾಹನ ಮೊದಲಾದುವನ್ನು ಪೂಜಿಸಬೇಕೆಂದು ಮೂರ್ತಿಯ ಭೇದದಿಂದ ವಿಕಲ್ಪವು. ಹೀಗೆ ಒಳಗಡೆ ಬಲಿಕ್ರಮವು. ಶಂಕರನಾರಾಯಣನಲ್ಲಿ ಪ್ರಾಸಾದದ ಒಳಭಾಗದ ಬಾಗಿಲಿನಲ್ಲಿ ಹೊರಗಿನ ಬಾಗಿಲಿನಲ್ಲಿಯೂ, ಸಭೆಯ ಒಳಗಿನ ಬಾಗಿಲಿನಲ್ಲಿ ಹೊರಗಿನ ಬಾಗಿಲಿನಲ್ಲಿಯೂ- ಹೀಗೆ ನಾಲ್ಕು ದ್ವಾರಪಾಲರಾಗಿದ್ದಾರೆ. ಗಣಪತಿಯಲ್ಲಿ ಪ್ರಾಸಾದದ ಒಳಬಾಗಿಲನ್ನೂ ಸಭೆಯ ಹೊರಬಾಗಿಲನ್ನೂ ಬಿಟ್ಟು(ಹೊರತುಪಡಿಸಿ) ಪ್ರಾಸಾದದ ಹೊರ ಬಾಗಿಲಿನಲ್ಲಿ ಸಭೆಯ ಒಳಬಾಗಿಲಿನಲ್ಲಿಯೂ ಎರಡೆರಡು ದ್ವಾರಪಾಲಕರನ್ನು ಪೂಜಿಸಬೇಕು. ಸುಬ್ರಹ್ಮಣ್ಯ ದುರ್ಗಿಯರಲ್ಲಿ ಪ್ರಾಸಾದದ ಒಳದ್ವಾರವನ್ನು ಹೊರತು ಪಡಿಸಿ(ಬಿಟ್ಟು)ಯಾಗಲೀ ನಾಲ್ಕು ಬಗೆಯ ದ್ವಾರಪಾಲರಿಂದ ಕೂಡಿಯಾಗಲೀ ಎನ್ನುವುದಾಗಿ(ವಿಕಲ್ಪ). ಶಿವ ಮತ್ತು ಶಾಸ್ತಾರರಲ್ಲಿ ಸಭಾ ಬಹಿರ್ದ್ವಾರವನ್ನು ಬಿಡಬೇಕು. ವಿಷ್ಣುವಿನಲ್ಲಿ ನಾಲ್ಕನೆಯ ಬಾಗಿಲನ್ನಾಗಲೀ ಮೊದಲನೆಯ ಬಾಗಿಲನ್ನಾಗಲೀ ಬಿಡಬೇಕು. ಶಂಕರನಾರಾಯಣನಲ್ಲಿ ಪ್ರಾಸಾದದ ಒಳಗೆ ನಂದಿನೇ ನಮಃ । ಚಂಡಾಯ ನಮಃ । ಅಲ್ಲಿ ಹೊರಬಾಗಿಲಿನಲ್ಲಿ- ಜಯ ಸೇನಾಯ । ವಿಷ್ವಕ್ಸೇನಾಯ । ಪುನಃ ವಾಹನ ಮೊದಲಾಗಿ ಚಂಡ ಸೇನಾ ಪರ್ಯಂತವಾಗಿ, ಪುನಃ ಸಭಾ ಒಳಗೆ- ಉಮಾಯ್ಯೆ । ಶ್ರಿಯ್ಯೆ । ಸಭೆಯ ಹೊರಗೆ- ಶೂಲಾಯ । ಚಕ್ರಾಯ । ಎಂದು. ಗಣಪತಿಯಲ್ಲಿ ಪ್ರಾಸಾದದಲ್ಲಿ- ವಜ್ರದಂತಾಯ । ಗಜಾಸ್ಯಾಯ । ಪುನಃ ವಾಹನಾದಿ ಕುಂಭೋದರ ಪರ್ಯಂತ, ಸಭೆಯ ಒಳಗೆ- ಚಂಡವಿಕ್ರಮಾಯ । ವಿಘ್ನಕರಾಯ ಎಂದು. ದುರ್ಗಿಯಲ್ಲಿ ನಾಲ್ಕು ದ್ವಾರಪಾಲಕರ ಪಕ್ಷದಲ್ಲಿ- ಪ್ರಾಸಾದದ ಒಳಗಡೆ- ಚಂಡಿಕಾಯ್ಯೆ । ಅಂಬಿಕಾಯ್ಯೆ । ಅಲ್ಲಿ ಹೊರಭಾಗದಲ್ಲಿ- ಜಯಾಯ್ಯೆ । ವಿಜಯಾಯ್ಯೆ । ಎಂದು. ಪುನಃ ವಾಹನ ಮೊದಲಾದುವುಗಳು. ಮೂರು ದ್ವಾರಪಾಲಕರ ಪಕ್ಷದಲ್ಲಿ ಪ್ರಾಸಾದದಲ್ಲಿ ಹೊರಗೆ- ಚಂಡಿಕಾ, ಅಂಬಿಕೆಯರು ಆಮೇಲೆ ವಾಹನಾದಿಗಳು. ಕೊನೆಯಲ್ಲಿ- ಮುಂಡಿನ್ಯೈ ನಮಃ । ಪುನಃ ಸಭೆಯ ಒಳಗೆ- ಹ್ಲಾದಿನ್ಯೈ । ಮೋದಿನ್ಯೈ । ಸಭೆಯ ಹೊರಗೆ- ಜಯಂತ್ಯೈ । ಕಾತ್ಯಾಯನ್ಯೈ । ಎಂದು. ಶಿವನಲ್ಲಿ- ನಂದಿನೇ । ಮಹಾಕಾಲಾಯ । ಪುನಃ ಗಣಪತಯೇ । ದಕ್ಷಿಣಾಮೂರ್ತಯೇ । ಪ್ರಾಸಾದದಲ್ಲಿ ಹೊರಗೆ- ಶೂಲಪಾಣಯೇ । ಪರಶುಪಾಣಯೇ । ಪುನಃ ಇಂದ್ರಾದಿ ಯಾ ವರುಣಾದಿ ಅಷ್ಟಮೂರ್ತಿಯ ಕೊನೆಯಲ್ಲಿ ಬ್ರಹ್ಮನನ್ನು, ಅನಂತನನ್ನು ವಾಹನ ಮಾತೃಕೆಯರು ಮೊದಲಾಗಿ ಚಂಡೇಶ್ವರ ಪರ್ಯಂತವಾಗಿ. ಪುನಃ ಸಭಾದ ಒಳಗಡೆ- ತೀಕ್ಷ್ಣದಂತಾಯ । ಮೃಗಾಸ್ಯಾಯ । ಎಂದು. ಸುಬ್ರಮ್ಹಣ್ಯನಲ್ಲಿ- ಪ್ರಾಸಾದದಲ್ಲಿ- ಸುಕುಮಾರಾಯ । ವಜ್ರಸೇನಾಯ । ಅಥವಾ ವಜ್ರಹಸ್ತಾಯ । ಅಥವಾ ಶಕ್ತಿ ಪಾಣಯೇ । ಪುನಃ ವಾಹನಾದಿ ಧೂರ್ತಸೇನಾ ಪರ್ಯಂತ- ಸಭಾ ಒಳಗಡೆ- ಅಗ್ನಿಕೇತವೇ । ಸೂರ್ಯಕೇತವೇ । ಇತಿ. ಆಮೇಲೆ ಶಾಸ್ತಾರನಲ್ಲಿ- ಪ್ರಾಸಾದದಲ್ಲಿ- ಒಳಗೆ ಕ್ಷುರಿಕಾಪಾಣಯೇ । ಖಡ್ಗಹಸ್ತಾಯ । ಹೊರಬಾಗಿಲಿನಲ್ಲಿ- ವೀರಬಾಹವೇ । ಮಹಾವೀರಾಯ । ಎಂದು. ವಾಹನಾದಿ ಘೋಷವತೇ ನಮಃ- ಪರ್ಯಂತವಾಗಿ. ಪುನಃ ಸಭಾದ ಒಳಗಡೆ ತೀಕ್ಷ್ಣಾಯ । ತೀಕ್ಷ್ಣದಂತಾಯ- ಇತಿ. ವಿಷ್ಣುವಿನಲ್ಲಿ- ಪ್ರಾಸಾದದಲ್ಲಿ- ಒಳಗೆ- ಚಂಡಾಯ । ಪ್ರಚಂಡಾಯ । ಓಂ ಪಕ್ಷಿರಾಜಾಯ ಸ್ವಾಹಾ । ಅನಂತಾಯ । ಗಂ ಗಣಪತಯೇ । ದಕ್ಷಿಣಾಮೂರ್ತಯೇ । ಲೋಕಪಾಲ ಮೊದಲಾಗಿ ವಿಷ್ವಕ್ಸೇನ ಪರ್ಯಂತ. ಸಭೆಯ ಒಳದ್ವಾರದಲ್ಲಿ- ಶ್ರಿಯ್ಯೆ । ಪುಷ್ಟ್ಯೈ । ಹೊರಬಾಗಿಲಿನಲ್ಲಿ- ಚಕ್ರಪಾಣಯೇ । ಶಂಖಪಾಣಯೇ- ಎಂದು. ಅಥವಾ ಪ್ರಾಸಾದದ ಹೊರಗೆ ಚಂಡ ಪ್ರಚಂಡರು। ಗರುಡಾನಂತ ಗಣಪತಿ ದಕ್ಷಿಣಾ ಮೂರ್ತಿಗಳು. ಲೋಕಪಾಲಾದಿ ವಿಷ್ವಕ್ಸೇನಾಂತ ಸಭಾಂತರ್ದ್ವಾರದಲ್ಲಿ- ಶ್ರಿಯ್ಯೆ । ಪುಷ್ಟ್ಯೈ । ಹೊರಬಾಗಲಿನಲ್ಲಿ- ಚಕ್ರಪಾಣಯೇ । ಶಂಖಪಾಣಯೇ । ಇವರು ಪ್ರಾಸಾದದ ಹೊರಭಾಗದಲ್ಲಿರುವುದಾದರೆ ಸಭಾದ ಹೊರಭಾಗದಲ್ಲಿರುತ್ತಾರೆ. ಹೀಗೆ ದ್ವಾರಪಾಲರಲ್ಲಿ ವ್ಯವಸ್ಥೆಯು.

## ವಾಹನಗಳು

ಶಿವನಲ್ಲಿ- ವೃಷಾಯ ನಮಃ । ವಿಷ್ಣುವಿನಲ್ಲಿ- ಗರುಡಾಯ ನಮಃ । ಶಂಕರನಾರಾಯಣನಲ್ಲಿ- ವೃಷಾಯ ಗರುಡಾತ್ಮನೇ । (ವೃಷಗರುಡಾತ್ಮನೇ) ಗಣಪತಿಯಲ್ಲಿ- ಮಹಾಚಾಷಾಯ । ಶಾಸ್ತಾರನಲ್ಲಿ- ಅಶ್ವಾಯ । ಸುಬ್ರಹ್ಮಣ್ಯನಲ್ಲಿ ಮಯೂರಾಯ । ದುರ್ಗಿಯಲ್ಲಿ- ಮಹಾಸಿಂಹಾಯ ನಮಃ- ಇತೀ ವಜ್ರನಖದಂಷ್ಟ್ರಾಯುಧಾಯ ಮಹಾಸಿಂಹಾಯ ಹುಂ ನಮಃ- ಇತಿವಾ. ಗುಹನಲ್ಲಿ ಕುಕ್ಕುಟವು ಧ್ವಜ ಲಕ್ಷಣವು. ಬೇರೆಡೆ ವಾಹನಗಳೇ ಧ್ವಜಲಕ್ಷಣಗಳೆಂದು ತಿಳಿಯಬೇಕು. ಹೀಗೆ ವಾಹನಗಳು, ಧ್ವಜಚಿನ್ಹೆಗಳು. ಅಲ್ಲಿ ದ್ವಾರಪಾಲರ ಮೊದಲಾಗಿ ನಿರ್ಮಾಲ್ಯಧಾರಿ ಪರ್ಯಂತ ಪ್ರಧಾನರು. ಅನಂತರ ತತ್ಪಾರ್ಷದೇಭ್ಯೋ ನಮಃ ಎನ್ನುವುದಾಗಿ. ಮಾತೃವೀರಭದ್ರ- ಮೊದಲಾದುವುಗಳಿಂದ ಪ್ರಾರ್ಥಿಸಿ ವೀರಭದ್ರನನ್ನು ಗಣಪತಿಯನ್ನೂ, ತತ್ಪಾರ್ಷದರನ್ನೂ, ಬ್ರಾಹ್ಮ್ಯಾದಿ ಸತ್ಪಾರ್ಷದರನ್ನೂ ಅನಂತರ ಮಾತೃಭ್ಯೋ- ಲೋಕಮಾತೃಭ್ಯೋ- ಸರ್ವಮಾತೃಭ್ಯೋ- ಸರ್ವಮಾತೃ ಗಣೇಭ್ಯ ಎನ್ನುವುದಾಗಿ. ತತ್ಪಾರ್ಷದರ ಕೊನೆಯಲ್ಲಿ ನಾನಾ ರೂಪಧರೇಭ್ಯಃ- ಮೊದಲಾಗಿ ತತ್ಪಾರ್ಷದರಿಗೆ- ಆಕಾಶಮಾತೃಗಣೇಭ್ಯಃ ಮೂಲವನ್ನು ಹೇಳಿ, ಆಯಾಯ ಮೂಲದ ಕೊನೆಯಲ್ಲಿ ತತ್ಪಾರ್ಷದರ ಕೊನೆಯಲ್ಲಿ- ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ- ಹೀಗೆ ಜಲಾಪ್ಲುತ ಬಲಿಯು. ಪುನಃ ನಿರ್ಮಾಲ್ಯಧಾರಿಯ ಬಲಿಯಲ್ಲಿ ತಮ್ಮ ತಮ್ಮ ಪರಿಷನ್ಮೂಲದ ಕೊನೆಯಲ್ಲಿ

ಜಲಾಪ್ಲುತ ಬಲಿಯು. ಹೀಗೆ ಒಳಗೆ ಬಲಿಯನ್ನು ಮಾಡಿ ಸಭಾದ್ವಾರ ಪಾಲಕರನ್ನು ಪೂಜಿಸಿ, ಹೊರಗೆ ಹೊರಟು (ಬಂದು) ಹೂವಿನಿಂದ ಪೂಜಿಸಿ,

**ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ ।**
**ತೇ ವಿಷ್ಣುಪಾರ್ಷದಾಃ ಸರ್ವೇ ಗೃಣ್ಹಂತು ಬಲಿಮುತ್ತಮಂ ॥**

ಹೀಗೆ ಪ್ರಾರ್ಥಿಸಿ, ಮುಂಭಾಗ ಮೊದಲಾಗಿ ಎಂಟು ದಿಕ್ಕುಗಳಲ್ಲಿ ಧ್ವಜಾಧಿಪರನ್ನು ಪೂಜಿಸಿ, ಅದರ ಹೊರಭಾಗದಲ್ಲಿ ಆಯಾಯ ಗಣಗಳನ್ನು ಪೂಜಿಸಿ, ಮಹಾಬಲಿಪೀಠದಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಅದರ ಆವರಣವನ್ನು ಪೂಜಿಸಿ, ಅದರ ಮಧ್ಯದಲ್ಲಿ ಆ ಅಧಿಪನನ್ನು ಪೂಜಿಸಿ, ಜಲಾಪ್ಲುತ ಬಲಿಯನ್ನು ಮಾಡಿ, ಮುಂಭಾಗದ ಎಂಟು ದಿಕ್ಕಿನಲ್ಲಿ ಎಂಟು ಗ್ರಹರನ್ನು ಪೂಜಿಸಿ, ಆಯಾಯ ಸಂದರ್ಭದಲ್ಲಿ ದಿಗ್ಬಲಿಯನ್ನು ಮಾಡಿ, ಪುನಃ ಶೀಘ್ರ ಪ್ರದಕ್ಷಿಣ ಬಲಿಯನ್ನು ಮಾಡಿ ಹೇಳಲ್ಪಟ್ಟ ದಿಕ್ಕಿನಲ್ಲಿ ಕ್ಷೇತ್ರಪಾಲನನ್ನು ಪೂಜಿಸಿ, ಬಲಿಯನ್ನು ಕೊಟ್ಟು ಮೂಲದಿಂದ ಬಲಿ ಹಾಕಿ ಸಮಾಪ್ತಿಗೊಳಿಸಬೇಕು. ಹೀಗೆ ಹೊರಗಿನ ಬಲಿವಿಧಾನವು.

* * * *

**ಮಂತ್ರಗಳು** ಬರೆಯಲ್ಪಡುತ್ತವೆ. **ಶಿವನಲ್ಲಿ**– ನಂದಿನೇ । ಮಹಾಕಾಳಾಯ । ಭೂತನಾಥಾಯ । ಮಹೀಧರಾಯ । ಪರ್ವತೇಶಾಯ । ಗುಹೇಶಾಯ । ಕಾಲಪಾಶಾಯ । ಕೃಪಾಲಿನೇ । ಇತಿ ಧ್ವಜಾಧಿಪರು. **ಸುಬ್ರಮ್ಹಣ್ಯನಲ್ಲಿ**– ದೇವಸೇನಾಪತಯೇ। ಅಗ್ನಿಲೋಚನಾಯ । ದಂಡಹಸ್ತಾಯ । ಅಸಿಧಾರಿಣೇ । ಕಾಲಪಾಶಾಯ । ಧ್ವಜಶೇಖರಾಯ । ಗದಿನೇ । ಶೂಲವಿಲಾಸಿನೇ । ಹೀಗೆ ಎಂಟು ದಿಕ್ಕಿನಲ್ಲಿ ಬಲಿ ಹಾಕಬೇಕು. ಯಾವಾಗಲೂ ಕೊನೆಯಲ್ಲಿ ಈಶಾನ್ಯದಲ್ಲಿ– ವಿಪ್ರಪ್ರಿಯಾಯ ನಮಃ । ಹೀಗೆ ಒಂಭತ್ತು ಧ್ವಜಾಧಿಪರು. **ವಿಷ್ಣುವಿನಲ್ಲಿ**– ಕುಮುದಾಯ । ಕುಮುದಾಕ್ಷಾಯ । ಪುಂಡರೀಕಾಯ । ವಾಮಾನಾಯ । ಶಂಕುಕರ್ಣಾಯ। ಸರ್ಪನೇತ್ರಾಯ । ಸುಮುಖಾಯ ನಮಃ । ಸುಪ್ರತಿಷ್ಠಿತಾಯ ನಮಃ ॥ **ದುರ್ಗಿಯಲ್ಲಿ**– ಕಾಳ್ಯೈ । ಕರಾಳ್ಯೈ । ವಿರಜಾಯ್ಯೈ । ಮಂದರಾಯ್ಯೈ । ವಿಂಧ್ಯವಾಸಿನ್ಯೈ । ಸುಪ್ರಭಾಯ್ಯೈ ನಮಃ । ಸಿಂಹವಕ್ತ್ರಾಯ್ಯೈ ನಮಃ । ದೈತ್ಯಮರ್ದಿನ್ಯೈ ನಮಃ ॥ **ಶಂಕರನಾರಾಯಣನಲ್ಲಿ**– ನಂದಿನೇಕುಮುದಾತ್ಮನೇ । ಮಹಾಕಾಲಾಯ ಕುಮುದಾಕ್ಷಾತ್ಮನೇ । ಭೂತನಾಥಾಯ ಪುಂಡರೀಕಾತ್ಮನೇ । ಮಹೀಧರಾಯ ವಾಮನಾತ್ಮನೇ । ಪರ್ವತೇಶಾಯ ಶಂಕುಕರ್ಣಾತ್ಮನೇ । ಗುಹೇಶಾಯ ಸರ್ಪನೇತ್ರಾತ್ಮನೇ । ಕಾಲಪಾಶಾಯ ಸುಮುಖಾತ್ಮನೇ। ಕಪಾಲಿನೇ ಸುಪ್ರತಿಷ್ಠಿತಾತ್ಮನೇ ನಮಃ ॥ (ಅಥವಾ ಭೃಂಗೀಶಾಯಕಮುದಾತ್ಮನೇ । ಕಾರ್ತಿಕೇಯಾಯ ಕುಮುದಾಕ್ಷಾತ್ಮನೇ । ವೃಷಾಯ ಪುಂಡರೀಕಾತ್ಮನೇ । ನಂದೀಶಾಯ ವಾಮನಾತ್ಮನೇ । ಮಹಾಕಾಲಾಯ ಶಂಕುಕರ್ಣಾತ್ಮನೇ । ಕುಂಭೋದರಾಯ ಸರ್ಪನೇತ್ರಾತ್ಮನೇ । ಮಹೋದರಾಯ ಸುಮುಖಾತ್ಮನೇ । ವೀರಭದ್ರಾಯ ಸುಪ್ರತಿಷ್ಠಾತ್ಮನೇ ನಮಃ ।) ಇತ್ಯಷ್ಟಾ ॥ **ಶಾಸ್ತಾರನಲ್ಲಿ**– ಗೋಪ್ತ್ರೇ । ಪಿಂಗಲಾಕ್ಷಾಯ । ವೀರಸೇನಾಯ । ಶಾಂಭವಾಯ । ತ್ರಿಣೇತ್ರಾಯ । ಶೂಲಿನೇ ನಮಃ । ದಕ್ಷಾಯ । ಭೀಮರೂಪಾಯ ನಮಃ । ಇತಿ. **ಗಣಪತಿಯಲ್ಲಿ**– ವಜ್ರದಂತಾಯ ನಮಃ । ಗಜಾಸ್ಯಾಯ । ಭೀಮಾಯ । ಮಹಿಷಾಸ್ಯಾಯ। ಮೇಘನಾದಾಯ । ವಿರೂಪಾಕ್ಷಾಯ । ವರದಾಯ । ಸರ್ವಭಕ್ಷಕಾಯ ನಮಃ ॥ ಹೀಗೆ ಧ್ವಜಾಧಿಪರು ಪೂರ್ವಾದಿಕ್ರಮದಿಂದ ಹೇಳಲ್ಪಟ್ಟಿದ್ದಾರೆ. ಅಲ್ಲಿ ದ್ವಾರವನ್ನು ಹೊಂದಿಕೊಂಡು ಧ್ವಜಾಧಿಪರನ್ನು ಪೂಜಿಸಿ, ಬಲಿಯನ್ನು ಕೊಟ್ಟು ಎರಡನೆಯ ಆವರಣದಲ್ಲಿ **ಶಿವನಲ್ಲಿ** ಮುಂದುಗಡೆಯಿಂದ ಎಂಟು ದಿಕ್ಕುಗಳಲ್ಲಿ ಅಥವಾ ಹತ್ತು ದಿಕ್ಕುಗಳಲ್ಲಿ– ವಿಂಶದ್ಭೂತಗಣೇಭ್ಯೋ ನಮಃ ಎಂದು. **ವಿಷ್ಣುವಿನಲ್ಲಿ** ಎದುರಿನಿಂದ ಎಂಟು ದಿಕ್ಕುಗಳಲ್ಲಿ– ಪಂಚಾಶದ್ಭೂತ ಗಣೇಭ್ಯೋ ನಮಃ ಎಂದು. **ಶಂಕರನಾರಾಯಣನಲ್ಲಿ**– ಸಪ್ತತಿಭೂತ ಗಣೇಭ್ಯೋ ನಮಃ । **ಷಣ್ಮುಖನಲ್ಲಿ**– ಷಟ್‌ಭೂತಿ ಗಣೇಭ್ಯೋ ನಮಃ ಎಂದು. ಹಿಂದಿನಂತೆ ದುರ್ಗಿಯಲ್ಲಿ– ಅಷ್ಟಕೋಟಿ ಭೂತಗಣೇಭ್ಯೋ ನಮಃ ಎಂದು. **ಶಾಸ್ತಾರನಲ್ಲಿ**– ಗೋಪ್ತ್ರ ಪಾರ್ಷದೇಭ್ಯೋ ನಮಃ । ಪಿಂಗಲಾಕ್ಷ ಪಾರ್ಷದೇಭ್ಯೋ। ವೀರಸೇನ ಪಾರ್ಷದೇಭ್ಯೋ । ಶಾಂಭವ ಪಾರ್ಷದೇಭ್ಯೋ । ತ್ರಿಣೇತ್ರ ಪಾರ್ಷದೇಭ್ಯೋ । ತ್ರಿಶೂಲ ಪಾರ್ಷದೇಭ್ಯೋ । ದಕ್ಷ ಪಾರ್ಷದೇಭ್ಯೋ । ಭೀಮರೂಪ ಪಾರ್ಷದೇಭ್ಯೋ ನಮಃ । ಎಂದು. **ಗಣಪತಿಯಲ್ಲಿ**– ವಜ್ರದಂತ ಪಾರ್ಷದೇಭ್ಯೋ । ಗಜಾಸ್ಯ ಪಾರ್ಷದೇಭ್ಯೋ । ಭೀಮ ಪಾರ್ಷದೇಭ್ಯೋ । ಮಹಿಷಾಸುರ ಪಾರ್ಷದೇಭ್ಯೋ । ಮೇಘನಾದ ಪಾರ್ಷದೇಭ್ಯೋ । ವಿರೂಪಾಕ್ಷ ಪಾರ್ಷದೇಭ್ಯೋ । ವರದ ಪಾರ್ಷದೇಭ್ಯೋ । ಸರ್ವಭಕ್ಷ ಪಾರ್ಷದೇಭ್ಯೋ ನಮಃ ಎಂದು. ಎರಡನೆಯ ಆವರಣದಲ್ಲಿ ಬಲಿಯನ್ನು ಕೊಟ್ಟು, ಪುನಃ ಮಹಾಬಲಿ ಪೀಠದ ಇದುರಿನಲ್ಲಿ ನಿಂತು ಮಹಾಬಲಿಪೀಠವನ್ನು ಪ್ರೋಕ್ಷಿಸಿ, ಹೂವಿನಿಂದ ಪೂಜಿಸಿ ಅದರ ಸುತ್ತಲೂ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ವಿಷ್ಣುವಿನಲ್ಲಿ ಕುಮುದಾದಿ ಎಂಟನ್ನು ಪೂಜಿಸಿ ಬಲಿಯನ್ನು ಹಾಕಬೇಕು. ಮಹಾಬಲಿಪೀಠದ ಮೇಲೆ ಹರಿಸೇನಾಯ ನಮಃ ಎಂದು ಬಲಿಯನ್ನು ಕೊಟ್ಟು, ಮೂಲಮಂತ್ರದಿಂದ ಪೂಜಿಸಿ, ಬಲಿಯನ್ನು ಕೊಟ್ಟು ಮೂಲದ ಕೊನೆಯಲ್ಲಿ ವಿಷ್ಣುಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ । ಹೀಗೆ ಪೂಜಿಸಿ ಜಲಾಪ್ಲುತ ಬಲಿಯನ್ನು ಕೊಟ್ಟು ಒಮ್ಮೆ ನೀರನ್ನು ಕೊಟ್ಟು ಹೂವಿನಿಂದ ಪೂಜಿಸಿ ಬಲಿಮುದ್ರೆಯನ್ನು ತೋರಿಸಬೇಕು. **ಶಿವನಲ್ಲಿ**– ಮಹಾಬಲಿಪೀಠದ ಎಂಟು ದಿಕ್ಕುಗಳಲ್ಲಿ ಪೂರ್ವಾದಿಯಾಗಿ ಕ್ರಮದಿಂದ– ಭೂತಿದಾಯ ಸ್ವಾಹಾ । ದುರ್ನಿರೀಕ್ಷ್ಯಾಯ । ಭೀಮರೂಪಾಯ । ಸುಲೋಚನಾಯ । ಸುಮುಖಾಯ । ಸುಬಾಹವೇ । ತ್ರಿಶಿರಸೇ । ತ್ರಿಭುಜಾಯ ಸ್ವಾಹಾ । ಎಂದು.

ಕೆಳಭಾಗವನ್ನು ಭಾವಿಸಿ ದಕ್ಷಿಣದ ದಿಗ್ಗಜ (ಕಮುದ) ಪ್ರದೇಶದಲ್ಲಿ– ಪಿಂಗಲಾಯ ಸ್ವಾಹಾ । ಮೇಲ್ಭಾಗವನ್ನು ಭಾವಿಸಿ ಪೀಠದ ಮೇಲ್ಭಾಗದಲ್ಲಿ ಹರಸೇನಾಯ ಸ್ವಾಹಾ । ಎಂದು. ಪುನಃ ಮೂಲದಿಂದ ಬಲಿಯನ್ನು ಕೊಟ್ಟು (ಮೂಲದಿಂದ ಪೂಜಿಸಿ ಬಲಿಯನ್ನು ಕೊಟ್ಟು) ಮೂಲದ ಕೊನೆಯಲ್ಲಿ– **ರುದ್ರಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ** । ಹೀಗೆ ಜಲಾಪ್ಲುತ ಬಲಿಯನ್ನು ಕೊಟ್ಟು ಒಮ್ಮೆ ನೀರನ್ನು ಕೊಟ್ಟು ಪುಷ್ಪಾರಾಧನೆಯ ಕೊನೆಯಲ್ಲಿ ಬಲಿಮುದ್ರೆ ತೋರಿಸಬೇಕು. **ಶಂಕರನಾರಾಯಣನಲ್ಲಿ**– ಬಲಿಪೀಠದ ಪೂರ್ವಾರ್ಧಿಯಾಗಿ ನೈರ್ಋತ್ಯದ ಕೊನೆಯಾಗಿ ಭೂತಿದಾ ಮೊದಲಾಗಿ ನಾಲ್ಕು ಪಶ್ಚಿಮಾದಿ ಈಶಾನಾಂತವಾಗಿ ಕುಮುದಾದಿ ನಾಲ್ಕು ಅಥವಾ ಬಲಿಪೀಠದ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಭೂತಿದಾಯ ಸ್ವಾಹಾ– ಕುಮುದಾಯ ನಮಃ ಮೊದಲಾಗಿ ಹದಿನಾರು ಮಂತ್ರಗಳಿಂದ ಪ್ರತ್ಯೇಕವಾಗಿ ಬಲಿಯನ್ನು ಹಾಕಿ ಕೆಳಭಾಗದಲ್ಲಿ ಪಿಂಗಲಾಯ ನಮಃ ಎಂದು. ಪೀಠದ ಮೇಲೆ ಪರಮೇಷ್ಠೀಶ ಸೇನಾಯ ನಮಃ ಎಂದು ಬಲಿಯನ್ನು ಹಾಕಿ

**ಆಯಾಂತು ಪಾರ್ಷದಾಃ ಸರ್ವೇ ಶಾಂಕರಾ ವೈಷ್ಣವಾ ಸ್ತಥಾ ।**

**ಬಲಿಪೀಠೇಽತ್ರ ಸಂತುಷ್ಟಾಃ ನಿವಸಂತು ಯಥಾ ಸುಖಂ ॥**

**ನಮಃ ಸರ್ವಪಾರ್ಷದೇಭ್ಯೋ ನಮಃ** ಎಂದು ಪುನಃ ಮೂಲದಿಂದ ಬಲಿಯನ್ನು ಹಾಕಿ ಮೂಲದ ಕೊನೆಯಲ್ಲಿ **ಶಿವನಾರಾಯಣ ಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ** । ಇತಿ ಜಲಾಪ್ಲುತ ಬಲಿಯು. **ದುರ್ಗಿಯಲ್ಲಿ**– ಬಲಿಪೀಠದ ಪೂರ್ವಾದಿಯಾಗಿ ಎಂಟು ದಿಕ್ಕುಗಳಲ್ಲಿ ಬ್ರಮ್ಹಘೋಷೈ । ಸುಘೋಷೈ । ಯಜ್ಞವೇಷೈ । ಸುರಂಗಿಣ್ಯೈ । ಸುಮುಖ್ಯೈ । ಸುಭುಜಾಯ್ಯೈ । ಪ್ರಮೋದಿನ್ಯೈ । ಆತ್ಮನ್ಯೈ । ಪೀಠದ ಮೇಲ್ಭಾಗದಲ್ಲಿ– ಬ್ರಾಮ್ಹ್ಯೈ ನಮಃ । ಹೀಗೆ ಬಲಿಯನ್ನು ಕೊಟ್ಟು ಅಲ್ಲಿಯೇ ಅಷ್ಟದಲ ಸ್ಥಾನದಲ್ಲಿ ಕಾಳಿ ಮೊದಲಾದವರನ್ನು ಪೂಜಿಸಿದರೂ ಪೂಜಿಸಬಹುದು. ಪುನಃ ಮೂಲದಿಂದ ಬಲಿಯನ್ನು ಹಾಕಿ ಮೂಲದ ಕೊನೆಯಲ್ಲಿ– **ದುರ್ಗಾಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ** । ಹೀಗೆ ಜಲಾಪ್ಲುತ ಬಲಿಯು. ನಮಸ್ಕರಿಸಿ ಬಲಿಮುದ್ರೆಯನ್ನು ತೋರಿಸಬೇಕು. ॥ * ॥ **ಸುಬ್ರಮ್ಹಣ್ಯನಲ್ಲಿ**– ಬಲಿಪೀಠದ ಪೂರ್ವಾದಿ ಎಂಟು ದಿಕ್ಕುಗಳಲ್ಲಿ– ಶೂರಸೇನಾಯ । ಉಗ್ರಸೇನಾಯ । ಶಿಖಿಸೇನಾಯ । ಜಗತ್ಸೇನಾಯ । ಮಹಾಸೇನಾಯ । ಚಂಡಸೇನಾಯ । ಕ್ರುದ್ಧಸೇನಾಯ । ಕ್ರೂರಸೇನಾಯ । ಎಂದು ಕೆಳಭಾಗದಲ್ಲಿ ಜಗತ್ಸೇನಾಯ । ಮೇಲ್ಭಾಗದಲ್ಲಿ– ಸ್ಕಂದಸೇನಾಯ । ಅಥವಾ ಭೂತಿದಾಯ ಸ್ವಾಹಾ । ಮೊದಲಾಗಿ ಪಿಂಗಲಾಯ ಸ್ವಾಹಾ । ಪರ್ಯಂತವಾಗಿ ಮೇಲ್ಭಾಗದಲ್ಲಿ ಸ್ಕಂದ ಸೇನಾಯ ಎಂದು ಬಲಿಯನ್ನು ಕೊಟ್ಟು–

**ಯೇ ಭೂತಾಃ ಸ್ಕಂದಸೇನಸ್ಯ ಪಾರ್ಷದಾ ಬಲಿಭೋಜಿನಃ ।**

**ತೃಪ್ಯಂತು ತೇ ಮುದಂ ಯಾಂತು ಸದ್ಭ್ಯೋಽಸದ್ಭ್ಯೋ ನಮೋ ನಮಃ ಸ್ವಾಹಾ ॥**

ಹೀಗೆ ಜಲಾಪ್ಲುತ ಬಲಿಯು. ಪುಷ್ಪಾರಾಧನಾ ನಂತರದಲ್ಲಿ ಬಲಿಮುದ್ರೆಯನ್ನು ತೋರಿಸಬೇಕು. ॥ * ॥ ಗಣಪತಿಯಲ್ಲಿ– ಬಲಿಪೀಠದ ಪೂರ್ವಾದಿಯಾಗಿ ಎಂಟು ದಿಕ್ಕುಗಳಲ್ಲಿ– ಗಜವಕ್ತ್ರಾಯ । ಗಣೇಶಾಯ । ವಿನಾಯಕಾಯ । ಚಂಡವಿಕ್ರಮಾಯ । ವಿಘ್ನಕರಾಯ । ಸರ್ಪಮೇಖಲಾಯ । ಶೂರ್ಪಕರ್ಣಾಯ । ನಾಗದಂತಿನೇ । ಎಂದು. ಕೆಳಭಾಗವನ್ನು ಸಂಕಲ್ಪಿಸಿ ಕುಮದದಲ್ಲಿ– ರುದ್ರವಕ್ತ್ರಜಾಯ । ಮೇಲ್ಭಾಗದಲ್ಲಿ– ವಿಘ್ನಸೇನಾಯ । ಮೂಲದಿಂದ ಬಲಿಯನ್ನು ಹಾಕಿ ಮೂಲದ ಕೊನೆಯಲ್ಲಿ– **ವಿಘ್ನಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ** । ಹೀಗೆ ಜಲಾಪ್ಲುತ ಬಲಿಯು. ಪುನಃ ಒಮ್ಮೆ ನೀರನ್ನು ಕೊಟ್ಟು ಬಲಿಮುದ್ರೆಯನ್ನು ಪ್ರದರ್ಶಿಸಬೇಕು. **ಶಾಸ್ತಾರನಲ್ಲಿ**– ಬಲಿಪೀಠದ ಮುಂಭಾಗದಲ್ಲಿ ನಿಂತು ಬಲಿಪೀಠವನ್ನು ಪ್ರೋಕ್ಷಿಸಿ ಹೂವನ್ನು ಸಮರ್ಪಿಸಿ ನಮಸ್ಕರಿಸಿ– ಅಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ವೀರಬಾಹವೇ ನಮಃ । ಮಹಾವೀರಾಯ । ವಿದ್ಯುದ್ದಂತಾಯ । ವಿಲಾಸಿನೇ । ತೀಕ್ಣಾಯ । ತೀಕ್ಷದಂತಾಯ । ತಾರಾಕ್ಷಾಯ । ಭವೋದ್ಭವಾಯ ನಮಃ । ಇತಿ. ಕೆಳಗಿನ ಭಾಗವನ್ನು ಸಂಕಲ್ಪಿಸಿ ಕುಮುದಕದಲ್ಲಿ– ಭೂತೇಶಾಯ । ಮೇಲ್ಭಾಗದಲ್ಲಿ– ಶಾಸ್ತೃಸೇನಾಯ ನಮಃ । ಪುನಃ ಮೂಲದಿಂದ ಬಲಿಯನ್ನು ಹಾಕಿ ಮೂಲದ ಕೊನೆಯಲ್ಲಿ– **ಶಾಸ್ತೃಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ** । ಹೀಗೆ ಜಲಾಪ್ಲುತ ಬಲಿಯು. ಪುನಃ ನೀರನ್ನು ಕೊಟ್ಟು ಬಲಿಮುದ್ರೆಯನ್ನು ತೋರಿಸಬೇಕು. ಹೀಗೆ ಏಳು ದೇವತೆಗಳಲ್ಲಿ ಮಹಾಬಲಿ ಪೀಠದಲ್ಲಿ ಬಲಿಯ ಕ್ರಮವು. ಪುನಃ ಅದರ ಹೊರಭಾಗದಲ್ಲಿ ವಾಸ್ತು ಬಲಿಯಲ್ಲಿ ಹೇಳಿದ ದೇವಗ್ರಹ ಮೊದಲಾದುವನ್ನು ದ್ವಾರವನ್ನನುಸರಿಸಿ ಪಿತೃಗ್ರಹಗಳನ್ನಾಗಲೀ ಪೂಜಿಸಿ ಬಲಿಯನ್ನು ಹಾಕಬೇಕು. ಅಲ್ಲಿ ದೇವಗ್ರಹಾದಿಗಳ ಬಲಿದಾನದಲ್ಲಿ– **ಓಂ ನಮೋ ನಾರಾಯಣಾಯ ವಿಷ್ಣು ಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ**– ಹೀಗೆ ವಿಷ್ಣುವಿನಲ್ಲಿ. ಶಿವಾದಿ ದೇವತೆಗಳಲ್ಲಿ ಆಯಾಯ ಮೂಲದ ಕೊನೆಯಲ್ಲಿ– **ಆಯಾಯ ಪಾರ್ಷದೇಭ್ಯಃ ಸರ್ವೇಭ್ಯೋ ಭೂತೇಭ್ಯೋ ನಮೋ ನಮಃ ಸ್ವಾಹಾ**– ಇತಿ ಜಲ ಗಂಧ ಪುಷ್ಪ ಹವಿಸ್ಸಿನಿಂದ ಆಯಾಯ ದಿಗ್ಬಲಿಯನ್ನು ಮಾಡಬೇಕು. ಹೀಗೆ ಎಂಟು ದಿಕ್ಕುಗಳಲ್ಲಿ ಬಲಿಯನ್ನು ಕೊಟ್ಟು ದಿಗ್ಬಲಿ ಮಂತ್ರದಿಂದ ಶೀಘ್ರ ಪ್ರದಕ್ಷಿಣ ಬಲಿಯನ್ನು ಮಾಡಿ ಪುನಃ ಈಶಾನ್ಯ ದಿಕ್ಕಿನಲಿ– ಕ್ಷಂ ಕ್ಷೇತ್ರಪಾಲಾಯ ನಮಃ– ಹೀಗೆ

ಪೂಜಿಸಿ, ಬಲಿಯನ್ನು ಕೊಟ್ಟು, ಆಯಾಯ ಮೂಲದಿಂದಲೂ ಪೂಜಿಸಿ, ಬಲಿಯನ್ನು ಕೊಟ್ಟು ಉಳಿದ ಹವಿಸ್ಸನ್ನು ಅವನಿಗೆ ನೈವೇದ್ಯ ಮಾಡಿ ಅದನ್ನು ವಿಸರ್ಜಿಸಿ ಗಂಡೂಷ ಮೊದಲಾದುವನ್ನು ಕೊಟ್ಟು ಸ್ವಲ್ಪ ಪೂಜೆಯನ್ನು ಮಾಡಿ ಬ್ರಹ್ಮಾರ್ಪಣ ಮೊದಲಾಗಿ ಎಲ್ಲವನ್ನು ಮಾಡಬೇಕು. ಅಥವಾ ಎರಡನೆಯ ಆವರಣದ ಕೊನೆಯಲ್ಲಿ ದೇವಗ್ರಹ ಮೊದಲಾದುವನ್ನು ಕ್ಷೇತ್ರಪಾಲ ಬಲಿಯನ್ನು ಜಲಾಪ್ಲುತ ಬಲಿಯನ್ನು ಮಾಡಿ ಮಹಾಬಲಿಪೀಠದಲ್ಲಿ ಸಮಾಪನಗೊಳಿಸಬೇಕು. ಎರಡೂ ಪಕ್ಷಗಳಲ್ಲೂ ಪುನಃ ಒಳಗೆ ಹೋಗಿ ಪ್ರದಕ್ಷಿಣೆಯನ್ನು ಮಾಡಿ 'ಮಾನ ಏಕಸ್ಮಿನ್ನಾಗಸಿ' ಮೊದಲಾದುವುಗಳಿಂದ ನಮಸ್ಕರಿಸಿ, ದೇವರನ್ನು ವಂದಿಸಿ ಪ್ರಸಾದವನ್ನು ಹೊಂದಬೇಕು. ಇದು ಭೂತಬಲಿಯ ವಿಧಾನ.

## ಉತ್ಸವಬಲಿ

ಹವಿಸ್ಸನ್ನು ಪೂಜಿಸಿ, ಬಾಗಿಲಲ್ಲಿ ನಿಂತು, ಸೃಷ್ಟಿ ಸ್ಥಿತಿ ವಿನಾಶಾನಾಂ– ಮೊದಲಾಗಿ ಪ್ರಾರ್ಥಿಸಿ ದ್ವಾರಪಾಲಕರು ಮೊದಲಾದವರನ್ನು ತಮ್ಮ ನಿಜ ಮಂತ್ರಗಳಿಂದ ಉಪಸ್ಥಾನವನ್ನು ಮಾಡಿ, ಶ್ರೀ ಭೂತ ಬಲಿಯಲ್ಲಿ ಹೇಳಿದ ಕ್ರಮದಿಂದ ದ್ವಾರಪಾಲಕರೇ ಮೊದಲಾಗಿ ಅನಂತ ಪರ್ಯಂತ ಬಲಿಯನ್ನು ಹಾಕಬೇಕು. ಅಲ್ಲಿ ಇದಿರು ಮೊದಲಾಗಿ ಹತ್ತು ದಿಕ್ಕುಗಳಲ್ಲಿ ಲೋಕಪಾಲರ ಬಲಿಯ ಕೊನೆಯಲ್ಲಿ ತತ್ಪಾರ್ಷದೇಭ್ಯೋ ನಮಃ ಎಂದು ಬಲಿಯನ್ನು ಕೊಟ್ಟು, ಓಂ ನಮೋ ಭೂತೇಭ್ಯೋ– ಮೊದಲಾಗಿ ಮಂತ್ರದಿಂದ ಬಲಿಯನ್ನು ಹಾಕಬೇಕು. ಶಿವನಲ್ಲಿ, ಗಣಪತಿಯಲ್ಲಿ ಸುಬ್ರಮ್ಹಣ್ಯನಲ್ಲಿಯೂ ಹತ್ತು ದಿಕ್ಕುಗಳಲ್ಲಿ– ಓಂ ನಮೋ ಭೂತೇಭ್ಯಃ ಹೀಗೆ ಬಲಿದಾನಾನಂತರದಲ್ಲಿ ಅಲ್ಲಲ್ಲಿ– ಪೂರ್ವಸ್ಯಾಂದಿಶಿ ಯೇ ಭೂತಾದಿ ಮಂತ್ರಗಳೆರಡರಿಂದ ಬಲಿಯು. ಶಂಕರನಾರಾಯಣನಲ್ಲಿ ದುರ್ಗಿಯಲ್ಲಿ ಶಾಸ್ತಾರನಲ್ಲಿಯೂ ಈ ಎರಡು ಮಂತ್ರಗಳಿಂದ ಕೊಟ್ಟರೂ ಕೊಡಬಹುದು. (ವಿಕಲ್ಪ) ವಿಷ್ಣುವಿನಲ್ಲಿ ಹಾಗೆ ಬಲಿಯನ್ನು ಕೊಡಬಾರದು. ಇಲ್ಲಿ ಶಿವನಲ್ಲಿ ವೈಶ್ರವಣ ಬಲಿಯನ್ನು ಕೊಟ್ಟು ಪುನಃ ಸೋಮನ ಬಲಿಯನ್ನು ಕೊಡಬೇಕು. ಪುನಃ ಏಳು ದೇವತೆಗಳಲ್ಲಿ ಶ್ರೀ ಭೂತ ಬಲಿಯಲ್ಲಿ ಹೇಳಿದ ಕ್ರಮದಿಂದ ಮಾತೃಶಾಸ್ತೃ ದುರ್ಗಾ ಸುಬ್ರಹ್ಮಣ್ಯರಿಗೆ ಬಲಿಯನ್ನು ಹಾಕಬೇಕು. ಶಿವನಲ್ಲಿ ವಾಹನ ಮಾತ್ರಾದಿಗಳಿಗೆ ಅಲ್ಲಿ ಪ್ರಧಾನ ಮಂತ್ರಾ ನಂತರದಲ್ಲಿ ತಮ್ಮ ನಿಜ ಗಾಯತ್ರಿಯು. ಶ್ರೀ ಭೂತ ಬಲಿಯಲ್ಲಿ ಹೇಳಿದ ತತ್ಪಾರ್ಷದ ಮೊದಲಾದ ಮಂತ್ರಗಳಿಂದ ಬಲಿಯನ್ನು ಹಾಕಬೇಕು. ವಿಷ್ಣುವಿನಲ್ಲಿ ಎಂಟು ದಿಕ್ಕುಗಳಲ್ಲಿ ಸ್ಕಂದಾದಿ ಆವೃತಿಗಳಿಗೆ ಬಲಿಯನ್ನು ಕೊಡಬೇಕು. ಶಂಕರನಾರಾಯಣ ದುರ್ಗಿಯರಲ್ಲಿ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಸ್ಕಂದ ಮೊದಲಾದವರಿಗೆ(ವಿಕಲ್ಪವಾಗಿ) ಬಲಿಕೊಟ್ಟರೂ ಕೊಡಬಹುದು. ವಿಷ್ಣು ಮೊದಲಾದವರಲ್ಲಿ ಸ್ಕಂದಾವರಣದ ಪೂರ್ವಭಾಗದಲ್ಲಿ– ಸ್ಕಂದನನ್ನು, ಆಗ್ನೇಯದಲ್ಲಿ– ಶಾಸ್ತಾರನನ್ನೂ, ದಕ್ಷಿಣದಲ್ಲಿ– ಧರ್ಮವನ್ನೂ, ಗಂಧರ್ವ ಪದದಲ್ಲಿ– ಮಾತೃಕೆಗಳನ್ನು, ಭೃಂಗರಾಜ ಪದದಲ್ಲಿ– ಶಾಸ್ತಾರನನ್ನೂ, ನೈರ್ಋತ್ಯದಲ್ಲಿ ಸೂರ್ಯನನ್ನೂ, ಪಶ್ಚಿಮದಲ್ಲಿ ಬ್ರಹ್ಮನನ್ನೂ, ವಾಯವ್ಯದಲ್ಲಿ ಸೂಕರ ದುರ್ಗಿಯನ್ನೂ, ಮುಖ್ಯಪದದಲ್ಲಿ ಸ್ಕಂದನನ್ನೂ, ಭಲ್ಲಾಟ ಪದದಲ್ಲಿ ಉತ್ತರ ಮಾತೃಕೆಗಳನ್ನೂ, ಉತ್ತರದಲ್ಲಿ ಅಂಬಿಕೆಯನ್ನೂ, ಈಶಾನ್ಯದಲ್ಲಿ ಶಿವನನ್ನೂ ಪೂಜಿಸಿ, ಪುನಃ ಪ್ರದಕ್ಷಿಣೆಯನ್ನು ಮಾಡಿ, ಉದಿತಿ ಭಾಗದಲ್ಲಿ ನಿರ್ಮಾಲ್ಯಧಾರಿಯನ್ನು ಪೂಜಿಸಬೇಕು. ಇದು ಒಳಸುತ್ತಿನ ಬಲಿ ಕ್ರಮವು. ಹೊರಗಿನ ಬಲಿಕ್ರಮವು ಬರೆಯಲ್ಪಡುತ್ತದೆ. ವಿಷ್ಣುವಿನಲ್ಲಿ ಶ್ರೀ ಭೂತ ಬಲಿಯಲ್ಲಿ ಹೇಳಿದ ಕ್ರಮದಿಂದ ಕುಮುದಾದಿಗಳಿಗೆ ಪಂಚಾಶದ್ಭೂತ ಗಣಗಳಿಗೂ ಬಲಿಯನ್ನೂ ಕೊಟ್ಟು, ಮೂರನೆಯ ಆವರಣದಲ್ಲಿ– ಪೂರ್ವಸ್ಯಾಂದಿಶಿ– ಮೊದಲಾದ ಮಂತ್ರಗಳಿಂದ ಅಧಸ್ತಾದ್ದಿಶಿ– ಮೊದಲಾದವರೆಗಿನ ಮಂತ್ರಗಳಿಂದ ದ್ವಾರದ ಹೊಂದಿಕೆಯಿಂದಾರಂಭಿಸಿ ಹತ್ತು ದಿಕ್ಕುಗಳಲ್ಲಿ ಬಲಿಯನ್ನು ಹಾಕಬೇಕು. ಪುನಃ ಮಹಾಬಲಿಪೀಠದಲ್ಲಿ– ಯೇ ಭೂತಾಃ ಪುರಃ ಸದಃ– ಮೊದಲಾದ ಮಂತ್ರಗಳಿಂದ ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಹಾಗೂ ಈಶಾನ್ಯದಲ್ಲಿಯೂ ಬಲಿಯನ್ನು ಕೊಡಬೇಕು. ಪುನಃ ಅದರ ಒಳಗಡೆ ಹಿಂದಿನಂತೆ ಕುಮುದಾದಿ ಎಂಟರ ಕೊನೆಯಲ್ಲಿ ನಿಜ ಮಂತ್ರದಿಂದ ಪೀಠಾಧಿಪತಿಯನ್ನು ಪೂಜಿಸಬೇಕು. **ಶಿವನಲ್ಲಿ**– ಶ್ರೀಭೂತ ಬಲಿಯಲ್ಲಿ ಹೇಳಿದ ಕ್ರಮದಂತೆ ನಂದಿ ಮೊದಲಾದುವುಗಳಿಗೆ ಬಲಿಯನ್ನು ಹಾಕಿ ವಿಂಶದ್ಭೂತ ಗಣಗಳಿಗೆ ಹತ್ತು ದಿಕ್ಕುಗಳಲ್ಲಿ ಬಲಿಯನ್ನು ಹಾಕಿ ಮಹಾಬಲಿಪೀಠದಲ್ಲಿ ಭೂತಿದಾದಿಗಳಿಗೆ ಬಲಿಯನ್ನು ಹಾಕಿ ನಿಜಮಂತ್ರಗಳಿಂದ ಮಹಾಬಲಿಪೀಠದಲ್ಲಿ ಬಲಿಯನ್ನು ಹಾಕಬೇಕು. ಯಾವ ದೇವತೆಯಲ್ಲಿ ಒಳಗೆ ಶಿವನಂತೆ ಬಲಿದಾನ ಮೊದಲಾದುವುಗಳೋ ಆ ದೇವತೆಯಲ್ಲಿ ಹೊರಗೂ ಹಾಗೆಯೇ ಆಗಿದೆ. ಯಾವ ದೇವತೆಗೆಯಲ್ಲಿ ವಿಷ್ಣುವಿನಂತೆ ಒಳಭಾಗದಲ್ಲೋ ಆ ದೇವತೆಯ ಹೊರಭಾಗದಲ್ಲಿಯೂ ವಿಷ್ಣುವಿಗೆ ಹೇಳಿದ ಹಾಗೆಯೇ. ಶಾಸ್ತಾರನಲ್ಲಿ ಈ ಎರಡು ಪಕ್ಷಗಳಲ್ಲಿ ಒಂದನ್ನಾಶ್ರಯಿಸಿ ಸ್ಕಂದಾವರಣದ ಹೊರತಾಗಿ ಬಲಿಯನ್ನು ಕೊಡಬೇಕು. ದುರ್ಗಿಯಲ್ಲಿ ಅಷ್ಟಕೋಟಿ ಗಣಸ್ಥಾನದಲ್ಲಿ ಸುದುರ್ಗಾಭ್ಯೋ ಬಲಿಯನ್ನು ಕೊಡಬೇಕು. **ಶಿವನಲ್ಲಿ** ವಿಂಶದ್ಭೂತಿ ಗಣಸ್ಥಾನದಲ್ಲಿ ಮಹಾಕಾಳಾದಿಗಳಿಗೆ ಬಲಿಯನ್ನು ಕೊಡಬೇಕು. **ಗುಹನಲ್ಲಿ**– ಷಟ್ಕೋಟಿಗಣಗಳ ಕೊನೆಯಲ್ಲಾಗಲೀ ಮಹಾಬಲಿಪೀಠದ ಕೊನೆಯಲ್ಲಾಗಲೀ ಎರಡು ಪ್ರದಕ್ಷಿಣೆಗಳಿಂದಯೇ ಭೂತಾದಿ (ಎರಡು) ಮಂತ್ರಗಳಿಂದ ಬಲಿಯನ್ನು ಕೊಡಬೇಕು. **ಶಾಸ್ತಾರನಲ್ಲಿ**– ಮೂರನೆಯ ಸುತ್ತಿನಲ್ಲಾಗಲೀ ಐದನೇ ಆವೃತ್ತಿಯಲ್ಲಾಗಲೀ– ಚಾಂಬಾದೀನಾಂಗಣಾ– ಮೊದಲಾಗಿ ನಾಲ್ಕು ಮಂತ್ರಗಳಿಂದ (ಪ್ರತ್ಯೇಕ ಆವೃತ್ತಿಯಿಂದ) ಬಲಿಯನ್ನು ಹಾಕಬೇಕು. ಪುನಃ ಬಲಿಪೀಠದಲ್ಲಿ ಬಲಿಯನ್ನು ಹಾಕಬೇಕು. **ವಿಘ್ನೇಶನಲ್ಲಿ**– ಬಲಿಪೀಠದ ಕೊನೆಯಲ್ಲಿ ಉತ್ಸವಾರ್ಥಂಗತಾ– ಇದರಿಂದ ಬಲಿಯನ್ನು ಹಾಕಬೇಕು. ಪುನಃ ಏಳು ದೇವತೆಗಳಲ್ಲಿಯೂ ದೇವಗ್ರಹಾದಿಗಳಿಂದ

ಮೊದಲು ಯೇಸಮಸ್ತಂಜಗ– ಮೊದಲಾಗಿ, ಓಂ ನಮೋ ಭೂತೇಭ್ಯಃ ಇತ್ಯಾದಿ, ಗೃಹ್ಣಂತು ಬಲಿಮೇತತ್ತು – ಇತ್ಯಾದಿ ಮೂರು ಬಗೆಯ ಮಂತ್ರಗಳಿಂದ ಒಂದಾವೃತ್ತಿಯಿಂದ ಎಂಟು ದಿಕ್ಕುಗಳಲ್ಲಿ ಬಲಿಯನ್ನು ಕೊಡಬೇಕು. **ಶಿವನಲ್ಲಿ**– ನಂದಿ ಮೊದಲಾದುವುಗಳ ಮೊದಲಾಗಲೀ(ವಿಕಲ್ಪ) ಒಂದಾವೃತ್ತಿಯಿಂದ ಬಲಿಯನ್ನು ಮಾಡಬೇಕು. ಹೀಗೆ ಸಂಗ್ರಹವಾಗಿ ಹೇಳಿದ ಉತ್ಸವ ಬಲಿಕ್ರಮವು.

## ಬಲಿಪಾತ್ರ ಲಕ್ಷಣ

ಚತುರಂಗುಲವಿಸ್ತಾರಂ ಉನ್ನತಂ ತು ತ್ರಿಯಂಗುಲಂ ।
ನಾಳಂ ಷಡಂಗುಲಂ ಪ್ರೋಕ್ತಂ ಪೃಷ್ಠಮೇಕಾಂಗುಲಂ ಭವೇತ್ ॥
ಪ್ರಸ್ಥಪ್ರಮಾಣಕಂ ತೋಯಂ ಬಲಿಪಾತ್ರಸ್ಯ ಲಕ್ಷಣಂ ॥

* * * *

## ಶಿವ ಬಲಿಸೂತ್ರಂ

ನಂದಿಂ ಚೈವ ಮಹಾಕಾಲಂ ಗಣೇಶಂ ದಕ್ಷಿಣೇಶ್ವರಂ ।
ಶೂಲಪಾಣಿಂ ಪರಶುಪಾಣಿಂ ದಿಕ್ಪಾಲಾಂಶ್ಚ ಯಥಾ ಕ್ರಮಂ ॥
ಬ್ರಮ್ಹಾನಂತೌ ವೃಷಂ ಚೈವ ವೀರಭದ್ರ ಗಣಾಧಿಪೌ ।
ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥
ವಾರಾಹೀ ಚ ತಥೇಂದ್ರಾಣೀ ಚಾಮುಂಡಾ ಸಪ್ತಮಾತರಃ ।
ಮಾತೃಭ್ಯೋ ಲೋಕಮಾತೃಭ್ಯಃ ಸರ್ವ ಮಾತೃಭ್ಯ ಏವ ಚ ॥
ಸರ್ವಮಾತೃಗಣೇಭ್ಯಶ್ಚ ಲಕ್ಷ್ಮೀ ಭೂಚರಿ ಖೇಚರೀ ।
ಯಮರಾಕ್ಷಸಯೋರ್ಮಧ್ಯೇ ಶಾಸ್ತಾರಂ ವಾಯುಸನ್ನಿಧೌ ॥
ದುರ್ಗಾಂ ವಾಯುಂ ಸೋಮಮಧ್ಯೇ ಸ್ಕಂದಂ ವೈಶ್ರವಣಂ ತಥಾ ।
ಸೋಮೇಶಾನಸ್ಯ ಮಧ್ಯೇತು ಚಂಡೇಶಂ ಬಲಿಮಾಹರೇತ್ ॥
ತೀಕ್ಷ್ಣದಂಷ್ಟ್ರಮೃಗಾಸ್ಯೌ ಚ ಗೋಪುರದ್ವಾರಪಾಲಕೌ ।
ಭೃಂಗೀ ಚೈವ ಮಹಾಕಾಲೋ ಭೂತನಾಥೋ ಮಹೀಧರಃ ॥
ಪರ್ವತೇಶೋ ಗುಹೇಶಶ್ಚ ಕಾಲಪಾಶಕಪಾಲಿನೌ ।
ತೇಭ್ಯಶ್ಚೈವಂ ಬಲಿಂ ದದ್ಯಾತ್ಕ್ಷೇತ್ರಪಾಲಬಲಿಂ ಹರೇತ್ ॥
ಭೂತಿದೋ ದುರ್ನಿರೀಕ್ಷಶ್ಚ ಭೀಮರೂಪಃ ಸುಲೋಚನಃ ।
ಸಮುಖಶ್ಚ ಸುಬಾಹುಶ್ಚ ದ್ವಿಭುಜಸ್ತ್ರಿಶಿರಸ್ತಥಾ ॥
ಅಧಃಪಿಂಗಲಕೇಶಶ್ಚ ಹರಿಸೇನಸ್ತದೂರ್ಧ್ವತಃ ।
ಜಲಂ ಪತ್ರಂ ಜಲಂ ಪುಷ್ಪಂ ಜಲಮನ್ನಂ ಪುನರ್ಜಲಂ ॥
ಗಂಧಂ ಕನಿಷ್ಠಿಕಾಮೂಲೇ ಪುಷ್ಪಮಂಗುಷ್ಠಕಂ ತಥಾ ।
ತರ್ಜನೀ ಮಧ್ಯಮಾಭ್ಯಾಂ ಚ ಧೂಪ ದೀಪೌ ಪ್ರದರ್ಶಯೇತ್ ॥
ಅನಾಮಿಕಾಗ್ರೇ ನೈವೇದ್ಯಂ ಬಲಿಮುದ್ರಾಃ ಪ್ರಕೀರ್ತಿತಾಃ ।

* * * *

## ಗಣೇಶ ಬಲಿಸೂತ್ರಂ

ಅಗ್ನಿಕೇಶಃ ಕಾಲಹಂತಾ ಘಂಟಾಶೂಲ ಕಪಾಲಿನೌ ॥
ಪಿಶಿತಾಶೋ ಮಹಾಕ್ರೋಧಃ ಪಿಂಗಲಾಕ್ಷೋರ್ಧ್ವಕೇಶಕೌ ।
ಅಥಸರ್ವಗಣೇಭ್ಯಶ್ಚ ತೇಭ್ಯಸ್ತಾಭ್ಯೋ ನಮೋ ನಮಃ ॥
ವಜ್ರದಂತಗಜಾಸ್ಯೌ ಚ ಮಹಾಚಾಷೋ ವಿನಾಯಕಃ ।
ಶಿವದಿಕ್ಪಾ ಮಾತೃ ಶಾಸ್ತೃ ದುರ್ಗಾ ಸ್ಕಂದಾದಯ ಸ್ತಥಾ ॥
ಕುಂಭೋದರೋ ಗೋಪುರೇ ತು ಚಂಡ ವಿಕ್ರಮ ಸಂಜ್ಞಕಃ ।
ತತೋ ವಿಘ್ನಕರೋ ದಿಕ್ಷು ವಜ್ರದಂತೋ ಗಜಾಸ್ಯಕಃ ॥
ಭೀಮಶ್ಚ ಮಹಿಷಾಸ್ಯಶ್ಚ ಮೇಘನಾದ ಸ್ತಥೈವ ಚ ।
ವಿರೂಪಾಕ್ಷಶ್ಚ ವರದಃ ಸರ್ವಭಕ್ಷಕ ಏವ ಚ ॥
ತದಂತೇ ಕ್ಷೇತ್ರಪಾಲಶ್ಚ ಗಜವಕ್ತ್ರಾದಿಕಸ್ತತಃ ।
ಗಜವಕ್ತ್ರ ಗಣೇಶಾಖ್ಯೌ ತತ ಶ್ಚೈವ ವಿನಾಯಕಃ ॥
ಚಂಡವಿಕ್ರಮಕೋ ವಿಘ್ನಕರಃ ಸರ್ಪಾದಿಮೇಖಲಃ ।
ಶೂರ್ಪಕರ್ಣ ಸ್ತತೋ ನಾಗದಂತಿಃ ಸ್ಯಾದ್ರುದ್ರವಕ್ತ್ರಜಃ ॥
ಅಧಶ್ಚೈವ ತಥಾ ಮಧ್ಯೇ ವಿಘ್ನಸೇನ ಇತೀರಿತಃ ।
ಬಲಿಪೀಠಸ್ಯ ದಿಕ್ಷು ಸ್ಯುರಥ ಊರ್ಧ್ವೇ ತ್ವಿಮೇ ಸ್ಮೃತಾಃ ॥

* * * *

## ವಿಷ್ಣು ಬಲಿಸೂತ್ರಂ

ಚಂಡಪ್ರಚಂಡೋ ಗರುಡೋಽನಂತೋ ವಿಘ್ನೇಶ್ವರಃ ಶಿವಃ ।
ದಿಕ್ಪಾಲ ವೀರಭದ್ರೈಕದಂತೌ ಬ್ರಾಹ್ಮ್ಯಾದಿಕಾಸ್ತಥಾ ॥
ಶಾಸ್ತಾ ದುರ್ಗಾ ಸ್ಕಂದಯಕ್ಷೌ ವಿಷ್ವಕ್ಸೇನೋಽಥ ಗೋಪುರೇ ।
ಚಕ್ರಪಾಣಿಃ ಶಂಖಪಾಣಿಃ ಶ್ರೀಭೂಮಿಃ ಪರಿತೋ ಬಹಿಃ ।
ಕುಮುದಃ ಕುಮುದಾಕ್ಷಶ್ಚ ಪುಂಡರೀಕೋಽಥ ವಾಮನಃ ॥
ಶಂಕುಕರ್ಣಃ ಸರ್ಪನೇತ್ರಃ ಸುಮುಖಃ ಸುಪ್ರತಿಷ್ಠಿತಃ ॥
ಕ್ಷೇತ್ರೇಶೋಽನ್ಯೇ ಚಾಥ ಬಲಿಪೀಠೇ ಕಿಷ್ಕಿಂಧಪೂರ್ವಕಾಃ ।
ಕಿಷ್ಕಿಂಧಃ ಶಂಕರೋ ಹೈಮೋ ಭೀಮಶ್ಚ ಸುಕುಮಾರಕಃ ॥
ತತೋ ಬಾಹುಲಕಶ್ಚೈವ ವಿಜಯೋಽನಂತವಿಕ್ರಮಃ ।
ಪುನಃ ಪಿಂಗಲಕೇಶಾಕ್ಷೌ ಹರಿಸೇನಸ್ತು ಮಧ್ಯತಃ ॥
ದ್ವಾರಾದಿ ಬಲಿಪೀಠಾಂತಂ ಬಲಿದೇವಾ ಇಮೇ ಹರೌ ।

## ದುರ್ಗಾ ಬಲಿಸೂತ್ರಂ

ಚಂಡಿಕಾ ಚಾಂಬಿಕೋ ಸಿಂಹೋ ದಕ್ಷಿಣೇ ಗಣಪೇಶ್ವರೌ ।
ದಿಕ್ಪಾವೀರೇಶ ವಿಘ್ನೇಶ ಮಾತೃಕಾದ್ಯಾಃ ಪುರೋದಿತಾಃ ॥
ಶಾಸ್ತಾ ದುರ್ಗಾ ಸ್ಕಂದ ಯಕ್ಷೌ ಮುಂಡಿನೀ ಗೋಪುರೇ ತತಃ ।
ಹ್ಲಾದಿನೀ ಮೋಹಿನೀ ದ್ವಾರಿ ವಿಜಯಂತೀ ತತಃ ಪರಂ ॥
ಕಾತ್ಯಾಯನೀ ಬಹಿರಥೋ ಕಾಳ್ಯಾದ್ಯಾ ಬಲಿದೇವತಾಃ ।
ಕಾಳೀ ಕರಾಳೀ ವಿರಜಾ ಮಂದರಾ ವಿಂಧ್ಯವಾಸಿನೀ ॥
ಸುಪ್ರಭಾ ಸಿಂಹವಕ್ತ್ರಾಚ ದೈತ್ಯಮರ್ದಿನ್ಯತಃಪರಂ ।
ಕ್ಷೇತ್ರೇಶೋ ಬಲಿಪೀಠೇ ತುಬ್ರಮ್ಹಘೋಷ್ಯಾದಿ ದೇವತಾಃ ॥
ಬ್ರಮ್ಹಘೋಷೀ ಸುಘೋಷೀ ಚ ಯಥೇಷ್ಟಿಃ ಸುಖರಾಗಿಣೀ ।
ಸುಮುಖೀ ಸುಭಗಾ ದಿಕ್ಷು ಪ್ರಮೋದಿನ್ಯಥಚಾತ್ಮನಿ ॥
ಬ್ರಾಹ್ಮೀ ಮಧ್ಯೇ ಚೈವ ಮುಕ್ತಾ ದುರ್ಗಾಯಾಂ ಬಲಿದೇವತಾಃ ।

* * * *

## ಶಂಕರನಾರಾಯಣ ಬಲಿಸೂತ್ರಂ

ನಿತ್ಯೋತ್ಸವೇತುಪ್ರಾಗ್ದ್ವಾರೇ ನಂದೀಶಶ್ಚಂಡ ಏವ ಚ ।
ಮಹಾಕಾಲಃ ಪ್ರಚಂಡಶ್ಚ ಭೃಂಗೀ ವಿಘ್ನಶ್ಚ ದಕ್ಷಿಣೇ ॥
ಪಶ್ಚಿಮೇ ವೃಷಭಾನಂತೌ ಚಂಡಸೇನಾವಥೋತ್ತರೇ ।
ಸ್ವಾಶಾಸು ಲೋಕಪಾಲೇಭ್ಯಃ ಸ್ವೈಃ ಸ್ವೈರ್ಮಂತ್ರೈರ್ಬಲಿಂಕ್ಷಿಪೇತ್ ॥
ಇಷ್ಟ್ವಾ ವೃಷಾರ್ಧಗರುಡಂ ಮಂಡಪಸ್ಥಂ ಬಲಿಂ ಕ್ಷಿಪೇತ್ ।
ಗಣೇಶಂ ವೀರಭದ್ರಂ ಚ ಮಾತೃಃ ಶಾಸ್ತಾರಮೇವ ಚ ॥
ದುರ್ಗಾಂ ಚ ಸೋಮಂ ಸ್ವಾಶಾಸು ಚಂಡಸೇನಂ ಚ ಪೂಜಯೇತ್ ।
ಸಶೂಲಚಕ್ರವರದಾಭೀತಿಮಿಷ್ಟ್ವಾ ಬಲಿಂ ಕ್ಷಿಪೇತ್ ॥
ಮೃಗಾಸ್ಯಂ ಪಾಂಚಜನ್ಯಂ ಚ ತೀಕ್ಷ್ಣನೇತ್ರಂ ಸುದರ್ಶನಂ ।
ಚತುರೋ ಗೋಪುರದ್ವಾರಿ ಸಂಪೂಜ್ಯೈ ಷಾಂ ಬಲಿಂ ಹರೇತ್ ॥
ಬಲಿಪೀಠಾತ್ತಿಸ್ಥಿತಃ ಪ್ರಾಚ್ಯಾಂ ಅನೇನಾವಾಹಯೇದ್ಗಣಾನ್ ।
ಆಯಾಂತು ಪಾರ್ಷದಾಃ ಸರ್ವೇಶಾಂಕರಾ ವೈಷ್ಣವಾಶ್ಚ ಯೇ ॥
ಸ್ಥಿತಾಃ ಸರ್ವಂ ಜಗದ್ವ್ಯಾಪ್ಯ ಗೃಣ್ಹಂತು ಬಲಿಮುತ್ತಮಂ ।
ತತಸ್ತು ನಂದೀಶಾದಿಭ್ಯಃ ಕುಮುದಾದಿಭ್ಯ ಏವ ಚ ॥
ದ್ವಯೋರ್ದ್ವಯೋಃ ಪ್ರತಿದಿಶಂ ಮಂಡಲೇಷು ಬಲಿಂ ಕ್ಷಿಪೇತ್ ।
ನಂದೀಶಶ್ಚ ಮಹಾಕಾಲೋ ಭೂತನಾಥೋ ಮಹೀಧರಃ ॥

ಪರ್ವತೇಶೋ ಗುಹೇಶಶ್ಚ ಕಾಲಪಾಶಕಪಾಲಿನೌ ।
ಕುಮುದಃ ಕುಮುದಾಕ್ಷಶ್ಚ ಪುಂಡರೀಕೋಽಥ ವಾಮನಃ ॥
ಶಂಕುಕರ್ಣಃ ಶಂಕು (ಸರ್ಪ) ನೇತ್ರಃ ಸುಮುಖಃ ಸುಪ್ರತಿಷ್ಠಿತಃ ।
ತತಸ್ತು ಬಲಿಪೀಠೇ ತು ಭೂತಿದಾದಿಭ್ಯ ಏವ ಚ ॥
ಶಂಖಿನೇ ಚಕ್ರಿಣೇ ಚಾಪಿ ಗದಿನೇ ಶಾರ್ಙ್ಗಿಣೇ ತಥಾ ।
ಪದ್ಮಿನೇಽಥೋಮುಸಲಿನೇ ಪಾಶಿನೇಂಕುಶಿನೇ ತಥಾ ॥
ಕುಮುದೋರ್ಧ್ವೇ ನಂದಕಿನೇ ನಮೋ ಹರಿಹರಾರ್ದಿಕಂ ।
ಸೇನಾಯೇತಿ ಚ ಪೀಠಾಬ್ಜಕರ್ಣಿಕಾಯಾಂ ಬಲಿಂ ಕ್ಷಿಪೇತ್ ॥
ಅತ್ರಾಪಿ ಪೂರ್ವವದ್ದಿಕ್ಷು ದ್ವಾಭ್ಯಾಂ ದ್ವಾಭ್ಯಾಂ ಬಲಿಂ ಕ್ಷಿಪೇತ್ ।
ನಿತ್ಯೋತ್ಸವ ವಿಧಿಸ್ತ್ವೇಷ ತುಲ್ಯಶ್ಚಾಪಿ ಮಹೋತ್ಸವೇ ॥

* * * *

## ಸ್ಕಂದ ಬಲಿಸೂತ್ರಂ

ಸ್ಕಂದನಿತ್ಯೋತ್ಸವೇ ದ್ವಾಸ್ಥೌ ವಜ್ರಶಕ್ತಿಧರೌ ಪುರಃ ।
ವಿಘ್ನವಿಶ್ವೇಶ್ವರೌ ಚಾಥ ವೀರಸೇನಸುಷೇಣಕೌ ॥
ವಜ್ರಸೇನಶ್ಚ ಸೇನಾನೀ ರ್ದ್ವಾಃ ಸ್ಥೌ ಪೂರ್ವಾದಿತಃ ಕ್ರಮಾತ್ ।
ಸ್ಕಂದ ಪಾರಿಷದಾಂತಾಃ ಸ್ಯು ರ್ಲೋಕೇಶಾಃ ಸ್ವಸ್ವದಿಗ್ಗತಾಃ ॥
ಮಯೂರಂ ಮಂಟಪೇ ಮಾತೃಃ ಸ್ವಸ್ಥಾನೇ ತ್ವರ್ಗಲೇ ವಿಧುಂ ।
ಧೂರ್ತಸೇನಂ ತಥೈಶಾನ್ಯಾಂ ಸಂಪೂಜ್ಯೈಷಾಂ ಬಲಿಂ ಹರೇತ್ ॥
ಗೋಪುರದ್ವಾರ್ಯಗ್ನಿಕೇತುಂ ಸೂರ್ಯಕೇತುಂ ಚ ಪೂಜಯೇತ್ ।
ತತೋ ನಿಷ್ಕ್ರಮ್ಯ ಬಾಹ್ಯೇ ತು ಬಲಿಪೀಠಾಗ್ರತಃ ಸ್ಥಿತಃ ॥
ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ ।
ಸ್ಕಂದಪಾರಿಷದಾಃ ಸರ್ವೇ ಗೃಹ್ಣಂತು ಬಲಿಮುತ್ತಮಂ ॥
ಅನೇನ ತುಸ್ಕಂದಗಣಾನ್ ಸರ್ವಾನಾವಾಹಯೇದಪಿ ।
ತತಸ್ತು ಬಾಹ್ಯಹಾರಾಯಾ ಮುನ್ಮಥಾದೀನ್ಗಣೇಶ್ವರಾನ್ ॥
ಕೋಟಿ ಕೋಟಿ ಗಣಾಧ್ಯಕ್ಷಾನಿಷ್ಟ್ವಾ ತೇಷಾಂ ಬಲಿಂ ಕ್ಷಿಪೇತ್ ।
ಉನ್ಮಾಥಶ್ಚ ಪ್ರಮಾಥಶ್ಚ ಸುಭಾಸೋ ಭಾಸ್ವರೋಮಣಿಃ ॥
ಸುಮಣಿಶ್ಚ ತಥಾ ಜ್ಯೋತಿ ರ್ಜ್ವಾಲಾಜಿಹ್ವ ಸ್ತಥಾಷ್ಟಮಃ ।
ತತಸ್ತು ದಶಮೂರ್ತಿಭ್ಯೋ ಬಲಿಪೀಠೇ ಬಲಿಂ ಕ್ಷಿಪೇತ್ ॥

ಪರಿಘೋ ವಿಕಟೋ ಭೀಮ ಉತ್ಕ್ರೋಶೋ ವಜ್ರವಲ್ಕತಾ ।
ದಂಡಹಸ್ತೌ ವರ್ಧನಶ್ಚ ಕುಮುದೋ ನಂತನ ಸ್ತಥಾ ॥
ಸ್ಕಂದಸೇನೋಽಥದಶಮಃ ಪೀಠೇ ಪದ್ಮಸ್ಯ ಮಧ್ಯತಃ ।
ನಿತ್ಯೋತ್ಸವೇ ವಿಧಿಶ್ಚೈಷ ತುಲ್ಯಶ್ಚ ಸ್ಯಾನ್ಮಹೋತ್ಸವೇ ॥

* * * *

## ಶಾಸ್ತೃ ಬಲಿಂಸೂತ್ರಂ

ನಿತ್ಯೋತ್ಸವೇ ದ್ವಾರಪಾಲೌ ಕ್ಷುರಿಕಾ ಖಡ್ಗಧಾರಿಣೌ ।
ಲೋಕೇಶಾ ವಾಹನಂ ಚಾಶ್ವಸ್ತೇಭ್ಯಸ್ತು ವಿಕಿರೇದ್ಬಲಿಂ ॥
ಶಾಸ್ತೃಪಾರಿಷದೇಂತಂ ತು ಪರಿಷದ್ಭ್ಯೋಽಥ ತಸ್ಯ ಚ ।
ಲೋಕೇಶಾಖ್ಯಾದಿ ನತ್ಯಂತಂ ನಿಕ್ಷಿಪ್ಯ ಬಲಿಮಾದರಾತ್ ॥
ವೀರ ವಿಘ್ನೇಶ ಮಾತೃಭ್ಯಃ ಸೋಮಘೋಷವತೋ ಸ್ತತಃ ।
ತೀಕ್ಷ್ಣಾಯ ತೀಕ್ಷ್ಣನೇತ್ರಾಯ ಗೋಪುರದ್ವಾರಿ ನಿಕ್ಷಿಪೇತ್ ॥
ಬಲಿಪೀಠಾತ್ಪುರಃ ಸ್ಥಿತ್ವಾ ತ್ವನೇನಾಮಂತ್ರಯೇದ್ಗಣಾನ್ ।
ಶಾಂಬ್ವಾದೀನಾಂ ಗಣಾ ಯೇ ತು ಕೋಟಿ ಕೋಟಿ ಗುಣೋತ್ತರಾಃ ॥
ಸರ್ವೇ ಸುಪ್ರೀತ ಮನಸಃ ಪ್ರತಿಗೃಣ್ಹಂ ತ್ವಿಮಂ ಬಲಿಂ ।
ತತೋಽಷ್ಟದಿಕ್ಷು ಪ್ರಾಗಾದಿ ಸ್ಥಿತಾ ಗೋಪ್ತ್ರಾದಿ ಮೂರ್ತಯಃ ॥
ಗೋಪ್ತಾ ಚ ಪಿಂಗಲಾಕ್ಷ ಶ್ಚ ವೀರಸೇನಶ್ಚ ಶಾಂಭವಃ ।
ತ್ರಿಣೇತ್ರಃ ಶೂಲಭೃದ್ದಕ್ಷೋ ಭೀಮರೂಪ ಸ್ತಥಾಷ್ಟಮಃ ॥
ತೇಭ್ಯಃ ಕ್ಷೇಪ್ಯೋ ಬಲಿಶ್ಚಾಥ ಬಲಿಪೀಠಾಷ್ಟ ದಿಕ್ಸ್ಥಿತಾಃ ।
ವೀರಬಾಹು ರ್ಮಹಾವೀರ್ಯೋ ವಿದ್ಯುಜ್ಜಿಹ್ವೋ ವಿಲಾಸವಾನ್ ॥
ಸುತೀಕ್ಷ್ಣ ಸ್ತೀಕ್ಷ್ಣದಂಷ್ಟ್ರಶ್ಚ ತಾರಾಕ್ಷಶ್ಚ ಭವೋದ್ಭವಃ ।
ಭೂತೇಶಾಖ್ಯಃ ಕುಮುದಕೇ ಸ್ಥಿತ ಸ್ತ್ವೇಷಾಂ ಬಲಿಂ ಕ್ಷಿಪೇತ್ ॥
ಸ್ಯಾದ್ಭೂತನಾಥಸೇನಸ್ತು ಪೀಠೇ ಪಂಕಜ ಮಧ್ಯತಃ ।
ತಸ್ಮೈ ಕ್ಷೇಪ್ಯಂ ಬಲಿರ್ನಾಮ್ನಾ ತಾರಪೂರ್ವಂ ನವೋಂತಕಂ ।
ಏಷ ನಿತ್ಯೋತ್ಸವವಿಧಿಃ ತುಲ್ಯಶ್ಚೈವ ಮಹೋತ್ಸವೇ ॥

* * * *

## ಹನುಮದ್ಬಲಿಸೂತ್ರಂ

ಬಲಿಭುಗ್ಗಣನಾಮಾನಿ ಕ್ರಮಾದ್ವಕ್ಷ್ಯಾಮಿ ಶಾಂಕರಿ ।
ವಜ್ರದಂತಾಯ ಶಾಂತಾಯ ಚಾನಿವೇಗಾಯ ಮಂಟಪೇ ॥
ಧರ್ಮಿಣೇ ವಶಿನೇ ಪೃಷ್ಠೇ ವೇಗಿನೇ ದ್ವಾರಿ ದಕ್ಷಿಣೇ ।

ಬಹಿರ್ದ್ವಾಸ್ಥೌ ಸುಗಂಧಾಯ ಸುಮಂತಾಯ ಬಲಿಂ ಹರೇತ್ ॥
ದಿಕ್ಪತೀ ನ್ಮಾತೃ ಶಾಸ್ತಾರೌ ದುರ್ಗಾಂ ಸ್ಕಂದಂ ಧನೇಶ್ವರಂ ।
ಪಿಶಂಗಿನಂ ಸಮಭ್ಯರ್ಚ್ಯ ನಿಃಶಬ್ದಂ ಗೋಪುರೇ ಬಲಿಂ ॥
ಸ್ವನಾಮಾಭ್ಯಾಂ ತಯೋರ್ದತ್ವಾ ವೀರಮಂತ ಸುಮಂತಯೋಃ ॥
ದೈತ್ಯಾಂತಕಾಯ ದಕ್ಷಾಯ ಬಹಿಶ್ಚೋಭಯಪಾರ್ಶ್ವಯೋಃ ।
ಕಪೀಶೋ ವಜ್ರದೇಹಶ್ಚ ದೀರ್ಘದೇಹೋ ಹರೀಶ್ವರಃ ।
ಸುಮುಖೋ ರಕ್ತನೇತ್ರಶ್ಚ ಹೇಮವಾನೂ ರ್ಧ್ವರೋಮಕಃ ॥
ಬಹಿರಾವರಣೇ ಚೈಷಾಂ ದಿಗ್ವಿದಿಕ್ಷು ಬಲಿಂ ಹರೇತ್ ।
ಹರೀಷಂ ಹರ್ಷಣಂ ಹಂತಂ ಸರಮಂತಂ ಸನಾತನಂ ॥
ಸಗಂಧಿನಂ ಲಂಘಿನಂ ಚ ಚಲನಂ ಚಾಲನಾತ್ಮಜಂ ।
ಊರ್ಧ್ವಸೇನಂ ಚ ಪೀಠೋರ್ಧ್ವೇ ಧ್ವಜ ಕ್ಷೇತ್ರೇಶ್ವರಾ ಸ್ತಥಾ ॥
ದಿನೇ ದಿನೇ ತ್ರಿಸಂಧ್ಯಾಸು ಸರ್ವವಾದ್ಯರವೈಃ ಸಹ ।
ಯಜೇದ್ದೇವಂ ಚಾಂಜನೇಯಂ ಗಣಾಂಶ್ಚ ಬಲಿಮಾಹರೇತ್ ॥
ಮಯೇತಿ ವಾಯುಪುತ್ರಸ್ಯ ನೈಮಿತ್ಯಂ ಕರ್ಮಚೇರಿತಂ ।
ವೈಷ್ಣವ ಸ್ಯೋಕ್ತವಚ್ಛೇಷು ಗುರುಃ ಕುರ್ಯಾದ್ವಿಚಕ್ಷಣಃ ॥

* * * *

## ಸೂರ್ಯೋತ್ಸವಾಧಿಕಾರಃ

ನಿತ್ಯೋತ್ಸವೇ ತು ಸೂರ್ಯಸ್ಯ ದ್ವಾರಸ್ಥೌ ಚಂಡಪಿಂಗಲೌ ।
ಲೋಕೇಶ ಸ್ಥಾನಗಾಸ್ತ್ವಷ್ಟೌ ಗ್ರಹಾಃ ಸೋಮಾದಯಃ ಕ್ರಮಾತ್ ॥
ಮಾತರ ಶ್ಚೈವ ದುರ್ಗಾ ಚ ತೇಜ ಶ್ಚಂಡಶ್ಚ ದಿಗ್ಗತಾಃ ।
ಅರುಣೋ ಮಂಟಪಸ್ಯಾಗ್ರೇ ಸಪ್ತಚ್ಛಂದ ಸ್ತುರಂಗಮಾಃ ॥
ಸ್ವಾಖ್ಯಾಭಿಸ್ತೇ ಚ ಪೂಜ್ಯಾಃ ಸ್ಯುರ್ಗಾಯತ್ರ್ಯುಷ್ಣಿಗನುಷ್ಟುಭಃ ।
ಬೃಹತೀಪಂಕ್ತಿಸ್ತ್ರಿಷ್ಟುಬ್ಜಗತೀ ಚ ಯಥಾಕ್ರಮಂ ॥
ಅಂತಃ ಸ್ಥೌಗೋಪುರದ್ವಾಃಸ್ಥೌ ಪಕ್ಷಾ ಶುಕ್ಲಾಸಿತೌ ಯಜೇತ್ ।
ತಥೈವ ತದ್ಬಹಿಷ್ಠಾವಪ್ಯಯನೇ ದಕ್ಷಿಣೋತ್ತರೇ ॥
ನಿಕ್ಷಿಪ್ಯೈಷಾಂ ಬಲಿಂ ದತ್ವಾ ಬಲಿಪೀಠಾದ್ಬಹಿಃಸ್ಥಿತಃ ।
ಆವಾಹಯೇದ್ಬಲಿಭುಜಃ ಸರ್ವಾನ್ಸೂರ್ಯ ಗಣಾನ್ಗುರುಃ ॥
ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ ।
ಸೂರ್ಯಪಾರಿಷದಾಃ ಸರ್ವೇ ಗೃಹ್ಣಂತು ಬಲಿಮುತ್ತಮಂ ॥
ತತೋ ದ್ವಾದಶ ರಾಶಿಭ್ಯೋ ಯಥಾಸ್ಥಾನಂ ಪ್ರದಕ್ಷಿಣಂ ।

ಮೇಷಾದಿಭ್ಯೋ ಬಲಿಂ ದದ್ಯಾನ್ಮಾಸೇಭ್ಯಶ್ಚಾಪಿ ತೈಃ ಸಹ ॥
ಮಧು ಮಾಧವ ಶುಕ್ರೇಭ್ಯಃ ಶಂಚಯೇ ನಭಸೇ ತಥಾ ।
ನಭಸ್ಯಾಯ ತಥೇಷೋರ್ಜ ಸಹೋಭ್ಯಶ್ಚ ತತಃ ಪರಂ ॥
ಸಹಸ್ಯಾಯಾಥ ತಪಸೇ ತಪಸ್ಯಾಯ ಬಲಿಂ ಕ್ಷಿಪೇತ್ ।
ತತಸ್ತು ಬಲಿಪೀಠಸ್ಯ ಪರಿತೋಽಷ್ಟ ದಿಶಾಸ್ವಪಿ ।
ಕ್ಷಿಪೇದ್ಗಣಾನಾಮಷ್ಟಾನಾಂ ಸ್ವಾಖ್ಯಾಗಣ ನಮೋಂತಕಂ ।
ಗಂಧರ್ವಾಶ್ಚಾಸುರ ಗಣಾಃ ಪಿತೃರಕ್ಷೋ ಗಣಾಸ್ತತಃ ॥
ನಾಗಾ ಮುರುದ್ಗಣಾ ಸ್ತದ್ವದ್ಯಕ್ಷ ಭೂತಗಣಾ ಸ್ತಥಾ ।
ಪದ್ಮಪತ್ರೇ ಋಷಿಗಣಾಃ ಸ್ಥಿತಾ ಅತ್ರ್ಯಾದಯ ಸ್ತಥಾ ॥
ಸ್ವಾಖ್ಯಾಭಿರೇತಾನ್ಸಂಪೂಜ್ಯ ಬಲಿಂ ತೇಷಾಂ ವಿನಿಕ್ಷಿಪೇತ್ ।

* * * *

## ಇತಿ ನಿತ್ಯೋತ್ಸವ ವಿಧಿಃ

ಮಹೋತ್ಸವೇತು ಶೈವೋಕ್ತಮಾರ್ಗೇಣಾರೋಪಯೇತ್ ಧ್ವಜಂ ॥
ಪತಾಕಾಂ ಚಾರುಣಾಶ್ವಾಂಕಾಂ ಗಣಾಂಶ್ಚಾವಾಹ್ಯ ಪೂರ್ವವತ್ ।
ಸಂಧಿಸ್ಥಾಂಶ್ಚ ತಥಾದೇವಾನಂಕುರಾರ್ಪಣ ಪೂರ್ವಕಂ ॥
ಉತ್ಸವಂ ಕಾರಯೇ ತ್ಪ್ರಾಗ್ವದುತ್ತಮಾದಿ ಕ್ರಮೇಣತು ।
ಬಲಿಪ್ರಕ್ಷೇಪಮಂತ್ರೈಸ್ತು ಸೂರ್ಯಪಾರಿಷದಾಂತಿಕೈಃ ॥
ಯೇ ಭೂತದ್ಯೈ ರ್ಯಥಾಪೂರ್ವಮಿಷ್ಟ್ವಾ ತೇಭ್ಯೋ ಬಲಿಂ ಕ್ಷಿಪೇತ್
ನಿತ್ಯೋತ್ಸವೋಕ್ತವಿಧಿನಾ ಪ್ರಕ್ಷಿಪ್ಯ ಪರಿತೋ ಬಲಿಂ ॥
ವೈಶೇಷಿಕೇಣ ವಿಧಿನಾ ರಾಶಿಬಾಹ್ಯೇ ಕ್ಷಿಪೇದ್ಬಲಿಂ ।
ಇಂದ್ರಾದಿ ಲೋಕಪಾಲೇಭ್ಯಸ್ತದಸ್ತ್ರೇಭ್ಯಶ್ಚ ಬಾಹ್ಯಶಃ ॥
ಐಂದ್ರ್ಯಾಂ ದಿಶಿ ಗಣಯೇ ತು ವಜ್ರಹಸ್ತಾ ಮಹಾಬಲಾಃ ।
ಇತ್ಯಾದಿಭಿ ಸ್ತುದಿಙ್ಮಂತ್ರೈಃ ಪರಿತೋ ವಿಕಿರೇದ್ಬಲಿಂ ॥
ತತಸ್ತು ಬಲಿಪೀಠಸ್ಥ ಗಣೇಭ್ಯಃ ಪೂರ್ವವದ್ಬಲಿಂ ।
ಕ್ಷಿಪ್ತ್ವಾ ಸ್ನಾತ್ವಾ ಯಥಾಪೂರ್ವಮಂತರ್ದೇವಂ ಪ್ರವೇಶಯೇತ್ ॥
ಕೃತ್ವಾ ಕೌತುಕಬಂದಾದ್ಯಂ ತೀರ್ಥಯಾತ್ರಾಂ ಚ ಪೂರ್ವವತ್ ।
ಸ್ವಮಂತ್ರೈ ರ್ವಿಧಿವತ್ಕೃತ್ವಾ ಸ್ನಪನಾಂತಂ ಸಮಾಪಯೇತ್ ॥

## ಬಲಿದಾನ ಕ್ರಮಃ

**ನಂದೀಶಂ ಚ ಮಹಾಕಾಲಂ ಪಶ್ಚಿಮಾಭಿಮುಖೋ ಯಜೇತ್ ।**

**ಗಣೇಶಂ ದಕ್ಷಿಣೇಶಂ ಚ ಉತ್ತರಾಭಿಮುಖೋಯಜೇತ್ ॥**

ನಂದೀಶ ಮಹಾಕಾಲರನ್ನು ಪಶ್ಚಿಮಕ್ಕೆ ಮುಖಮಾಡಿ ನಿಂತು, ಗಣೇಶ ದಕ್ಷಿಣಾಮೂರ್ತಿಯನ್ನು ದಕ್ಷಿಣದ್ವಾರದಲ್ಲಿ ಉತ್ತರಾಭಿಮುಖವಾಗಿ ನಿಂತು ಬಲಿಯನ್ನು ಹಾಕಬೇಕು.

**ಶೂಲಪಾಣಿಂ ಪರಶುಪಾಣಿಂ ಪಶ್ಚಿಮಾಭಿಮುಖೋ ಯಜೇತ್ ।**

**ಬಲಿದಾನಾತ್ಪರಂ ತತ್ರ ಕ್ಷಾಲಿತಂ ಗೋಮಯೋದಕೈಃ ॥**

ಶೂಲಪಾಣಿ ಪರಶುಪಾಣಿ(ದ್ವಾರಪಾಲಕ)ರನ್ನು ಪಶ್ಚಿಮಾಭಿಮುಖವಾಗಿ ನಿಂತು ಬಲಿಯನ್ನು ಹಾಕಬೇಕು. ಬಲಿದಾನಾ ನಂತರದಲ್ಲಿ ಅಲ್ಲಿ ಗೋಮಯದ ನೀರಿನಿಂದ ತೊಳೆದು ಶುದ್ಧ ಮಾಡಬೇಕು.

**ಆಚಾರ್ಯಸ್ಯ ಮುಖಂ ಪೂರ್ವೇ ಇಂದ್ರಸ್ಯ ಬಲಿದಾನಕೇ ।**

**ದಕ್ಷಿಣಾಭಿಮುಖಾಚಾರ್ಯೋ ವೀತಿಹೋತ್ರಬಲಿಂ ಹರೇತ್ ॥**

ಪೂರ್ವಾಭಿಮುಖವಾಗಿ ನಿಂತು ಆಚಾರ್ಯನು ಇಂದ್ರನಿಗೆ ಬಲಿದಾನವನ್ನು ಮಾಡಬೇಕು. ದಕ್ಷಿಣಾಭಿಮುಖನಾಗಿ ನಿಂತು ಆಗ್ನೇಯ ದಿಕ್ಕಿನಲ್ಲಿ ಬಲಿಯನ್ನು ಹಾಕಬೇಕು.

**ಉತ್ತರಾಭಿಮುಖೋ ದದ್ಯಾದ್ಯಮಸ್ಯ ಬಲಿದಾನಕೇ ।**

**ಆಚಾರ್ಯಃ ಪಶ್ಚಿಮೇ ಸ್ಥಿತ್ವಾ ಮುಖಮೀಶಾನತಃ ಕ್ರಮಾತ್ ॥**

**ನಿರ್ಋತಿಪೀಠೇ ಬಲಿಂ ದಧ್ಯಾತ್ ವಾರುಣಂ ಪೀಠಸನ್ನಿಧೌ ।**

**ವರುಣಪೀಠೇ ಬಲಿಂ ದದ್ಯಾತ್ಪೂರ್ವಾಭಿಮುಖತಃ ಕ್ರಮಾತ್ ॥**

ಉತ್ತರಾಭಿಮುಖನಾಗಿ ನಿಂತು ಯಮನಿಗೆ ಬಲಿದಾನ ಮಾಡಬೇಕು. ಆಚಾರ್ಯನು ಪಶ್ಚಿಮದಲ್ಲಿ ನಿಂತು ಮುಖವನ್ನು ಈಶಾನ್ಯದ ಕಡೆಗೆ ಮಾಡಿ ನೈಋತ್ಯದ ಪೀಠದಲ್ಲಿ ಬಲಿ ಹಾಕಬೇಕು. ಆಮೇಲೆ ವರುಣ ಪೀಠದ ಸಮೀಪ ಬಂದು ಪೂರ್ವಾಭಿಮುಖನಾಗಿ ವರುಣಪೀಠದಲ್ಲಿ ಬಲಿದಾನವನ್ನು ಮಾಡಬೇಕು.

**ವರುಣಪೀಠೇ ಬಲಿಂ ದತ್ವಾ ವಾಯವ್ಯಾಂ ಬಲಿದಾನಕೇ ।**

**ಉತ್ತರಾಭಿಮುಖೋ ದದ್ಯಾತ್ಪೂರ್ವೇ ವಾತನ್ಮುಖಂ ಭವೇತ್ ॥**

ವರುಣಪೀಠದಲ್ಲಿ ಬಲಿದಾನಾ ನಂತರದಲ್ಲಿ ವಾಯುಪೀಠದ ಸಮೀಪ ಬಂದು ಉತ್ತರಾಭಿಮುಖವಾಗಿಯಾಗಲೀ ಪೂವಾಭಿಮುಖವಾಗಿಯಾಗಲೀ ವಾಯುಪೀಠದಲ್ಲಿ ಬಲಿಯನ್ನು ಹಾಕಬೇಕು.

**ಸೋಮಪೀಠೇ ಬಲಿಂದದ್ಯಾ ದ್ದಕ್ಷಿಣಾಭಿಮುಖೋ ಗುರುಃ ।**

**ಪೂರ್ವಾಭಿಮುಖ ಆಚಾರ್ಯ ಈಶಪೀಠೇ ಬಲಿಂ ದದೇತ್ ॥**

ಆಚಾರ್ಯನು ದಕ್ಷಿಣಾಭಿಮುಖನಾಗಿ ಸೋಮಪೀಠದಲ್ಲಿ ಬಲಿಯನ್ನು ಹಾಕಬೇಕು. ಅನಂತರ ಪೂರ್ವಾಭಿಮುಖನಾಗಿ ಈಶಾನ್ಯ ಪೀಠದಲ್ಲಿ ಬಲಿದಾನವನ್ನು ಮಾಡಬೇಕು.

**ಬ್ರಹ್ಮಪೀಠೇ ಬಲಿಂ ದದ್ಯಾದನಂತಂ ಪೀಠಸನ್ನಿಧೌ ।**

**ವೃಷಪೀಠೇ ಬಲಿಂ ದದ್ಯಾನ್ಮಂಟಪೇ ಪೂರ್ವದಿಙ್ಮುಖಃ ॥**

ಬ್ರಹ್ಮಪೀಠದಲ್ಲಿ (ಪಶ್ಚಿಮಾಭಿಮುಖನಾಗಿ) ಬಲಿಯನ್ನು ಹಾಕಿ, ಆಮೇಲೆ (ನಿಋತಿ ಪಶ್ಚಿಮದ ನಡುವೆ ಗರ್ಭಗುಡಿಯ ಹಿಂಭಾಗದಲ್ಲಿ ಪೂರ್ವಾಭಿಮುಖನಾಗಿ) ಅನಂತನ ಪೀಠದಲ್ಲಿ ಬಲಿಯನ್ನು ಹಾಕಬೇಕು. ಮಂಟಪದಲ್ಲಿ ಪೂರ್ವಾಭಿಮುಖನಾಗಿ ವೃಷಪೀಠದಲ್ಲಿ ಬಲಿಹಾಕಬೇಕು.

ದಕ್ಷಿಣಾಭಿಮುಖೋ ದದ್ಯಾದ್ವೀರಭದ್ರಗಣಾದಿಪೌ ।

ಪೂರ್ವಂ ಗಣಪತಿಂ ಚೈವ ಮಾತೃಣಾಂ ಪೂರ್ವಪಶ್ಚಿಮೇ ॥

ಆಮೇಲೆ ಮಾತೃಪೀಠದ ಸಮೀಪ ಬಂದು ಪೀಠದ ಉತ್ತರದಲ್ಲಿ ದಕ್ಷಿಣಾಭಿಮುಖನಾಗಿ ನಿಂತು, ಪೂರ್ವದಲ್ಲಿ (ಮಾತೃಕೆಯರ) ಗಣಪತಿಯನ್ನೂ ಪಶ್ಚಿಮದಲ್ಲಿ ವೀರಭದ್ರನನ್ನೂ ಪೂಜಿಸಿ ಬಲಿದಾನ ಮಾಡಬೇಕು.

ಮಾತೃಪೀಠೇ ಬಲಿಂದದ್ಯಾಚ್ಛಾಸ್ತಾರಂ ಪೀಠಸನ್ನಿಧೌ ।

ಶಾಸ್ತೃಪೀಠೇ ಬಲಿಂ ದದ್ಯಾದುತ್ತರಾಭಿಮುಖಃ ಕ್ರಮಾತ್ ॥

ಮಾತೃಕೆಯರ ಪೀಠದಲ್ಲಿ ಬಲಿಯನ್ನು ಹಾಕಿ, ಶಾಸ್ತೃಪೀಠದ ಸಮೀಪ ಬಂದು, ಉತ್ತರಾಭಿಮುಖನಾಗಿ ನಿಂತು ಶಾಸ್ತಾರನ ಪೀಠದಲ್ಲಿ ಬಲಿದಾನವನ್ನು ಮಾಡಬೇಕು.

ವಾಯುಪೀಠ ಸಮೀಪೇತು ಆರ್ಯಾಯೈಚೋತ್ತರಾಮುಖಃ ।

ಆಚಾರ್ಯೋಽಪಿ ಬಲಿಂ ದದ್ಯಾದುಕ್ತಮಾರ್ಗೇಣ ವೈ ಕ್ರಮಾತ್ ॥

ದಕ್ಷಿಣಾಭಿಮುಖೋ ದದ್ಯಾದ್ಧನೇಶಾಯ ಬಲಿಂ ತತಃ ।

ಪೂರ್ವಾಭಿಮುಖ ಆಚಾರ್ಯಶ್ಚಂಡೇಶಾಯ ಬಲಿಂ ಹರೇತ್ ॥

ವಾಯುಪೀಠದ ಸಮೀಪದಲ್ಲಿ ಉತ್ತರಾಭಿಮುಖನಾಗಿ ನಿಂತು ದುರ್ಗಿಗೆ (ಆರ್ಯೆಗೆ) ಬಲಿಯನ್ನು ಹಾಕಬೇಕು. ಆಚಾರ್ಯನು ಎಲ್ಲೆಡೆಯಲ್ಲೂ ಹೇಳಲ್ಪಟ್ಟ ಕ್ರಮದಂತೆ ಬಲಿಯನ್ನು ಹಾಕಬೇಕು. ದಕ್ಷಿಣಾಭಿಮುಖನಾಗಿ ಯಕ್ಷ(ಧನೇಶ, ಕುಬೇರ)ನಿಗೆ ಬಲಿಹಾಕಬೇಕು. ಪೂರ್ವಾಭಿಮುಖನಾಗಿ ಆಚಾರ್ಯನು ಚಂಡೇಶ್ವರ (ನಿರ್ಮಾಲ್ಯಧಾರಿ)ನಿಗೆ ಬಲಿಯನ್ನು ಹಾಕಬೇಕು.

ಚಂಡೇಶ್ವರಬಲಿಂ ದತ್ವಾ ನಿಃಶಬ್ದೇನ ತತೋ ವ್ರಜೇತ್ ।

ಪ್ರಾಂಗಣದ್ವಾರಿ ಚ ಸ್ಥಿತ್ವಾ ತೀಕ್ಷ್ಣದಂಷ್ಟ್ರಬಲಿಂ ಹರೇತ್ ॥

ಚಂಡೇಶ್ವರನಿಗೆ ಬಲಿಯನ್ನು ಕೊಟ್ಟು ವಾದ್ಯ ಮೊದಲಾದ ಶಬ್ದ ಹೊರತಾಗಿ ಮುನ್ನಡೆಯಬೇಕು. ಪ್ರಾಂಗಣದ ಬಾಗಿಲಿನಲ್ಲಿ ನಿಂತು ತೀಕ್ಷ್ಣದಂಷ್ಟ್ರನಿಗೆ ಬಲಿ ಹಾಕಬೇಕು.

ಪಶ್ಚಿಮಾಭಿಮುಖೋ ದದ್ಯಾದ್ಬಹಿಃ ಪ್ರಾಸಾದಮೇವ ಚ ।

ಪೂರ್ವಾಭಿಮುಖ ಆಚಾರ್ಯೋ ಭೃಂಗಿಪೀಠೇ ಬಲಿಂ ಹರೇತ್ ॥

ಹೊರಗೆ ಪ್ರಾಸಾದವನ್ನೂ ಪಶ್ಚಿಮಕ್ಕೆ ಮುಖಮಾಡಿ ಬಲಿಯನ್ನು ಕೊಡಬೇಕು. ಆಚಾರ್ಯನು ಪೂರ್ವಭಿಮುಖನಾಗಿ ನಿಂತು ಭೃಂಗಿ ಪೀಠದಲ್ಲಿ ಬಲಿಯನ್ನು ಹಾಕಬೇಕು.

ಭೃಂಗಿ ಪೀಠೇ ಬಲಿಂ ದತ್ವಾ ಮಹಾಕಾಲಸ್ಯ ಸನ್ನಿಧೌ ।

ಶಂಖಧ್ವನಿಸಮಾಯುಕ್ತೋ ದೇವಂ ಮೂರ್ಧ್ನಿ ಸಮಾವಹೇತ್ ॥

ಭೃಂಗಿ ಪೀಠದಲ್ಲಿ ಬಲಿಯನ್ನು ಕೊಟ್ಟು ಮಹಾಕಾಲನ ಸನ್ನಿಧಿಯಲ್ಲಿ ಶಂಖ ಧ್ವನಿಯಿಂದೊಡಗೂಡಿ ದೇವರನ್ನು ತಲೆಯಲ್ಲಿಹೊರಬೇಕು.

ಪಶ್ಚಿಮಾಭಿಮುಖೋ ಮಂತ್ರೀ ಮಹಾಕಾಲಂ ಬಲಿಂ ಹರೇತ್ ।

ಈಶಾನಾಭಿಮುಖಾಚಾರ್ಯೋ ಭೂತನಾಥಬಲಿಂ ಹರೇತ್ ॥

ಆಚಾರ್ಯನು ಪಶ್ಚಿಮಕ್ಕೆ ಮುಖ ಮಾಡಿ ನಿಂತು ಮಹಾಕಾಲನಿಗೆ ಬಲಿಯನ್ನು ಹಾಕಬೇಕು. ಆಚಾರ್ಯನು ಈಶಾನ್ಯಕ್ಕೆ ಮುಖಮಾಡಿ ಭೂತನಾಥನ ಬಲಿಯನ್ನು ಹಾಕಬೇಕು.

ಮಹೀಧರೇ ಪೂರ್ವಮುಖೋ ಉತ್ತರಃ ಪರ್ವತೇಶ್ವರೇ ।

ಗುಹೇಶ್ವರೇ ದಕ್ಷಮುಖೋ ಕಾಲಪಾಶೋಕ್ತಮಾರ್ಗತಃ ॥

ಮಹೀಧರನಲ್ಲಿ ಪೂರ್ವಾಭಿಮುಖನಾಗಿಯೂ, ಪರ್ವತೇಶ್ವರನಲ್ಲಿ ಉತ್ತರಾಭಿಮುಖನಾಗಿಯೂ ಗುಹೇಶ್ವರನಲ್ಲಿ ದಕ್ಷಿಣಾಭಿಮುಖನಾಗಿಯೂ ಕಾಲಪಾಶನಲ್ಲಿ ದಕ್ಷಿಣಾಭಿಮುಖನಾಗಿಯೂ ಆಚಾರ್ಯನು ಬಲಿಪ್ರಧಾನವನ್ನು ಮಾಡಬೇಕು.

**ಕಪರ್ದಿನ ಸ್ತಥಾ ಚೋಕ್ತಃ ಕ್ಷೇತ್ರಪೀಠಸ್ಯ ಸನ್ನಿಧೌ ।**

**ಕ್ಷೇತ್ರೇಶಪೀಠಪರಿತಃ ಅಷ್ಟೌ ದೇವಾಃ ಪ್ರಕೀರ್ತಿತಾಃ ॥**

ಕಪರ್ದಿಯನ್ನು ದಕ್ಷಿಣಾಭಿಮುಖವಾಗಿ ಬಲಿಯನ್ನು ಹಾಕಿ ಕ್ಷೇತ್ರಪಾಲನ ಪೀಠದ ಸಮೀಪ ಬಂದು, ಕ್ಷೇತ್ರೇಶನ ಪೀಠದ ಸುತ್ತಲೂ ಎಂಟು ದೇವತೆಗಳು ಹೇಳಲ್ಪಟ್ಟಿವೆ. ಆ ದೇವತೆಗಳಿಗೆ ಬಲಿಹಾಕಬೇಕು.

**ಭೂತಿದಾದಿ ತ್ರಿಭುಜಾಂತಂ ದಕ್ಷಿಣಾಭಿಮುಖೋ ಬಲಿಂ ।**

**ಪಿಂಗಲಂ ಹರಸೇನಾಂತಂ ಉತ್ತರಾಭಿಮುಖೋ ಬಲಿಃ ॥**

**ಏತೇಷಾಂ ಲಕ್ಷಣಂ ದೇವಿ ಬಲಿದಾನಕ್ರಮೇಣ ತು ॥**

ಭೂತಿದಾದಿಯಾಗಿ ತ್ರಿಭುಜಪರ್ಯಂತವಾಗಿ ದಕ್ಷಿಣಕ್ಕೆ ಮುಖ ಮಾಡಿ ಬಲಿಯನ್ನು ಹಾಕಬೇಕು. ಪಿಂಗಲ ಮೊದಲಾಗಿ ಹರಸೇನಾಪರ್ಯಂತ ಉತ್ತರಾಭಿಮುಖವಾಗಿ ಬಲಿಯನ್ನು ಹಾಕಬೇಕು. ಬಲಿದಾನ ಕ್ರಮದಿಂದ ಇವುಗಳ ಲಕ್ಷಣವು ಹೇಳಲ್ಪಟ್ಟಿದೆ.

ಇಲ್ಲಿ ಹೇಳಲ್ಪಟ್ಟ ಕ್ರಮವು ಶಿವನ ಗಣಗಳಿಗೆ ಹೇಳಲ್ಪಟ್ಟದ್ದಾದರೂ ಬೇರೆ ದೇವತೆಗಳಲ್ಲಿಯೂ ಹೊಂದಿಸಿಕೊಳ್ಳಲ್ಪಡಬೇಕು. ದೇವತಾಭೇದವಿದ್ದರೂ ದಿಕ್ಕುಗೆ ಮುಖ ಮಾಡುವಿಕೆ, ಬಲಿ ಮೊದಲಾದುವುಗಳು ಸ್ಥಾನದ ಹೊಂದಿಕೆಯಿಂದ ಹಾಗೆಯೇ ತಿಳಿಯಲ್ಪಡಬೇಕು.

## ಬಲಿದಾನವಿಧಿಯಲ್ಲಿ ಉಪಸ್ಥಾನ ಮಂತ್ರವು

**ಪ್ರಾಸಾದಾಂತರ್ದ್ವಾರಿ–**

**(ನಮಸ್ತೇ ದ್ವಾರಿ ಯುಕ್ತಾಯ ಶೂಲಹಸ್ತಾಯ ಧೀಮತೇ ।**

**ದೃಷ್ಟ್ವಾ ನಿಹತದೈತ್ಯಾಯ ನಂದೀಶಾಯ ನಮೋ ನಮಃ ॥**

**ನಮಸ್ತೇ ದ್ವಾರಿಯುಕ್ತಾಯ ಪರಶುವ್ಯಗ್ರಪಾಣಯೇ ।**

**ದೃಷ್ಟ್ವಾ ನಿಹತದೈತ್ಯಾಯ ಮಹಾಕಾಲಾಯ ತೇ ನಮಃ ॥)**

**ನಮೋಽಸ್ತು ವೇತ್ರಹಸ್ತಾಭ್ಯಾಂ ದ್ವಾಸ್ಥಾಭ್ಯಾಂ ವೈಪಿನಾಕಿನಃ ।**

**ನಂದಿನೇ ತು ನಮಸ್ತುಭ್ಯಂ ಮಹಾಕಾಲಾಯ ತೇ ನಮಃ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಓಂ ಸ್ಫುರ ಸ್ಫೋಟಯ ಹುಂ ತ್ರಕ್ಷ ಸ್ವಾಹಾ । ನಂದಿನೇ ಶಿವಪಾರ್ಷದಾಯ ನಮಃ । ತತ್ಪಾರ್ಷದೇಭ್ಯೋ ನಮಃ । ಓಂ ಹ್ರೀಂ ಪ್ರೇಂ ಕಪಾಲಿನ್‌ಹಃ ನಮಃ । ತತ್ಪಾರ್ಷದೇಭ್ಯೋ ನಮಃ ॥ ౩ ॥

**ದಕ್ಷಿಣದ್ವಾರಿ–**

**ನಮಸ್ತೇ ಸರ್ವಭೂತೇಶ ಸರ್ವಸಂಪತ್ಪ್ರದಾಯಿನೇ ।**

**ಸರ್ವವಿಘ್ನವಿನಾಶಾಯ ವಿಘ್ನೇಶಾಯ ಶಿವಾತ್ಮನೇ ॥**

**ನಮಸ್ತೇಸ್ತು ಮಹಾಯೋಗಿನ್ವ್ಯಾಖ್ಯಾ ಮುದ್ರಾಲಸತ್ಕರ ।**

**ದಕ್ಷಿಣಾಮೂರ್ತಿರೂಪಾಯ ರುದ್ರಾಯ ಪರಮಾತ್ಮನೇ ॥**

ಹೀಗೆ ಉಪಸ್ಥಾನ ಮಾಡಿ–

ಓಂ ಗಂಗಣಪತಯೇ ನಮಃ । ತತ್ಪಾರ್ಷದೇಭ್ಯೋ ನಮಃ ॥ ೨ ॥ ಓಂ ದಕ್ಷಿಣಾಮೂರ್ತಯೇ । ತತ್ಪಾರ್ಷದೇಭ್ಯೋ । * ॥ ೪ ॥ * ನಮಸ್ತೇ ದ್ವಾರಿ * * ಧಿಮತೇ । ದಿಷ್ಟ್ಯಾ * * ಶಾರಿಕರಾಯ ನಮೋ ನಮಃ । * ನಮಸ್ತೇ ದ್ವಾರಿ * * ಪರಶುವ್ಯಗ್ರಪಾಣಯೇ । ದಿಷ್ಟ್ಯಾ * * ಶಾಂಕರಾಯ ನಮೋ ನಮಃ ॥ ಹೀಗೆ ಉಪಸ್ಥಾನ ಮಾಡಿ, ಓಂ ಶೂಲಪಾಣಯೇ ನಮಃ । ತತ್ಪಾರ್ಷದೇಭ್ಯೋ ನಮಃ ॥ ೫ ॥ ಓಂ ಪರಶುಪಾಣಯೇ ನಮಃ । ತತ್ಪಾರ್ಷದೇಭ್ಯೋ ನಮಃ ॥ ೬ ॥

**ಐಂದ್ರೇ–**

**ದೈತ್ಯದರ್ಪವಿನಾಶಾಯ ಸಹಸ್ರಾಕ್ಷಾಯ ಧೀಮತೇ ।**
**ಕುಲಿಶವ್ಯಗ್ರಹಸ್ತಾಯ ನಮಸ್ತೇಽಸ್ತು ಶತಕ್ರತೋ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಇಂದ್ರಾಯ ಸುರಾಧಿಪತಯೇ ಶಿವಪಾರ್ಷದಾಯ ನಮಃ ತತ್ಪಾರ್ಷದೇಭ್ಯೋ ನಮಃ । ಓಂ ನಮೋ ಭೂತೇಭ್ಯೋ ಭೂತಕೃದ್ಭ್ಯಃ ಸರ್ವೇಭ್ಯೋಽರಿಷ್ಟಕೃದ್ಭ್ಯಃ ಸದ್ಭ್ಯೋಽಸದ್ಭ್ಯೋ ಸದಸದ್ಭ್ಯೋ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ । ಪೂರ್ವಸ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ವಜ್ರಪಾಣಯಃ ಶ್ವೇತಾಃ ಶ್ವೇತಾಕ್ಷಾಃ ಶ್ವೇತಲೋಹಿತಾಃ ದಿವ್ಯಂತಿರಕ್ಷಭೌಮಾಃ ಪಾತಾಳನಿವಾಸಿನ್ಯಶ್ಚ ತೇಭ್ಯೋ ವೈ ನಮೋ ನಮಃ ಸ್ವಾಹಾ ॥ ಯೇ ಭೂತಾಃ ಪುರಃ ಸದೋ ನಿಶಾಚರಾಃ ರೌದ್ರಾಃ ಸಂತೋಽಸಂತಃ ಸದಸಂತೋ ವಿರೂಪಾಃ ವಿಶ್ವರೂಪಾ ಮಹಾರೂಪಾ ಘೋರರೂಪಾ ಮೃಗಾಸ್ಯಾ ವಿಹಗಾನನಾ ಪುಷ್ಟಿಕೃತೋಽಪುಷ್ಟಿಕೃತಃ ಕಾಮದಾಶ್ಚ ಬಲಿಮಿಚ್ಛಂತಿ ತೇಷಾಂ ಸರ್ವೇಷಾಂ ಬಲಿಂ ಹರಾಮಿ ಮಹದ್ಭ್ಯಃ ಕ್ಷುದ್ರಕೇಭ್ಯಶ್ಚ ತೇಭ್ಯಸ್ತಾಭ್ಯೋ ನಮೋ ನಮಃ ಸ್ವಾಹಾ ॥ ೭ ॥

**ಆಗ್ನೇಯ್ಯಾಂ–**

**ಮುಖಂ ಯಃ ಸರ್ವದೇವಾನಾಂ ಯೇನ ಹವ್ಯಂ ಚ ನೀಯತೇ ।**
**ಯೇನ ಪ್ರವರ್ತತೇ ಸರ್ವಂ ನಮಸ್ತಸ್ಮೈ ಹವಿರ್ಭುಜೇ ॥**

ಹೀಗೆ ಉಪಸ್ಥಾನ ಮಾಡಿ–

ಅಗ್ನಯೇ ತೇಜೋಧಿಪತಯೇ ಶಿವಪಾರ್ಷದಾಯ ನಮಃ ತತ್ಪಾರ್ಷದೇಭ್ಯೋ * । ಓಂ ನಮೋ ಭೂತೇಭ್ಯೋ * * ಆಗ್ನೇಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಶಕ್ತಿಪಾಣಯಃ ರಕ್ತಾಃ ರಕ್ತಾಕ್ಷಾಃ ಅಲೋಹಿತಾಃ ದಿವ್ಯಾಂತರಿಕ್ಷಭೌಮಾಃ ಪಾತಾಳವಾಸಿನಶ್ಚ ತೇಭ್ಯೋ ವೈ ನಮೋ ನಮಃ ಸ್ವಾಹಾ ॥ ೮ ॥

**(ದಕ್ಷಿಣೇ)ಯಾಮ್ಯಾಂ–**

**ಯೇನ ಸಂಹ್ರಿಯತೇ ಸರ್ವಂ ಯೇನ ಧರ್ಮಶ್ಚ ರಕ್ಷ್ಯತೇ ।**
**ಯಸ್ಮಾದ್ಬಿಭೇತಿ ಲೋಕೋಽಯಂ ಪ್ರೇತನಾಥ ನಮೋಸ್ತು ತೇ॥**

ಹೀಗೆ ಉಪಸ್ಥಾನ ಮಾಡಿ–

ಓಂ ಯಮಾಯ ಪ್ರೇತಾಧಿಪತಯೇ ಶಿವಪಾರ್ಷದೇ * * ತತ್ಪಾರ್ಷದೇಭ್ಯಃ * * ಓಂ ನಮೋ ಭೂತೇಭ್ಯಃ * * ಯಾಮ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ದಂಡಪಾಣಯಃ ಕೃಷ್ಣಾಃ ಕೃಷ್ಣಾಕ್ಷಾಃ ಕೃಷ್ಣಲೋಹಿತಾ ದಿವ್ಯಂತರಿಕ್ಷ * * ಯೇ ಭೂತಾ ದಕ್ಷಿಣಸದ್ಭ್ಯೋ ನಿಶಾಚರಾ ರೌದ್ರಾ * * ತೇಭ್ಯ ಸ್ತಾಭ್ಯೋ ನಮೋ ನಮಃ ಸ್ವಾಹಾ॥ ೯॥

**ನಿರ್ಋತೌ–**

**ರಾಕ್ಷಸಾ ಯಾತುಧಾನಾಶ್ಚ ಪಿಶಾಚಾಶ್ಚಾಶ್ರಯಂತಿ ಯಂ ।**
**ತಸ್ಮೈ ನಿರ್ಋತಿರೂಪಾಯ ರಕ್ಷಸಾಂ ಪತಯೇ ನಮಃ ॥**

ಹೀಗೆ ಉಪಸ್ಥಾನವನ್ನು ಮಾಡಿ

ಓಂ ನಿರ್ಋತಯೇ ರಕ್ಷೋಧಿಪತಯೇ ಶಿವಪಾರ್ಷದಾಯ ನಮಃ । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯೋ * * ನೈರ್ಋತ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಖಡ್ಗಪಾಣಯಃ ಶ್ಯಾಮಾಃ ಶ್ಯಾಮಾಕ್ಷಾಃ ಶ್ಯಾಮಲೋಹಿತಾ ದಿವ್ಯಂತರಿಕ್ಷಭೌಮಾಃ * * ನಮೋ ನಮಃ ಸ್ವಾಹಾ ॥ ೧೦ ॥

**ವಾರುಣ್ಯಾಂ–**

**ಯೇನ ಪ್ರಸೂಯತೇ ಸರ್ವಂ ಯಸ್ಮಿನ್ಸರ್ವಂ ಪ್ರಲೀಯತೇ ।**

**ಅಮೋಘ ಪಾಶಹಸ್ತಾಯ ತಸ್ಮೈಽಪಾಂ ಪತಯೇ ನಮಃ ॥**

ಹೀಗೆ ಉಪಸ್ಥಾನ ಮಾಡಿ–

ವರುಣಾಯ ಜಲಾಧಿಪತಯೇ ಶಿವಪಾರ್ಷದಾಯ ನಮಃ । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯೋ * * ವಾರುಣ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಪಾಶಪಾಣಯಃ ಶಬಲಾಃ ಶಬಳಾಕ್ಷಾಃ ಶಬಳಲೋಹಿತಾಂ ದಿವ್ಯಾಂತರಿಕ್ಷಭೌಮಾಃ ಪಾತಾಳವಾಸಿನಶ್ಚ * * ಯೇ ಭೂತಾಃ ಪಶ್ಚಿಮಸದೋ ನಿಶಾಚರಾಃ ರೌದ್ರಾಃ ಸಂತೋಽಸಂತಃ ಸದಸಂತೋ * ॥ ೧೧ ॥

**ವಾಯುವ್ಯಾಂ–**

**ಪೂರ್ಯಂತೇ ಚ ಹ್ರಿಯಂತೇ ಚ ಯೇನ ಪ್ರಾಣಾದಯಃ ಕ್ರಮಾತ್ ।**

**ಭುತಾನಾಂ ಪತಯೇ ತುಭ್ಯಂ ನಮಸ್ತಸ್ಮೈ ಮರುತ್ಪತೇ ॥**

ಹೀಗೆ ಉಪಸ್ಥಾನ ಮಾಡಿ–

ವಾಯವೇ ಪ್ರಾಣಾಧಿಪತಯೇ ಶಿವಪಾರ್ಷದಾಯ ನಮಃ । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯಃ * * ವಾಯವ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಅಂಕುಶಪಾಣಯಃ ಪೀತಾಃ ಪೀತಾಕ್ಷಾಃ ಪೀತಲೋಹಿತಾಃ ದಿವ್ಯಂತರಿಕ್ಷಭೌಮಾಃ ಪಾತಾಳವಾಸಿನಶ್ಚ * * ನಮಃ ಸ್ವಾಹಾ ॥ ೧೨ ॥

**ಯಂ ಪ್ರಾಶ್ಯಾಮರತಾಂ ಯಾಂತಿ ದೇವಾ ಯಜ್ಞಶರೀರಿಣಃ ।**

**ಸೋಮಾಯ ಗದಿನೇ ತಸ್ಮೈ ಜ್ಯೋತಿಷಾಂ ಪತಯೇ ನಮಃ ॥**

ಹೀಗೆ ಉಪಸ್ಥಾನ ಮಾಡಿ–

ಸೋಮಾಯ ನಕ್ಷತ್ರಾಧಿಪತಯೇ ಶಿವಪಾರ್ಷದಾಯ ನಮಃ । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯಃ * * ಸೌಮ್ಯಾಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಗದಾಪಾಣಯಃ ಸಿತಾಃ ಸಿತಾಕ್ಷಾಃ ಸಿತಲೋಹಿತಾಃ * * ಯೇ ಭೂತಾ ಉತ್ತರಸದೋ ನಿಶಾಚರಾ ರೌದ್ರಾಃ ಸಂತೋಽಸಂತಃ ॥ ೧೩ ॥

**ಯೇನ ಕಾಲಾಗ್ನಿನಾ ಲೋಕೋ ಯುಗಾಂತೇಷ್ವವದಹ್ಯತೇ ।**

**ತಸ್ಮೈ ತೇಬ್ರಹ್ಮಣಃ ಪುತ್ರ ವಿರೂಪಾಕ್ಷ ನಮೋಽಸ್ತುತೇ ॥**

ಹೀಗೆ ಉಪಸ್ಥಾನ ಮಾಡಿ–

ಈಶಾನಾಯ ವಿದ್ಯಾಧಿಪತಯೇ ಶಿವಪಾರ್ಷದಾಯ * । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯಃ * * ಐಶಾನ್ಯಾಂ ದಿಶಿ ಶಿವಸ್ಯ ಭಗವತೋ ಯೇ ಗಣಾಃ ಶೂಲಪಾಣಯಃ ಕಪಿಲಾಃ ಕಪಿಲಾಕ್ಷಾಃ ಕಪಿಲಲೋಹಿತಾಃ * ॥ ೧೪ ॥

**ಯೇನ ಸೃಷ್ಟಂ ಜಗತ್ಸರ್ವಂ ಸರ್ಗಾಂತೇ ವಿಷ್ಣುಶಾಸನಾತ್ ।**

**ಪಿತಾಮಹ ನಮಸ್ತುಭ್ಯಂ ಸರ್ವಲೋಕೇಶ ಪದ್ಮಜ ॥**

ಹೀಗೆ ಉಪಸ್ಥಾನ ಮಾಡಿ–

ಬ್ರಹ್ಮಣೇ ಲೋಕಾಧಿಪತಯೇ ಶಿವಪಾರ್ಷ * * । ತತ್ಪಾರ್ಷದೇಭ್ಯೋ * ಓಂ ನಮೋ ಭೂತೇಭ್ಯೋ * * ಊರ್ಧ್ವಾಯಾಂ ದಿಶ ಶಿವಸ್ಯ ಭಗವತೋ ಯೇಗಣಾಃ ಪದ್ಮಪಾಣಯಃ ಸುವೇಗಾ ಸೂಕ್ಷ್ಮಾಃ ಸೂಕ್ಷ್ಮಾಕ್ಷಾಃ ಸೂಕ್ಷ್ಮಲೋಹಿತಾ ದಿವ್ಯಂತರಿಕ್ಷ * * ಯೇ ಭೂತಾ ಉಪರಿಷದೋ ನಿಶಾಚರಾ ರೌದ್ರಾ * * ॥ ೧೫ ॥

**ಪನ್ನಗಾಧಿಪತಿರ್ದೇವ ಅನಂತೋ ನಾಮ ನಾಮತಃ ।**

**ಪಾತಾಳವಾಸಿನೇ ತುಭ್ಯಂ ನಾಗರಾಜಾಯ ತೇ ನಮಃ ॥**

ಹೀಗೆ ಉಪಸ್ಥಾನ ಮಾಡಿ–

ಅನಂತಾಯ ನಾಗಾಧಿಪತಯೇ ಶಿವಪಾರ್ಷ * * ತತ್ಪಾರ್ಷದೇಭ್ಯೋ * * ಓಂ ನಮೋ ಭೂತೇಭ್ಯಃ * * ಅಧಸ್ತಾದ್ದಿಶಿ ಶಿವಸ್ಯ ಭಗವತೋ ತೇಗಣಾಃ ವಿಷಪಾಣಯಃ ಧೂಮ್ರಾಃ ಧುಮ್ರಾಕ್ಷಾಃ ಧೂಮ್ರಲೋಹಿತಾ ದಿವ್ಯಂತರಿಕ್ಷ * ॥ ೧೭ ॥

**ವಾಹನಾಯ ಮಹಾಶಂಭೋಃ ಶೈಲಾರ್ಣವ ಘನಸ್ವನ ।**

**ವೃಷಭಾಯ ನಮಸ್ತುಭ್ಯಂ ಸರ್ವದುಷ್ಟಪ್ರಶಾಂತಯೇ ॥**

ಹೀಗೆ ಉಪಸ್ಥಾನ ಮಾಡಿ–

ಓಂ ಋಷಭಾಯ । ಮಹಾಬಲಾಯ । ಸೌರಭೇಯಾಯ । ಹರವಾಹನಾಯ । ಓಂ ಸೌರಭೇಯಾಯ ವಿದ್ಮಹೇ ಮಹಾಬಲಾಯ ಧೀಮಹೀ । ತನ್ನೋ ವೃಷಃ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ನಮಃ ॥ ೧೭ ॥

**ವೀರಭದ್ರ ನಮಸ್ತೇಽಸ್ತು ನಮೋ ವಿಘ್ನೇಶ್ವರಾಯ ಚ ।**

**ಬ್ರಾಮ್ಹ್ಯಾದಿಭ್ಯಶ್ಚ ಸರ್ವೇಭ್ಯೋ ಮಾತೃಭ್ಯೋ ವೈ ನಮೋ ನಮಃ ॥**

ಹೀಗೆ ಉಪಸ್ಥಾನ ಮಾಡಿ–

ಓಂ ವಿಂ ವೀರಭದ್ರಾಯ ನಮಃ– ವೀರಭದ್ರಾಯ ವಿದ್ಮಹೇ ಮಹಾನಾದಾಯ ಧೀಮಹೇ ।
ತನ್ನಃ ಶಾಂತಃ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ನಮಃ ॥ ೧ ॥

ಓಂ ಗಂ ಗಣಪತಯೇ ನಮಃ– ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋದಂತೀ ಪ್ರಚೋದಯಾತ್ ॥ ತತ್ಪಾರ್ಷ * * ॥ ೨ ॥

ಓಂ ವ್ಯೋಂ ಬ್ರಮ್ಹಾಣ್ಯೈ ನಮಃ– ಬ್ರಮ್ಹಭೂತಾಯ್ಯೈ ವಿದ್ಮಹೇ ಕುಶಹಸ್ತಾಯ್ಯೈ ಧೀಮಹೇ ।
ತನ್ನೋ ಬ್ರಾಮ್ಹೀ ಪ್ರಚೋದಯಾತ್ ॥ ತತ್ಪಾರ್ಷ * * ॥ ೩ ॥

ಓಂ ಮಂ ಮಾಹೇಶ್ವರ್ಯೈ ನಮಃ– ಮಹೇಶ್ವರ ಭೂತಾಯ್ಯೈ ವಿದ್ಮಹೇ ಶೂಲಹಸ್ತಾಯ್ಯೈ ಧೀಮಹೇ ।
ತನ್ನೋ ಮಾಹೇಶ್ವರೀ ಪ್ರಚೋದಯಾತ್ ॥ ತತ್ಪಾರ್ಷ * * ॥ ೪ ॥

ಓಂ ಮಾಂ ಕೌಮಾರ್ಯ್ಯೈ ನಮಃ– ಸ್ಕಂದ ಭೂತಾಯ್ಯೈ ವಿದ್ಮಹೇ ಶಕ್ತಿ ಹಸ್ತಾಯ್ಯೈ ಧೀಮಹೇ ।
ತನ್ನಃ ಕೌಮಾರೀ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ * ॥ ೫ ॥

ಓಂ ಹ್ಯೆಂ ವೈಷ್ಣವ್ಯೈ *– ವಿಷ್ಣು ಭೂತಾಯ್ಯೈ ವಿದ್ಮಹೇ ಚಕ್ರಹಸ್ತಾಯ್ಯೈ ಧೀಮಹೇ
ತನ್ನೋ ವೈಷ್ಣವೀ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ನಮಃ ॥ ೬ ॥

ಓಂ ಹೇಂ ವಾರಾಹ್ಯೈ * *– ಪ್ರಜಾಪತಿಭೂತಾಯ್ಯೈ ವಿದ್ಮಹೇ ಗದಾಹಸ್ತಾಯ್ಯೈ ಧೀಮಹೇ ।
ತನ್ನೋ ವಾರಾಹೀ ಪ್ರಚೋದಯಾತ್ ತತ್ಪಾರ್ಷದೇಭ್ಯೋ ನಮಃ ॥ ೭ ॥

ಓಂ ಹೋಂ ಇಂದ್ರಾಣ್ಯೈ ನಮಃ– ಇಂದ್ರಭೂತಾಯ್ಯೈ ವಿದ್ಮಹೇ ವಜ್ರಹಸ್ತಾಯ್ಯೈ ಧೀಮಹೇ ।
ತನ್ನ ಇಂದ್ರಾಣೀ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ॥ ೮ ॥

ಓಂ ಹ್ರೂಂ ಚಾಮುಂಡ್ಯೈ * – ರುದ್ರಭೂತಾಯ್ಯೈ ವಿದ್ಮಹೇ ಖಡ್ಗಹಸ್ತಾಯ್ಯೈ ಧೀಮಹೇ ।
ತನ್ನಶ್ಚಾಮುಂಡೀ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ * ॥ ೯ ॥

ಓಂ ಮಾತೃಭ್ಯೋ ನಮಃ– ತತ್ಪಾರ್ಷದೀಭ್ಯೋ * * ॥ ೧೦ ॥

ಲೋಕಮಾತೃಭ್ಯೋ ನಮಃ ತತ್ಪಾರ್ಷದೀಭ್ಯೋ ನಮಃ ॥ ೧೧ ॥

ಓಂ ಸರ್ವಮಾತೃಭ್ಯೋ ನಮಃ– ತತ್ಪಾರ್ಷದೀಭ್ಯೋ ನಮಃ ॥ ೧೨ ॥

ಓಂ ಸರ್ವಮಾತೃಗಣೇಭ್ಯೋ * * ತತ್ಪಾರ್ಷದೀಭ್ಯೋ * ॥ ೧೩ ॥

ನಾನಾರೂಪಾ ಮಾತರಃ ಪ್ರತಿದಿಶಂ ವ್ಯವಸ್ಥಿತಾ ದಿವ್ಯಂತರಿಕ್ಷಭೌಮಾ ಪಾತಾಳನಿವಾಸಿನಶ್ಚೇಹಾಯಾಂತು ಶಿವಾಜ್ಞಯಾ ಮಾಮನುಗೃಹ್ಣಂತು ನಮೋ ನಮಃ ಸ್ವಾಹಾ ॥ ಆಕಾಶಮಾತೃಭ್ಯೋ ನಮಃ ॥ ತತ್ಪಾರ್ಷದೀಭ್ಯೋ ನಮಃ ॥ ೧೪ ॥

(ಚಂಡಕಪಾಲಿನೀ ವಿದ್ಮಹೇ ಬಹುಮಾಂಸಿನೀ ಚ ಧೀಮಹೀ । ತನ್ನ ಉದ್ವಾಸಿನೀ ಪ್ರಚೋದಯಾತ್ ॥ )

**(ಈಶ ದುತ್ತರಭಾಗೇ ತು ಮಂತ್ರೇಣಾನೇನ ದೇಶಿಕಃ ।**

**ದತ್ವಾಬಲಿಂತತೋಗಚ್ಛೇಪ್ರಾದಕ್ಷಿಣ್ಯೇನ ಸತ್ತಮಃ ॥**

ಸ್ವಲ್ಪ ಉತ್ತರದ ಭಾಗದಲ್ಲಿ ಈ ಮಂತ್ರದಿಂದ ಆಚಾರ್ಯನು ಬಲಿಯನ್ನು ಹಾಕಿ ಆಮೇಲೆ ಪ್ರದಕ್ಷಿಣಾಕಾರವಾಗಿ ಮುಂದೆ ಹೋಗಬೇಕು ) ॥ ೧೮ ॥

**ನಮಸ್ತೇ ಭವಪುತ್ರಾಯ ಭೂತನಾಥಾಯ ಧನ್ವಿನೇ ।**

**ಮೃಗಯಾಸಕ್ತಚಿತ್ತಾಯ ಲೋಕಾಶಾಸ್ತ್ರೇ ನಮೋ ನಮಃ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಶಾಸ್ತ್ರೇ ಭೂತಾಧಿಪತಯೇ ಶಿವಪಾರ್ಷದಾಯ ನಮಃ । ನೀಲಾಯ । ಕಾಳಾಯ । ಕಪರ್ದಿನೇ । ಉಗ್ರಾಯ । ರುದ್ರಸುತಾಯ । ಭೂತನಾಥಾಯ । ಭೂತನಾಥಾಯ ವಿದ್ಮಹೇ ಭವಪುತ್ರಾಯ ಧೀಮಹೇ । ತನ್ನಃ ಶಾಸ್ತಾ ಪ್ರಚೋದಯಾತ್ । ತತ್ಪಾರ್ಷದೇಭ್ಯೋ ನಮಃ ॥ ೧೯ ॥

**ಚಾಂಬ್ವಾದೀನಾಂ ಗಣಾಃ ಸರ್ವೇ ಕೋಟಿ ಕೋಟಿ ಗಣಾಧಿಪಾಃ ।**

**ಭವಂತು ಸಹಿತಾಃ ಸರ್ವೇ ತೇಭ್ಯಸ್ತಾಭ್ಯೋ ನಮೋ ನಮಃ ॥**

**ನಮಸ್ತೇ ದೈತ್ಯದರ್ಪಘ್ನಿ ಚಂಡಿಕೇ ಚಂಡವಿಕ್ರಮೇ ।**

**ಭಕ್ತಪ್ರಿಯೇ ಮಹಾದೇವಿ ಕಾತ್ಯಾಯನಿ ನಮೋಽಸ್ತುತೇ ॥**

ಹೀಗೆ ಉಪಸ್ಥಾನ ಮಾಡಿ–

ಓಂ ಹ್ರೀಂ ದುಂ ದುರ್ಗಾಯೈ * । ತತ್ಪಾರ್ಷದೀಭ್ಯೋ ನಮಃ ॥ ೨೦ ॥

**ಕಾರ್ತಿಕೇಯ ನಮಸ್ತೇಽಸ್ತು ನಮಸ್ತೇಽಸ್ತು ಮಹಾಬಲ ।**

**ದೇವಸೇನಾಪತೇ ಸ್ಕಂದ ಬಾಹುಲೇಯ ನಮೋಽಸ್ತುತೇ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಓಂ ವಚದ್ಭುವೇ ನಮಃ । ಸನತ್ಕುಮಾರಾಯ । ಸ್ಕಂದಾಯ । ಇಂದ್ರಾಯ । ವಿಶಾಖಾಯ । ಷಷ್ಠಿನೇ । ಷಣ್ಮುಖಾಯ । ಸನತ್ಕುಮಾರಾಯ ವಿದ್ಮಹೇ ಷಡಾನನಾಯ ಧೀಮಹೇ । ತನ್ನಃ ಸ್ಕಂದಃ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ನಮಃ ॥೨೧॥

**ಯತ್ಪ್ರಸಾದಾಜ್ಜಗತ್ಸರ್ವಂ ಧನೇನ ಪರಿಪೂರ್ಯತೇ ।**

**ಯಕ್ಷಗುಹ್ಯಕನಾಥಾಯ ಧನನಾಥ ನಮೋಽಸ್ತುತೇ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಓಂ ಯಕ್ಷಾಯ ಶಿವಪಾರ್ಷದಾಯ ತತ್ಪಾರ್ಷ * ॥ ೨೨ ॥

**ಚಂಡೇಶಾಯ ನಮಸ್ತುಭ್ಯಂ ಶಿವನಿರ್ಮಾಲ್ಯಧಾರಿಣೇ ।**

**ರೌದ್ರಾಯ ಚ ಪ್ರಸನ್ನಾಯ ಪ್ರಣತಾರ್ತಿಹರಾಯ ತೇ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಓಂ ಧೂತಿ ಚಂಡ ಹುಂಫಟ್ । ಚಂಡಾಯ ನಮಃ । ಚಂಡ ಚಂಡಾಯ । ಚಂಡೇಶ್ವರಾಯ ॥ ಚಂಡ ಚಂಡಾಯ ವಿದ್ಮಹೇ ಚಂಡೇಶ್ವರಾಯ ಧೀಮಹೇ ತನ್ನಶ್ಚಂಡೇಶ್ವರಃ ಪ್ರಚೋದಯಾತ್ ॥ ತತ್ಪಾರ್ಷದೇಭ್ಯೋ ನಮಃ ॥ ೨೩ ॥

**ತೀಕ್ಷ್ಣದಂಷ್ಟ್ರ ನಮಸ್ತೇಽಸ್ತು ನಮಸ್ತೇಽಸ್ತು ಮೃಗಾನನ ।**

**ದೌವಾರಿಕಾಭ್ಯಾಮೀಶಸ್ಯ ಯುವಾಭ್ಯಾಂ ವೈ ನಮೋ ನಮಃ ॥**

ಹೀಗೆ ಉಪಸ್ಥಾನವನ್ನು ಮಾಡಿ–

ಓಂ ತೀಕ್ಷ್ಣದಂಷ್ಟ್ರಾಯ ಶಿವಪಾರ್ಷದಾಯ * । ತತ್ಪಾರ್ಷದಾಯ ನಮಃ ॥ ೨೪ ॥ ಮೃಗಾಸ್ಯಾಯ ಶಿವಪಾರ್ಷದಾಯ ನಮಃ । ತತ್ಪಾರ್ಷದಾಯ ನಮಃ ॥ ೨೫ ॥

**ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ ।**

**ತೇ ರುದ್ರಪಾರ್ಷದಾಃ ಸರ್ವೇ ಗೃಹ್ಣಂತು ಬಲಿಮುತ್ತಮಂ ॥**

ಹೀಗೆ ಹೊರಗಿನ ದೇವತೆಗಳಿಗೆ ಒಮ್ಮೆಯೇ ಉಪಸ್ಥಾನವು. ಬೇರೆ ಬೇರೆ ಪ್ರತ್ಯೇಕವಾಗಿ ಇಲ್ಲ. ಓಂ ಭೃಂಗಿಣೇ ಶಿವ ಪಾರ್ಷದಾಯ ನಮಃ । ತತ್ಪಾ * । ಓಂ ವೃಷಭಾಯ ಧ್ವಜಾಧಿಪತಯೇ ಶಿವ * * ತತ್ಪಾರ್ಷ * * ॥ ೨೭ ॥ ಓಂ ಮಹಾಕಾಲಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೨೮ ॥ ಓಂ ಭೂತನಾಥಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೨೯ ॥ ಓಂ ಮಹೀಧರಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೩೦ ॥ ಓಂ ಪರ್ವತೇಶಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೩೧ ॥ ಓಂ ಗುಹೇಶಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೩೨ ॥ ಓಂ ಕಾಲಪಾಶಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೩೩ ॥ ಓಂ ಕಪಾಲಾಯ ಶಿವಪಾರ್ಷದೇಭ್ಯೋ * * ತತ್ಪಾರ್ಷದೇಭ್ಯೋ ॥ ೩೪ ॥

**ಪುನಃ ದ್ವಿತೀಯಾವರಣೇ–** ಮಹಾಕಾಲಾದಿಭ್ಯೋ ವಿಂಶತಿ ಕೋಟಿ ಗಣಾದಿಪೇಭ್ಯೋ ನಮೋ ನಮಃ ॥ ೧ ॥ ಅಗ್ನ್ಯಾದಿಭ್ಯಃ ॥ ೨ ॥ ಯಮಾದಿಭ್ಯಃ ॥ ೩ ॥ ರಕ್ಷಪ್ರಭೃತಿಭ್ಯಃ ॥ ೪ ॥ ವರುಣಾದಿಭ್ಯಃ ॥ ೫ ॥ ವಾಯ್ವಾದಿಭ್ಯಃ ॥ ೬ ॥ ಯಕ್ಷಾದಿಭ್ಯಃ ॥ ೭ ॥ ಈಶಾನಾದಿಭ್ಯಃ ॥ ೮ ॥ ಮಹಾಕಾಲಾದಿಭ್ಯಃ ॥ ೯ ॥ ಬುಧಾದಿಭ್ಯಃ ॥ ೧೦ ॥ ಭೃಂಗ್ಯಾದಿ ಸನ್ನಿಧೌ ಕ್ಲೃಪ್ತಮಂಡಲೇಷು ಊರ್ಧ್ವಾಧೋ ದಿಕ್ಷು ಚ ಏಭ್ಯೋ ಮಹಾಕಾಲಾದಿಭ್ಯಃ ಬಲಿಂ ದದ್ಯಾತ್ । ತತಮಂತ್ರಾಃ–

**ಮಹಾಕಾಲೋ ವಿಧಾತಾ ಚ ವಜ್ರಪಾಣಿಃ ಕ್ರತುಃ ಪ್ರಭುಃ ।**

**ದಕ್ಷಃ ಶತಕ್ರತುರ್ಮೂರ್ತಿರಪ್ರಮೇಯಶ್ಚ ವೀರ್ಯವಾನ್ ॥**

**ನಿತ್ಯೋ ವಿದ್ಯುತ್ಪ್ರಭಃ ಶೂಲೀ ಶೂಲಹಸ್ತ ಸ್ತ್ರಿಣೇತ್ರವಾನ್ ।**

**ಸ್ವಾಂಗದೀಪ್ತ ಸ್ತಮೋ ಧಾತಃ ಸೃಷ್ಟಿಕೃದ್ವೀರ್ಯವಿಕ್ರಮಃ ॥**

**ಮಾಂಧಾತಾ ಸೃಷ್ಟಿಕೃದ್ವಿರ್ಯೋ ನಿತ್ಯಯೋಗಃ ಪ್ರತಾಪವಾನ್ ।**

**ಏತೇ ವಿಂಶತಿ ಕೋಟೀನಾಂ ಪ್ರಾಕ್ಸ್ಥಿತಾನಾಂ ನಮೋ ನಮಃ ॥**

**ಅಗ್ನಿರಗ್ನಿಸಮಾನಶ್ಚ ಜ್ವಾಲೀ ವಿಶ್ವಭುಗವ್ಯಯಃ ।**

**ಹುತಾಶೀ ಮೂರ್ತಿಮಾನ್ವ್ಯಾಪೀ ಕವಿಲೋ ರಕ್ತಲೋಚನಃ ॥**

**ಉಗ್ರೋ ರಕ್ತವಪುರ್ಧೂಮಃ ಸಪ್ತಾರ್ಚಿರ್ವಿಶ್ವಭೇಷಜೇ ।**

**ಹುತಭುಕ್ಸತ್ಯವಾನ್ವೇಗೀ ಭಸ್ಮಚ್ಛನ್ನೋ ಮರುತ್ಸಖಃ ॥**

**ಯೋಗಪ್ರಿಯಃ ಸದಾಕಾಂಕ್ಷೀ ದಾರುಜಃ ಸ್ಪಂದನೋ ಜಟೀ ।**



ಇತ್ಯೇತೇ ಕೋಟಿ ಗುಣಿತಾ ಅಗ್ನಿರೂಪಾ ನಮೋ ನಮಃ ॥
ಯಮೋ ವೈವಸ್ವತೋ ಧಾತಾ ಶತ್ರುಘಾತಃ ಪ್ರಜಾಂತಕಃ ।
ಮೃತ್ಯುಃ ಪ್ರೇತಾಧಿಪೋ ಧರ್ಮಃ ಕೃಷ್ಣಃ ಕೃಷ್ಣಾಕ್ಷ ಏವ ಚ ॥
ನಿತ್ಯಯೋಗೀ ಸುಹೃತ್ಕ್ಷೇಮೀ ಆತ್ಮಧರ್ಮೀ ಸದಾಂತಕಃ ।
ಮಾಯಾರೂಪೀ ಪ್ರಜಾಕಾಂಕ್ಷೀ ಸತ್ಯಾಸತ್ಯಪ್ರಿಯಃ ಸುಹೃತ್ ॥
ಇತ್ಯೇತೇ ಕೋಟಿಗುಣಿತಾ ಯಮರೂಪಾ ನಮೋನಮಃ ।
ರಕ್ಷೋಽಸುರಃ ಪಿಶಾಚಶ್ಚ ನಿರ್ಋತಿ ರ್ವೀರ ಏವಚ ॥
ತೀಕ್ಷ್ಣಶ್ಚಕ್ಷುರ್ಭ್ರುಸೀ ದೇಹೀ ಯಜ್ಞಹರ್ತಾ ವಿನಾಯಕಃ ।
ಅತಿಮೂರ್ತಿರನೇಕಾಂಗೀ ಕ್ರೂರಃ ಕ್ರೂರವಪುರ್ಮಹಾನ್ ॥
ಸೂಕ್ಷ್ಮರುದ್ರೋ ವಿರೂಪಾಕ್ಷೋ ಭಸ್ಮಾಂಗೀ ಧೂಮ್ರಲೋಚನಃ ।
ಇತ್ಯೇತೇ ಕೋಟಿಗುಣಿತಾ ನಿಋತಿರೂಪಾ ನಮೋ ನಮಃ ॥
ವರುಣಃ ಶಂಬರೋ ಭೃಂಗೀ ನಿಮ್ನಗಾಧಿಪತಿಃ ಕ್ಷಮಃ ।
ಶ್ರೀಮಾನಭ್ರಘನಃ ಕಾಂತ ಆನಂದ ಸ್ತತ್ವದರ್ಶನಃ ॥
ಪಾಶಹಸ್ತಃ ಪಶುರ್ವೇಗೀ ಆಕ್ರಂದಃ ಶ್ಯಾಮಲೋಚನಃ ।
ಕಪರ್ದೀ ಪ್ರಾಣದಃ ಶ್ಯಾಮಃ ಸತ್ಯಬುದ್ಧಿಃ ಸನಾತನಃ ॥
ಇತ್ಯೇತೇ ಕೋಟಿಗುಣಿತಾ ವರುಣರೂಪಾ ನಮೋ ನಮಃ ।
ವಾಯುರ್ಗಂಧವಹಃ ಸೂಕ್ಷ್ಮ ಸ್ತತ್ವಾತ್ಮಾನಂದ ಏವ ಚ ॥
ಪ್ರಾಣೋಽಪಾನಃ ಸಮಾನಶ್ಚ ಜ್ಞಾನಾಕ್ಷೋ ಜ್ಞಾನಿನೋ ವರಃ ।
ಕಪಾಲೀ ಶೂಲಪಾಣಿಶ್ಚ ವ್ಯಾನೋದಾನೌ ಚ ಸಾಕಲೀ ॥
ಅಮಾಲೀ ಮೂಲವಾನ್ಬಿಂದುರ್ಮೂಲಶಾಕೀ ವಿಭಾವರೀ ।
ಇತ್ಯೇತೇ ಕೋಟಿಗುಣಿತಾ ವಾಯುರೂಪೇ ನಮೋ ನಮಃ ॥
ಯಕ್ಷೋಽಧರಯಿವಾನ್ಸೋಮಃ ಸೂಕ್ಷ್ಮಃ ಕಾಲೋ ನಿರಾಶ್ರಯಃ ।
ಆಲಂಬೋ ಭೈರವೋ ಭಿಕ್ಷುರ್ವಿಕಾರೋ ವಾಮ ಏವ ಚ ॥
ಜ್ಯೇಷ್ಠೋ ಮಾಲಾಧರ ಶ್ಚಂಡೋ ಮನಶ್ಚೋನ್ಮನ ಏವ ಚ ।
ರೌದ್ರೋ ಬಲಧರಃ ಕಾಲಃ ಸರ್ವತ್ರ ಬಲವಾನಪಿ ॥
ಇತ್ಯೇತೇ ಕೋಟಿಗುಣಿತಾ ಯಕ್ಷರೂಪಾ ನಮೋ ನಮಃ ।
ಈಶಾನ ಈಶ್ವರಃ ಶಂಭುಃ ಶೂಲಹಸ್ತ ತ್ರಿನೇತ್ರವಾನ್ ॥
ಅನಾದಿನಿಧನೋ ರಾಗೀ ಕಪಿಲಃ ಕಪಿಲಾಕ್ಷಧೃಕ್ ।
ರುದ್ರೋ ಗಣಾಧಿಪೋ ಯೋಗೀ ವಿಶ್ವಹರ್ತಾ ದಿಗಂಬರಃ ॥
ಧೂಮ್ರಾಕ್ಷೋ ಧೂಮ್ರರೂಪಶ್ಚ ನೀಲೋ ವಿಶ್ವಭುಜೋ ಹರಃ ।

ಇತ್ಯೇತೇ ಕೋಟಿಗುಣಿತಾ ರುದ್ರರೂಪಾ ನಮೋ ನಮಃ ।
ಮಹಾಬಲೋ ಮಹಾನಾದೋ ಮೂರ್ತಿರ್ಮೂರ್ತಿಪತಿಃ ಶಿವಃ ।
ಪವಿತ್ರೋ ರಾಜಯಃ ಸ್ಥಾಣುರಘೋರೋ ಘೋರ ಏವ ಚ ॥
ಅರುಣೋ ಲಾಂಗಲೋ ಮನ್ಯುರಂಗಾರಃ ಶಿವಭೂಷಣಃ ।
ಜೀಮೂತೋ ಮೂರ್ತಿಕೃದ್ವಾಗ್ಮೀ ಮಂತ್ರೀಶ ಸ್ತ್ರೀಪುರಾಂತಕಃ ॥
ಗಣಾಧಿಪಾಃ ಶಿವಸ್ಯೈತೇ ಊರ್ಧ್ವರೂಪಾ ನಮೋ ನಮಃ ।
ಬುಧಃ ಪ್ರತರ್ದನಃ ಶುದ್ಧಃ ಕಾಲರೂಪೋಗ್ರದಂಷ್ಟ್ರವಾನ್ ॥
ದೀರ್ಘಬಾಹುಃ ಪ್ರಕಾಶಶ್ಚ ಭರ್ತಾ ಹರ್ತಾ ವಿಚಕ್ಷಣಃ ।
ಕಾಲಾಗ್ನೀ ರೌರವೋ ಘೋರೋ ನರಕಃ ಶರ್ವ ಏವ ಚ ॥
ನಾಗಶ್ಚೈವಾಥ ಘೋರಶ್ಚ ಕಿಂಬುರುರ್ದನುಜಃ ಕ್ಷಮೀ ।
ಇತ್ಯೇತೇ ಕೋಟಿಗುಣಿತಾಃ ಪಾತಾಲಾಸ್ತೇ ನಮೋ ನಮಃ ॥

ಓಂ ಭೂತಿದಾಯ ಸ್ವಾಹಾ । ತತ್ಪಾರ್ಷದೇಭ್ಯೋ ನಮಃ– ಹೀಗೆ ಎಲ್ಲಾ ಕಡೆಯೂ ಹೇಳಬೇಕು. ದುರ್ನಿರಿಕ್ಷಾಯ । ಭೀಮರೂಪಾಯ । ಸುಲೋಚನಾಯ । ಸುಮುಖಾಯ । ಮಹಾಬಾಹವೇ । ತ್ರಿಶಿರಸೇ । ಓಂ ತ್ರಿಭುಜಾಯ ಪಿಂಗಲಾಯ ನಮಃ ಎಂದು ಕೆಳಗೆ. ಓಂ ಹರಸೇನಾಯ ಸ್ವಾಹಾ– ಹರಸೇನಾಯ ವಿದ್ಮಹೇ ಮಹಾಬಲಾಯ ಧೀಮಹೇ । ತನ್ನಃ ಶಕ್ತಿಃ ಪ್ರಚೋದಯಾತ್ । ದಶಮೂರ್ತಿಪಾರ್ಷದೇಭ್ಯಃ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ ॥

ಅಸಂಖ್ಯಾತಾ ಗಣಾಃ ಸರ್ವೇ ಕೋಟಿ ಕೋಟಿ ಗಣಾಧಿಪಾಃ ।
ಭವಂತು ಸಹಿತಾಃ ಸರ್ವೇ ತೇಭ್ಯಸ್ತಾಭ್ಯೋ ನಮೋ ನಮಃ ॥
ದೇವತಾಭ್ಯಃ ಪಿತೃಭ್ಯೋಥ ಭೂತೇಭ್ಯಃ ಸಹ ಜಂಗಮೈಃ ।
ಏತತ್ಸ್ಥಾನ ನಿವಾಸಿಭ್ಯಃ ಪ್ರಯಚ್ಛಾಮಿ ಬಲಿಂ ನಮಃ ॥

ಓಂ ನಮಃ ಶಿವಾಯ * * * ತತ್ಪಾರ್ಷದೇಭ್ಯೋ ನಮಃ । ಇತ್ಯೇತೈಃ ಪೀಠೇ ಬಲಿಂದತ್ವಾ ಪುನಸ್ತತ್ಪುರಸ್ತಾತ್ಸಮಾರಭ್ಯ ಅಷ್ಟಾಸು ದಿಕ್ಷು ಬಲಿಂ ದದ್ಯಾತ್ ॥

* * * *

## ತೃತೀಯಾವರಣ ಬಲಿಮಂತ್ರಾಃ

ಅಸಂಖ್ಯೇಯಾಶ್ಚರಂತಿ ಸ್ಮ ಸರ್ವತಃ ಪೃಥಿವೀಮಿಮಾಂ ।
ತೇಭ್ಯೋ ದೇವಗ್ರಹೇಭ್ಯೋಽಸ್ತು ಶೈವೇಭ್ಯೋಽಸ್ತು ನಮೋನಮಃ ॥

ತೇಭ್ಯೋ ದೇವಗ್ರಹೇಭ್ಯೋ ನಮಃ । ತತ್ಪಾರ್ಷದೇಭ್ಯೋ ನಮಃ । ಓಂ ನಮೋ ಭೂತೇಭ್ಯೋ ಭೂತಕದ್ಭ್ಯಃ ಸರ್ವೇಭ್ಯೋಽರಿಷ್ಟಕೃದ್ಭ್ಯಃ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ॥

(ಐಂದ್ರೀಂ ದಿಶಂ ಸಮಾರಭ್ಯ ಯಾವದಾಗ್ನೇಯ ಗೋಚರಂ ।
ಯೇ ಸಮಸ್ತಮಿತಿ ದ್ವಾಭ್ಯಾಂ ವಿಕಿರೇದ್ಬಹುಮುಷ್ಟಿಭಿಃ ॥)
ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ ।
ರುದ್ರಪಾರಿಷದಾಃ ಸರ್ವೇ ಗೃಹ್ಣಂತು ಬಲಿಮುತ್ತಮಂ ॥
ಗೃಹ್ಣಂತು ಬಲಿಮೇತತ್ತು ಬಾಹ್ಯಸ್ಥಾ ವಿಹಗಾನನಾಃ ।

ಯೇ ಕ್ರೂರಾ ಯೇಽಲ್ಪಸತ್ವಾಶ್ಚ ಭೂತಪ್ರೇತನಿಶಾಚರಾಃ ॥
ವೇತಾಳಶ್ಚೈವ ಮಾತಂಗಾ ಹೀನಪೀನಾಶ್ಚಯೇಗಣಾಃ ।
ಸರ್ವೇಷಾಂ ಚೈವ ತೇಷಾಂ ಚ ಹರಾಮಿ ಬಲಿಮುತ್ತಮಂ ॥
ಸರ್ವೇಭ್ಯ ಏವ ತೇಭ್ಯಶ್ಚ ಸಗಣೇಭ್ಯೋ ನಮೋ ನಮಃ ।

ಏವಂ ಸರ್ವತ್ರ ।

ಅಸಂಖ್ಯೇಯಾಶ್ಚರಂತಿ ಸಮ ಸರ್ವತಃ ಪೃಥಿವೀಮಿಮಾಂ ॥

ತೇಭ್ಯೋ ಅಸುರಗ್ರಹೇಭ್ಯೋ ನಮಃ । ತತ್ಪಾರ್ಷದೇಭ್ಯೋ ನಮಃ ಓಂ ನಮೋ ಭೂತೇಭ್ಯಃ * * ಏವಂ ಸರ್ವತ್ರ ತತ್ತದ್ಗ್ರಹ ದೇವತಾ ನಾಮಪುರಸರಂ ಬಲಿಂ ದದ್ಯಾತ್ । ಅಂತರಾಳೇಽಪಿ ತಥೈವ । ಯಕ್ಷಗ್ರಹೇಭ್ಯಃ । ಗಂಧರ್ವ ಗ್ರಹೇಭ್ಯಃ । ಪಿತೃ ಗ್ರಹೇಭ್ಯಃ । ನಾಗ ಗ್ರಹೇಭ್ಯಃ । ರಾಕ್ಷಸ ಗ್ರಹೇಭ್ಯಃ । ಪಿಶಾಚ ಗ್ರಹೇಭ್ಯಃ । ಏವಂ ತ್ರಿಧಾ ಪರಿಭ್ರಮ್ಯ ಕ್ಷೇತ್ರಪಾಲ ಬಲಿಂ ಹರೇತ್ ।

* * * *

**ವಿಷ್ಣೌ (ಇತರೇಶು ಚ) ವಿಶೇಷ ಬಲಿಮಂತ್ರಾ ಲಿಖ್ಯಂತೇ–**

ನಮಸ್ತೇ ದ್ವಾರಪಾಲಾಯ ಚಂಡಾಯ ಮಿತತೇಜಸೇ ।
ನರಸಿಂಹತನೂಜಾಯ ಚಕ್ರೇಣಾಂಕಿತಮೌಲಯೇ ॥
ನಮಸ್ತೇ ದ್ವಾರಪಾಲಾಯ ಪ್ರಚಂಡಾಯಾಮಿತೌಜಸೇ ।
ನರಸಿಂಹತನೂಜಾಯ ಶಂಖೇನಾಂಕಿತಮೌಲಯೇ ॥
ವಾಹನಾಯ ಮಹಾವಿಷ್ಣೋ ಸ್ತಾರ್ಕ್ಷ್ಯಾಯಾಮಿತ ತೇಜಸೇ ।
ಗರುಡಾಯ ನಮಸ್ತೇಽಸ್ತು ದುಷ್ಟಸರ್ಪೇಂದ್ರಮೃತ್ಯವೇ ॥
ಶಯ್ಯಾ ಯೋಜಗತಾಂ ಧಾತುರ್ವಿಷ್ಣೋ ರ್ವಿವಿಧಮಾಯಿನಃ ।
ಅನಂತಾಯ ನಮಸ್ತುಭ್ಯಂ ಮಹೀಂದ್ರನಮಿತಾಂಘ್ರಯೇ ॥ ಇತ್ಯಾದಿ.
ನಮಸ್ತೇ ದ್ವಾರಪಾಲಾಯ ಚಕ್ರವ್ಯಗ್ರಮಹಾಭುಜ ।
ದೃಷ್ಟ್ಯಾ ನಿಹತದೈತ್ಯಾಯ ವೈಷ್ಣವಾಯ ನಮೋ ನಮಃ ॥
ನಮಸ್ತೇ ದ್ವಾರಪಾಲಾಯ ಶಂಖವ್ಯಗ್ರಮಹಾಭುಜ ।
ದೃಷ್ಟ್ಯಾ ನಿಹತದೈತ್ಯಾಯ ವೈಷ್ಣವಾಯ ನಮೋ ನಮಃ ॥
ಶ್ರೀಧರಾಯ ನಮಸ್ತೇಽಸ್ತು ನಮಸ್ತೇಽಶ್ವಮುಖಾಯ ಚ ।
ವಾಗೀಶ್ವರ್ಯಾದಿ ಮಾತೃಭ್ಯಃ ಸರ್ವಾಭ್ಯೋ ವೈನಮೋ ನಮಃ ॥
ವಿಶ್ವಕ್ಸೇನ ನಮಸ್ತೇಽಸ್ತು ದೇವನಿರ್ಮಾಲ್ಯಧಾರಿಣೇ ।
ಶಂಖಚಕ್ರಗದಾಪಾಣೇ ಮಹಾಪಾರಿಷದೇಶ್ವರ ॥

ಇತಿ ವಿಷ್ಣೌ ವಿಶೇಷೋಪಸ್ಥಾನ ಮಂತ್ರಾಃ

**ಶಂಕರನಾರಾಯಣನಲ್ಲಿ–**

ನಮಸ್ತೇ ದ್ವಾರಿಯುಕ್ತಾಯ ಶೂಲಹಸ್ತಾಯ ಧೀಮತೇ ।
ದಿಷ್ಟ್ಯಾ ನಿಹತದೈತ್ಯಾಯ ಶಾಂಕರಾಯ ನಮೋ ನಮಃ ॥



ನಮಸ್ತೇ ದ್ವಾರಪಾಲಾಯ ಪ್ರಚಂಡಾಯಾಮಿತೌಜಸೇ ।
ನರಸಿಂಹತನೂಜಾಯ ಚಕ್ರೇಣಾಂಕಿತಮೌಲಯೇ ॥

–ಇತಿ ಪ್ರಾಸಾದಸ್ಯಬಹೀರ್ದ್ವಾರಿ ॥ ವಾಹನಾಯ ಮಹಾಶಂಭೋಃ * * * ವಾಹನಾಯ ಮಹಾವಿಷ್ಣೋಃ * * * ಇತಿ ಶಂಕರನಾರಾಯಣ ವಿಶೇಷಃ.

ದುರ್ಗೆಯಲ್ಲಿ–

ನಮಸ್ತೇ ದ್ವಾರಿಯುಕ್ತಾಯೈ ಅಂಬಿಕಾಯೈ ಮಹೌಜಸೇ ।
ನರಸಿಂಹತನೂಜಾಯೈ ಶಂಖೇನಾಂಕಿತ ಮೌಲಯೇ ॥
ನಮಸ್ತೇ ದ್ವಾರಿಯುಕ್ತಾಯೈ ಜಯಾಯೈ ಜ್ವಾಲಯಾವೃತೇ ।
ದೃಷ್ಟ್ವಾ ನಿಹತದೈತ್ಯಾಯೈ ಕಾತ್ಯಾಯಿನ್ಯೈ ನಮೋಽನಮಃ ॥
ನಮಸ್ತೇ ದ್ವಾರಿಯುಕ್ತಾಯೈ ವಿಜಯಾಯೈ ಮಹೌಜಸೇ ।
ದೃಷ್ಟ್ವಾ ನಿಹತದೈತ್ಯಾಯೈ ಕಾತ್ಯಾಯಿನ್ಯೈ ನಮೋಽನಮಃ ॥
ವಾಹನಾಯ ಮಹಾದೇವ್ಯಾಃ ಸಿಂಹಾಯಾಮಿತತೇಜಸೇ ।
ಅತುಲ್ಯಬಲವನ್ನತ್ರ ನಮಸ್ತೇಽಸ್ತು ಹರೀಶ್ವರ ॥
ನಮಸ್ತೇ ಸರ್ವ * * * ನಮಸ್ತೇಽಸ್ತು ಮಹಾಯೋಗಿನ್ * *
ದೈತ್ಯದರ್ಪ * * ಶತಕ್ರತೋ॥
ಮುಖಂ ಯಃ ಸರ್ವ * * ತಸ್ಮೈ ಹವಿರ್ಭುಜೇ ॥
ದಂಡಹಸ್ತಾಯ ಭೀಮಾಯ ಸರ್ವಪ್ರಾಣಹರಾಯ ಚ ।
ಪ್ರೇತನಾಥ ನಮಸ್ತೇಽಸ್ತು ಪಿತೃಲೋಕನಿವಾಸಿನೇ ॥
ಖಡ್ಗಹಸ್ತಾಯ ಘೋರಾಯ ನೈರ್ಋತಾಯ ಮಹಾತ್ಮನೇ ।
ರಕ್ಷೋಧಿಪಾಯ ತೀಕ್ಷ್ಣಾಯ ನಮಸ್ತೇಽಸ್ತು ನಿಶಾಚರ ॥
ಜಲಾಧಿಪಾಯ ಪ್ರಾಣಾಯ ಸರ್ವಭೂತ ಹಿತಾಯಚ ।
ಪಾಶಹಸ್ತಾಯ ಭೀಮಾಯ ನಮಸ್ತೇಽಸ್ತು ಅಪಾಂಪತೇ ॥
ಸದಾಗತಾಯ ಪ್ರಾಣಾಯ ಸರ್ವಭೂತ ಹಿತಾಯ ಚ ।
ಧ್ವಜಹಸ್ತಾಯ ಶಬ್ದಾಯ ನಮಸ್ತೇಽಸ್ತು ಸಮೀರಣ ।
ನಕ್ಷತ್ರಾಣಾಂ ಚ ಸರ್ವೇಷಾಂ ಸೋಮೋ ರಾಜಾ ಪ್ರಕೀರ್ತಿತಃ ।
ಗದಾಪಟ್ಟಸಧಾರೀ ಚ ಸೋಮರಾಜಾಯ ತೇ ನಮಃ ॥
ಧನದಾಯ ಕುಬೇರಾಯ ಸರ್ವೌಷಧಿಧರಾಯ ಚ ।
ಪೌಲಸ್ತ್ಯಾಯ ಚ ನೀಲಾಯ ನಮಸ್ತೇಽಸ್ತು ಧನಾಧಿಪ ॥
ಈಶಾನಃ ಸರ್ವ ವಿದ್ಯಾನಾಮಕ್ಷಮಾಲಾಧರೋ ಹರಃ ।
ಹರಿಣಹಸ್ತೋ ಮಹಾತ್ಮಾ ಚ ನಮಸ್ತೇಽಸ್ತು ಧನಾಧಿಪ ॥

ಸೃಷ್ಟ್ವಾ ಚರಸ್ಯ ಸರ್ವಸ್ಯ ಲೋಕಾನಾಂ ಚ ಪಿತಾಮಹಃ ।
ಆದಿಶ್ಚ ಸರ್ವಭೂತಾನಾಂ ತಸ್ಮೈ ದೇವಾತ್ಮನೇ ನಮಃ ॥
ಪನ್ನಗಾಧಿಪತಿರ್ದೇವ ಅನಂತೋ ನಾಮ ನಾಮತಃ ।
ಪಾತಾಲವಾಸಿನೇ ನಿತ್ಯಂ ನಾಗರಾಜಾಯ ತೇ ನಮಃ ॥
ತರ್ಜಯಂತೀ ಜಗತ್ಸರ್ವಂ ಸದಾ ನಿರ್ಮಾಲ್ಯಧಾರಿಣೇ ।
ವರದಾಭಯ ಹಸ್ತಾಯೈ ಚಂಡಿಕಾಯೈ ನಮೋಽಸ್ತುತೇ ॥

ಇತಿ ದುರ್ಗಾಯಾಂ ವಿಶೇಷಃ

**ಸುಬ್ರಮ್ಹಣ್ಯನಲ್ಲಿ–**

ಇಂದ್ರಃ ಸುರಪತಿಶ್ಚೈವ ವಜ್ರಹಸ್ತೋ ಮಹಾಬಲಃ ।
ಶತಯಾಗಾಧಿಪೋ ದೇವಸ್ತಸ್ಮೈ ಯಾಗಾತ್ಮನೇ ನಮಃ ॥
ಸರ್ವದೇವಮಯೋ ದೇವೋ ರಕ್ತೋ ವಹ್ನಿರ್ಮಹಾಬಲಃ ।
ಸಪ್ತಜಿಹ್ವೋ ಮಹಾವೀರ್ಯೋ ನಮೋ ವೈಶ್ವಾನರಾಯ ಚ ॥
ದಂಡಹಸ್ತೋ ಮಹಾದೇವೋ ಧರ್ಮಾಧ್ಯಕ್ಷೋ ಮಹಾಬಲಃ ।
ಆವಾಹಯೇದ್ಧರ್ಮರಾಜಂ ತಸ್ಮೈ ಪ್ರೇತಾತ್ಮನೇ ನಮಃ ॥
ಖಡ್ಗಹಸ್ತಧರೋ ದೇವಃ ನೈರ್ಋತೋ ನೀಲವಿಗ್ರಹಃ ।
ನಿರ್ಋತೇ ಚ ನಮಸ್ತುಭ್ಯಂ ಖಡ್ಗಹಸ್ತಾತ್ಮನೇ ನಮಃ ॥
ಜಲರಾಜ ಮಹಾರಾಜ ವಿಖ್ಯಾತ ಇತಿ ನಿಮ್ನಗಃ ।
ಪಶ್ಚಿಮಾಂ ದಿಶಮಾಚಷ್ಟೇ ಪಾಶಹಸ್ತಾತ್ಮನೇ ನಮಃ ॥
ಸರ್ವಪ್ರಕಾಶಕೋ ನಿತ್ಯಃ ಸರ್ವಲೋಕಾಧಿ ದೇವತಾ ।
ಧ್ವಜಹಸ್ತೋ ಮಹಾಪ್ರಾಣಸ್ತಸ್ಮೈ ವಾಯ್ವಾತ್ಮನೇ ನಮಃ ॥
ನಕ್ಷತ್ರಾಣಾಂ * * ತೇ ನಮಃ । ಧನದಾಯ * * ಧನಾಧಿಪ ॥
ಸರ್ವಲೋಕಧಿಪೋ ದೇವಃ ಈಶಾನೋ ನಾಮನಾಮತಃ ।
ಶೂಲಪಾಣಿರ್ಮಹಾದೇವ ಸ್ತ್ರೈಲೋಕ್ಯಾಧಿಪತೇ ನಮಃ ॥
ಸ್ರಷ್ಟಾ ಚರಸ್ಯ ಸರ್ವಸ್ಯ * ತ್ಮನೇ ನಮಃ । ಪನ್ನಗಾಧಿ * * ತೇ ನಮಃ ॥
ವೀರಭದ್ರ ನಮಸ್ತೇಽಸ್ತು * * ವೈನಮೋ ನಮಃ ॥

**ಗಣಪತಿಯಲ್ಲಿ–**

ವಾಹನಾಯ ಗಣೇಶಸ್ಯ ಮಹಾಚಾಪಾಯ ಧೀಮತೇ ।
ಮಧ್ಯೇ ಪಾರಿಷದೇಶಾನಾಂ ಭ್ರಾಜಮಾನಾಯ ತೇ ನಮಃ ॥

ನಮಸ್ತೇ ಸರ್ವಭೂತೇಶ * * ಮೊದಲಾಗಿ ಶಿವನಲ್ಲಿ ಹೇಳಿದ ಮಂತ್ರಗಳು ಇಲ್ಲಿಯೂ ಅನುಸಂಧಾನ ಮಾಡಬೇಕು.

**ಶಾಸ್ತಾರನಲ್ಲಿ–**

ವಿಷ್ಣುವಿನಲ್ಲಿ ಹೇಳಿದ ಉಪಸ್ಥಾನ ಮಂತ್ರಗಳೇ ಆಗಿವೆ. ಉಳಿದ ಆಯಾಯ ದೇವತೆಯ ಮಂತ್ರಗಳನ್ನು ಶಿವನಲ್ಲಿ ಹೇಳಿದ ಮಂತ್ರಗಳಂತೆ ಆಯಾಯ ಸ್ಥಾನದಲ್ಲಿ ಆಯಾಯ ದೇವತೆಗಳಿಗೆ ಸಂಬಂಧಿಸಿದಂತೆ ಊಹಿಸಿಕೊಳ್ಳಬೇಕು.

**ವಿಷ್ಣುವಿನಲ್ಲಿ–**

ಮಂಟಪದ ಹೊರಬಾಗಿಲಿನಲ್ಲಿ– ಶ್ರಿಯೈ । ಪುಷ್ಟ್ಯೈ । ಸಬಾಂತರ್ದ್ವಾರದಲ್ಲಿ– ಶಂಖನಿಧಯೇ • ಪುಷ್ಪನಿಧಯೇ • । ಹೊರಗೆ– ಚಕ್ರಾಯ । ಶಂಖಾಯ • । ಶಿವ ಮೊದಲಾಗಿ ಆರು ದೇವತೆಗಳಲ್ಲಿ ಶ್ರೀಭೂತ ಬಲಿಯಲ್ಲಿ ಹೇಳಿದ ದ್ವಾರಪಾಲಕರೇ. ಹೊರಭಾಗದಲ್ಲಿ– ಯೇ ಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ ಬಲಿಕಾಂಕ್ಷಿಣಃ । ವಿಷ್ಣುಪಾರಿಷದಾಃ ಸರ್ವೇ ಗೃಹ್ಣಂತು ಬಲಿಮುತ್ತಮಂ ॥ ಹೀಗೆ ವಾದ್ಯದೊಡನೆ ಘೋಷಣೆ ಮಾಡಬೇಕು. ವಿಷ್ಣು ಪಾರಿಷದಾಃ ಎನ್ನುವಲ್ಲಿ ರುದ್ರಪಾರಿಷದಾಃ, ಸ್ಕಂದಪಾರಿಷದಾಃ ಮೊದಲಾಗಿ ಬೇರೆ ದೇವತೆಗಳಲ್ಲಿ ಊಹಿಸಿಕೊಳ್ಳಬೇಕು. ವಿಷ್ಣುವಿನಲ್ಲಿ ಶ್ರೀಭೂತ ಬಲಿಯಲ್ಲಿ ಹೇಳಿದ ಕ್ರಮದಂತೆ ಕುಮುದಾದಿ ಎಂಟನ್ನು ಪಂಚಾಶದ್ಭೂತಗಣಾಷ್ಟಕವನ್ನು ಮಾಡಿ ಪೂರ್ವಸ್ಯಾಂದಿಶಿ • • ಮೊದಲಾಗಿ ಹತ್ತು ದಿಕ್ಕುಗಳಲ್ಲಿ ಬಲಿಯನ್ನು ಹಾಕಬೇಕು. ಪುನಃ ಬಲಿಪೀಠದಲ್ಲಿ ಯೇ ಭೂತಾಃ ಪುರಃ ಸದಃ • ಯೇ ಭೂತಾ ಅಗ್ನಿಸದಃ • ಮೊದಲಾಗಿ ಒಂಭತ್ತು ದಿಕ್ಕುಗಳಲ್ಲಿ ಬಲಿಯನ್ನು ಕೊಟ್ಟು, ಕುಮುದಾದಿ ಎಂಟನ್ನು ಹರಿಸೇನನನ್ನು ಬಲಿಪೀಠದ ಮೇಲೆ ಅದಕ್ಕೆ ಸಂಬಂಧಿಸಿದ ಆರು ಬಗೆಯ ಮಂತ್ರಗಳಿಂದ ಬಲಿಯನ್ನು ಕೊಡಬೇಕು. ಹೀಗೆ ದುರ್ಗೆಯಲ್ಲಿ ಶಂಕರನಾರಾಯಣನಲ್ಲಿ ಶಾಸ್ತಾರನಲ್ಲಿಯೂ ಕ್ರಮವಾಗಿ ಮಾಡಬೇಕು. ಶಿವ ಸುಬ್ರಹ್ಮಣ್ಯ ಗಣಪತಿಯರಲ್ಲಿ ಶ್ರೀಭೂತ ಬಲಿಯಲ್ಲಿ ಹೇಳಿದ ಕ್ರಮದಂತೆ ಮೊದಲನೆಯ ಹಾಗೂ ಎರಡನೆಯ ಆವರಣವನ್ನೂ ಪುನಃ ಮಹಾಬಲಿಪೀಠದಲ್ಲಿ ಅದರ ಸುತ್ತಿನ ಬಲಿಯನ್ನು ಕೊಡಬೇಕು. ಹೀಗೆಯೇ ದುರ್ಗೆಯಲ್ಲಿ ಶಂಕರನಾರಾಯಣ ಶಾಸ್ತಾರರಲ್ಲಿ ಮಾಡಿದರೂ (ವಿಕಲ್ಪ) ಮಾಡಬಹುದು. ದುರ್ಗೆಯಲ್ಲಿ ಅಷ್ಟಕೋಟಿ ಗಣಸ್ಥಾನದಲ್ಲಿ ಸುದುರ್ಗಾ ಮೊದಲಾದ ಮಂತ್ರಗಳು. ಶಿವನಲ್ಲಿ ಪಂಚಶದ್ಭೂತ ಗಣಸ್ಥಾನದಲ್ಲಿ ಮಹಾಕಾಲ ಮೊದಲಾದ ಮಂತ್ರಗಳು. (ವಿಕಲ್ಪವಾಗಿ) ಅಲ್ಲಿ ಗುಹನಲ್ಲಿ(ಷಟ್ಕೋಟಿ ಆವರಣದ ಕೊನೆಯಲ್ಲಿ) ಯೇ ಭೂತಾಃ ಸ್ಕಂದಸೇನಸ್ಯ ಪಾರ್ಷದಾ ಬಲಿಭೋಜಿನಃ । ತೃಪ್ಯಂತು ತೇ ಮುದಂ ಯಾಂತು ಸದ್ಯೋಽಸದ್ಯೋ ನಮೋ ನಮಃ ॥ ಹೀಗೆ ಎಂಟು ದಿಕ್ಕುಗಳಲ್ಲಿ ಒಂದಾವರ್ತಿಯು. ಪುನಃ ಬಲಿಗ್ರಹೇಭ್ಯೋ ಭೂತೇಭ್ಯಃ ಸ್ಕಂದಪಾರ್ಷದೇಭ್ಯೋ ನಮೋ ನಮಃ ಸ್ವಾಹಾ ॥ ಹೀಗೂ ಆವೃತ್ತಿಯು.

**ಶಾಸ್ತಾರನಲ್ಲಿ–**

ಚಾಂಬ್ವಾದೀನಾಂ ಗಣಾಃ ಸರ್ವೇ • • ನಮಃ । ಹೀಗೆ ಎಂಟು ದಿಕ್ಕುಗಳಲ್ಲಿ ಓಂ ನಮೋಽಸ್ತು ಭೀಮರೂಪೇಭ್ಯೋ ಭೀಮವಕ್ತ್ರೇಭ್ಯೋ ವಿವಿಧಾಕೃತಿಭ್ಯೋ ವರದೇಭ್ಯಶ್ಚ ವೋ ನಮೋ ನಮಃ । ಹೀಗೆಯೂ. ಪ್ರಾಗ್ಗಣೇಭ್ಯೋ ಬಹುರೂಪೇಭ್ಯೋ ವಿಶ್ವರೂಪೇಭ್ಯಃ ಸದ್ಯೋಽಸದ್ಯಃ ಸರ್ವಗಣೇಭ್ಯೋ ನಮೋ ನಮಃ । ದಕ್ಷಿಣ ಗಣೇಭ್ಯೋ ಬಹುರೂಪೇಭ್ಯಃ • • । ಪಶ್ಚಿಮ ಗಣೇಭ್ಯೋ ಬಹುರೂಪೇಭ್ಯಃ • • । ಉತ್ತರ ಗಣೇಭ್ಯೋ ಬಹುರೂಪೇಭ್ಯಃ • • । ಇತಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಓಂ ಸರ್ವೇಭ್ಯೋ ಪಿಂಗಲೇಭ್ಯೋ ಮಹಾಶನೇಭ್ಯೋ ಘೋರೇಭ್ಯೋ ಮೃಗಯುಭ್ಯೋ ವಿನಾಯಕೇಭ್ಯೋ ಮೂಕೇಭ್ಯೋ ಬಧಿರೇಭ್ಯೋಽನ್ಧೇಭ್ಯೋ ಜಡೇಭ್ಯಃ ಸ್ಥೂಲೇಭ್ಯಃ ಕೃಶೇಭ್ಯೋ ದೀರ್ಘೇಭ್ಯೋ ಹ್ರಸ್ವೇಭ್ಯೋ ನಪುಂಸಕೇಭ್ಯಃ ಸದ್ಯೋಽಸದ್ಯಃ ಸರ್ವಗಣೇಭ್ಯೋ ನಮೋ ನಮಃ । ಹೀಗೆ ಎಂಟು ದಿಕ್ಕುಗಳಲ್ಲಿ.

ಪುನಃ ಬಲಿಪೀಠದಲ್ಲಿ ಗಣಪತಿಯಲ್ಲಿ– ಉತ್ಸವಾರ್ಥಂ ಗತಾಯೇ ಚ ಯಾಶ್ಚ ವಿಘ್ನ ಪ್ರಹರ್ಷಣಾಃ । ಓಂ ನಮೋ ವಿಘ್ನಪಾರ್ಷದೇಭ್ಯೋ ನಮೋ ವಿಘ್ನಪಾರ್ಷದೀಭ್ಯೋ ನಮೋ ನಮಃ ಸ್ವಾಹಾ ॥ ವಿಷ್ಣುವಿನಲ್ಲಿ– ಬಲಿಪೀಠೇ ಹರಿಸೇನಾಯ ನಮಃ । ಹರಿಸೇನಾಯ ವಿದ್ಮಹೇ ಮಹಾಬಲಾಯ ಧೀಮಹೇ । ತನ್ನಃ ಶಾಂತಃ ಪ್ರಚೋದಯಾತ್ । ಅಷ್ಟಮೂರ್ತಿಪಾರ್ಷದೇಭ್ಯಃ ಸದ್ಯೋಽಸದ್ಯಃ ಸರ್ವಗಣೇಭ್ಯೋ ನಮೋ ನಮಃ ಸ್ವಾಹಾ ।

**ಅಸಂಖ್ಯಾತಾ ಗಣಾಃ ಸರ್ವೇ ಕೋಟಿ ಕೋಟಿ ಗಣಾಧಿಪಾಃ ।**

**ಭವಂತು ಸಹಿತಾಃ ಸರ್ವೇ ತೇಭ್ಯಸ್ತಾಭ್ಯೋ ನಮೋ ನಮಃ ॥**

**ದೇವತಾಭ್ಯಃ ಪಿತೃಭ್ಯೋಽಥ ಭೂತೇಭ್ಯಃ ಸಹ ಜಂಗಮೈಃ ।**

**ಪಿತತ್ಸ್ಥಾನನಿವಾಸಿಭ್ಯಃ ಪ್ರಯಚ್ಛಾಮಿ ಬಲಿಂ ನಮಃ ॥**

ಮೂಲಜಲಾಪ್ಲುತ ಬಲಿಯು. ಶಿವನಲ್ಲಿ– ಮಹಾಬಲಿಪೀಠದಲ್ಲಿ ಹರಸೇನನ ಕೊನೆಯಲ್ಲಿ ಹರಸೇನಾಯ ವಿದ್ಮಹೇ ಮಹಾಬಲಾಯ ಧೀಮಹೇ । ತನ್ನಃ ಶಕ್ತಿಃ ಪ್ರಚೋದಯಾತ್ ॥ ದಶಮೂರ್ತಿಪಾರ್ಷದೇಭ್ಯಃ • • ನಮಃ ಸ್ವಾಹಾ ॥ ಅಸಂಖ್ಯಾತಾ • • ನಮಃ ।

ದೇವತಾಭ್ಯಃ * * ನಮಃ ॥ ಮೂಲಜಲಾಪ್ಲುತ ಬಲಿ. ಶಂಕರನಾರಾಯಣನಲ್ಲಿ– ಎರಡನ್ನೂ ವಿಕಲ್ಪವಾಗಿ ಮಾಡಬಹುದು. ದುರ್ಗಾ ಮೊದಲಾದವುರಲ್ಲಿ ತಮ್ಮ ನಿಜಮಂತ್ರದ ಕೊನೆಯಲ್ಲಿ * * ಅಸಂಖ್ಯಾತಾ * * ದೇವತಾಭ್ಯಃ * * ಮೂಲಜಲಾಪ್ಲುತ ಬಲಿ. ಗುಹನಲ್ಲಿ– ಯೇ ಭೂತಾದಿ ಮಂತ್ರಳೆರಡರಿಂದ (ವಿಕಲ್ಪವಾಗಿ) ಬಲಿಯನ್ನು ಕೊಡಬೇಕು. ಗಣಪತಿಯಲ್ಲಿ ಉತ್ಸವಾರ್ಥಂ (ವಿಕಲ್ಪ) ಎಲ್ಲಾ ದೇವತೆಗಳಲ್ಲೂ ಒಂದಾವೃತ್ತಿಯಿಂದ ಬಲಿಯನ್ನು ಕೊಡಬೇಕು. ಅಲ್ಲಿ **ಯೇಸಮಸ್ತಂ ಜಗದ್ವ್ಯಾಪ್ಯ ತಿಷ್ಠಂತಿ . . ಓಂ ನಮೋ ಭೂತೇಭ್ಯೋ * * ಗೃಣ್ಣಂತು ಬಲಿಮೇತತ್ತು ಬಾಹ್ಯಸ್ಥಾ ವಿಹಗಾನನಾಃ । ಯೇ ಕ್ರೂರಾ ಯೇಽಲ್ಪಸತ್ವಾಶ್ಚ ಭೂತಪ್ರೇತಪಿಶಾಚಕಾಃ ॥ ವೇತಾಳಾಶ್ಚೈವ ಮಾತಂಗಾಃ ಹೀನಾಹೀನಾಶ್ಚ ಯೇ ಗಣಾಃ । ಸರ್ವೇಷಾಂ ಚೈವ ತೇಷಾಂ ಚ ಹರಾಮಿ ಬಲಿಮುತ್ತಮಂ ॥ ಸರ್ವೇಭ್ಯ ಏವಂ ತೇಭ್ಯಶ್ಚ ಸಗಣೇಭ್ಯೋ ನಮೋ ನಮಃ ॥** ಎಂದು ಪುನಃ ದೇವಗ್ರಹಾದಿ ದಿಗ್ಬಲಿಯನ್ನೂ ಶೀಘ್ರಬಲಿಯನ್ನೂ ಕ್ಷೇತ್ರಪಾಲ ಬಲಿಯನ್ನೂ ಮಾಡಬೇಕು. ಅಥವಾ ಮಹಾಬಲಿಪೀಠವನ್ನು ಬಿಟ್ಟು ಹೀಗೆ ಎಲ್ಲವನ್ನೂ ಮಾಡಿ ಬಲಿಪೀಠದಲ್ಲಿ ಅದಕ್ಕೆ ಸಂಬಂದಿಸಿದ ಮಂತ್ರಗಳಿಂದ ಸುತ್ತಲೂ ಬಲಿಯನ್ನು ಕೊಟ್ಟು ಬಲಿಪೀಠದಲ್ಲಿ ಕೊನೆಗೊಳಿಸಬೇಕು. ಹೀಗೆ ಉತ್ಸವಬಲಿಯನ್ನು ಮಾಡಿ ಪ್ರದಕ್ಷಿಣೆಯನ್ನು ಮಾಡಿ ಒಳಗೆ ಪ್ರವೇಶಿಸಿ, ಕಾಲುಗಳನ್ನು ತೊಳೆದು ಆಚಮನ ಮಾಡಿ ಗರ್ಭಗೃಹವನ್ನು ಪ್ರವೇಶಿಸಿ, ಬಲಿಕೌತುಕದಲ್ಲಿರುವ ದೇವತೆಯನ್ನು ಮೂಲಬಿಂಬದಲ್ಲಿ ಸೇರಿಸಿ– ಮಾನ ವಿಕಸ್ಮಿನ್ನಾಗಸಿ– ಮೊದಲಾದುವುಗಲಿಂದ ಯ ಈಶಿರೇ ಭುವಸ್ಯ ಪ್ರಚೇತಸೋ– ಮೊದಲಾದುವುಗಳಿಂದಲೂ ನಮಸ್ಕರಿಸಿ ಸಮಾಪ್ತಿಗೊಳಿಸಬೇಕು. ಇತಿ ಉತ್ಸವ ಬಲಿಪ್ರಕಾರಃ. ಹೀಗೆ ಎಲ್ಲಾ ದಿವಸಗಳಲ್ಲಿ ಮೂರು ಕಾಲಗಳಲ್ಲೂ ದೇವರನ್ನು ಪೂಜಿಸಿ ಬ್ರಾಹ್ಮಣರನ್ನು ಊಟ ಮಾಡಿಸಿ ಹಗಲು ರಾತ್ರಿಯಲ್ಲೂ ಬಲಿಯನ್ನು ಮಾಡಬೇಕು. ರಾತ್ರಿಯಲ್ಲಿ ದೀಪಾದಿಗಳಿಂದ ಅಲಂಕರಿಸಬೇಕು. ಅವಭೃತ ಸ್ನಾನದ ಹಿಂದಿನ ದಿನದಲ್ಲಿ ಅಪರಾಹ್ಣದಲ್ಲಿ ಗ್ರಾಮಬಲಿಯನ್ನು ಮಾಡಬೇಕು. ಅಲ್ಲಿ ಗೋಪುರ ದ್ವಾರದಲ್ಲಿ ದ್ವಾರಪಾಲಕರನ್ನು ಪೂಜಿಸಿ, ಬಲಿಯನ್ನು ಹಾಕಿ, ಹೊರಗೆ ಹೋಗಿ ಗ್ರಾಮವನ್ನು ಪ್ರದಕ್ಷಿಣ ಮಾಡುವವನಾಗಿ ದೇವಾಲಯ, ಜೈನ ಅಥವಾ ಬೌದ್ಧಮಂದಿರ, ನಾಲ್ಕು ದಾರಿ ಕೂಡುವ ಸ್ಥಳ ಮೊದಲಾದುವುಗಳಲ್ಲಿ, ಅಶ್ವತ್ಥ ಮರದ ಬುಡದಲ್ಲಿ ಬಲಿಯನ್ನು ಹಾಕಬೇಕು. ಅಲ್ಲಿ ವಿಷ್ಣುವಿನಲ್ಲಿ–

**ವಿಷ್ಣುಪಾರಿಷದೇಭ್ಯಶ್ಚ ಪ್ರಮಥೇಭ್ಯೋ ನಮೋ ನಮಃ ।**
**ಮಾತೃಭ್ಯಸ್ತದ್ಗಣೇಭ್ಯಶ್ಚ ಸರ್ವೇಭ್ಯೋ ವೈನಮೋ ನಮಃ ॥**

ಶಿವನಲ್ಲಿ– ರುದ್ರಪಾರಿಷದೇಭ್ಯಶ್ಚ ಮೊದಲಾದಿಯಾಗಲೀ, ಓಂ ನಮೋ ಭೂತೇಭ್ಯೋ * * ಇತ್ಯಾದಿಯಾಗಲೀ ಮಂತ್ರವು. ಶಂಕರನಾರಾಯಣನಲ್ಲಿ– ಗೃಣ್ಣಂತು ಬಲಿಂ * ಮೊದಲಾಗಿ ಮಂತ್ರವು. ವಿಕಲ್ಪವಾಗಿ. ದುರ್ಗಿಯಲ್ಲಿ– ಓಂ ನಮೋ ಭೂತೇಭ್ಯೋ * * ಗೃಣ್ಣಂತು ಬಲಿ * * ಭ್ಯೋ ನಮೋ ನಮಃ । ಸುಬ್ರಮ್ಹಣ್ಯನಲ್ಲಿ– ಗೃಣ್ಣಂತು ಬಲಿ * * ಸ್ವಾಹಾ ॥ ಗ್ರಾಮಪರ್ವತಚಾರಿಭ್ಯೋ ನಮೋ ನಮಃ ॥ ನಮೋಽಸ್ತು ಸಿಂಧುಚಾರಿಭ್ಯಃ ಚತುಷ್ಪಥಗತಾಯ ಚ । ಶೂನ್ಯಾಗಾರ ನಿವಾಸಿಭ್ಯಃ ಸರ್ವೇಭ್ಯೋ ವೈ ನಮೋ ನಮಃ । ಶೂನ್ಯಗ್ರಾಮನಿವಾಸಿಭ್ಯೋ ವೃಕ್ಷಗುಲ್ಮಗತಾಯ ಚ ॥ ದೇವಾಗಾರ ನಿವಾಸಿಭ್ಯೋ ಭೂತೇಭ್ಯಶ್ಚ ನಮೋ ನಮಃ । ನಮಃ ಪಾರಿಷದೇಭ್ಯಶ್ಚ * * ನಮೋ ನಮಃ ॥ ಶಾಸ್ತಾರನಲ್ಲಿ– ಓಂ ಘ್ರೂಂ ನಮಃ ಸರ್ವೇಭ್ಯಃ ಪಿಂಗಲೇಭ್ಯಃ ಬಹುರೂಪೇಭ್ಯೋ ಮಹಾಗಣೇಭ್ಯೋ ಘೋರರೂಪೇಭ್ಯೋ ಮೃಗಯುಭ್ಯೋ ವಿನಾಯಕೇಭ್ಯೋ ಬಧಿರೇಭ್ಯಃ ಅಂಧೇಭ್ಯೋ ಜಡೇಭ್ಯೋ ಸ್ಥೂಲೇಭ್ಯಃ ಕೃಶೇಭ್ಯೋ ಬಹುರೂಪೇಭ್ಯೋ ಸದ್ಭ್ಯೋಽಸದ್ಭ್ಯಃ ಸದಸದ್ಭ್ಯಃ ಸರ್ವಗಣೇಭ್ಯೋ ನಮೋ ನಮಃ ಸವಾಹಾ ॥ ಗಣಪತಿಯಲ್ಲಿ– ಮೂಲದಿಂದ ॥ ಹೀಗೆ ಎಲ್ಲಾ ದೇವತೆಗಳಲ್ಲಿ ಬಲಿಯನ್ನು ಕೊಟ್ಟು, ಗ್ರಾಮದ ಕೊನೆಯಲ್ಲಿ ಭಟರಿಂದ ಕೂಡಿ ಮೃಗಬೇಟೆಯನ್ನು ಮಾಡಿ ಪ್ರಾಕಾರದ ಒಳಗೆ ಪ್ರವೇಶಿಸಿ ಕ್ಷೇತ್ರಪಾಲನಿಗೆ ಬಲಿಯನ್ನು ಕೊಟ್ಟು ಅಲ್ಲಿ ಸಮಾಪ್ತಿಗೊಳಿಸಬೇಕು. ಪುನಃ ಒಳಗೆ ಮೂಲಬಿಂಬದಲ್ಲಿ ದೇವರನ್ನು ಸೇರಿಸಿ ಕ್ಷಮಾಪಣೆಯನ್ನು ಕೇಳಬೇಕು.

* * * *

## ಕ್ಷೇತ್ರಪಾಲ ಪೂಜಾಬಲಿಃ

ಈಶಾನ್ಯದಲ್ಲಿ ಕ್ಷೇತ್ರಪಾಲ ಮಂಟಪವನ್ನು ಹೊಂದಿ ಪ್ರಾಣಾಯಾಮವನ್ನು ಮಾಡಿ ಸಂಕಲ್ಪಿಸಿ ಪೀಠಪೂಜೆಯನ್ನು ಮಾಡಿ ನವಶಕ್ತಿ ಪೂಜೆಯನ್ನು ಮಾಡಬೇಕು. ರಕ್ತಾಕ್ಷಿಣ್ಯೈ । ರಕ್ತಮುಖ್ಯೈ । ರಕ್ತಸ್ವರೂಪಿಣ್ಯೈ । ಚಿತ್ರಿಣ್ಯೈ । ಚಿತ್ರಸಂಹಾರ್ಯೈ । ಸಿಂಹಿನ್ಯೈ । ನರಭಕ್ಷಿಣ್ಯೈ । ಭೀಷಣ್ಯೈ । ಭಯದಾಯ್ಯೈ ॥

**ರಕ್ತಾಕ್ಷಿಣೀ ರಕ್ತಮುಖೀ ತಥಾ ರಕ್ತಸ್ವರೂಪಿಣೀ ।**
**ಚಿತ್ರಿಣೀ ಚಿತ್ರಸಂಹಾರೀ ಸಿಂಹಿನೀ ನರಭಕ್ಷಿಣೀ ॥**
**ಭೀಷಣೀ ಭಯದಾ ಚೇತಿ ಕ್ಷೇತ್ರಪಾಲಸ್ಯ ಶಕ್ತಯಃ ॥**

ಅಥವಾ

**ಕಾಲೀ ಚ ಯಮದೂತೀ ಚ ಕರಾಳೀ ವಿಕರಾಳಿಕಾ ।**

**ಆಮೋದಿನೀ ಪ್ರಮೋದಿನೀ ದ್ರಾವಣೀ ಮದವಿಹ್ವಲೀ ॥**

**ಕ್ಷೋಭಿಣೀತೀ ಚ ಯಃ ಪ್ರೋಕ್ತಾಃ ಕ್ಷೇತ್ರಶ ನವಶಕ್ತಯಃ ॥**

ಓಂ ನಮೋ ಭಗವತೇ ಸಕಲಶಕ್ತಿಯುಕ್ತಾಯ ಕ್ಷೇತ್ರಪಾಲಾಯ ಯೋಗಪದ್ಮಪೀಠಾತ್ಮನೇ ನಮಃ- ಪ್ರಾಣಪ್ರತಿಷ್ಠಾಂ ಕೃತ್ವಾ ಆವಾಹನಾದಿ ಮುದ್ರಾಃ ಪ್ರದರ್ಶ್ಯ ಅನಿಲಾಕ್ಷಾಯ ವಿದ್ಮಹೇ ನೀಲವರ್ಣಾಯ ಧೀಮಹೀ । ತನ್ನಃ ಕ್ಷೇತ್ರಪಾಲಃ ಪ್ರಚೋದಯಾತ್ । ಇತಿ ತ್ರಿವಾರಮರ್ಘ್ಯಂ । ಕಾಶ್ಯಪ ಋಷಿಃ । ಗಾಯತ್ರೀ ಛಂದಃ । ಕ್ಷೇತ್ರಪಾಲೋ ದೇವತಾ । ಕ್ಷಾಂಕ್ಷೀಂ- ಇತ್ಯಾದಿ ಷಡಂಗನ್ಯಾಸಃ ॥ ಧ್ಯಾನಂ ॥

**ಏಕಂ ಖಟ್ವಾಂಗಹಸ್ತಂ ಧೃತಮಪಿ ಭುಜಗಂ ಪಾಶಮೇಕಂ ತ್ರಿಶೂಲಂ ।**

**ಕಾಪಾಲಂ ಖಡ್ಗಹಸ್ತಂ ಡಮರುಗಸಹಿತಂ ವಾಮಹಸ್ತೇ ಪಿನಾಕಂ ॥**

**ಚಂದ್ರಾರ್ಧಂ ಕೇತುಮಾಲಾ ನವಶರಮುಕುಟಂ ಸರ್ಪಯಜ್ಞೋಪವೀತಂ ।**

**ಕಾಲಂ ಕಾಲಾಂಧಕಾರಂ ಭಯದುರಿತಹರಂ ಕ್ಷೇತ್ರಪಾಲಂ ನಮಾಮಿ ॥**

ಓಂ ಹ್ರೀಂ ಕ್ಷಂ ಕ್ಷೇತ್ರಪಾಲಾಯ ಹುಂಫಟ್ ಸ್ವಾಹಾ ಇತಿ ಮೂಲಮಂತ್ರಃ (ಪಕ್ಷಾಂತರೇ- ಓಂ ಹ್ರೀಂ ಹೌಂ ಕ್ಷಂ ಕ್ಷೇತ್ರಪಾಲಾಯ ನಮಃ )

ಮೂಲಮಂತ್ರವನ್ನು ಎಂಟಾವರ್ತಿ ಜಪಿಸಿ ಪಂಚೋಪಚಾರ ಪೂಜೆಯನ್ನು ಮಾಡಬೇಕು. ಧ್ಯಾಯಾಮಿ ಮೊದಲಾಗಿ ಷೋಡಶೋಪಚಾರದಿಂಧ ಪೂಜಿಸಿ, ಆವರಣ ಪೂಜೆಯನ್ನು ಮಾಡಬೇಕು. ಓಂ ಕ್ಷಾಂ ಹೃದಯಾಯ- ಇತ್ಯಾದಿ ಅಂಗಗಳಿಂದ ಪ್ರಥಮಾವರಣ. ಫೇರುಕಾಯ ತ್ರಿಪುರಘ್ನಾಯ । ಅಗ್ನಿನೇತ್ರಾಯ । ಅಗ್ನಿಜಿಹ್ವಾಯ । ಕರಾಳಾಯ । ಕಾಳಾಯ । ಏಕಪಾದಾಯ । ಭೀಮರೂಪಾಯ । ಇತಿ ದ್ವಿತೀಯಾವರಣ. ಇಂದ್ರಾದಿ ದಿಕ್ಪಾಲಕರಿಂದ ತೃತೀಯಾವರಣ. ವಜ್ರಾದಿ- ತದಾಯುಧಗಳಿಂದ ಚತುರ್ಥಾವರಣವು. ಗಂಧಪುಷ್ಪಧೂಪದೀಪಗಳನ್ನು ಸಮರ್ಪಿಸಿ, ನೈವೇದ್ಯವನ್ನು ಮಾಡಿ, ತರ್ಪಣವನ್ನು ಮಾಡಬೇಕು.

**ತರ್ಪಣ ಮಂತ್ರ**- ಓಂ ಏಹ್ಯೇಹಿ ವಿದುಷಿ ವಿದುಷಿ ಮುರ ಮುರ ಭಂಜಯ ಭಂಜಯ ನರ್ತಯ ನರ್ತಯ ವಿಘ್ನ ವಿಘ್ನ ಮಹಾಭೈರವ ಕ್ಷೇತ್ರಪಾಲ ತರ್ಪಣಂ ಗೃಹಾಣ ಸ್ವಾಹಾ (ಬಲಿಂ ಗೃಹಾಣ ಸ್ವಾಹಾ )- ಹೀಗೆ ಎಂಟಾವರ್ತಿ ತರ್ಪಣ ಮಾಡಬೇಕು. (ಪಕ್ಷಾಂತರೇ- ಮೂಲಮಂತ್ರಃ- ಓಂ ಹ್ರೀಂ ಕ್ಷೌಂ ನಮೋ ಭಗವತೇ ಕ್ಷೇತ್ರಾಧಿಪತಯೇ ವ್ಯಾಘ್ರ ಚರ್ಮಪರೀಧಾನಾಯ ಘಂಟಾಭರಣಾಯ ಸರ್ಪಾಭರಣಭೂಷಿತಾಯ ಗದಾಕಪಾಲಹಸ್ತಾಯ ವೃತ್ತೋಗ್ರರಕ್ತನೇತ್ರತ್ರಯಾಯ ಕೋಪಸಂಭ್ರಾಂತ ತ್ರಿಲೋಕೀನಿವಾಸಜನಕಬಳಸಂತುಷ್ಟಾಯ ಪ್ರಸಾದ ಸುಮುಖ ಕಾರುಣ್ಯಾವಲೋಕನಾಯ ತ್ರಿಲೋಕ ರಕ್ಷಾಕರಾಯ ಭೂರ್ಭುವಃಸ್ವರ್ವ್ಯಾಪ್ತದೇಹಾಯ ಕ್ಷೇತ್ರಾಧಿಪತಯೇ ಹ್ರೀಂ ಕ್ಷೌಂ ಕ್ಷೇತ್ರಾಧಿಪಾಲಾಯ ನಮಃ ಸ್ವಾಹಾ) ಮಹಾನ್ನೈವೇದ್ಯಂ ನಿವೇದ್ಯ ಮಂಗಲನೀರಾಜನವನ್ನು ಮಾಡಿ ಪುಷ್ಪಾಂಜಲಿಯನ್ನು ಮಾಡಿ ಪ್ರಾರ್ಥಿಸಬೇಕು.

**ಅಷ್ಟಾಂಗಮೂರ್ತಿಶಕ್ತ್ಯಾದ್ಯೈಃ ಪರಿವಾರೈಃ ಸಮನ್ವಿತಂ ।**

**ಭೀಮರೂಪಂ ಮಹಾಕಾಯಂ ನೀಲಾಂಜನ ಸಮಪ್ರಭಂ ॥**

**ರಕ್ತಸ್ರಗ್ಗಂಧವಸ್ತ್ರಾಢ್ಯಂ ಘಂಟಾಘರ್ಘರ ನೂಪುರಂ ।**

**ಉತ್ತಂಭಿತಗದಾಪಾಣಿಂ ಕಪಾಲಧರಮುಲ್ಬಣಂ ॥**

**ಶ್ವಸತ್ಪನ್ನಗಕೇಯೂರ ಹಾರ ಗ್ರೈವೇಯ ಕುಂಡಲಂ ।**

**ರಕ್ತೋದ್ವೃತ್ತ ತ್ರಿಣ್ಣೇತ್ರೋಗ್ರ ಭ್ರುಕುಟೀ ಭೀಷಣಾನನಂ ॥**

**ಸಂಧ್ಯಾಭ್ರಪಿಂಗಲಾಕಾರಲಂಬಮಾನಜಟಾಧರಂ ।**

**ಗ್ರಸಂತಮಿವ ವಕ್ತ್ರೇಣ ಸಂಹರಂತ ಮಿವೌಜಸಾ ॥**

**ಕೋಪಸಂಭ್ರಾಂತ ತ್ರೈಲೋಕ್ಯ ಕಬಳಾಪೇಕ್ಷಿತಾನನಂ ।**

**ಕಾರುಣ್ಯಾರ್ದ್ರಾಕ್ಷಿ ವಿಕ್ಷೇಪರಕ್ಷಿತಾಶೇಷಮಿಷ್ಟದಂ ॥**

**ನಾನಾವಿಧ ಮಹಾಭೂತ ಕೋಟಿಭಿಃ ಪರಿವಾರಿತಂ ।**

**ಗರ್ಜಯಂತಂ ಮಹಾನಾದಂ ಕ್ಷೇತ್ರಪಾಲಂ ನಮಾಮ್ಯಹಂ ॥**

**ಕ್ಷೇತ್ರಪಾಲನ ಎಂಟು ಮೂರ್ತಿಗಳು**

**ಫೇರುಕ ಸ್ತ್ರಿಪುರಘ್ನಶ್ಚ ಅಗ್ನಿನೇತ್ರಾಗ್ನಿಜಿಹ್ವಕೌ ।**

**ಕರಾಳಃ ಕಾಳಸಂಜ್ಞಶ್ಚ ಏಕಪಾದ ಸ್ತಥಾಪರಃ ॥**

**ಭೀಮರೂಪ ಇತಿಖ್ಯಾತಾ ಮೂರ್ತಯೋऽಷ್ಟೌ ಪ್ರಕೀರ್ತಿತಾಃ ।**

ಮನಃ ನಿಂತುಕೊಂಡು ಬಲಿಮಂತ್ರದಿಂದ ಅದರ ಮಧ್ಯದಲ್ಲಿ ಬಲಿಯನ್ನು ಹಾಕಬೇಕು. (ಬಲಿಮಂತ್ರಃ) ಓಂ ಹ್ರೀಂ ಹೌಂ ಕ್ಷೌಂ ಕ್ಷೇತ್ರಪಾಲಾಯ ನಮಃ । ಓಂ ಹ್ರೀಂ ಕ್ಷೌಂ ಓಂ ನಮೋ ಭಗವತೇ ಕ್ಷೇತ್ರಾಧಿಪತಯೇ ವ್ಯಾಘ್ರ ಚರ್ಮಪರೀಧಾನಾಯ * * ಲಾಯ ನಮಃ ಸ್ವಾಹಾ । (ಮೂಲಮಂತ್ರಃ) ಓಂ ನಮೋ ಭೂತೇಭ್ಯಃ * * * ॥ ಆಮೇಲೆ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ತತ್ಪಾರ್ಷದಗಳಿಗೆ ಬಲಿಯನ್ನು ಕೊಡಬೇಕು. ಓಂ ಕ್ಷೇತ್ರಪಾಲ ಪಾರ್ಷದೇಭ್ಯೋ ನಮಃ –ಹೀಗೆ ಬಲಿಯನ್ನು ಕೊಡಬೇಕು. ಅನಂತರ ಪೂರ್ವಾದಿ ಎಂಟು ದಿಕ್ಕುಗಳಲ್ಲಿ– ಓಂ ಅಗ್ನಿ ಕೇಶಾಯ ನಮಃ– ಕ್ಷೇತ್ರಪಾಲಪಾರ್ಷದಾಯ ನಮಃ ॥ ೧ ॥ ಓಂ ಕಾಲಹಂತ್ರೇ ನಮಃ– ಕ್ಷೇತ್ರಪಾಲಪಾರ್ಷದಾಯ ॥ ೨ ॥ ಘಂಟಾಶೂಲಿನೇ । ತತ್ಪಾರ್ಷದಾಯ ॥ ೩ ॥ ಕಪಾಲಿನೇ । ತತ್ಪಾರ್ಷದಾಯ ॥ ೪ ॥ ಪಿಶಿತಾಶಾಯ । ತತ್ಪಾರ್ಷದಾಯ ॥ ೫ ॥ ಮಹಾಕ್ರೋಧಾಯ । ತತ್ಪಾರ್ಷದಾಯ ॥ ೬ ॥ ಪಿಂಗಲಾಕ್ಷಾಯ । ತತ್ಪಾರ್ಷದಾಯ ॥ ೭ ॥ ಊರ್ಧ್ವಕೇಶಾಯ । ತತ್ಪಾರ್ಷದಾಯ ॥ ೮ ॥ ಪ್ರಣವಾದಿನಮೋ ೦ತವಾಗಿ ಬಲಿಯನ್ನು ಕೊಡಬೇಕು. ಆಮೇಲೆ ಪ್ರದಕ್ಷಿಣವಾಗಿ ದಂಡಬಲಿಯನ್ನು ಮಾಡಿ ಉಳಿದುದನ್ನು ಈಶಾನ್ಯದಲ್ಲಿ ಮೇಲಕ್ಕೆ ಹಾರಿಸಬೇಕು. ಅಲ್ಲಿ ಮಂತ್ರವು–

**ಅಥ ಸರ್ವಗಣೇಭ್ಯಶ್ಚ ತೇಭ್ಯ ಸ್ತಾಭ್ಯೋ ನಮೋ ನಮಃ । ಕ್ಷೇತ್ರಪಾಲಾಪಾರ್ಷದೇಭ್ಯೋ ನಮಃ – । ತತ್ಪಾರ್ಷದೇಭ್ಯೋ ನಮಃ**– ಹೀಗೆ ಬಲಿಯನ್ನು ಪೂರ್ತಿಗೊಳಿಸಿ ಕೈ ಕಾಲುಗಳನ್ನು ತೊಳೆದು ಪುನಃ ಪೂಜೆ, ಬ್ರಹ್ಮಾರ್ಪಣವನ್ನು ಮಾಡಬೇಕು. (ಹೊರಗೂ ಒಳಗೂ ಪ್ರದಕ್ಷಿಣೆ ಮಾಡಿ ಒಳಗೆ ಪ್ರವೇಶಿಸಬೇಕು)

ಉತ್ಸವದ ಆರಂಭದಲ್ಲಿ ಬಲಿದಾನದಲ್ಲಿ– ಅಲ್ಲಿ ಮೊದಲಾಗಿ ಹೀಗೆ ಕ್ರಮವು. ಮೂಲವಿಗ್ರಹದಿಂದ ಚೈತನ್ಯವನ್ನು ಉತ್ಸವಮೂರ್ತಿಯಲ್ಲಿ ಆವಾಹಿಸಿ ತಂದು ದೇವರನ್ನು ಪ್ರಾರ್ಥಿಸಬೇಕು.

**ಸೃಷ್ಟಿಸ್ಥಿತಿ ವಿನಾಶಾನಾಂ ಕರ್ತೃರ್ಭೂತಪತೇಪ್ರಭೋ ।**

**ತ್ವತ್ಪಾರ್ಷದಾನಾಂ ಮುಖ್ಯಾನಾಂ ಬಲಿದಾನಾಯಶಾಧಿಮಾಂ ॥**

(ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣ ನಾದ ಪಂಚಭೂತಗಳಿಗೆ ಒಡೆಯನಾದವನೇ ನಿನ್ನ ಪರಿವಾರಗಳಲ್ಲಿ ಪ್ರಧಾನರಾದವರಿಗೆ ಬಲಿದಾನವನ್ನು ಮಾಡಲು ನನ್ನನ್ನು ಅಪ್ಪಣೆಗೊಡಿಸು)

**ದೇವ ದೇವ ಜಗನ್ನಾಥ ಪ್ರಸೀದ ಪರಮೇಶ್ವರ ।**

**ಉತ್ಸವೇ ಬಲಿದಾನಾಖ್ಯೇ ಆಗಚ್ಛ ವೃಷಭಧ್ವಜ ॥**

(ದೇವಾನುದೇವತೆಗಳಿಗೆ ಪ್ರಭುವಾದ ಪ್ರಪಂಚಾಧಿಪತಯೇ ಪರಮೇಶ್ವರನೇ ಪ್ರಸನ್ನನಾಗು. ಉತ್ಸವದಲ್ಲಿ ಬಲಿದಾನದಲ್ಲಿ ವೃಷಭಧ್ವಜನೇ ಬರುವವನಾಗು) ಇಲ್ಲಿ ಪರಮೇಶ್ವರ ವೃಷಭಧ್ವಜ ಪದಸ್ಥಾನದಲ್ಲಿ ಆಯಾಯ ದೇವತಾನುಸಾರವಾಗಿ ಗಣನಾಯಕ ಪುರುಷೋತ್ತಮ, ಪರಮೇಶ್ವರಿ. ಹೀಗೆಯೇ ಮೂಷಕಧ್ವಜ, ಗರುಡಧ್ವಜ, ಸಿಂಹಿಕಧ್ವಜೇ– ಮೊದಲಾಗಿ ಮಂತ್ರದಲ್ಲಿ ವ್ಯತ್ಯಾಸವನ್ನು ಮಾಡಬೇಕು.

**ಭದ್ರವಾಹಕ ದೇವೇಶ ಸ್ವಾಮಿಭಕ್ತಿ ಪರಾಯಣ ।**

**ದೇವ ದೇವಸ್ಯ ವಾಹಾರ್ಥಂ ತ್ವಮನು ಜ್ಞಾತುಮರ್ಹಸಿ ॥**

(ಮಂಗಳಕರನಾದ ವಾಹಕನೇ ದೇವಶ್ರೇಷ್ಠನೇ ಒಡೆಯನಲ್ಲಿ ಪರಮೋಚ್ಚಭಕ್ತಿಯನ್ನು ಹೊಂದಿದವನೇ ದೇವಶ್ರೇಷ್ಠನನ್ನು ಹೊರಲು ನೀನು ಅಪ್ಪಣೆಯನ್ನು ಕೊಡುವವನಾಗು) ಎಂದು ಪ್ರಾರ್ಥಿಸಿ ಶಿಷ್ಯನನ್ನು ವಾಹಕನೆಂದು ಭಾವಿಸಿ ತತ್ವಸಂಖ್ಯಾಕವಾಗಿ

ಜಯಘಂಟೆಯ ಶಬ್ದದ ನಂತರ ಎಲ್ಲಾ ಬಗೆಯ ಅಲಂಕಾರದಿಂದ ಅಲಂಕರಿಸಲ್ಪಟ್ಟ ಉತ್ಸವದ ಪ್ರತಿಮೆಯನ್ನು ಶಿಷ್ಯನ ಕೈಯಲ್ಲಿ ಕೊಟ್ಟು ಪೇಟ ಧರಿಸಿ ಉತ್ತರೀಯದೊಂದಿಗೆ ಜಲಪಾತ್ರ (ಕಮಂಡಲ)ವನ್ನು ಹಿಡಿದು ಶಾಕುಂತ ಸೂಕ್ತವನ್ನು ಜಪಿಸುತ್ತಾ ಹೊರಗೆ ಹೋಗಿ ಬಲಿದಾನವನ್ನು ಮಾಡಬೇಕು.

## ಶಯನೋತ್ಸವ

ತೀರ್ಥಯಾತ್ರೆಯ ಹಿಂದಿನ ದಿನ ರಾತ್ರಿಯಲ್ಲಿ ಆಚಾರ್ಯನು ಸ್ನಾನ ಮಾಡಿ ಮುಖಮಂಟಪದಲ್ಲಿ ಕುಳಿತು ಶಯನಕ್ಕಾಗಿ ಪದ್ಮವನ್ನು ಬರೆಯಬೇಕು. ಹೇಗೆಂದರೆ– ಪೂರ್ವಾಭಿಮುಖವಾಗಿ ಆರು ರೇಖೆಗಳು, ಉತ್ತರಾಭಿಮುಖವಾಗಿ ಎಂಟು ರೇಖೆಗಳು, ಕರ್ಣಪುಟವೀಥಿಯಿಂದ ಕೋಷ್ಠಗಳನ್ನು ತೆಗೆದು, ನಾಲ್ಕು ದಿಕ್ಕುಗಳಲ್ಲಿ ಸ್ವಸ್ತಿಕದ ಖಂಡ (ವಿಭಾಗ)ಗಳನ್ನು ಮಾಡಿ, ಅಂದವಾಗಿ ಕಾಣಿಸುವಂತೆ ಬಣ್ಣದ ಮುಡಿಗಳಿಂದ ತುಂಬಬೇಕು. ಹೊರಗಿನಿಂದ ಮೂರು ಬಗೆಯ ರೇಖೆಯನ್ನು ಮಾಡಿದರೂ ಮಾಡಬಹುದು. ಎಲ್ಲಾ ದೇವತೆಗಳಲ್ಲಿಯೂ ಈ ರೀತಿಯಾಗಿ ಪೂರ್ವಪಶ್ಚಿಮಾಯತವಾಗಿ ಪದ್ಮವನ್ನು ಮಾಡಬೇಕು. ಸುಬ್ರಮ್ಹಣ್ಯನಲ್ಲಿ– ಹೀಗೆ ದಕ್ಷಿಣೋತ್ತರಾಯತವಾಗಿ ಪದ್ಮವನ್ನು ಬರೆಯಬೇಕು. ಅಲ್ಲಿ ಆಯಾಯ ನಿಜಮೂಲದಿಂದ ಬತ್ತ ಮೊದಲಾದುವುಗಳನ್ನಿಟ್ಟು– ವಿಷ್ಣುವಿನಲ್ಲಿ– ದ್ವಾದಶಾಕ್ಷರ ಮಂತ್ರದಿಂದಲೂ, ಉಳಿದ ಶಿವ ಮೊದಲಾದ ಆರುದೇವತೆಗಳಲ್ಲಿ ಆಯಾಯ ದೇವತಾ ಮೂಲದಿಂದ ಹಾಸಿಗೆಯನ್ನು ಸಿದ್ಧಪಡಿಸಬೇಕು. ಸುತ್ತಲೂ ಮಂಗಲಪಾಲಿಕೆಗಳನ್ನು ದೀಪ ಮೊದಲಾದುವುಗಳನ್ನೂ ಇಟ್ಟು ಮೇಲ್ಗಟ್ಟಿನಿಂದಲಂಕರಿಸಿ, ಆಚಾರ್ಯನು ಅಲ್ಲಿ ಕುಳಿತುಕೊಂಡು ದೇಹಶುದ್ಧಿ, ಶಂಖಪೂರಣ, ಆತ್ಮಾರಾಧನವನ್ನೂ ಮಾಡಿ ಗುರು, ಗಣಪತಿಯರನ್ನು ಪೂಜಿಸಿ, ಗುರುಗಳಿಗೆ ಅರ್ಘ್ಯವನ್ನಿತ್ತು, ಪುಷ್ಪಾಂಜಲಿಯನ್ನು ಮಾಡಿ, ಗಣಪತಿಗೆ ನೈವೇದ್ಯ ಮಾಡಿ ಪುನಃ ಅರ್ಘ್ಯವನ್ನು ಕೊಡಬೇಕು. ಆಧಾರ ಶಕ್ತ್ಯಾದಿ ಆಯಾಯ ದೇವತೆಗೆ ಹೇಳಿದ ಪೀಠಪೂಜೆಯನ್ನು ಮಾಡಿ– ವಿಷ್ಣುವಿನಲ್ಲಿ– ಶ್ರೀಂ ಬೀಜದಿಂದಲೂ ಪ್ರಕೃತಿ (ಭುವನೇಶ್ವರಿ)ಯನ್ನು ಆವಾಹಿಸಿ, ಶ್ರಾಂ– ಮೊದಲಾಗಿ ಅಂಗವನ್ನು ಮಾಡಬೇಕು. ಉಳಿದ ದೇವತೆಗಳಲ್ಲಿ ಹ್ರೀಂ ನಮಃ– ಭುವನೇಶ್ವರೀಮಾವಾಹಯಾಮಿ ಹೀಗೆ ಆವಾಹಿಸಿ, ಹ್ರಾಂ– ಹೃದಯಾಯ ಮೊದಲಾಗಿ ಅಂಗವನ್ನು ಮಾಡಬೇಕು. ಪುನಃ ಉಪಹಾರಗಳನ್ನು ಕೊಟ್ಟು ಪ್ರಣವ ಬೀಜ, ಅಂಗ ಆಯುಧಗಳಿಂದ ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಬೇಕು. ಇದರ ಸಮೀಪದಲ್ಲಿ ಇನ್ನೊಂದಾಸವನ್ನಿರಿಸಿ ಅಲ್ಲಲ್ಲಿ ಪೀಠಪೂಜೆಯನ್ನು ಮಾಡಿ ಎಲ್ಲವನ್ನೂ ತಾಲತ್ರಯದಿಂದ ಸಂರಕ್ಷಿಸಬೇಕು. ನಂತರ ಗರ್ಭಗೃಹದ ಒಳಗೆ ಹೋಗಿ ದೇವರ ಪೀಠಪೂಜೆಯನ್ನು ಮಾಡಿ ಪ್ರಣವ ಉಪಚಾರಗಳಿಂದ ಕೂಡಿ ಆಯಾಯ ದೇವತೆಯ ನಿಜಮೂಲದಿಂದ ಆವಾಹಿಸಿ, ಲಿಪಿನ್ಯಾಸ ಮೊದಲಾದುವುಗಳಿಂದ ಸಕಲೀಕರಣವನ್ನು ಮಾಡಿ ಆಯಾಯ ನಿಜೋಪಹಾರಗಳನ್ನು ಕೊಟ್ಟು ಕ್ರಮದಂತೆ ಪೂಜಿಸಿ, ನೈವೇದ್ಯ ಮಾಡಿ ಪ್ರಸನ್ನಪೂಜೆಯನ್ನು ಮಾಡಿ ಪ್ರಸನ್ನಾರ್ಘ್ಯವನ್ನು ಕೊಟ್ಟು ಬ್ರಹ್ಮಾರ್ಪಣವನ್ನು ಮಾಡಿ ವ್ಯಜನ (ಬೀಸಣಿಗೆ) ಮೊದಲಾದ ಉತ್ಸವದಲ್ಲಿ ಹೇಳಿದ ಉಪಹಾರಗಳಿಂದ ದೇವರನ್ನು ಸಂತೋಷಗೊಳಿಸಿ, ತೀರ್ಥಯಾತ್ರಾ– ಈ ಮಂತ್ರದಿಂದ ಪ್ರಾರ್ಥಿಸಬೇಕು.

**ತೀರ್ಥಯಾತ್ರಾ ತ್ವಯಾ ದೇವ ಶ್ವಃ ಕರ್ತವ್ಯಾ ಮಹೇಶ್ವರ ।**

**ತತ್ರ ಪ್ರತಿಸರಾರಂಭಂ ತ್ವಮವುಜ್ಞಾತುಮರ್ಹಸಿ ॥**

ಆಮೇಲೆ **ಘೃತಾರೋಪಣವನ್ನು** ಮಾಡಬೇಕು. ಹೇಗೆಂದರೆ– ಎರಡು ಅಶ್ವತ್ಥದ ಎಲೆಗಳಲ್ಲಿ ಗರಿಕೆ ಕುಡಿ, ಸಾಸಿವೆ, ತುಪ್ಪದಲ್ಲಿ ತೊಯ್ದ ಬತ್ತಿಗಳನ್ನಿರಿಸಿ ಆ ಎರಡು ಎಲೆಗಳನ್ನು ಕೈಗಳೆರಡರಿಂದ ತೆಗೆದುಕೊಂಡು ಬೆಳಗಿಸಿ ಕೈಗಳೆರಡನ್ನು ಬದಲಿಸಿ, ಸುಶೋಭನಂ ಭವತು ಎಂದು ಪಾದದ ಆದಿಯಿಂದ ಕಟಿ (ಸೊಂಟ) ಪರ್ಯಂತವಾಗಿ ಪಕ್ಕಗಳಲ್ಲಿ ಮೇಲಕ್ಕೆತ್ತಿ ಕೈಗಳ ಬದಲಿಕೆಯನ್ನು ಬಿಟ್ಟು ದೇವರ ಹಿಂದುಗಡೆ ಅದೆಲ್ಲವನ್ನೂ ಬಿಡಬೇಕು. ಕೈಗಳೆರಡನ್ನು ತೊಳೆದುಕೊಳ್ಳಬೇಕು. ಪುನಃ ಹಿಂದಿನಂತೆ ಎರಡು ಅಶ್ವತ್ಥದ ಎಲೆಗಳನ್ನು ಕೈಗಳೆರಡರಿಂದ ತೆಗೆದುಕೊಂಡು ಸುಭದ್ರಂ ಭವತು ಎಂದು ಕಟಿ(ಸೊಂಟ) ದಿಂದ ಕಂಠ(ಕುತ್ತಿಗೆ) ಪರ್ಯಂತವಾಗಿ ಹಿಂದೆ ಮಾಡಿದಂತೆ ಮೇಲಕ್ಕೆತ್ತಿ ಹಿಂದಿನಂತೆ ಹಿಂಭಾಗದಲ್ಲಿ ಬಿಡಬೇಕು. ಕೈಗಳನ್ನು ತೊಳೆದುಕೊಂಡು ಇನ್ನೊಮ್ಮೆ ಕೈಗಳೆರಡರಿಂದ ಎರಡು ಅಶ್ವತ್ಥದ ಎಲೆಗಳನ್ನು ಹಿಂದೆ ಮಾಡಿದಂತೆ ಮೇಲಕ್ಕೆತ್ತಿ ಸುಮಂಗಲಂ ಭವತು ಎಂದು ಕುತ್ತಿಗೆಯಿಂದ ಮೂರ್ಧ (ತಲೆ) ಪರ್ಯಂತ ಎತ್ತಿ ಹಿಂದೆ ಬಿಡಬೇಕು. ಕೈಗಳನ್ನು ತೊಳೆದುಕೊಳ್ಳಬೇಕು. ಇತಿ ಘೃತಾರೋಪಣ ಪ್ರಕಾರಃ.

ಪುನಃ ಬಲಿಮೂರ್ತಿಯನ್ನು ಮುಂದೆ ಇರಿಸಿ, ತೊಳೆದು ಕ್ರಮದಂತೆ ಪುಣ್ಯಾಹವನ್ನು ಮಾಡಿ, ಅದರ ಉಳಿದ ನೀರಿನಿಂದ ಅಭಿಷೇಕ ಮಾಡಿ ರೇಶ್ಮೆ ಬಟ್ಟೆಯ ತುಂಡಿನಲ್ಲಿ ಮುತ್ತು, ಸಾಸಿವೆ, ಚಿನ್ನಗಳನ್ನಿರಿಸಿ, ಉಣ್ಣೆಯ ನೂಲಿನಿಂದ ಕಟ್ಟಿ, ಹೆಬ್ಬೆರಳು, ಅನಾಮಿಕೆಗಳಿಂದ ಏಳಾವರ್ತಿ ಸುತ್ತಿ, ಶಿವನಲ್ಲಿ– ಅಘೋರ ಮಂತ್ರದಿಂದ, ದುರ್ಗಿಯಲ್ಲಿ– ಸುದರ್ಶನ ಮಂತ್ರದಿಂದ, ಸುಬ್ರಹ್ಮಣ್ಯನಲ್ಲಿ– ಓಂ ನಮಃ ಷಣ್ಮುಖಾಯ– ಈ ಮಂತ್ರದಿಂದ, ವಿಷ್ಣುವಿನಲ್ಲಿ– ಜಿತಂತೇ ಪುಂಡ– ಈ ಮಂತ್ರದಿಂದ, ಶಂಕರನಾರಾಯಣನಲ್ಲಿ,

ಗಣಪತಿಯಲ್ಲಿ, ಶಾಸ್ತಾರನಲ್ಲಿಯೂ ಆಯಾಯ ಮೂಲದಿಂದ ಕರ್ಮ ಬಿಂಬದ ಬಲದ ಕೈಯಲ್ಲಿ ಕೌತುಕವನ್ನು ಕಟ್ಟಬೇಕು. ಹ್ರಾಂ ಮೊದಲಾದ ಬೀಜಗಳಿಂದ ಐದು ಭೂತಗಳನ್ನು ಸಂಹರಿಸಿ, ಶೋಷಣ ಮೊದಲಾದುವುನ್ನು ಮಾಡಿ ಹ್ರಾಮಾದಿ ಬೀಜಗಳಿಂದ ಆಕಾಶಾದಿ ಭೂತಗಳನ್ನು ಸೃಷ್ಟಿ ಮಾಡಿ ಲಿಪಿ ಪ್ರಾಣಾಯಾಮವನ್ನು, ಲಿಪಿನ್ಯಾಸವನ್ನೂ, ಮಂತ್ರಪ್ರಾಣಾಯಮವನ್ನೂ ಮಂತ್ರನ್ಯಾಸವನ್ನೂ ಮಾಡಿ, ಅಲ್ಲಿ ಪೀಠಪೂಜೆಯನ್ನು ಮಾಡಿ ಮೂರ್ತಿಯನ್ನು ಸಂಕಲ್ಪಿಸಿ ನೀರಾಜನವನ್ನು ಮಾಡಿ, ಶಂಖದಲ್ಲಿ ನೀರನ್ನು ತೆಗೆದುಕೊಂಡು ಅಷ್ಟಗಂಧವನ್ನು ಮಿಲಾಯಿಸಿ, ಮೂಲಬಿಂಬದಲ್ಲಿ ಹೂವಿನಿಂದ ಪೂಜಿಸಿ, ಪ್ರಣವದಿಂದ ಪೂಜಿಸಿ ಪ್ರಣವ ಉಪಚಾರ, ಮೂಲಗಳಿಂದ ಕೂಡಿದ ಮೂಲದಿಂದ ಸಂಪುಟಿತವಾದ ಸೃಷ್ಟಿ ಸಂಹಾರ ಕ್ರಮದಿಂದ ಪಂಚತತ್ತ್ವಗಳಿಂದ ಆವಾಹಯಾಮಿ ಎಂದು ಕೊನೆಗೊಳ್ಳುವ ಮಂತ್ರಗಳಿಂದ ಮೂಲವಿಗ್ರಹದಿಂದ ಶಂಖಜಲದಲ್ಲಿ ಆವಾಹಿಸಿ ಕರ್ಮಬಿಂಬದಲ್ಲಿ ಸೇರಿಸಬೇಕು. ನಂತರ ತಾಂಬೂಲ ವ್ಯಜನ ಮೊದಲಾದುವುಗಳ ಸಮರ್ಪಣೆಯಿಂದ ಮನಸ್ಸಿಗೆ ಮುದ ನೀಡುವ ಪ್ರಸನ್ನ ಪೂಜೆಯನ್ನು ಮಾಡಿ ಸಮಾಪ್ತಿಯ (ಅವಸಾನೀಯ) ಅರ್ಘ್ಯಕ್ಕೆ ಮೊದಲು ಆಯಾಯ ನಿಜಪಂಚತತ್ತ್ವ ಮಂತ್ರಗಳಿಂದ ಹಾಸಿಗೆಯಲ್ಲಿ ಮಲಗಿಸಬೇಕು. ಈ ದೇವತೆಯನ್ನು ಸಂಹಾರ ಕ್ರಮದಿಂದ ಹೇಳಿದ ಪಂಚತತ್ತ್ವ ಮೂಲ, ಪ್ರಣವದಿಂದಲೂ ಉತ್ತಮದಿಂದ ಪಾದದಿಂದಾರಂಭಿಸಿ ಕೇಶಪರ್ಯಂತವಾಗಿ ಪ್ರತ್ಯೇಕವಾಗಿ ವ್ಯಾಪಿಸಿ ಜಾಗ್ರದವಸ್ಥೆ, ಸ್ವಪ್ನಾವಸ್ಥೆ, ಸುಷುಮ್ನಾವಸ್ಥೆಗಳನ್ನು ಕ್ರಮವಾಗಿ ನಾಲ್ಕನೆಯ ಅವಸ್ಥೆಯನ್ನು ಹೊಂದಿಸಬೇಕು. ನಾಲ್ಕನೆಯ ಅವಸ್ಥೆ(ಸುಷುಪ್ತಿ) ಸ್ವರೂಪಾನುಭವಾಸಕ್ತನಾದ ಆನಂದಘನನನ್ನು ಭಾವಿಸುತ್ತಾ ಅಡ್ಡವಾಗಿ ಪರದೆಯನ್ನೆಳೆದು (ಮುಚ್ಚಿ) ಉಳಿದ ರಾತ್ರಿಯನ್ನು ಕಳೆಯಬೇಕು.

**ದೇವ ದೇವ ಜಗನ್ನಾಥ ತವ ಪೂಜಾಂತರೇ ಪ್ರಭೋ ।**

**ಕವಾಟಂ ಬಂಧಯಿಷ್ಯಾಮಿ ಸುಖನಿದ್ರಾಂ ಕುರು ಪ್ರಭೋ ॥**

* * * *

## ಪ್ರಬೋಧೋತ್ಸವಃ

ಅನಂತರ ಬೆಳಿಗ್ಗೆ ಓಂಕಾರದಿಂದ ಸ್ನಾನ ಮಾಡಿ ನೀರಿನ ಎರಚುವಿಕೆಯನ್ನು ಮಾಡಿ ಪುನಃ ಕಾಲುಗಳನ್ನು ತೊಳೆದು, ಆಚಮನವನ್ನು ಮಾಡಿ ಅಲ್ಲಿ ಕುಳಿತು ದೇಹಶುದ್ಧಿ ಶಂಖಪೂರಣ, ಆತ್ಮಾರಾಧನೆಯನ್ನು ಮಾಡಿ ಗುರು ಗಣಪತಿಯನ್ನು ಪೂಜಿಸಿ, ಮಂಟಪದಲ್ಲಿ ಕುಳಿತುಕೊಂಡು ಪ್ರಣವ, ಮೂಲ ಪಂಚತತ್ವಗಳಿಂದ ಪ್ರತ್ಯೇಕವಾಗಿ ವ್ಯಾಪಿಸಿ ದೇವತೆಯನ್ನು ವಾದ್ಯಘೋಷಗಳಿಂದ ಕೂಡಿ ಎಚ್ಚರಗೊಳಿಸಬೇಕು.

**ಉತ್ತಿಷ್ಠೋತ್ತಿಷ್ಠ ದೇವೇಶ ಉತ್ತಿಷ್ಠ ಪರಮೇಶ್ವರ ।**

**ಉತ್ತಿಷ್ಠ ಗಿರಿಜಾಕಾಂತ ತ್ಯಜ ನಿದ್ರಾಂ ಸುಖಂ ಪ್ರಭೋ ॥**

(ಇಲ್ಲಿ ದೇವತಾ ವ್ಯತ್ಯಯದಲ್ಲಿ ಅದಕ್ಕೆ ಸರಿಯಾದ ಊಹೆಯನ್ನು ಮಾಡಬೇಕು) ಹೀಗೆ ಎಚ್ಚರದಿಂದಿರುವ ದೇವರನ್ನು ಎಚ್ಚರಗೊಳಿಸಿ, ಮಂಗಲಕರಗಳಾದ ವಸ್ತುಗಳನ್ನು ಹಸುವನ್ನೂ ತೋರಿಸಿ ಅವಸಾನೀಯ (ಕೊನೆಯ) ಅರ್ಘ್ಯವನ್ನು ಕೊಟ್ಟು ವ್ಯಾಪಿಸಿ ಲಯಾಂಗವನ್ನು ಮಾಡಿ ಸಂರಕ್ಷಿಸಿ ಅದರ ಸಮೀಪದಲ್ಲಿ ಕೆಳಭಾಗದಲ್ಲಿ ಮಂಡಲವನ್ನು ಮಾಡಿ ಭದ್ರಪೀಠವನ್ನಿರಿಸಿ ಅದರ ಸಮೀಪದಲ್ಲಿ ಉತ್ತರದಲ್ಲಿ ನಿರ್ಮಾಲ್ಯದ ಸಂಪರ್ಕದಿಂದ ಹೊರಗೆ ಸ್ವಸ್ತಿಕವನ್ನು ಬರೆದು ಧಾನ್ಯಗಳನ್ನಿರಿಸಿ ಕಡಾರಿಯನ್ನು ಕೆಳಮುಖನಾಗಿರಿಸಿ ಅಲ್ಲಿ ಪೀಠಪೂಜೆಯನ್ನು ಮಾಡಿ ಪಾತ್ರಕ್ಕೆ ಶೋಷಣ ಮೊದಲಾದುವನ್ನು ದರ್ಭವಿನ್ಯಾಸ ಮೊದಲಾದುವನ್ನೂ ಮಾಡಿ ಮೇಲ್ಮುಖನಾಗಿ ಮಾಡಿ ಪ್ರಣವದಿಂದ ಕೂರ್ಚನ್ನಿರಿಸಿ ಕಲಶಕ್ಕೆ ಹೇಳಿದ ಕ್ರಮದಂತೆ ತುಂಬಿಸಿ–

**ಆಯಾತು ವರುಣಃ ಶೀಘ್ರಂ ಪ್ರಾಣಿನಾಂ ಪ್ರಾಣರಕ್ಷಕಃ ।**

**ಅತುಲ್ಯಬಲವಾನತ್ರ ಸರ್ವದುಷ್ಟಪ್ರಶಾಂತಯೇ ॥**

– ಹೀಗೆ ವರುಣನನ್ನು ಆವಾಹಿಸಿ, ಸಕಲೀಕರಣವನ್ನು ಮಾಡಿ ಪೂಜಿಸಿ,

**ಗಂಗಾಯೈ ವಿಶ್ವತೋ ಮುಖ್ಯೈ ಶಿವಾಮೃತಾಯೈ ನಾಲಾಯಣ್ಯೈ ನಮೋ ನಮಃ ॥**

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**

**ನರ್ಮದೇ ಸಿಂಧು ಕಾವೇರಿ ಜಲೇऽಸ್ಮಿನ್ಸನ್ನಿಧಿಂ ಕುರು ॥**

ಎಂದು ತೀರ್ಥವನ್ನಾವಾಹಿಸಿ, ಪೂಜಿಸಿ, ಮೂಲಮಂತ್ರದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ಪಂಚವಾರುಣ ಮಂತ್ರವನ್ನು ಜಪಿಸಿ, ತಾಲತ್ರಯಗಳಿಂದ ಸಂರಕ್ಷಿಸಬೇಕು.

ಪುನಃ ಭದ್ರಪೀಠದಲ್ಲಿ ಪೀಠಪೂಜೆಯನ್ನು ಮಾಡಿ ಕರ್ಮಬಿಂಬ (ಬಲಿಮೂರ್ತಿ)ವನ್ನು ತೆಗೆದುಕೊಂಡು ಬಂದು ಪೂಜಿಸಲ್ಪಟ್ಟ ಪೀಠದಲ್ಲಿಟ್ಟು ಮೂರ್ತಿಯನ್ನು ಸಂಕಲ್ಪಿಸಿ, ಪ್ರಣವ ಉಪಚಾರ ಮೂಲಗಳಿಂದ ತನ್ನ ಹೃದಯದಿಂದ ದೇವರನ್ನು ಆವಾಹಿಸಿ, ಆವಾಹನಾದಿ ಮುದ್ರೆಗಳನ್ನು ತೋರಿಸಿ, ಲಿಪಿನ್ಯಾಸ ಮೊದಲಾದುವುಗಳಿಂದ ಸಕಲೀಕರಣವನ್ನು ಮಾಡಿ ಪೂಜೆಯಲ್ಲಿ ಹೇಳಿದ ಕ್ರಮದಿಂದ ಅರ್ಘ್ಯ ಮೊದಲಾದುವನ್ನು ಕೊಟ್ಟು ಪುನರಾಚಮನದ ಕೊನೆಯಲ್ಲಿ ಪಾದ್ಯಾದಿ ಮೂರನ್ನು ಕೊಟ್ಟು, ಪುನಃ ಹಲ್ಲುಜ್ಜುವಿಕೆಯನ್ನು ಸಂಕಲ್ಪಿಸಿ, ದಂತಕಾಷ್ಠವನ್ನು ಕೊಟ್ಟು, ಗಂಡೂಷ (ಬಾಯಿಮುಕ್ಕಳಿಸುವ ನೀರು)ವನ್ನು ಕೊಟ್ಟು, ಹೀಗೆ ಮೂರಾವರ್ತಿ ಹಲ್ಲುಜ್ಜಲು ಕಡ್ಡಿ (ದಂತಕಾಷ್ಠ)ಯನ್ನು, ನಡು ನಡುವೆ ಬಾಯಿ ಮುಕ್ಕಳಿಸುವ ನೀರನ್ನು ಕೊಟ್ಟು ಆಮೇಲೆ ಮೂರಾವರ್ತಿ ನಾಲಿಗೆಯನ್ನು ಶುದ್ಧ ಮಾಡಿ, ಅಲ್ಲೂ ನಡು- ನಡುವೆ ಹೆಚ್ಚಿನ ಗಂಡೂಷವನ್ನು ಕೊಟ್ಟು, ಪುನಃ ಪಾದ್ಯಾದಿ ಮೂರನ್ನು (ವಿಕಲ್ಪವಾಗಿ) ಕೊಟ್ಟು ಶುದ್ಧೋದಕದಿಂದ ಅಭಿಷೇಕ ಮಾಡಿ, ಪಾದ್ಯ, ಆಚಮನಗಳನ್ನು ಕೊಟ್ಟು ಆಪೋಹಿಷ್ಠಾಮಯೋ- ಮುಂತಾದುವುಗಳಿಂದ ಪುಣ್ಯಾಹವನ್ನು ಮಾಡಿಯಾಗಲೀ ಮೂಲಮಂತ್ರದಿಂದ ಜಪಿಸಲ್ಪಟ್ಟ ಜೇನುತುಪ್ಪಗಳಿಂದ ಅಭಿಷೇಕಿಸಿ, ಅರಶಿಣದ ಪುಡಿಯಿಂದ ಉಜ್ಜಿ ತಿಕ್ಕಿ ಮಂಗಳೋದಕದಿಂದ ಸ್ನಾನ ಮಾಡಿಸಿ, ಸಂಸ್ಕರಿಸಲ್ಪಟ್ಟ (ಅಭಿಮಂತ್ರಿತವಾದ) ನೀರಿನಿಂದ ಅಭಿಷೇಕಿಸಿ, ಪ್ರಾಣಾಪಾನ ಮೊದಲಾದ ಸಪ್ತಶುದ್ಧಿ ಮಂತ್ರಳಿಂದ, ಪುರುಷಸೂಕ್ತ ರುದ್ರಸೂಕ್ತ ಮೊದಲಾದುವುಗಳಿಂದ ಅಭಿಷೇಕಿಸಿ, ಅಂಗವಸ್ತ್ರ(ಮೈವರಿಸುವ ಬಟ್ಟೆ) ವಸ್ತ್ರ, ಉಪವೀತ, ಅಲಂಕಾರವನ್ನು ಕೊಡಬೇಕು. ಮೂಲಮಂತ್ರದಿಂದ ಗರಿಕೆ ಕುಡಿಯಗಳನ್ನು, ಹೂವುಗಳನ್ನು, ಅಷ್ಟಗಂಧವನ್ನು, ಕಾಡಿಗೆಯನ್ನು, ಅಗರು(ಸುಗಂಧದ್ರವ್ಯ)ವನ್ನು ಚಂದನವನ್ನೂ ಕೊಟ್ಟು ಹೂವಿನ ಮಾಲೆಯಿಂದ (ಸರ) ಅಲಂಕರಿಸಿ ಕನ್ನಡಿಯನ್ನು ತೋರಿಸಿ, ಗಣಪತಿಯ ಪೂಜೆಯನ್ನು ಮಾಡಿಸಿ, ಹಸುಗಳಿಗೆ ಬೂಸ (ಹಿಂಡಿ, ಹೊಟ್ಟು) ವನ್ನು ಕೊಟ್ಟು ಇತಿಹಾಸ ಪುರಾಣಾದಿಗಳನ್ನು ಕೇಳಿಸಿ, ಬ್ರಾಹ್ಮಣರಿಗೆ, ಅಕ್ಕಿ(ತಂಡುಲ) ಮೊದಲಾಗಿ ತುಂಬಿದ ಪಾತ್ರೆಯನ್ನು ಚಿನ್ನ ಮೊದಲಾದುವನ್ನು ಕೊಟ್ಟು ಜಪ ಮೊದಲಾದುವುಗಳಿಂದ ದೇವರನ್ನು ಕ್ರಮದಂತೆ ಪೂಜಿಸಿ, ಹಾಸಿಗೆ ಮೊದಲಾದುವನ್ನು ವಿಸರ್ಜಿಸಿ, ಬಲಿಮೂರ್ತಿಯನ್ನು ಗರ್ಭ ಗುಡಿಯಲ್ಲಿ ತೆಗೆದುಕೊಂಡು ಹೋಗಿ ಕೌತುಕದಲ್ಲಿರುವ ದೇವರನ್ನು ಮೂಲಬಿಂಬದಲ್ಲಿ ಸೇರಿಸಿ ಮೂಲದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ ಪೂಜೆ ಮೊದಲಾದುವನ್ನು ಮಾಡಬೇಕು.

* * * *

## ಯಾತ್ರಾಹೋಮಃ

ಅಗ್ನಿಯಲ್ಲಿ ಪೀಠಪೂಜೆಯನ್ನು ಮಾಡಿ ಮೂರ್ತಿಯನ್ನು ಭಾವಿಸಿ, ಯಾತ್ರಾಹೋಮವನ್ನು ಮಾಡಬೇಕು. ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷೀ ಆಜ್ಯೇನ, ಪ್ರಧಾನ ದೇವತಾಂ * * ಗಾಯತ್ರ್ಯಾಪಕ್ವಂ ಕನಿಕ್ರದಾದಿ ಷಣ್ಮಂತ್ರೈಃ ಸ್ವಸ್ತ್ಯಾದಿ ಪಂಚಭಿರ್ಮಂತ್ರೈಃ ಏಕೈಕವಾರ ಮಾಜ್ಯೇನ (ಸ್ವಸ್ತ) ಮೂಲೇನ ಸಮಿದಾಜ್ಯ ಚರ್ವಾಜ್ಯ ದ್ರವ್ಯೈಃ ಯಥಾಸಂಖ್ಯಯಾ ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಚರುಶೇಷೇಣ ಸ್ವಿಷ್ಟಕೃತಂ ಇತ್ಯಾದಿ ಸದ್ಯೋಯಕ್ಷ್ಯೇ-

* * * *

## ತೀರ್ಥಯಾತ್ರಾ (ಅವಭೃಥಃ)

ಗರ್ಭಗೃಹದಲ್ಲಿ ಹೋಗಿ ಪೂಜಿಸಲ್ಪಟ್ಟ ಪೀಠದಲ್ಲಿ ದೇವತೆಯನ್ನು ಇರಿಸಿ, ಪಾದ್ಯ, ಅರ್ಘ್ಯ ಆಚಮನೀಯಗಳನ್ನು ಸಮರ್ಪಿಸಿ ಆಪೋಹಿಷ್ಠಾ ಮೊದಲಾದುವುಗಳಿಂದ ಪ್ರೋಕ್ಷಣೆ ಮಾಡಿ ಅಕ್ಕಿ ಹೆಸರು ಉದ್ದು ಯವ ಚಿನ್ನ ಅರಸಿನ ಗಂಧದ ಪುಡಿಗಳಿಂದ ಶಿವನಲ್ಲಿ- ಅಘೋರಾಸ್ತ್ರದಿಂದ, ವಿಷ್ಣುವಿನಲ್ಲಿ- ದ್ರುಪದಾದಿವೇ- ದಿಂದ, ಉಳಿದ ದೇವತೆಗಳಲ್ಲಿ ಆಯಾಯ ನಿಜಮೂಲದಿಂದ ಉಜ್ಜಿ, ತಿಕ್ಕಿ ಪೂಜಿಸಿ ಅದರ ಇದುರಿನಲ್ಲಿ ಹಿಂದಿನಂತೆ ಶುದ್ಧಿಗೊಳಿಸಿದ ಕರ್ಮಬಿಂಬವನ್ನಿರಿಸಿ ಪ್ರಾರ್ಥಿಸಬೇಕು.

**ತೀರ್ಥಾಭಿಗಮನಾದ್ಯಾವದ್ದೇವಾಭಿಗಮನಂ ಪುನಃ ।**
**ತಾವತ್ತ್ವಂ ಕೌತುಕಮಿದ ಮಧಿಷ್ಠಾಯ ಪ್ರಸೀದ ನಃ ॥**

ಹೀಗೆ ಸುಬ್ರಮ್ಹಣ್ಯ, ಗಣಪತಿಯರಲ್ಲಿ ಪ್ರಾರ್ಥನೆ. ಉಳಿದ ಐದು ದೇವತೆಗಳಲ್ಲಿ-

**ಕರ್ಮಾರ್ಚಾತಿರ್ಥಯಾತ್ರಾರ್ಥಂ ತವೇಯಂ ಕಲ್ಪಿತಾ ವಿಭೋ ।**
**ತೀರ್ಥಯಾತ್ರಾಂ ಕುರುಷ್ವಾಸ್ಯಾಂ ಸಂಕ್ರಮ್ಯಾನುಗ್ರಹಾಯ ನಮಃ ॥**

ಹೀಗೆ ಪ್ರಾರ್ಥಿಸಬೇಕು. ಮೂಲಬಿಂಬದಲ್ಲಿ ಸಂಪಾತವನ್ನು ಅರ್ಪಿಸಿ (ಹಚ್ಚಿ) ಶಂಖದಲ್ಲಿ ಹಿಂದೆ ಮಾಡಿದಂತೆ ನೀರನ್ನು ತೆಗೆದುಕೊಂಡು ನೀರಾಜನವನ್ನು ಮಾಡಿ ಆ ಶಂಖದ ನೀರಿನಿಂದ ಮೂಲಬಿಂಬದಿಂದ ಶಯನದ ವಿಧಿಯಲ್ಲಿ ಹೇಳಿದ ಮಂತ್ರಗಳಿಂದ ಆವಾಹಿಸಿ ಪ್ರಣವದಿಂದ ವ್ಯಾಪನ ಮೊದಲಾದುವನ್ನು ಎಲ್ಲವನ್ನೂ ಮಾಡಿ ಮೂಲಬಿಂಬದಲ್ಲಿ ತತ್ತ್ವನ್ಯಾಸ

ಮೊದಲಾದುವುಗಳಿಂದ ಸುಸ್ಥಿತಿಯಲ್ಲಿರಿಸಿ ವಸ್ತ್ರ ಮೊದಲಾದುವುಗಳಿಂದ ಕೂರ್ಚದಿಂದಲೂ ಮುಚ್ಚಿಟ್ಟು ತಾಲತ್ರಯಾದಿಗಳಿಂದ ರಕ್ಷಿಸಬೇಕು. ಉತ್ಸವ ಮೂರ್ತಿಯಲ್ಲಿ ಸಂಪಾತ ಶೇಷವನ್ನು ಸಮರ್ಪಿಸಿ ನೀರಾಜನವನ್ನು ಮಾಡಿ ಮೂರ್ತಿಪರಿಂದ ದೇವತೆಯ ಹಿಡಿದುಕೊಳ್ಳುವಂತೆ ಕೊಟ್ಟು–

**ಜಗನ್ನಿರ್ಮಾಣ ಸಂಹಾರಸ್ಥಿತ್ಯನುಗ್ರಹ ಹೇತವಃ ।**

**ದೇವಾನಾಮೀಶ್ವರಾದೇವಾ ಮಂಗಲಂ ಪ್ರದಿಶಂತುನಃ ॥**

ಇವೇ ಮೊದಲಾಗಿ ಕನಿಕ್ರದಜ್ಜನುಷಂ– ಮೊದಲಾಗಿ ಜಪಿಸುವವನಾಗಿ ಹೊರಗೆ ಬಂದು ಪ್ರಾರ್ಥಿಸಿ, ಬಾಗಿಲನ್ನು ಮುಚ್ಚಿ ದ್ವಾರಪಾಲಕರನ್ನು ಪರಿವಾರಗಳನ್ನು ಒಂದು ಸುತ್ತಿನಿಂದ ಪೂಜಿಸಿ ಬಲಿಯನ್ನು ಕೊಟ್ಟು ಸಭಾ ದ್ವಾರಪಾಲಕರನ್ನು ಪೂಜಿಸಿ ಬಲಿಯನ್ನು ಹಾಕಿ ಹೊರಗೆ ಬಂದು ಪ್ರಾರ್ಥಿಸಿ ಧ್ವಜದೇವತೆಗಳ ಬಲಿಯ ಕೊನೆಯಲ್ಲಿ ಧ್ವಜ ಚೈತನ್ಯವನ್ನು ದೇವರಲ್ಲಿ ಉದ್ವಾಸನೆ ಮಾಡಿ ಆಯಾಯ ಗಣಬಲಿಪೀಠ ಮಹಾಧ್ವಜ. ಅಲ್ಲಿನ ಗ್ರಹಬಲಿ ದಿಗ್ಬಲಿ ಶೀಘ್ರಬಲಿಗಳಿಂದ ಕೂಡಿ ಪ್ರದಕ್ಷಿಣೆ ಬಂದು ಕ್ಷೇತ್ರಪಾಲನಿಗೆ ಬಲಿಯನ್ನು ಕೊಟ್ಟು, ಕ್ಷೇತ್ರಪಾಲನಿಂದ ದೇಗುಲವು ರಕ್ಷಿಸಲ್ಪಟ್ಟಿದೆ ಎಂದು ಭಾವಿಸಿ ವೃಷಭ ಗರುಡ ಮೊದಲಾದ ರೂಪದ, ರಥ ಮೊದಲಾದ ಯಾನದಲ್ಲಿ ದೇವರನ್ನು ಕುಳ್ಳಿರಿಸಿ ಕ್ಷೇತ್ರಪಾಲನನ್ನು ಹೊರತಾಗಿ ಉಳಿದ ಪರಿವಾರಗಳಿಂದ ಕೂಡಿ ತೀರ್ಥಸ್ನಾನಕ್ಕೆ ಹೋಗುವುದೆಂದುಕೊಂಡು ಗೋಪುರದ ಬಾಗಿಲಲ್ಲಿ ದ್ವಾರಪಾಲಕರನ್ನು ಪೂಜಿಸಿ ಬಲಿಯನ್ನು ಕೊಟ್ಟು ಯಜಮಾನನಿಂದ ಕೂಡಿ ಹೊರಗೆ ಬಂದು 'ಯೇಭೂತಾಃ ಪುರಃ ಸದಃ'– ಮೊದಲಾದ ಮಂತ್ರಗಳಿಂದ ಮಹಾಸಾಲದ ಹೊರಗೆ ಬಲಿಯನ್ನು ಕೊಟ್ಟು ಪ್ರದಕ್ಷಿಣೆ ಬಂದು ಎರಡು ಮೈಲಿಗೆ ಮೊದಲಾಗಿ ಸಿಗುವ ನದಿ ಮೊದಲಾದ ವಿಶಿಷ್ಟವಾದ ತೀರ್ಥವನ್ನು ಕುರಿತು ಹೋಗಬೇಕು. ಅಲ್ಲಿ ಅಶ್ವತ್ಥ ಮರದ ಬುಡ ಮೊದಲಾದುವಲ್ಲಿ ಪ್ರಶಸ್ತವಾದ (ಶುದ್ಧವಾದ) ಸ್ಥಳದಲ್ಲಿ ದೇವಾಲಯ ಮೊದಲಾದುವಲ್ಲಿಯೂ ಬಲಿಯನ್ನು ಹಾಕಬೇಕು. ಹವಿಸ್ಸುಗಳನ್ನು ನೀರು ತುಂಬಿದ ಕಲಶವನ್ನು ಗಂಧ ಹೂವು ಮೊದಲಾದುವನ್ನು ಹೊತ್ತಿರುವ ಬ್ರಾಹ್ಮಣರಿಂದ ಕೂಡಿ ನದಿ ಮೊದಲಾದ ತೀರ್ಥದೆಡೆಗೆ ಹೋಗಬೇಕು. ಅಲ್ಲಿ–

**ಶಂಖಪ್ರೇಂಖಚ್ಚಟುಲಪಟಹೋತ್ತಾಳತಾರೋರುಭೇರೀ ।**

**ರಂಗಚ್ಛೃಂಗೋಡ್ಡಮರಡಮರೋದ್ದೀಪ್ರವೀಣಾ ಪ್ರವೀಣಾಃ ॥**

**ಢಕ್ಕಾಢುಕ್ಕಾ ವಿರಲಮುರಲೀಕರ್ಮಠಾಶ್ಚಾಭಿಯಾಯುಃ**

**ಸ್ಫಾಯದ್ದೀಪಾಸ್ತಮಿಹ ಮಹಿತೋದ್ದಾಮಹೇಲಾಮಹೇಲಾಃ ।**

ಶಂಖಧ್ವನಿ ಮೊಳಗುತ್ತಿರುವಾಗ ನಗಾರಿಯು ಕಂಪಿಸುವಾಗ ಸಮಯದ ಹೊಂದಿಕೆಯಿಂದ ಕೂಪಿತಾಳದ ದೊಡ್ಡ ಶಬ್ದದೊಂದಿಗೆ ಭೇರಿಯ ಶಬ್ದ ಮೊಳಗುತ್ತಿರುವಾಗ ನುರಿತವರು ವೀಣೆಯನ್ನು ನುಡಿಸುವವರಾಗಿ (ಮೀಟುತ್ತಾ) ದೊಡ್ಡ ನಗಾರಿ ಶಬ್ದದೊಡನೆ ಸರಿದೂಗುವ ಕೊಳಲು ಪರಿಣತರಿಂದ ಊದಲ್ಪಟ್ಟು ನಾದದಿಂದ ಕೆಲಸಗಳಲ್ಲಿ ಉತ್ಸಾಹಿಗಳಾಗಿ ಪ್ರಕಾಶಮಾನವಾದ ದೀವಟಿಕೆ ದೀಪದಿಂದ ಕೂಡಿ ಬಗೆ ಬಗೆಯ ವಿಲಾಸದಿಂದ ಕೂಡಿದ ಪ್ರೌಢ ಹೆಂಗಸರು ಮುಂದೆ ಹೋಗುತ್ತಾರೆ. ಯಾತ್ರೆಯಲ್ಲಿ ಗದ್ದಲವನ್ನು ಈ ಶ್ಲೋಕದಿಂದ ಬಣ್ಣಿಸಲಾಗಿದೆ.

ಅಲಂಕರಿಸಲ್ಪಟ್ಟ ಪುರುಷರು ಸ್ತ್ರೀಯರು ದೇವರ ಇದುರಿನಲ್ಲಿ ದೇವರಿಗೆ ಅಭಿಮುಖವಾಗಿ ಹೋಗುತ್ತಿದ್ದಾರೆ. ವೀಣೆ ಮೊದಲಾದ ಐದು ವಾದ್ಯಗಳಲ್ಲಿ ಪಳಗಿದವರು ದೇವರ ಇದುರಿನಲ್ಲಿ ಹೋಗುತ್ತಾರೆ. ಛತ್ರಗಳು ಚಾಮರಗಳು ಬೀಸಣಿಗೆ ಮೊದಲಾದುವುಗಳನ್ನು ಹಿಡಿದುಕೊಂಡು ಪುರುಷರು ಸುತ್ತಲೂ ಸಾಗುತ್ತಿದ್ದಾರೆ. ಜಯ ಜಯವೆಂದು ಹಾಡುತ್ತಾ ಹಿಂದಿನಿಂದ ಅನುಸರಿಸುತ್ತಾರೆ. ಈ ರೀತಿ ಶಬ್ದದೊಂದಿಗೆ ನದಿ ಮೊದಲಾದ ವಿಶಿಷ್ಟವಾದ ಸ್ಥಾನದ ತೀರ್ಥವನ್ನು ಹೊಂದಿ ಅಲ್ಲಿ ಬಲಿಯನ್ನು ಸಮಾಪ್ತಿಗೊಳಿಸಬೇಕು.

* * * *

## ವಾರುಣ ಹೋಮಃ

ಹೊಳೆಯ ದಡಕ್ಕೆ ಹೋಗಿ ಪರಿಶುದ್ಧವಾದ ಸ್ಥಳದಲ್ಲಿ ಸ್ಥಂಡಿಲದ ಮೇಲೆ ಒಂಭತ್ತು ಕಲಶಗಳನ್ನು ಸ್ಥಾಪಿಸಿ, ಅಲ್ಲಿ ಮಧ್ಯ ಕಲಶದಲ್ಲಿ ಏಳು ತೀರ್ಥಗಳನ್ನು ನಿಜನಾಮಗಳಿಂದ ಆವಾಹಿಸಿ, ಅದರ ಸುತ್ತಲಿನ ಎಂಟು ಕಲಶಗಳಲ್ಲಿ ಎಂಟು ವಿದ್ಯೇಶ್ವರರನ್ನು ಆವಾಹಿಸಿ, ಪ್ರಾರ್ಥಿಸಬೇಕು.

**ಹೇ ದೇವಿ ಗಂಗೇ ಯಮುನೇ ನರ್ಮದೇ ಚ ಸರಸ್ವತಿ ।**
**ಸಿಂಧೋ ಗೋದಾವರಿ ಕ್ರೌಂಚ ಕಾವೇರ್ಯತ್ರ ಜಲಾಶಯೇ ॥**
**ಸನ್ನಿಧೀ ಭವ ಸರ್ವಸ್ಯ ತೀರ್ಥಾರ್ಥಮಿದಮುತ್ತಮಂ ।**
**ರವೇರಸ್ತಮಯಂ ಯಾವತ್ತೀರ್ಥಾರ್ಥಂ ಪಾಪಶುದ್ಧಯೇ ॥**

**ಅನ್ವಾಧಾನಂ–** ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷೀ ಆಜ್ಯೇನ ಪ್ರಧಾನ ದೇವತಾಂ ಶಿವಂ ತತ್ಪುರುಷೇಣ (ಗಾಯತ್ರ್ಯಾ) ಪಕ್ವಂ ಸದ್ಯೋಜಾತಾದಿ ಪಂಚಭಿರ್ಮಂತ್ರೈಃ (ಅನ್ಯೇಷು ದೇವೇಷು ಪಂಚತತ್ತ್ವಮಂತ್ರೈಃ) ದ್ವಾವಿಂಶತ್ಯಾವೃತ್ತ್ಯಾ ದಶೋತ್ತರ ಶತವಾರ ಮಾಜ್ಯೇನ ಆಪೋಹಿಷ್ಠಾದಿತಿಸೃಭಿಃ ಪಂಚವಾರುಣೀಭಿಃ ವ್ಯಾಹೃತಿಭಿಶ್ಚೈಕೈಕವಾರಮಾಜ್ಯೇನ ಮೂಲಮಂತ್ರೇಣ ಸಮಿದಾಜ್ಯ ಚರ್ವಾಜ್ಯ ದ್ರವ್ಯೈಃ ಯಥಾ ಸಂಖ್ಯಯಾ ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಚರುಶೇಷೇಣಾಗ್ನಿಂ ಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷ್ಯೇ–

ಪಾಶಹಸ್ತಾಯ ವಿದ್ಮಹೇ ಜಲಾಧೀಶಾಯ ಧೀಮಹಿ । ತನ್ನೋ ವರುಣಃ ಪ್ರಚೋದಯಾತ್ ॥ ಇತಿ ವರುಣಗಾಯತ್ರೀ ॥

* * * *

## ತೀರ್ಥಸ್ನಾನ ವಿಧಿಃ

ತೀರ್ಥಕ್ಕೆ ಪುಣ್ಯಾಹವನ್ನು ಮಾಡಿ, ಅಲ್ಲಿ ತೀರ್ಥದ ಸಮೀಪದಲ್ಲಿ ಭದ್ರಪೀಠವನ್ನಿರಿಸಿ, ದೇವರನ್ನು ಅಲ್ಲಿ ತೀರ್ಥಕ್ಕೆ ಸಮ್ಮುಖವಾಗಿ ಇರಿಸಬೇಕು. ತಾನು ಸ್ನಾನ ಮಾಡಿ ತರ್ಪಣವನ್ನು ಬಿಟ್ಟು ಅಲ್ಲಿ ಕುಳಿತುಕೊಂಡು ದೇಹಶುದ್ಧಿಯೇ ಮೊದಲಾದುವನ್ನು ಮಾಡಿ ಪೀಠವನ್ನು ಪೂಜಿಸಿ ಮೂರ್ತಿಯನ್ನು ಭಾವಿಸಿ ಆವಾಹಿಸಿ ಸಕಲೀಕರಣವನ್ನು ಮಾಡಿ ಪುನರಾಚಮನದ ಕೊನೆಯಲ್ಲಿ ತೀರ್ಥವನ್ನು ಶೋಧಿಸಿ ಪೀಠವನ್ನು ಪೂಜಿಸಿ ವರುಣ ಮತ್ತು ತೀರ್ಥವನ್ನು ಆವಾಹಿಸಿ ಪೂಜಿಸಿ ಅರ್ಘ್ಯವನ್ನು ಕೊಟ್ಟು ಪಂಚವಾರುಣ ಹೋಮದ ಸಂಪಾತವನ್ನಾಗಲೀ ಪಂಚತತ್ತ್ವಹೋಮದ ಸಂಪಾತವನ್ನಾಗಲೀ ಸಮರ್ಪಿಸಿ ಪಂಚವಾರುಣ ಮೊದಲಾದುವನ್ನು ಜಪಿಸಿ ತಾಲತ್ರಯ ಮೊದಲಾದುವುಗಳಿಂದ ರಕ್ಷಿಸಬೇಕು. ಪುನಃ ದೇವರಿಗೆ ಪಾದ್ಯ ತ್ರಯವನ್ನು ಕೊಟ್ಟು ದೇವರಿಂದ ಕೂಡಿ ನೀರಿನ ಮಧ್ಯದಲ್ಲಿ ಹೋಗಿ ಕರ್ಮಬಿಂಬವನ್ನು ಕೆಳಮುಖನಾಗಿ ಮಾಡಿ ಪಂಚತತ್ತ್ವಗಳನ್ನು ಹೇಳಿ ಮೂರಾವರ್ತಿ ಮುಳುಗಬೇಕು. ಪುನಃ ಅಲ್ಲೇ ಪೀಠದಲ್ಲಿ ದೇವರನ್ನಿರಿಸಿ ಆಚಾರ್ಯನು ತಾನು ಕಾಲುಗಳನ್ನು ತೊಳೆದು ಆಚಮನ ಮಾಡಿ ಆಪೋಹಿಷ್ಠಾ ಮೊದಲಾದುವುಗಳಿಂದ ಪ್ರೋಕ್ಷಿಸಿ ದೇವರಿಗೆ ಪಾದ್ಯಾದಿ ಮೂರನ್ನು ಕೊಟ್ಟಾಗಲೀ ಅದರ ಸಮೀಪದಲ್ಲಿ ಪುಡಿ (ಚೂರ್ಣ) ಮೊದಲಾದುವನ್ನು ಆಪೋಹಿಷ್ಠಾ ಮೊದಲಾದುವುಗಳಿಂದ ಪುಣ್ಯಾಹವನ್ನು ಮಾಡಿ ಅರಶಿಣದ ಪುಡಿಗೆ ಶೋಷಣಾದಿಗಳನ್ನು ಮಾಡಿ ಮೂಲದಿಂದ ಪೂಜಿಸಿ ತಲೆಯಿಂದ ಪಾದ ಪರ್ಯಂತವಾಗಿ ಹಿಂದೆ ಮಾಡಿದಂತೆ ಬಳಿದು ಇನ್ನೊಮ್ಮೆ ದೇವರಿಂದ ಕೂಡಿ ನಾಭಿಪರ್ಯಂತವಾದ ನೀರಿನಲ್ಲಿ ನಿಂತು ನೀರಿಗಭಿಮುಖವಾಗಿ ಉತ್ಸವಮೂರ್ತಿಯನ್ನು ಹಿಡಿದುಕೊಂಡು 'ಋತಂ ಚ ಸತ್ಯಂ ಚ' ಮೊದಲಾದುವುಗಳಿಂದ ಪ್ರಾಣಾಯಾಮವನ್ನು ಮಾಡಿ ಅಘಮರ್ಷಣ (ಪಾಪದ ತೊಳೆಯುವಿಕೆ)ವನ್ನು ಭಾವಿಸಿ ತೀರ್ಥದಲ್ಲಿ ಸ್ನಾನ ಮಾಡಿಸಬೇಕು. ಮೂರಾವರ್ತಿ ಮುಳುಗಿಸಬೇಕು. ಅಲ್ಲಿಗೆ ಸರಿಹೊಂದುವ ತೀರ್ಥದಾನಾದಿಗಳನ್ನು ಎಲ್ಲರಿಗೂ ಮಾಡಿ ಕಾಲುಗಳನ್ನು ತೊಳೆದು ಆಚಮನವನ್ನು ಮಾಡಿ ಪ್ರಸನ್ನಗೊಳಿಸಿ, ದೇವರಿಗೆ ವಸ್ತ್ರ ಮೊದಲಾಗಿ ಭೂಷಣಪರ್ಯಂತವಾಗಿ ಕೊಟ್ಟು ದೇವರನ್ನು ಕ್ರಮವತ್ತಾಗಿ ಪೂಜಿಸಿ ನೈವೇದ್ಯ ಮಾಡಿ ವೈಶ್ವದೇವ ಬಲಿಯನ್ನೂ ಮಾಡಿ, ಕಾಲುಗಳನ್ನು ತೊಳೆದು ನೈವೇದ್ಯವನ್ನು ವಿಸರ್ಜಿಸಿ ಗಂಡೂಷ ಮೊದಲಾದುವನ್ನು ಕೊಟ್ಟು ಪ್ರಸನ್ನಪೂಜೆಯನ್ನು ಮಾಡಿ ಬ್ರಹ್ಮಾರ್ಪಣವನ್ನು ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ–

**ತೀರ್ಥೇಽಸ್ಮಿನ್ಪಾವನೇ ಪುಣ್ಯೇ ಸ್ನಾತೋಽಸಿ ಪರಮೇಶ್ವರ ।**
**ಅತಸ್ತ್ವಮನುಗೃಹ್ಣೀಷ್ವ ಸ್ವಸ್ಥಾನೋಪಾಶ್ರಯೇಣ ನಃ ॥**

ಹೀಗೆ ವಿಜ್ಞಾಪಿಸಿಕೊಳ್ಳಬೇಕು. ವಿಷ್ಣು ಮೊದಲಾದ ದೇವತೆಗಳಲ್ಲಿ ಪುರುಷೋತ್ತಮ ಗಣನಾಯಕ ಮೊದಲಾದ ಸಂಬುದ್ಧ್ಯಂತ ಮಂತ್ರದಿಂದ ವಿನಂತಿಸಿಕೊಂಡು ತೀರ್ಥವನ್ನು ದೇವರಲ್ಲಿ ಉದ್ವಾಸನೆ ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ ನೀರಾಜನವನ್ನು ಮಾಡಿ ಅರ್ಘ್ಯವನ್ನು ಕೊಟ್ಟು 'ಉತ್ತಿಷ್ಠಬ್ರಹ್ಮಣಸ್ಪತೇ' ಹೀಗೆ ಮೇಲೆತ್ತಿ ಹಿಂದಿನಂತೆ ನಿಜವಾಹನದಲ್ಲಿ ದೇವರನ್ನಿರಿಸಿ ಬೇಗನೇ ದೇವಾಲಯಕ್ಕೆ ಬಂದು ಅದೇ ದಿನದಲ್ಲಿ ಮೂಲವಿಗ್ರಹದಲ್ಲಿ ಸೇರಿಸಬೇಕು. ಅಲ್ಲಿ ಕ್ಷೇತ್ರಪಾಲನ ಬಲಿಯನ್ನು ಕೊಟ್ಟು(ವಿಕಲ್ಪ) ತಾನು ಪರಿಶುದ್ಧನಾಗಿ ಗರ್ಭಗೃಹವನ್ನು ಹೋಗಿ ಅಲ್ಲಿ ಕುಳಿತು ದೇಹಶುದ್ಧ್ಯಾದಿಗಳನ್ನು ಮಾಡಿ ಎರಡೂ ಪಕ್ಷದಲ್ಲಿ ಮೂಲಬಿಂಬಕ್ಕೆ ಅಭಿಷೇಕಾದಿಗಳನ್ನು ಮಾಡಿ ಇದುರಿನಲ್ಲಿ ಭದ್ರಪೀಠವನ್ನಿರಿಸಿ ಅಲ್ಲಿ ಪೀಠಪೂಜೆಯನ್ನು ಮಾಡಿ ಕರ್ಮಬಿಂಬವನ್ನು ಅಲ್ಲಿ ಇಡಬೇಕು.

ಮೂಲಬಿಂಬದ ಪೀಠಪೂಜಾದಿಗಳನ್ನು ಮಾಡಿ ಮೂರ್ತಿಯನ್ನು ಸಂಕಲ್ಪಿಸಿ ನೀರಾಜನೆಯನ್ನು ಮಾಡಿ ಹಿಂದಿನಂತೆ ಕರ್ಮಬಿಂಬದಿಂದ ಮೂಲವಿಗ್ರಹದಲ್ಲಿ ದೇವರನ್ನು ಆವಾಹಿಸಿ ಪ್ರಣವಪ್ರಾಣನ್ಯಾಸಾದಿ ಎಲ್ಲವನ್ನು ಮಾಡಿ ತನ್ನ ಹೃದಯದಿಂದ ಆವಾಹಿಸಿ ಸಕಲೀಕರಣ ಮಾಡಿ ಪೂಜಿಸಿ ನೈವೇದ್ಯವನ್ನು ಮಾಡಿ ಪ್ರಸನ್ನಪೂಜೆಯನ್ನು ಮಾಡಬೇಕು. ದೇವರಿಂದ ದೇವರ ಸ್ಪರ್ಶವಾಗಿದ್ದರೆ ಮೂಲಬಿಂಬದಲ್ಲಿ ಸೇರಿಸಿ, ಪುನಃ ಪ್ರಾಣಾಪಾನ ಮೊದಲಾದುವುಗಳಿಂದ ಪುರುಷಸೂಕ್ತ ಮೊದಲಾದುವುಗಳಿಂದ ದೇವರನ್ನು ಅಭಿಷೇಕ ಮಾಡಿ ಮನಸ್ಸಿನಿಂದಲೇ ಕ್ಷಾಳನ ಮೊದಲಾದುವನ್ನು ಸ್ಮರಿಸಿ ಅಭಿಷೇಕ ಮಾಡಿ ಇನ್ನೊಮ್ಮೆ ಪೀಠಪೂಜೆಯನ್ನು ಮಾಡಿ ಆವಾಹಿಸಿ ಪೂಜಿಸಬೇಕು. ಆ ಸಮಯದಲ್ಲಿ ಅಲ್ಲಿ ಅಭಿಷೇಕ ಸಮಯದಲ್ಲಿ ಪೂಜಿಸಲ್ಪಟ್ಟ ಕಲಶಗಳಿಂದ ದೇವರನ್ನು ಅಭಿಷೇಕಿಸಿ ಪೂಜಿಸಿ, ಶ್ರೀಭೂತಬಲಿಯನ್ನು ಮಾಡಬೇಕು. ಅಥವಾ ಮತ್ತೊಂದು (ಮರು) ದಿವಸದಲ್ಲಿ ಪೂಜಿಸಲ್ಪಟ್ಟ ಕಲಶದಿಂದ ದ್ರವ್ಯಕಲಶದಿಂದಾಗಲೀ ದೇವರನ್ನು ಅಭಿಷೇಕ ಮಾಡಿಸಿ ಪೂಜಿಸಿ ಶ್ರೀಭೂತ ಬಲಿಯನ್ನು ಮಾಡಬೇಕು. ಅಥವಾ ಹಿಂದೆ ಹೇಳಿದ ಕ್ರಮದಿಂದ ದ್ರವ್ಯಕಲಶಗಳಿಂದ ದೇವರನ್ನು ಅಭಿಷೇಕಿಸಿ, ಪೂಜಿಸಿ ಶ್ರೀಭೂತಬಲಿಯನ್ನು ಮಾಡಬೇಕು.

* * * *

## ನೈವೇದ್ಯಂ

ದೇವರ ಮುಂಭಾಗದಲ್ಲಿ ಸ್ಥಳವನ್ನು ಶುದ್ಧಮಾಡಿ ಅಲ್ಲಿ ಪರಿಶುದ್ಧವಾದ ಲೋಹದ ಪಾತ್ರೆಯನ್ನಿರಿಸಿ ಉಪಸ್ತರಣವನ್ನು ಮಾಡಿ ಪರಿಶುದ್ಧವಾದ ಹವಿಸ್ಸನ್ನು ಸಂಪಾದಿಸಿ ನಾಳಿಕೇರ, ಬಾಳೆಹಣ್ಣು, ಬೆಲ್ಲ ಮೊದಲಾದುವನ್ನು ಅದರ ಮೇಲಿರಿಸಿ, ತುಪ್ಪವನ್ನು ಅಭಿಘಾರ ಮಾಡಬೇಕು. ಆಯಾಯ ನಿಜಾಸ್ತ್ರಮಂತ್ರದಿಂದ ಪ್ರೋಕ್ಷಿಸಿ, ಸಂರಕ್ಷಿಸಿ, ವಾಯುಬೀಜ (ಯಂ)ವನ್ನು ಜಪಿಸಿ, ನೀರಿನಿಂದ ಪ್ರೋಕ್ಷಿಸಿ, ನೈವೇದ್ಯಾನ್ನವನ್ನು ಶೋಧಿಸಿ ಬಲಗೈಯಲ್ಲಿ ಅಗ್ನಿಬೀಜವನ್ನು (ರಂ) ಬರೆದು ಆ ಕೈಯಿಂದ ದಹಿಸಿ, ಎಡಗೈಯಿಂದ ಅಮೃತಬೀಜವನ್ನು (ವಂ) ಬರೆದು ಆ ಕೈಯಿಂದ ಹವಿಸ್ಸನ್ನು ಒದ್ದೆಯಾಗಿಸಿ, ಮೂಲಮಂತ್ರವನ್ನು ಎಂಟಾವರ್ತಿ ಜಪಿಸಿ, ಮಂತ್ರದಿಂದ ಅಮೃತಮಯವಾಗಿ ಭಾವಿಸಿ ಧೇನು ಮುದ್ರೆಯನ್ನು ತೋರಿಸಿ, ಅಮೃತಮಯವಾಗಿ ಭಾವಿಸಿ ಪೂಜಿಸಿ (ಲಂ ಪೃಥಿವ್ಯಾತ್ಮನಾ– ಇತ್ಯಾದಿ) ಮಲ, ಧಾತು, ರಸಾಂಶವೆಂದು ವಿಭಾಗಿಸಿ ಹೂವಿನಿಂದ ಆರಾಧಿಸಿ, ದೇವರಿಗೆ ನೈವೇದ್ಯ ತೆಗೆದುಕೊಳ್ಳುತ್ತಿರುವಂತೆ ಭಾವಿಸಬೇಕು. ಗುರುಗಳು ಹೇಳಿದ ಕ್ರಮದಂತೆ ಪರಿಷೇಕ ಮೊದಲಾದುವನ್ನು ಮಾಡಿ ಎರಡು ಕೈಗಳಿಂದ ಹೂವುಗಳಿಂದ ದೇವರ ನಾಲಿಗೆಯೆಂಬ ಜ್ವಾಲೆಯಲ್ಲಿ ನೈವೇದ್ಯವನ್ನು ಸಮರ್ಪಿಸಿ, ನಿವೇದನ ಮಂತ್ರದಿಂದ ಎರಡು ಕೈಗಳಿಂದ ನಿವೇದಿಸಿ, ನಿವೇದ್ಯಾಮೃತವನ್ನು ದೇವರ ಬಾಯಿಯಲ್ಲಿ ಸಮರ್ಪಿಸಬೇಕು. 'ನಿವೇದಯಾಮಿ ಭವತೇಜುಷಾಣೇದಂಹವಿರ್ಹರೇ' ಹೀಗೆ ವಿಷ್ಣುವಿನಲ್ಲಿ ನಿವೇದನ ಮಂತ್ರವು. ಶಿವ ಮೊದಲಾದವರಲ್ಲಿ ಹರದುರ್ಗೇ ವಿನಾಯಕ ಹೀಗೆ ಸೇರಿಸಬೇಕು. ಪುನಃ ಎಡಗೈಯಿಂದ ಗ್ರಾಸಮುದ್ರೆಯನ್ನು ತೋರಿಸಿ, ಪ್ರಾಣಾಯಸ್ವಾಹಾ– ಮೊದಲಾದ ಮಂತ್ರಗಳಿಂದ ಬಲದ ಕೈಯಿಂದ ಪ್ರಾಣಾದಿಮುದ್ರೆಗಳನ್ನು ತೋರಿಸುತ್ತಾ ಅನ್ನದಿಂದ ಮಲಾಂಶವನ್ನು ಧಾತ್ವಂಶವನ್ನೂ ಬಿಟ್ಟು ರಸಾಂಶವನ್ನು ದೇವರ ಬಾಯಿಯ ಜ್ವಾಲೆಯಲ್ಲಿ ಸಮರ್ಪಿಸಬೇಕು. ಪುನಃ ಕೈಗಳೆರಡರ ಹೆಬ್ಬೆರಳುಗಳಿಂದ ಅನಾಮಿಕಗಳೆರಡು ಸ್ಪರ್ಶಿಸಿ 'ವಂ ಅಬಾತ್ಮನಾ' ಮೊದಲಾಗಿ ಜಪಿಸಿ ನೈವೇದ್ಯಮುದ್ರೆಯನ್ನು ಪ್ರದರ್ಶಿಸಬೇಕು. ಹೀಗೆ ರಸವನ್ನು ಸಮರ್ಪಿಸಿ ಪುನಃ ತೇಜಸ್ಸಿನ (ಅಮೃತ) ಸುಧಾಂಶವನ್ನು ಅಗ್ನಿಯಲ್ಲಿ ಸಮರ್ಪಿಸಬೇಕು. ಹೀಗೆ ನೈವೇದ್ಯಸಾರ ರಸಭಾಗವನ್ನು ಸಮರ್ಪಿಸುವಿಕೆಯಿಂದುಂಟಾದ ಸುಧಾಂಶ ಅಗ್ನ್ಯಾತ್ಮಕ ದೇವನಲ್ಲಿ ಸಮರ್ಪಿಸಿ ಧೇನುಮುದ್ರೆಯನ್ನು ತೋರಿಸಿ ಅಂಜಲಿ ಮುದ್ರೆಯನ್ನು ಮಾಡಿ ನೈವೇದ್ಯದ ಸಾರ ಭೂತವಾದ ರಸಸಮರ್ಪಣೆಯಿಂದುಂಟಾದ ಅಮೃತಮಯವಾದ ಸುಧಾಂಶುವಿನಿಂದ ಪುನಃ ಪುನಃ ಹೆಚ್ಚಿದ ಅಗ್ನ್ಯಾತ್ಮಕನಾದ ದೇವನನ್ನು ಹೃನ್ಮೂರ್ತಿಯ ದೇವರನ್ನು ಧ್ಯಾನಿಸುತ್ತಾ ಆಯಾಯ ನಿಜ ಮೂಲಮಂತ್ರವನ್ನು ಸಾಧ್ಯವಾದಷ್ಟು ಜಪಿಸಿ ನಿಜಾಸ್ತ್ರದಿಂದ ಸಂರಕ್ಷಿಸಿ ಹೊರಗೆ ಹೋಗಿ ಬಾಗಿಲನ್ನು ಮುಚ್ಚಿ ದೇವಾತ್ಮಕ ಅಗ್ನಿಯಲ್ಲಿ ಉಳಿದ ಹವಿಸ್ಸಿನಿಂದ ವೈಶ್ವದೇವವನ್ನು ಮಾಡಬೇಕು.

* * * *

## ಪೂಜಾಹೋಮಃ

ಅಲ್ಲಿ ಅಡಿಗೆ ಮನೆಯಲ್ಲಿ ಯಾವುದಾದರೂ ಶುದ್ಧ ಪ್ರದೇಶದಲ್ಲಿ ಮಂಟಪವನ್ನು ಲೇಪಿಸಿ ಅಗ್ನಿಯನ್ನಿರಿಸಿ, ಪರಿಸಮೂಹನ ಪರಿಸ್ತರಣ ಪರ್ಯುಕ್ಷಣ ಮೊದಲಾದುವನ್ನು ಮಾಡಿ ಪೀಠಪೂಜೆಯನ್ನು ಮಾಡಿ ಪ್ರಣವ, ಉಪಚಾರ, ಮೂಲಗಳಿಂದ ಆವಾಹಿಸಿ, ಆರಾಧಿಸಿ, ಲಿಪಿನ್ಯಾಸ ಮೊದಲಾದುವುಗಳಿಂದ ಸಕಲೀಕರಣವನ್ನು ಮಾಡಿ ಉಪಹಾರಗಳನ್ನು ಸಮರ್ಪಿಸಿ ಪರಿವಾರ ಸಹಿತವಾಗಿ ಪೂಜಿಸಿ, ನೈವೇದ್ಯದ ಸಮಯದಲ್ಲಿ ಹೀಗೆ ಹೋಮಿಸಬೇಕು. ಮೊದಲು ಪ್ರಣವ ವ್ಯಾಹೃತಿ ಪೀಠಮಂತ್ರಗಳಿಂದ ಒಂದೊಂದಾವರ್ತಿ ಹೋಮಿಸಿ, ಪ್ರಣವ ಉಪಚಾರಗಳಿಂದ ಹೋಮಿಸಿ, ನಿಜ ನಿಜ ಮೂಲಮಂತ್ರದಿಂದ ನೂರೆಂಟು (ಇಪ್ಪತ್ತೆಂಟು ಯಾ ಎಂಟು) ಹೋಮಿಸಿ, ಅಂಗಮಂತ್ರಗಳಿಂದ ಹತ್ತಂಶವನ್ನು ಹೋಮಿಸಿ, ಸಂಪೂರ್ಣ ಪ್ರಜಾಮಂತ್ರಗಳಿಂದ ಪರಿವಾರ ಮಂತ್ರಗಳಿಂದ (ಆವರಣದಲ್ಲಿ ಹೇಳಿದುದು) ವ್ಯಾಹೃತಿ, ಪ್ರಣವಗಳಿಂದ ಒಂದೊಂದು ಬಾರಿ ಹೋಮಿಸಬೇಕು. ಪುನಃ ಗಂಡೂಷ ಮೊದಲಾದುವನ್ನು ಕೊಟ್ಟು ಪ್ರಸನ್ನಪೂಜೆಯನ್ನು ಮಾಡಿ ವ್ಯಾಪಿಸಿ, ಲಯಾಂಗವನ್ನು ಮಾಡಿ ಅಗ್ನಿಯನ್ನು ತನ್ನಲ್ಲಿ ಉದ್ವಾಸನೆಯನ್ನು

ಮಾಡಿ ಪರಿಸಮೂಹನ ಮೊದಲಾದುವನ್ನು ಮಾಡಿ ಅಗ್ನಿಯನ್ನು ವಿಸರ್ಜಿಸಬೇಕು. ಆಗ್ನೇಯ ಕೋಣದಲ್ಲಿಯೂ ವಾಯವ್ಯದಲ್ಲಿ ದ್ವಾರ ಸಮೀಪದಲ್ಲಿರುವ ಬಲಿಪೀಠದಲ್ಲಿ ಪರಿಷದ್ಗಳಿಗೆ ಬಲಿಯನ್ನು ಕೊಟ್ಟು ನಮಸ್ಕರಿಸಿ ಕಾಲುಗಳನ್ನು ತೊಳೆದು ಆಚಮನವನ್ನು ಮಾಡಿ ಬಾಗಿಲನ್ನು ಹೋಗಿ ದ್ವಾರಪಾಲಕರನ್ನು ನಮಸ್ಕರಿಸಿ, ಒಳಗೆ ಪ್ರವೇಶಿಸಬೇಕು. ಪುನಃ ದೇವರನ್ನು ನಮಸ್ಕರಿಸಿ, ಅಮೃತಪಾನೀಯವನ್ನು ಕೊಟ್ಟು ಕೈಗಳೆರಡರಿಂದ ಹೂವುಗಳಿಂದ ನೈವೇದ್ಯದಲ್ಲಿರುವ ಸಂಪೂರ್ಣ ರಸವನ್ನು ಪ್ರಕೃತಿ ಮುಖವೆಂಬ ಜ್ವಾಲೆಯ ದೇವರ ಮುಖದಲ್ಲಿ ಆನಂದ ಸ್ವರೂಪನಾದ ಅದ್ವಯಬ್ರಮ್ಹನಲ್ಲಿ ಸಮರ್ಪಿಸಿ 'ಅಮೃತಾಪಿಧಾನಮಸಿ' ಎಂದು ನೀರನ್ನು ಕೊಟ್ಟು ಮಲಾಂಶ ಮೊದಲಾಗಿ ಹೆಚ್ಚಿನ ಸಂಪೂರ್ಣವಾದ ಆ ಅನ್ನವನ್ನು ವಿಷ್ವಕ್ಸೇನ ಮೊದಲಾದ ನಿರ್ಮಾಲ್ಯಧಾರಿಗಳ ವಶಕ್ಕೆ ಒಪ್ಪಿಸಬೇಕು. ರಸಭಾಗದಿಂದ ಹೊರತಾದ ಅದನ್ನು ನಿರ್ಮಾಲ್ಯಧಾರಿಗೆ ಅರ್ಪಿಸಿ ಹೊರಗೆ ಬಿಟ್ಟು ಇದುರಿನಲ್ಲಿ ಸ್ಥಳವನ್ನು ಶುದ್ಧಿಗೊಳಿಸಿ ದೇವರಿಗೆ ಗಂಡೂಷವನ್ನೂ ಹಲ್ಲಿನ ಶೋಧನೆಯನ್ನೂ , ಗಂಡೂಷವನ್ನೂ ಜಿಹ್ವಾ(ನಾಲಿಗೆ) ಶೋಧನೆಯನ್ನೂ ಗಂಡೂಷವನ್ನೂ ಕೈತೊಳೆಯುವಿಕೆಯನ್ನೂ (ಹಸ್ತಶೋಧನಂ) ಮುಖ (ಬಾಯಿ) ತೊಳೆಯುವಿಕೆಯನ್ನೂ, ಪಾದ್ಯ ಮೊದಲಾದ ಮೂರನ್ನು ಅರ್ಘ್ಯಾದಿ ಮೂರನ್ನಾಗಲೀ ಕೊಟ್ಟು ನಂತರ ತಾಂಬೂಲ ಮೊದಲಾದುವನ್ನು ಪುನಃ ಪಾದ್ಯಾದಿಯೂ ಅರ್ಘ್ಯಾದಿ ಮೂರನ್ನು ಕೊಡಬೇಕು. ದೇವರಿಗೆ ಪ್ರಸನ್ನ ಪೂಜೆಯನ್ನು ಮಾಡಿ ಅಪೂಪ (ಅಪ್ಪ ಯಾ ದೋಸೆ) ಮೊದಲಾದುವನ್ನು ನೈವೇದ್ಯ ಮಾಡಿ ಸಂತೋಷಗೊಳಿಸಬೇಕು. ಪುನಃ ನೀರು ಗಂಧ ಹೂವುಗಳಿಂದ ದೇವರನ್ನು ಪೂಜಿಸಿ ದೇವನನ್ನು ಪ್ರಸನ್ನನಾಗಿಸಲು ಭಕ್ತಿಯಿಂದ ವೇದಗಳಲ್ಲಿ ಹಾಗೂ ಆಗಮಗಳಲ್ಲಿ ಹೇಳಿದ ಮಂತ್ರಗಳಿಂದ ಪುಷ್ಪಾಂಜಲಿಯನ್ನು ಮಾಡಬೇಕು. ಗುರುಗಳಿಗೆ ಇದು– ಓಂ ನಮೋ ನಾರಾಯಣಾಯ. ಪಿತೃಗಳಿಗೆ ಇದು– ಮಾತೃಭ್ಯ ಇದಂ, ಆತ್ಮನೇ ಭ್ರಾತೃಭ್ಯಃ ಕುಟುಂಬಿನ್ಯೈ, ಪುತ್ರೇಭ್ಯೋ, ಜ್ಞಾತಿಭ್ಯಃ, ಸಾಧ್ಯೇಭ್ಯ ಇದಂ, ಮಹೀತಲವಾಸಿಭ್ಯ ಇದಂ, ತ್ರಿಭುವನವಾಸಿಭ್ಯಂ ಇದಂ– ಎಂದು ಆಯಾಯ ನಿಜಮೂಲ ಮಂತ್ರವನ್ನು ಹೇಳಿ ಪ್ರತ್ಯೇಕ ಪ್ರತ್ಯೇಕವಾಗಿ ಪುಷ್ಪಾಂಜಲಿಯನ್ನು ಮಾಡಬೇಕು. 'ಪ್ರೀಣಾತುಭಗವಾನ್' ಮೊದಲಾದವುಗಳಿಂದ ನೀರಿನಿಂದ ಕೂಡಿದ ಹೂವಿನಿಂದ ಪೂಜಿಸಿ, ಕರ್ಮವನ್ನು ಸಮರ್ಪಿಸವೇಕು. ಶ್ರೀಪಾದವನ್ನು ಸ್ಪರ್ಶಿಸಿ ಮೂಲಮಂತ್ರವನ್ನು ಸಾವಿರ ಸಂಖ್ಯೆಯಲ್ಲಿ ಜಪಿಸಿ ಗುಹ್ಯಾತಿಗುಹ್ಯಗೋಪ್ತಾ ಮೊದಲಾದುವುಗಳಿಂದ ನೀರಿನಿಂದ ಕೂಡಿದ ಹೂವಿನಿಂದ ಆರಾಧಿಸಿ, ಜಪವನ್ನು ಸಮರ್ಪಿಸಬೇಕು. 'ಇತಃ ಪೂರ್ವಂ ಪ್ರಾಣಬುದ್ಧಿದೇಹಧರ್ಮಾಧಿಕಾರತಃ' ಮೊದಲಾದುವುಗಳಿಂದ ಮಾಂ ಮದೀಯಂ ಚ ಅಸ್ಮತ್ಸ್ವಾಮಿನೇ ನಾರಾಯಣಾಯ ಸಮರ್ಪಯಾಮಿ– ಇದಂ ತತ್ಸದಿತ್ಯುಕ್ತ್ವಾ ನೀರಿನಿಂದ ಕೂಡಿ ಹೂವನ್ನು ದೇವರ ಪಾದ ಮೂಲದಲ್ಲಿ ಆರಾಧಿಸಿ ಬ್ರಹ್ಮಾರ್ಪಣವನ್ನು ಮಾಡಿ ನಮ್ರತೆಯಿಂದ ಪ್ರಣವ, ಗಾಯತ್ರಿ ವೇದ ಮಂತ್ರಗಳನ್ನು ಜಪಿಸಿ ದೇವರನ್ನು ಸಂತೋಷಗೊಳಿಸಿ ಪ್ರಸನ್ನಾರ್ಘ್ಯವನ್ನು ಕೊಡಬೇಕು. ತನ್ನ ಪುಣ್ಯ ಕರ್ಮದ ಫಲವನ್ನು ಹೃನ್ಮೂರ್ತಿಯಾದ ದೇವರ ಕೈಯಿಂದುಂಟಾದ ಅಮೃತಕಲಶವನ್ನು ಭಾವಿಸಿ ದೇವರ ಶ್ರೀಪಾದದ ಸಮೀಪದಲ್ಲಿ ಶಂಖವನ್ನು ಹಿಡಿದು ದೇವರ ಪಾದದಿಂದ ಬಿದ್ದುದೆಂದು ಭಾವಿಸಿ ತೀರ್ಥಜಲವನ್ನು ಆವಾಹಿಸಬೇಕು. ಬಲದ ಕೈಯಲ್ಲಿ ಹಾಕಿಕೊಂಡ ನೀರಿನಿಂದ ಇದಿರು ಭಾಗದಲ್ಲಿ ಗುರುಗಳನ್ನೂ ಭಾವಿಸಿ ಪ್ರೋಕ್ಷಿಸಬೇಕು. ಈಶಾನ್ಯದಲ್ಲಿ ದೇವತೆಗಳನ್ನೂ, ನೈರ್ಋತ್ಯದಲ್ಲಿ ರಾಕ್ಷಸರನ್ನೂ ನೆಲದಲ್ಲಿ ಮುಂಭಾಗದಲ್ಲಿ ಪಿತೃಗಳನ್ನೂ ಭಾವಿಸಿ, ಪ್ರೋಕ್ಷಿಸಿ, ಪುನಃ ಮುಂಭಾಗದಲ್ಲಿ ಸಾಧ್ಯರನ್ನೂ, ಬೇರೆ ಭಕ್ತಿಯಿಂದ ನಮಸ್ಕಾರ ಮುದ್ರೆಯಿಂದ ಕೂಡಿದವರನ್ನೂ ಪ್ರೋಕ್ಷಿಸಬೇಕು. ಪುನಃ 'ಮಾನ ಏಕಸ್ಮಿನ್' ಯಾ 'ಈಶಿರೇ ಭುವನಸ್ಯ' ಮೊದಲಾದುವುಗಳಿಂದ ನಮಸ್ಕರಿಸಿ, ತಿಳಿದು, ತಿಳಿಯದೆಯೂ ಮಾಡಿದ ದುರಿತವನ್ನು ಶುದ್ಧ ಮಾಡಿ ಪ್ರಣವದಿಂದ ಹೂವಿನಿಂದ ಪೂಜಿಸಿ ಅವಸಾನೀಯಾರ್ಘ್ಯವೆಂದು ನೀರನ್ನು ಕೊಟ್ಟು ವ್ಯಾಪಿಸಿ ಲಯಾಂಗವನ್ನು ಮಾಡಿ ರಕ್ಷೆಯನ್ನು ಮಾಡಬೇಕು. ಪ್ರಸಾದದ ಹೂವನ್ನು ತನ್ನ ತಲೆಯಲ್ಲಿಟ್ಟು ಪ್ರಾಣಾಯಾಮವನ್ನು ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ ಮಾನಸ ಪೂಜೆಯನ್ನು ಮಾಡಿ ಯಾವಾಗಲೂ ದೇವರನ್ನು ಸ್ಮರಿಸುತ್ತಾ ವ್ಯವಹರಿಸಬೇಕು.

* * * *

## ಚತುಃಶುದ್ಧಿಃ

ಮುಂಭಾಗದಲ್ಲಿ ನಾಲ್ಕು ಸ್ವಸ್ತಿಕಗಳನ್ನು ಬರೆದು ಬತ್ತಗಳಿಂದ ಪೀಠವನ್ನು ಮಾಡಿ ಆಗ್ನೇಯಾದಿ ಖಂಡಗಳಲ್ಲಿ ನಾಲ್ಕು ಬಿಂದಿಗೆ (ಪಾತ್ರೆ)ಗಳನ್ನು ಕೆಳಮುಖನಾಗಿ ಇರಿಸಿ ಅಲ್ಲಿ ಕುಳಿತುಕೊಂಡು ದೇಹಶುದ್ಧಿ ಮೊದಲಾದುವನ್ನು ಮಾಡಿ ಗಣಪತಿಯನ್ನು ಪೂಜಿಸಿ ನೈವೇದ್ಯ ಮಾಡಿ ಪುಷ್ಪಾಂಜಲಿಯನ್ನು ಮಾಡಿ ಪೀಠವನ್ನು ಪೂಜಿಸಿ ಪಾತ್ರಗಳಿಗೆ ಶೋಷಣ ಮೊದಲಾದುವನ್ನು ಮಾಡಿ, ದರ್ಭವಿನ್ಯಾಸ ಮೊದಲಾದುವನ್ನು ಮಾಡಿ ಮೇಲ್ಮುಖನಾಗಿ ಇರಿಸಿ, ಕೆಳಮುಖನಾಗಿ ಕೂರ್ಚನ್ನು ಇಟ್ಟು ಆಗ್ನೇಯ ದಿಕ್ಕಿನ ಪಾತ್ರೆಯಲ್ಲಿ ದರ್ಭೆಯ ಚೂರು, ಹುತ್ತದ ಮಣ್ಣು, ಹಾಲು ಸೊನೆಯ ಮರದ ತೊಪ್ಪೆಗಳಿಂದ ತುಂಬಿಸಿ, ನೈರ್ಋತ್ಯ ದಿಕ್ಕಿನ ಪಾತ್ರೆಯಲ್ಲಿ ಅಕ್ಷತೆ, ಪತ್ರ ಪುಷ್ಪಗಳಿಂದ ಕೂಡಿದ ನೀರುಗಳಿಂದ ತುಂಬಿಸಿ, ವಾಯವ್ಯ ಖಂಡದ ಪಾತ್ರೆಯಲ್ಲಿ ಕೂರ್ಚ, ಅಕ್ಷತ, ಪುಷ್ಪ, ಫಲ, ಗಂಧ, ಸ್ವರ್ಣಗಳಿಂದ ಕೂಡಿದ ನೀರುಗಳಿಂದ ತುಂಬಿಸಿ, ಈಶಾನ್ಯ ಖಂಡದ ಪಾತ್ರದಲ್ಲಿ ಹಿಂದೆ ಹೇಳಿದ ಎಲ್ಲಾ ದ್ರವ್ಯಗಳಿಂದ ತುಂಬಿಸಿ ಕ್ರಮದಂತೆ ನಿರ್ವಹಿಸಿ, ಮೂಲಮಂತ್ರದಿಂದ ಪ್ರತ್ಯೇಕವಾಗಿ ಆವಾಹಿಸಿ, ಪೂಜಿಸಿ, ಏನನ್ನಾದರೂ ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಬಟ್ಟೆಯನ್ನು ಹೊದಿಸಿ ರಕ್ಷಿಸಬೇಕು. ಅನಂತರ ಗರ್ಭಗೃಹದಲ್ಲಿ ಕುಳಿತು ಸ್ವಲ್ಪ

ಪೀಠವನ್ನು ಪೂಜಿಸಿ ಆವಾಹಿಸಿ, ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ಆಗ್ನೇಯ ಖಂಡದಲ್ಲಿರುವ ದರ್ಭೆ ಚೂರು ಮಣ್ಣು ತೊಪ್ಪೆಗಳಿಂದ ಪ್ರತ್ಯೇಕವಾಗಿ ಅಮಂತ್ರಕವಾಗಿ (ಸುಮ್ಮನೆ) ಉಜ್ಜಿ ತಿಕ್ಕಿ ನೀರಿನಿಂದ ತೊಳೆದು ಪುನಃ ಸ್ವಲ್ಪ ಪೂಜಿಸಿ, ನೈವೇದ್ಯ ಮಾಡಿ ಸಂತೋಷಗೊಳಿಸಬೇಕು. **ಇದು ಕ್ಷಾಳನ.** ಪುನಃ ಪೀಠವನ್ನು ಪೂಜಿಸಿ, ಆವಾಹಿಸಿ, ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ನಿರ್ಋತಿ ಖಂಡದಲ್ಲಿರುವ ದ್ರವ್ಯಗಳಿಂದ ಅಮಂತ್ರಕವಾಗಿ ಅಭಿಷೇಕ ಮಾಡಿ ಪೂಜೆ ಮೊದಲಾದುವನ್ನು ಮಾಡಬೇಕು. **ಇದು ಪ್ಲಾವನವು.** ಇನ್ನೊಮ್ಮೆ ಕ್ರಮದಂತೆ ಪೀಠಪೂಜೆಯನ್ನು ಮಾಡಿ ಮೂಲಮಂತ್ರದಿಂದಾವಾಹಿಸಿ ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ಹೀಗೆ ಅಭಿಷೇಕ ಮಾಡಿ ನೀರಾಜನವನ್ನು ಮಾಡಿ ವಾಯುಖಂಡದಲ್ಲಿರುವ ದ್ರವ್ಯಗಳಿಂದ ಮೂಲಮಂತ್ರದಿಂದ ಶಾಂತಿಯನ್ನು ಸ್ಮರಿಸುತ್ತಾ ಅಭಿಷೇಕ ಮಾಡಬೇಕು. ಪುನಃ ಪೂಜೆ ಮೊದಲಾದುವನ್ನು ಮಾಡಬೇಕು. **ಇದು ಸ್ನಾನವು.** ಪುನಃ ಕ್ರಮದಂತೆ ಪೀಠಪೂಜೆಯನ್ನು ಮಾಡಿ ಮೂಲಮಂತ್ರದಿಂದಾವಾಹಿಸಿ, ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ಅಭಿಷೇಕಿಸಿ (ವಾರುಣ(ಅಪ್) ಮಂತ್ರ, ಪಾವಮಾನೀ, ಚಿತ್ತಿಸ್ರುಕ್ ಮೊದಲಾಗಿ, ಶೂಲಿನಿ, ಬ್ರಹ್ಮಮಂತ್ರಗಳಿಂದ– ಕೂರ್ಚಾಗ್ರದಿಂದ ಪ್ರೋಕ್ಷಿಸಿ) ಮುಂಭಾಗವನ್ನು ಶುದ್ಧಿಗೊಳಿಸಿ, ಈಶಾನಖಂಡದಲ್ಲಿರುವ ದ್ರವ್ಯವನ್ನಲ್ಲಿರಿಸಿ ಪುಣ್ಯಾಹವನ್ನು ಮಾಡಬೇಕು. ಆ ಉಳಿದ ನೀರಿನಿಂದ ಅಭಿಷೇಕವನ್ನು ಮಾಡಬೇಕು. **ಇದು ಮಾರ್ಜನೆಯು.** ಪುನಃ ದೇವರನ್ನು ಪೂಜಿಸಿ ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಬೇಕು. ಹೀಗೆ ನಾಲ್ಕು ಬಗೆಯ ಶುದ್ಧಿಯು.

* * * *

## ಧಾರಾ

ಹಿಂದೆ ಹೇಳಿದಂತೆ ಎಲ್ಲವನ್ನೂ ಶುದ್ಧಿಗೊಳಿಸಿ, ಈಶಾನ್ಯ ದಿಕ್ಕಿನಲ್ಲಿ ಸ್ವಸ್ತಿಕವನ್ನು ಬರೆದು ಧಾನ್ಯರಾಶಿಯನ್ನಿರಿಸಿ, ದಾರದಿಂದ ಸುತ್ತಲ್ಪಟ್ಟ ದೊಡ್ಡ ಕಟಾರಿಯನ್ನು ಕೆಳಮುಖವಾಗಿರಿಸಿ ಅಲ್ಲಿ ಕುಳಿತು ಸಕಲೀಕರಣವನ್ನು ಮಾಡಿ ಶಂಖಪೂರಣ ಮೊದಲಾದುವನ್ನು ಮಾಡಿ, ಕಟಾರಿಯಲ್ಲಿ ಪೀಠಪೂಜೆಯನ್ನು ಮಾಡಿ ಶೋಷಣ ದಾಹನ ಪ್ಲಾವನ ಕಾಠಿನ್ಯ ಸುಷರೀಕರಣಗಳನ್ನು ಮಾಡಿ, ದರ್ಭವಿನ್ಯಾಸವನ್ನು, ಅಷ್ಟಗಂಧ ಪ್ರೋಕ್ಷಣವನ್ನು ಅಕ್ಷತ ವಿಕಿರಣವನ್ನೂ ಮಾಡಿ ಪೂಜಿಸಿ ಮೇಲ್ಮುಖವಾಗಿ ಮಾಡಿ ಅಲ್ಲಿ ಇರಿಸಿ ಪುಷ್ಪಾಕ್ಷತೆಗಳಿಂದ ಕೂಡಿ ತುದಿಯನ್ನು ಕೆಳಗಾಗಿಸಿ ಕೂರ್ಚನ್ನು ಇರಿಸಿ, ಶಂಖದಲ್ಲಿ ನೀರನ್ನು ತೆಗೆದುಕೊಂಡು ಅಷ್ಟಗಂಧವನ್ನು ಕದಡಿ ಪದ್ಮವನ್ನೂ ಮೂರ್ತಿಯನ್ನೂ ಆವಾಹಿಸಿ ಭಾವಿಸಿ ಮೂಲದಿಂದ ಆವಾಹಿಸಿ ಸಕಲೀಕರಣವನ್ನು ಮಾಡಿ ಸ್ವಲ್ಪ ಪೂಜಿಸಿ ಕಡಾಯಿಯಲ್ಲಿ ಹಾಕಿ ಗಾಳಿಸಲ್ಪಟ್ಟ ನೀರಿನಿಂದ ಕ್ರಮದಂತೆ ತುಂಬಿಸಿ ಪಲ್ಲವ ಚಕ್ರಿಕೆ ಮೊದಲಾದುವನ್ನಿಟ್ಟು ಚಿನ್ನದಿಂದ ಹಾಗೂ ಬೆಳ್ಳಿಯಿಂದ ಸಿದ್ಧಗೊಳಿಸಿದ ಎರಡು ಆಮೆಯನ್ನೂ ಎರಡು ಮೀನನ್ನೂ ಹಾಕಿ ಗಡ್ಡೆ ಹೂವು ಎಲೆಗಳಿಂದ ಕೂಡಿದ ತಾವರೆಯನ್ನು ದಂಟಿನಿಂದ ಕೂಡಿದುದನ್ನೂ ಅದರಲ್ಲಿ ಇಟ್ಟು 'ವಂ ವರುಣಾಯ ನಮಃ' ಹೀಗೆ ವರುಣ ಮೂರ್ತಿಯನ್ನು ಸಂಕಲ್ಪಿಸಿ, ಓಂ ಓಂ ಓಂ

**ಆಯಾತು ವರುಣಃ ಶೀಘ್ರಂ ಪ್ರಾಣಿನಾಂ ಪ್ರಾಣರಕ್ಷಕಃ ।**

**ಅತುಲ್ಯಬಲವಾನತ್ರ ಸರ್ವದುಷ್ಟಪ್ರಶಾಂತಯೇ ॥**

ಓಂ ಓಂ ಓಂ ವರುಣ ಭಗವನ್ನಾಗಚ್ಛಾಗಚ್ಛ । ಓಂ ವರುಣಮಾವಾಹಯಾಮಿ– ಹೀಗೆ ವರುಣನನ್ನು ಆವಾಹಿಸಿ, ವಾಂ ವೀಂ ಮೊದಲಾದ ಅಂಗಗಳಿಂದ ಸಕಲೀಕರಣವನ್ನು ಮಾಡಿ ಪೂಜಿಸಿ ತೀರ್ಥಮಂತ್ರದಿಂದ ತೀರ್ಥವನ್ನಾವಾಹಿಸಿ ಪೂಜಿಸಿ, ಮೂಲಮಂತ್ರದಿಂದ ದೇವರನ್ನು ಆವಾಹಿಸಿ ಪೂಜಿಸಿ ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ– ಅವತೇಹೇಳೋ ವರುಣ * * * ಕೃತಾನಿ ॥ ಉದುತ್ತಮಂ ವರುಣ * * * ಸ್ಯಾಮ ॥ ಇಮಂ ಮೇ ವರುಣ * * * ರಾಚಕೇ ॥ ತತ್ತ್ವಾಯಾಮಿ ಬ್ರಹ್ಮಣಾ * * ಪ್ರಮೋಷೀಃ । ತ್ವಂ ನೋ ಅಗ್ನೇ ವರುಣಸ್ಯ * * * ಗ್ಧ್ಯಸ್ಮತ್ ॥ ಹೀಗೆ ಐದು ವಾರುಣ ಮಂತ್ರವನ್ನು ಜಪಿಸಿ,

**ಇಮಾ ಆಪಃ ಶಿವಾಃ ಸಂತು ಶುಭಾಃ ಶುದ್ಧಾಶ್ಚ ನಿರ್ಮಲಾಃ ।**

**ಪಾವನಾಃ ಶೀತಲಾಶ್ಚೈವ ಪೂತಾಃ ಸೂರ್ಯಸ್ಯ ರಶ್ಮಿಭಿಃ ॥**

ಹೀಗೆ ಮೂಲಮಂತ್ರವನ್ನು ಸಾಧ್ಯವಾದಷ್ಟು ಜಪಿಸಿ ರಕ್ಷಿಸಬೇಕು. ಪುನಃ ದೇವರ ಪೀಠಪೂಜೆಯನ್ನು ಮಾಡಿ ಮೂರ್ತಿಯನ್ನು ಸಂಕಲ್ಪಿಸಿ ಆವಾಹಿಸಿ ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ಅರ್ಘ್ಯಾದಿ ಮೂರನ್ನಾಗಲೀ ಪಾದ್ಯಾದಿ ಮೂರನ್ನಾಗಲೀ ಕೊಟ್ಟು ಅಭಿಷೇಕ ಮಾಡಿ ಪಲಾಶದಿಂದ ಯಾ ಹಾಲುಮರದಿಂದ ಮೂರು ಕಾಲನ್ನು ಮಾಡಿ ಆ ಕಾಲುಗಳಲ್ಲಿ ಆಧಾರ ಪಾತ್ರೆಯನ್ನು ದೇವರ ಮೇಲಿನಿಂದ ಸ್ಥಿರವಾಗಿರುವಂತಿಟ್ಟು ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಚಿನ್ನದ ತೂತನ್ನು ಹೊಂದಿದ ಧಾರಾ ಪಾತ್ರೆಯನ್ನು ಕೆಳತುದಿಯುಳ್ಳ ಕೂರ್ಚನ್ನು ಆಧಾರದಲ್ಲಿರಿಸಿ ಪಾದಗಳಿಗೆ ಶೋಷಣ ದಾಹಣ ಪ್ಲಾವನಗಳನ್ನು

ಮಾಡಿ ಅಂ ನಮಃ ಉಂ ನಮಃ ಮಂ ನಮಃ ಎಂದು ಪೂಜಿಸಿ, ಆಧಾರದಲ್ಲಿ ಪಾತ್ರದಲ್ಲಿ ಶೋಷಣ ದಾಹನ ಪ್ಲಾವನ ಕಾಠಿನ್ಯ ಪುಷರೀಕರಣಗಳನ್ನು ಮಾಡಿ ಆ ಎರಡನ್ನೂ ಕೂರ್ಚನ್ನೂ ಪ್ರಣವದಿಂದ ಪೂಜಿಸಿ ಅಲ್ಲಿ ಗಂಧ ಅಕ್ಷತ ಪತ್ರ ಪುಷ್ಪಗಳನ್ನು ಇರಿಸಬೇಕು. ಪುನಃ ಪೂಜಿಸಲ್ಪಟ್ಟ ನೀರನ್ನು ಶಂಖದಿಂದ ತೆಗೆದುಕೊಂಡು ಅಷ್ಟಗಂಧವನ್ನು ಮೇಳಯಿಸಿ ಪದ್ಮವನ್ನೂ ಮೂರ್ತಿಯನ್ನು ಸಂಕಲ್ಪಿಸಿ ನಿಜಮೂಲದಿಂದಾವಾಹಿಸಿ ಪೂಜಿಸಿ ಮೂಲಮಂತ್ರದಿಂದ ಪಾತ್ರವನ್ನು ತುಂಬಿಸಿ ಮಿಕ್ಕ ನೀರಿನಿಂದ ಅದನ್ನು (ಕಟಾರಿಯನ್ನು) ತುಂಬಿಸಬೇಕು. ಕೂರ್ಚದ ತುದಿಯಿಂದ ಹೊರಬಂದ ಹೆಚ್ಚಿನ ಧಾರೆಯನ್ನು ಬಿಂಬದ ತಲೆಯಲ್ಲಿ(ಜಾವ) ಮೂರು ಘಂಟೆಗಳ ಪರ್ಯಂತ ಸುರಿಯುತ್ತಿರಬೇಕು. ಅಲ್ಲಿ ಈ ಮಂತ್ರಗಳನ್ನು ಜಪಿಸಬೇಕು. ಧಾರೆಯಲ್ಲೇ ನೆಟ್ಟ ಮನಸ್ಸುಳ್ಳ ಬ್ರಾಹ್ಮಣರು ಧಾರಾಪಾತ್ರವನ್ನು ಮುಟ್ಟಿಕೊಂಡು ಪಂಚತತ್ತ್ವಗಳನ್ನು, ಶಿವನಲ್ಲಿ ಪಂಚ ಬ್ರಹ್ಮಮಂತ್ರಗಳನ್ನೂ ದಶಪ್ರಣವ ಗಾಯತ್ರಿಯನ್ನು ನಾಲ್ಕು ವೇದಗಳ ಮೊದಲಭಾಗವನ್ನೂ ಆ ದೇವತಾ ಸಂಬಂಧಿಸಿದ ನಿಜಸೂಕ್ತಗಳನ್ನೂ , ಪವಮಾನವನ್ನು, ಪುರುಷಸೂಕ್ತ, ವಾತ ಆವಾತು * * * ಮೊದಲಾಗಿ ಜಪಿಸುತ್ತಾರೆ. ಇಲ್ಲಿ ಸಂಪೂರ್ಣ ವೇದ (ಸಂಹಿತೆ) ಯನ್ನಾದರೂ ಜಪಿಸಬಹುದು. ಈ ಪಕ್ಷದಲ್ಲಿ ಪಂಚ ತತ್ತ್ವ ಮೊದಲಾಗಿ ವಾತ ಆವಾತು ಮಂತ್ರ ಕೊನೆಯಾದ ಮಂತ್ರ ಸಮೂಹವನ್ನು ಆರಂಭ ಹಾಗೂ ಕೊನೆಯಲ್ಲಿ ಜಪಿಸಬೇಕು. ಶಿವನಲ್ಲಿ ಕದ್ರುದ್ರಾಯ ಮೊದಲಾದ ಸೂಕ್ತಗಳು. ವಿಷ್ಣುವಿನಲ್ಲಿ ಅತೋ ದೇವಾ ಮೊದಲಾದ ಸೂಕ್ತಗಳು. ಶಂಕರನಾರಾಯಣನಲ್ಲಿ ಅತೋದೇವಾ ಮೊದಲಾಗಿ ಕದ್ರುದ್ರಾಯ ಮೊದಲಾಗಿ ಈ ಎರಡನ್ನೂ ಹೇಳಬೇಕು. ಸ್ಕಂದನಲ್ಲಿ– ಅಗ್ನಿಂ ಹೋತಾರಂ ಮೊದಲಾಗಿ ಕುಮಾರಂ ಮಾತಾ ಮೊದಲಾದುವು. ಯಸ್ಮಿನ್ವೃಕ್ಷೇಸುಪಲಾ ಮುಂತಾದುವುಗಳು. ಶಾಸ್ತಾರನಲ್ಲಿ– ಯಾತ ಊತಿರವಮಾ– ಮುಂತಾದುವು. ವಿಷ್ಣು ಹಾಗೂ ಶಿವನಿಗೆ ಸಂಬಂಧಿಸಿದವು. ಗಣಪತಿಯಲ್ಲಿ– ಕದ್ರುದ್ರಾಯ ಮೊದಲಾಗಿ, ಗಣಾನಾಂತ್ವಾ ಮೊದಲಾಗಿ (ಸ್ಕಂದ ಹಾಗೂ ಗಣಪನಲ್ಲಿ ರುದ್ರನಿಗೆ ಹೇಳಿದುದೂ ಕೂಡ) ಬ್ರಹ್ಮಣಸ್ಪತಿ ಸೂಕ್ತ. ದುರ್ಗಿಯಲ್ಲಿ– ಜಾತವೇದಸೇ ಮುಂತಾಗಿ, ಅತೋದೇವಾ– ಇತ್ಯಾದಿ ವಿಷ್ಣೂಕ್ತ ಸೂಕ್ತಗಳು. ಹೀಗೆ ಧಾರಾ ಸೂಕ್ತಗಳನ್ನು ಜಪಿಸಿ ಯಾಮದ ಕೊನೆಯಲ್ಲಿ ಧಾರಾ ಪಾತ್ರಗತವಾದ ಚೈತನ್ಯವನ್ನು ಹೂವಿನಿಂದ ದೇವರಲ್ಲಿ ಉದ್ವಾಸನೆ ಮಾಡಿ ವ್ಯಾಪಿಸಿ ಅಂಗವನ್ನು ಮಾಡಿ, ಪಾದ ಮೊದಲಾದುವನ್ನು ಒಂದೆಡೆಯಲ್ಲಿಟ್ಟು ಕಾಪಾಡಿ, ಸ್ಥಳವನ್ನು ಶುದ್ಧಗೊಳಿಸಿ ಹಿಂದಿನಂತೆ ಹೂವು ಮೊದಲಾದುವನ್ನು ಸಂಗ್ರಹಿಸಿ ಅಲಂಕರಿಸಿ ವಸ್ತ್ರ ಮೊದಲಾಗಿ ಉಪಹಾರಗಳನ್ನಿತ್ತು ಕ್ರಮದಂತೆ ದೇವರನ್ನು ಪೂಜಿಸಿ ನೈವೇದ್ಯವನ್ನು ಮಾಡಿ ಬಾಗಿಲನ್ನು ಮುಚ್ಚಿ ವೈಶ್ವದೇವವನ್ನು ಮಾಡಿ ಪರಿಷದ್ಬಲಿಯನ್ನು ಮಾಡಿ ಆಚಮನ ಮಾಡಿ ಒಳಗೆ ಹೋಗಿ ನೈವೇದ್ಯವನ್ನು ವಿಸರ್ಜಿಸಿ ಪ್ರಸನ್ನ ಪೂಜೆಯನ್ನು ಮಾಡಿ ಪುಷ್ಪಾಂಜಲಿಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ ವ್ಯಾಪಿಸಿ ಲಯಾಂಗವನ್ನು ಮಾಡಿ ರಕ್ಷಿಸಬೇಕು. ಹೀಗೆ ಮೂರು ದಿನಗಳಲ್ಲಿ ಧಾರಾಜಪವು ಮಾಡಲ್ಪಡುವುದಾದರೆ ಅಲ್ಲಿಯೇ ಧಾರಾಕಟಾಹವನ್ನು ತೊಳೆಯದೇ ಸಂರಕ್ಷಿಸಬೇಕು. ಮುಂದಿನ ದಿನಗಳಲ್ಲಿ ದೇವರಿಗೆ ಅಭಿಷೇಕಾದಿಗಳನ್ನು ಮಾಡಿ ಪೂಜಿಸಿ, ಪುನಃ ಧಾರೆಗಾಗಿ ಪೀಠಪೂಜೆಯನ್ನು ಮಾಡಿ ಆವಾಹಿಸಿ ಸ್ನಾನಕಾಲದಲ್ಲಿ ದೇವರನ್ನು ಅಭಿಷೇಕಿಸಿ ಹಿಂದಿನಂತೆ ಧಾರಾ ಪಾತ್ರೆ ಮೊದಲಾಗಿ ಸ್ಥಿರವಾಗಿಸಿ ಕಡಾಯಿಯಲ್ಲಿ ಉಳಿದಿರುವ ನೀರನ್ನು ತೆಗೆದು ಶುದ್ಧವಾದ ನೀರಿನಿಂದ ತುಂಬಿ ಹಿಂದಿನ ಹಾಗೆ ಪೀಠ ಪೂಜಾದಿ ಎಲ್ಲವನ್ನೂ ಮಾಡಿ ಧಾರಾಪಾತ್ರೆಯನ್ನು ತುಂಬಿಸಿ ಮೊದಲಿನಂತೆ ಜಪಿಸಬೇಕು ಮತ್ತು ಪೂಜಿಸಬೇಕು. ಮೂರನೆಯ ದಿವಸದಲ್ಲಿ ಹೀಗೆ ಎಲ್ಲವನ್ನೂ ಮಾಡಿ ಜಪದ ಕೊನೆಯಲ್ಲಿ ಕಟಾಹದ ಚೈತನ್ಯವನ್ನು ಎಲ್ಲವನ್ನೂ ದೇವರಲ್ಲಿ ಉದ್ವಾಸನೆ ಮಾಡಿ ಧಾರಾ ಪಾತ್ರಗತವಾದ ಚೈತನ್ಯವನ್ನು ವ್ಯಾಪಿಸಿ ಅಂಗವನ್ನು ಮಾಡಿ ಚಿನ್ನ ಬೆಳ್ಳಿಯ ಮೀನು ಜೊತೆಯನ್ನೂ ಆಮೆಯ ಜೋಡಿಯನ್ನೂ ತೆಗೆದುಕೊಂಡು ಉಳಿದೆಲ್ಲವನ್ನೂ ಹೊರಗೆ ಬಿಟ್ಟು ತೊಳೆದು ಹೂವು ಮೊದಲಾದುವುಗಳಿಂದ ಅಲಂಕರಿಸಿ ದೇವರನ್ನು ವಿಧಿವತ್ತಾಗಿ ಪೂಜಿಸಬೇಕು. ಇದು ಧಾರಾ ಪ್ರಕಾರವು.

* * * *

## ಅವಗಾಹಃ

ಅದಕ್ಕೆ ಯೋಗ್ಯವೆನಿಸಿದ ದಿನದಲ್ಲಿ ಅವಗಾಹವನ್ನು ಮಾಡಬೇಕು. ಅಲ್ಲಿ ಮುಂದಿನ ಮಂಟಪದಲ್ಲಿ ಯಾವುದಾದರೊಂದು ಎಡೆಯಲ್ಲಿ ಸ್ವಸ್ತಿಕವನ್ನು ಬರೆದು ಧಾನ್ಯಗಳನ್ನು ಹಾಕಿ ದರ್ಭೆಯನ್ನಿರಿಸಿ ತಾಮ್ರದ್ದಲ್ಲದ ಕಂಚು ಮುಂತಾದ ಲೋಹದ ದೊಡ್ಡ ಪಾತ್ರೆಯನ್ನು ಕೆಳಮುಖನಾಗಿ ಅದರ ಮೇಲಿರಿಸಿ ಬಲಭಾಗದಲ್ಲಿ ದೀಪವನ್ನಿರಿಸಿ ಪಾತ್ರೆಯಲ್ಲಿ ಪೀಠಪೂಜೆಯನ್ನು ಮಾಡಿ ಅಸ್ತ್ರ ಮಂತ್ರದಿಂದ ಪಾತ್ರೆಯನ್ನು ತೊಳೆದು ಕವಚ ಮಂತ್ರದಿಂದ ದಾರವನ್ನು ಸುತ್ತಿ ಮೂಲದಿಂದ ಅಷ್ಟಗಂಧವನ್ನು ಲೇಪಿಸಿ ಪ್ರಣವದಿಂದ ಧೂಪ ಹಿಡಿದು ಮೂಲದಿಂದ ಪೀಠದಲ್ಲಿ ಕೆಳಮುಖನಾಗಿರಿಸಿ, ಯಂ ರಂ ವಂ ಲಂ ಹಂ ಎಂದು ಪ್ರತ್ಯೇಕವಾಗಿ ಇಪ್ಪತ್ತೈದು ಸಂಖ್ಯೆಯ ಪ್ರಾಣಾಯಾಮವನ್ನು ಮಾಡಿ ಪಂಚತತ್ತ್ವಗಳಲ್ಲಿ ಮೊದಲಿನಿಂದ ದರ್ಭವಿನ್ಯಾಸವನ್ನು ಎರಡನೆಯದರಿಂದ ಅಷ್ಟಗಂಧ ಪ್ರೋಕ್ಷಣೆಯನ್ನು, ಮೂರನೆಯದರಿಂದ ಅಕ್ಷತ ವಿಕಿರಣವನ್ನೂ, ಮಾಡಿ ಮೂಲದಿಂದ ಪೂಜಿಸಿ, ನಾಲ್ಕನೆಯದರಿಂದ ಮೇಲಕ್ಕೆತ್ತಿ ಮೇಲ್ಮುಖನಾಗಿಸಿ ಮೂಲದಿಂದ ಕೂಡಿ ಐದನೆಯದರಿಂದ ಪೀಠದಲ್ಲಿರಿಸಬೇಕು. ಪ್ರಣವದಿಂದ ಗಂಧಪುಷ್ಪ ಅಕ್ಷತೆಯಿಂದ ಕೂಡಿದ ಕೂರ್ಚನ್ನು ಕೆಳ ತುದಿಯಾಗಿ ಹಾಕಿ ಸ್ವಲ್ಪ ಪೂಜೆ ಮಾಡಿ, ಆಯಾಯ ನಿಜಮಂತ್ರಗಳಿಂದ ಗೋಮೂತ್ರ ಮೊದಲಾಗಿ ಪಂಚಗವ್ಯಗಳನ್ನು ಅಳತೆ ಮಾಡಿ ಸೇರಿಸಿ ಪ್ರಣವದಿಂದ ಪಲಾಶದ ಕಡಗೋಲಿನಿಂದ ಕಡೆದು ಮಿಲಾಗತ ಮಾಡಿ,

ಪ್ರಣವೋಪಚಾರದಿಂದ ಕೂಡಿ ಮೂಲದಿಂದಾವಾಹಿಸಿ ಲಿಪಿನ್ಯಾಸ ಮೊದಲಾದುವುಗಳಿಂದ ಸಕಲೀಕರಣವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ. ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಿ, ಬಟ್ಟೆಯನ್ನು ಹೊದಿಸಿ ರಕ್ಷಿಸಬೇಕು. ಅದರ ಹತ್ತಿರ ಸ್ವಸ್ತಿಕದಲ್ಲಿ ಪಾತ್ರವನ್ನು ಇರಿಸಿ ಅಷ್ಟಗಂಧದ ನೀರಿನಿಂದ ಹಾಗೆ ತುಂಬಿಸಿ ಪೂಜಿಸಿ ಸಂರಕ್ಷಿಸಬೇಕು.

* * * *

## ಪಂಚಗವ್ಯಪ್ರಮಾಣ

ತನ್ನ ಇಚ್ಛೆಯಂತೆ ಗೋಮೂತ್ರವನ್ನು ಹಾಕಿ, ಅದರ ಅರ್ಧದಷ್ಟು ಗೋಮಯವನ್ನೂ, ಗೋಮೂತ್ರದ ಏಳುಪಟ್ಟು ಹಾಲನ್ನೂ, ಮೂರು ಅಂಶದಷ್ಟು ಹೆಚ್ಚು ಮೊಸರನ್ನೂ, ಗೋಮೂತ್ರದಷ್ಟೇ ತುಪ್ಪವನ್ನೂ ಸೇರಿಸಬೇಕು. ತತ್ಸವಿತುಃ- ಎಂದು ಗೋಮೂತ್ರಕ್ಕೆ, ಗಂಧದ್ವಾರಾಂ- ಎಂದು ಗೋಮಯಕ್ಕೆ, ಆಪ್ಯಾಯಸ್ವ- ಎಂದು ಹಾಲಿಗೆ, ದಧಿಕ್ರಾವ್ಣೋ- ಎಂದು ಮೊಸರಿಗೆ ಮಂತ್ರಗಳು.

**ತೇಜೋಽಸಿ ತೇಜೋನುಪ್ರೇಹಿ ಅಗ್ನಿಸ್ತೇ ತೇಜೋ ಮಾ ವಿನ್ಯೈತ್ । ಅಗ್ನೇರ್ಜಿಹ್ವಾಸಿ ಸುಭೂರ್ದೇವಾನಾಂ ಧಾಮ್ನೇ ಧಾಮ್ನೇ ದೇವೇಭ್ಯೋ ಯಜುಷೇ ಯಜುಷೇ ಭವ ಶುಕ್ರಮಸಿ ಜ್ಯೋತಿರಸಿ ॥** ಇದು ತುಪ್ಪ (ಮೇಳೈಸುವ) ಮಂತ್ರ. ಹೀಗೆ ಪಂಚಗವ್ಯಾದಿಗಳನ್ನು ಪೂಜಿಸಿ ಗರ್ಭಗುಡಿಯಲ್ಲಿ ಹೋಗಿ ಪೀಠಪೂಜೆಯನ್ನು ಮಾಡಿ ಆವಾಹಿಸಿ ಸಕಲೀಕರಣವನ್ನು ಮಾಡಿ ಸ್ನಾನಕಾಲದಲ್ಲಿ ನೀರುಗಳಿಂದ ಅಭಿಷೇಕಿಸಿ ಬಟ್ಟೆಯಿಂದ ದರ್ಭೆಗಳಿಂದ ಸುತ್ತಿ ಪೀಠದಲ್ಲಿ ನೀರು ಹೋಗುವ ಸಂಪಿನಲ್ಲಿ ನೀರಿನ ಪಾತ್ರೆಯಲ್ಲಾಗಲೀ ಪಲಾಶ ಮೊದಲಾದುವುಗಳಿಂದ ಸಿದ್ಧಗೊಳಿಸಿದ ಪಂಜರವನ್ನು ಸರಿಯಾಗಿ ನಿಲ್ಲುವಂತೆ ದೃಢವಾಗಿರಿಸಿ ಉದ್ದಿನ ಹಿಟ್ಟುಗಳಿಂದ ಸಂದುಗಳಲ್ಲಿ ಲೇಪಿಸಿ, ಸರಿಯಾಗಿ ತೂತಿಲ್ಲದಂತೆ ಮಾಡಿ ನೀರಾಜನ ಮಾಡಿ ಪಂಚಗವ್ಯ ತೆಗೆದುಕೊಂಡು ಬಂದು ಅದರಿಂದ ತುಂಬಿಸಿ ಅವಗಾಹ (ಮುಳುಗಿಸುವುದು) ವನ್ನು ಮಾಡಬೇಕು. ಇಲ್ಲಿ ಬ್ರಾಹ್ಮಣರಿಂದ ಕೂಡಿ ಧಾರದಲ್ಲಿ ಹೇಳಿದ ಸೂಕ್ತ ಮೊದಲಾದುವುಗಳನ್ನು ಹೇಳಿ, ಜಪದ ಕೊನೆಯಲ್ಲಿ ಆ ಪಂಚಗವ್ಯವೆಲ್ಲವನ್ನೂ ತೆಗೆದು ಶುದ್ಧವಾದ ನೀರಿನಿಂದ ತೊಳೆದು, ಹಿಂದಿನಂತೆ ಪಂಜರವನ್ನು ನಿಶ್ಚಲವಾಗಿಸಿ ಸಂದುಗಳಲ್ಲಿ ಉದ್ದಿನ ಹಿಟ್ಟಿನಿಂದ ತೂತಿಲ್ಲದಂತೆ ಬಳಿದು ಮುದ್ದೆ (ದಪ್ಪದ ನೀರು) ಯಂತಿರುವ ಅಷ್ಟಗಂಧದ ನೀರಿನಿಂದ ಮುಳುಗಿಸಿ ಮಂತ್ರಗಳನ್ನು ಜಪಿಸಿ, ಪಂಜರ ಮೊದಲಾದುವನ್ನು ತೆಗೆದು ಎಲ್ಲವನ್ನೂ ಶುದ್ಧಿಗೊಳಿಸಿ, ನೀರುಗಳಿಂದ ತೊಳೆದು ಹೂವು ಮೊದಲಾದುವುಗಳಿಂದ ಅಲಂಕರಿಸಿ, ವಸ್ತ್ರ ಮೊದಲಾದ ಉಪಹಾರಗಳನ್ನು ಕೊಟ್ಟು ಕ್ರಮದಂತೆ ದೇವರನ್ನು ಪೂಜಿಸಿ ನೈವೇದ್ಯವನ್ನೂ, ವೈಶ್ವದೇವವನ್ನೂ ಮಾಡಿ ಪರಿಷದ್ಬಲಿಯನ್ನು ಹಾಕಿ ಆಚಮನ ಮಾಡಿ ಒಳಗೆ ಬಂದು ನೈವೇದ್ಯ ವಿಸರ್ಜಿಸಿ, ಪ್ರಸನ್ನ ಪೂಜೆಯನ್ನು ಮಾಡಿ ರಕ್ಷೆಯನ್ನು ಮಾಡಬೇಕು. ಇದು ಅವಗಾಹ ಕರ್ಮ. ಶಿವನಲ್ಲಿ ವಿಶೇಷವು. ಹೇಳಿದ ಕ್ರಮದಂತೆ ಪಂಚಗವ್ಯವನ್ನು ಸಿದ್ಧಗೊಳಿಸಿ, ಸ್ನಾನಕಾಲದಲ್ಲಿ ಶಿವಲಿಂಗವನ್ನು ಬಟ್ಟೆ ಮೊದಲಾದವುಗಳಿಂದ ಸುತ್ತಿ ಪಂಚಗವ್ಯಗಳಿಂದ ತುಂಬಿ ಪ್ರಣವ, ಪ್ರಾಸಾದ ಮಂತ್ರ ಮೂಲಮಂತ್ರ ವ್ಯೋಮವ್ಯಾಪಿದ್ವಯ, ಪಂಚಬ್ರಹ್ಮಶ್ರೀರುದ್ರಗಳನ್ನು ಬ್ರಾಹ್ಮಣರೊಡನೆ ಜಪಿಸಬೇಕು.

* * * *

## ಅಗ್ನಿಮುಖಂ

ಮೊದಲು ಪೂಜಿಸಿದ ಪಂಚಗವ್ಯದ ಉತ್ತರ ಭಾಗದಲ್ಲಿ ನೆಲವನ್ನು ಬಳಿದು ಶುದ್ಧ ಮಾಡಿ ಹೋಮ ಮಂಡಲವನ್ನು ಬರೆದು ಅಗ್ನಿಯನ್ನು ಸ್ಥಾಪಿಸಿ ಚಕ್ಕೆ ಚೂರುಗಳನ್ನು ಹಾಕಿ ಅದು ಜ್ವಲಿಸಿದಾಗ- ಅಗ್ನಿಷೋಮಾವಾಜ್ಯಭಾಗೌ ರುದ್ರಃ ಅಗ್ನಿಃ ಸ್ವಿಷ್ಟಕೃತ್- ಹೀಗೆ ಅನ್ವಾಧಾನವನ್ನು ಮಾಡಿ, ಎರಡು ದರ್ಭೆಗಳನ್ನು ಸಮಿತ್ತು ಅಡಕೆಯನ್ನು ಕಟ್ಟಿ ಉತ್ತರಭಾಗದಲ್ಲಿ ಇರಿಸಿ, ಸ್ವಲ್ಪ ಬಳಿದು(ಸಾರಿಸಿ) ಪರಿಸಮೂಹನೆ ಮಾಡಿ ಪರಿಸ್ತರಣ ಹಾಕಿ ಪ್ರಣೀತದಲ್ಲಿ ಎರಡು ದರ್ಭೆಯನ್ನು ಇಟ್ಟು ಪ್ರಾದೇಶ ಮಾತ್ರದ ಎರಡು ದರ್ಭೆಗಳನ್ನು ಅಳೆದು ಕತ್ತರಿಸಿ ಪವಿತ್ರ ಮಾಡಿ ಎಡಗೈಯಿಂದ ಹಿಡಿದು ಬಲದ ಕೈಯಿಂದ ಕಾಲಂಶ ಕಡಿಮೆಯಾದ ಪ್ರಸ್ಥಪರಿಮಿತಿವಾದ ನೀರನ್ನು ತುಂಬಿಸಿ ಮೂರಾವರ್ತಿ ಪರಿಶೋಧಿಸಿ, ಮೂಗಿನ ಪರ್ಯಂತ ಮೇಲೆತ್ತಿ ಬ್ರಹ್ಮನನ್ನು ನೋಡಿ ಇಟ್ಟು, ಮೇಲಕ್ಕೆ ಎರಡು ದರ್ಭೆಯ್ಯನ್ನಿರಿಸಿ ಪವಿತ್ರವನ್ನು ಬಲಗೈಯಿಂದ ಆಜ್ಯಸ್ಥಾಲಿಯಲ್ಲಿರಿಸಿ ಎಡಗೈಯಿಂದ ಹಿಡಿದು ಬಲಗೈಯಿಂದ ಆಜ್ಯವನ್ನು ಹಾಕಿ ಮೂರು ಕೆಂಡವನ್ನು ಹೊರಗಿರಿಸಿ ಅದರಲ್ಲಿ ಆಜ್ಯಸ್ಥಾಲಿಯನ್ನಿರಿಸಿ ಎರಡು ದರ್ಭೆಯಿಂದ ಆಜ್ಯಸ್ಥಾಲಿಯಲ್ಲಿ ಜ್ವಾಲೆಯನ್ನು ತೋರಿಸಿ ಬೇರಾಗಿ ಮೇಲಿರಿಸಿ ಎರಡು ಅಂಗುಷ್ಠ ಪ್ರಮಾಣದ ದರ್ಭೆಯ ಕುಡಿಯನ್ನು ಕತ್ತರಿಸಿ ತೊಳೆದು ತುಪ್ಪದಲ್ಲಿ ಹಾಕಿ ಹವಿಸ್ಸಿನಿಂದ ಕೂಡಿ ಪರ್ಯಗ್ನಿಕರಣವನ್ನು ಮಾಡಿ ತುಪ್ಪವನ್ನು ಉತ್ತರದಲ್ಲಿ ಕೆಳಗಿರಿಸಿ ಮುಂದಿರಿಸಿದ ಕೆಂಡಗಳನ್ನು ಅಗ್ನಿಯಲ್ಲಿ ಸೇರಿಸಿ ಕೈಯನ್ನು ತೊಳೆದು ಎರಡು ಕೈಗಳಲ್ಲಿ ಅಂಗುಷ್ಠ ಮತ್ತು ಅನಾಮಿಕೆಗಳಿಂದ ಉತ್ತರಕ್ಕೆ ತುದಿಯಾಗಿ ಪವಿತ್ರವನ್ನು ಹಿಡಿದುಕೊಂಡು **'ಸವಿತುಷ್ಟ್ವಾ ಪ್ರಸವ ಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ'** ಎಂದು

ಒಮ್ಮೆ ಮಂತ್ರವನ್ನು ಹೇಳಿ ಪಶ್ಚಿಮದಿಂದ ಆರಂಭಿಸಿ ಪೂರ್ವದಲ್ಲಿ ಕೊನೆಗೊಳ್ಳುವಂತೆ, ಪುನಃ ಎರಡಾವರ್ತಿ ಅಮಂತ್ರಕವಾಗಿ ಉತ್ಪವನವನ್ನು ಮಾಡಿ ಆ ಪವಿತ್ರವನ್ನು ಪ್ರೋಕ್ಷಿಸಿ ಅಗ್ನಿಯಲ್ಲಿ ಹಾಕಿ ಮುಂದೆ ಎರಡು ದರ್ಭೆಯನ್ನು ಹರಡಿ ಆಜ್ಯ ಪಾತ್ರವನ್ನು ಅದರ ಮೇಲಿರಿಸಿ ಸ್ರುವ ಮತ್ತು ಜುಹೂವನ್ನು ಸಂಸ್ಕರಿಸಿ ಹವಿಸ್ಸಿನಲ್ಲಿ ಉಪಸ್ತರಣವನ್ನು ಮಾಡಿ ಉತ್ತರಭಾಗದಲ್ಲಿ ಕೆಳಗಿಳಿಸಿ ಉಪಸ್ತರಣವನ್ನು ಮಾಡಿ ದಕ್ಷಿಣ(ಬಲ)ದಲ್ಲಿರಿಸಿ ಪಶ್ಚಿಮದಲ್ಲಿ ದಕ್ಷಿಣದಲ್ಲಿ ಉತ್ತರದಲ್ಲಿ ಪರಿಧಿಗಳನ್ನಿರಿಸಿ ಪೂರ್ವದಲ್ಲಿ ಆದಿತ್ಯವನ್ನು ಸಂಕಲ್ಪಿಸಿ ಹೂವಿನಿಂದ ಆರಾಧಿಸಿ ಊರ್ಧ್ವ(ಎರಡು) ಸಮಿತ್ತುಗಳನ್ನು ಇರಿಸಿ ಪರಿಷೇಕ ಮಾಡಿ ಗಂಧ ಹೂವುಗಳಿಂದ ಪೂಜಿಸಿ, ಪೀಠಾರ್ಚನೆಯನ್ನು ಮಾಡಿ ಆವಾಹಿಸಿ ಸಕಲೀಕರಣವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಪೂಜಿಸಿ, ನೈವೇದ್ಯದ ಕಾಲದಲ್ಲಿ ಇಧ್ಮವನ್ನು ಹಿಡಿದುಕೊಂಡು ಅದರ ಕಟ್ಟನ್ನು ಸಡಿಲುಗೊಳಿಸಿ(ತೆಗೆದು) ಕೈ ತೊಳೆದುಕೊಂಡು ಉಪಸ್ತರಣ ಮಾಡಿ ಅನುಯಾಜ ಸಮಿತ್ತನ್ನು ರಜ್ಜುವನ್ನೂ ಅಲ್ಲೇ ಇಟ್ಟು ಗೌತಮೋ ವಾಮದೇವ ಋಷಿಃ । ಅಗ್ನಿರ್ಜಾತವೇದಾ ದೇವತಾ । ತ್ರಿಷ್ಟುಪ್ ಛಂದಃ- ಅಯಂತ ಇಧ್ಮ ಆತ್ಮಾ ಜಾತವೇದಸ್ತೇನೇಧ್ಯಸ್ವ ವರ್ಧಸ್ವಚೇದ್ಧ ವರ್ಧಯಚಾಸ್ಮಾನ್ ಪ್ರಜಯಾ ಪಶುಭಿರ್ಬ್ರಹ್ಮ ವರ್ಚಸೇನಾನ್ನಾದ್ಯೇನ ಸಮೇಧಯ ಸ್ವಾಹಾ- ಹೀಗೆ ಇಧ್ಮವನ್ನು ಹೋಮಿಸಿ ಅಗ್ನಯೇ ಜಾತವೇದಸ ಇದಂ ನಮಮ- ಹೀಗೆ ಉದ್ದೇಶ ತ್ಯಾಗವನ್ನು ಮಾಡಿ, ಪ್ರಜಾಪತಿರ್ದೇವತಾ- ಪ್ರಜಾಪತಯೇ ಸ್ವಾಹಾ- ಪ್ರಜಾಪತಯ ಇದಂ ನಮಮ- ಹೀಗೆ ಅಗ್ನಿಯ ಬಲ ಮತ್ತು ಎಡ ಕ್ರಮದಿಂದ ಆಘಾರಗಳನ್ನು ಮಾಡಿ- ಅಗ್ನಿರ್ದೇವತಾ- ಅಗ್ನಯೇ ಸ್ವಾಹಾ- ಅಗ್ನಯ ಇದಂ * ಸೋಮೋ ದೇವತಾ- ಸೋಮಾಯ ಸ್ವಾಹಾ- ಸೋಮಾಯೇದಂ ನಮಮ ಹೀಗೆ ಚಕ್ಷುಸ್ಸನ್ನು ಹೋಮಿಸಿ, ಆಮೇಲೆ ಪ್ರಣವವ್ಯಾಹೃತಿ ಪೀಠ ಮಂತ್ರಗಳಿಂದ ಒಂದೊಂದು ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಿ ತತ್ಪುರುಷ ಮಂತ್ರದಿಂದ ಪಕ್ಷಹೋಮವನ್ನು ಮಾಡಿ ಪೂಜಾ ಮಂತ್ರಗಳಿಂದ ಒಂದೊಂದು ಸಂಖ್ಯೆಯಲ್ಲಿ ಆಜ್ಯವನ್ನು ಹೋಮಿಸಿ ವ್ಯೋಮವ್ಯಾಪಿ ದಶಾಕ್ಷರದಿಂದ ಪೂರ್ಣಾಹುತಿಯನ್ನು ಮಾಡಿ ಮೂಲದಿಂದ ಎಂಟಾವರ್ತಿ ಆಜ್ಯಹೋಮವನ್ನು ಮಾಡಿ ಪೂರ್ಣಾಹುತಿಯನ್ನು ಮಾಡಬೇಕು. ಆಮೇಲೆ ಪಂಚಬ್ರಹ್ಮ ಮಂತ್ರಗಳಿಂದ ನೂರರ ಸಂಖ್ಯೆಯಲ್ಲಿ ಆಜ್ಯಹೋಮವನ್ನು ಮಾಡಿ ಪೂರ್ಣಾಹುತಿಯನ್ನು ಮಾಡಿ, ಅಘೋರ ಮಂತ್ರದಿಂದ ನೂರೆಂಟರ ಸಂಖ್ಯೆಯಲ್ಲಿ ಸಮಿತ್ತು ಆಜ್ಯ ಚರುಆಜ್ಯಗಳನ್ನು ಹೋಮಿಸಿ, ದ್ರವ್ಯಾಂತ್ಯದಲ್ಲಿ ನಡು ನಡುವೆ ಪ್ರತ್ಯೇಕವಾಗಿ ಪೂರ್ಣಾಹುತಿಯನ್ನು ಮಾಡಿ ಸ್ವಿಷ್ಟಕೃದಾದಿ ಹೋಮವನ್ನು ಪೂರ್ತಿಗೊಳಿಸಿ, ಅಗ್ನಿಯನ್ನು ಸಂಪಾತದಲ್ಲಿ ಉದ್ವಾಸನೆಯನ್ನು ಮಾಡಿ ಅಗ್ನಿಯನ್ನು ವಿಸರ್ಜಿಸಬೇಕು. ಆ ಸಂಪಾತವನ್ನು ಪಂಜರದಲ್ಲಿರುವ ಶಿವಲಿಂಗದಲ್ಲಿ ಸ್ಪರ್ಶ (ಹಚ್ಚುವುದು) ಮಾಡಬೇಕು. ಪುನಃ ಜಪವನ್ನು ಮಾಡಬೇಕು. ಇದು ಶಿವನಲ್ಲಿ ವಿಶೇಷವು. ಹೆಚ್ಚಿನ ಮಹತ್ತರವಾದ ದೋಷಗಳಲ್ಲಿ ವಿಶೇಷವಾದ ಅವಗಾಹವು. ಇನ್ನೂ ಹೆಚ್ಚಿನ ದೋಷದ್ದಾದರೆ- ಗೋಮೂತ್ರ ಮೊದಲಾದ ದ್ರವ್ಯಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಅವಗಾಹವನ್ನು ಮಾಡಿ ಕೊನೆಯಲ್ಲಿ ಪಂಚಗವ್ಯ(ಮೇಳಯಿಸಿದುದು)ದಿಂದ ಅವಗಾಹವನ್ನು ಮಾಡಿ, ಆಮೇಲೆ ಅಷ್ಟಗಂಧದಿಂದ ಅವಗಾಹ ಮಾಡಬೇಕು. ಅಥವಾ ಹೆಚ್ಚಿನ ದೋಷವು ಉಂಟಾದಲ್ಲಿ ದಿನ ದಿನದಲ್ಲಿ ಗೋಮೂತ್ರಾದಿ ದ್ರವ್ಯಗಳಿಂದ ಅಷ್ಟಗಂಧ ಜಲದಿಂದ ಅವಗಾಹವನ್ನು ಮಾಡಬೇಕು. ಪುನಃ ದೇವರನ್ನು ಪೂಜಿಸಬೇಕು. ಕಡಿಮೆ ದೋಷದ್ದಾದರೆ ಪಂಚಗವ್ಯಾಭಿಷೇಕ ಮಾತ್ರದಿಂದ ಶುದ್ಧಿಯಾಗುತ್ತದೆ. ಇತ್ಯವಗಾಹ ಪ್ರಕಾರಃ.

* * * *

## ಅಭಿಷೇಕಃ

ಗವ್ಯದಲ್ಲೇ ಪದ್ಮವನ್ನು ಮಾಡಿ ಬತ್ತಗಳಿಂದ ಪೀಠವನ್ನು ರಚಿಸಿ ದರ್ಭೆಗಳನ್ನಿರಿಸಿ ಮಧ್ಯದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ನೂಲುಗಳಿಂದ ಸುತ್ತಿದ ಐದು ಕಲಶಗಳನ್ನಿಟ್ಟು ದೀಪ ಮೊದಲಾದುವನ್ನಿರಿಸಿ ಆಚಾರ್ಯನು ಅಲ್ಲಿ ಕುಳಿತುಕೊಂಡು ದೇಹಶುದ್ಧಿ ಶಂಖಪೂರಣ ಆತ್ಮಾರಾಧನೆಗಳನ್ನು ಮಾಡಿ ಗುರು ಗಣಪತಿಯರನ್ನು ಪೂಜಿಸಿ, ಗುರುಗಳಿಗೆ ಅರ್ಘ್ಯವನ್ನು ಬಿಟ್ಟು, ಗಣಪತಿಗೆ ನೈವೇದ್ಯವನ್ನರ್ಪಿಸಿ, ಎರಡೂ ಎಡೆಗಳಲ್ಲಿ ಪುಷ್ಪಾಂಜಲಿಯನ್ನು ಮಾಡಬೇಕು. ಪೀಠಪೂಜೆಯನ್ನು ಮಾಡಿ ಮಧ್ಯ ಮೊದಲಾದ ಕಲಶಗಳನ್ನು ಮುಟ್ಟಿಕೊಂಡು ಮೇಲ್ಮುಖನಾಗಿಸಿ ಇರಿಸಿ ಕೂರ್ಚಗಳನ್ನು ಕೆಳತುದಿಯಾಗಿ ಇರಿಸಿ, ಶಿವನಲ್ಲಿ ಈಶಾನಾದಿ ಪಂಚಬ್ರಹ್ಮ ಮಂತ್ರಗಳಿಂದಲೂ ಅಥವಾ ಪಂಚತತ್ತ್ವಗಳಿಂದಾಗಲೀ ವಿಷ್ಣು ಮೊದಲಾದ ದೇವತೆಗಳಲ್ಲಿ ಪಂಚತತ್ತ್ವಗಳಿಂದಲೇ ಶಂಖದ ನೀರಿನಲ್ಲಿ ಪ್ರತ್ಯೇಕವಾಗಿ ಆವಾಹಸಿ ಅದರದರಿಂದ ಮಧ್ಯ ಮೊದಲಾದ ಕಲಶಗಳಲ್ಲಿ ಪ್ರತ್ಯೇಕ (ಒಂದೊಂದಾಗಿ) ತುಂಬಿಸಿ, ಉಳಿದ ಭಾಗವನ್ನು ಬೇರೆ ಪೂಜಿಸಲ್ಪಟ್ಟ ನೀರಿನಿಂದ ಪೂರ್ತಿ ಮಾಡಿ ಪಲ್ಲವ ಚಕ್ರಿಕಾದಿಗಳನ್ನಿರಿಸಿ, ದರ್ಭೆಗಳನ್ನಿರಿಸಿ, ಶಿವನಲ್ಲಿ ಈಶಾನಾದಿ ಪಂಚಬ್ರಹ್ಮಗಳಿಂದ ಅಥವಾ ಪಂಚತತ್ತ್ವಗಳಿಂದ ವಿಷ್ಣ್ವಾದಿ ದೇವತೆಗಳಲ್ಲಿ ಪಂಚತತ್ತ್ವಗಳಿಂದಲೇ ಮಧ್ಯ ಮೊದಲಾಗಿ ಐದು ಕಲಶಗಳಲ್ಲಿ ಪ್ರತ್ಯೇಕವಾಗಿ ಆವಾಹಿಸಿ, ಪ್ರಣವದಿಂದ ಅಂಗವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಆಯಾಯ ತತ್ತ್ವದಿಂದ ಪೂಜಿಸಿ, ಅರ್ಘ್ಯವನ್ನು ಕೊಟ್ಟು ಪುಷ್ಪಾಂಜಲಿಯನ್ನು ಮಾಡಿ ಪುನಃ ಪ್ರಣವದಿಂದ ಒಂದಾಗಿಸಿ, ಪ್ರಣವ, ಉಪಚಾರ, ಮೂಲಗಳಿಂದ ಆವಾಹಿಸಿ, ಲಿಪಿನ್ಯಾಸ ಪಂಚತತ್ತ್ವನ್ಯಾಸ ಮೂಲಾಕ್ಷರನ್ಯಾಸವನ್ನು ಮಾಡಿ ಉಪಹಾರಗಳನ್ನು ಕೊಟ್ಟು ಕ್ರಮದಂತೆ ಪೂಜಿಸಿ, ನೈವೇದ್ಯವನ್ನು ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ವ್ಯಾಪಿಸಿ ಲಯಾಂಗವನ್ನು ಮಾಡಿ ಆಯಾಯ ನಿಜಪಂಚತತ್ತ್ವಗಳಿಂದ ಪುಷ್ಪಾಂಜಲಿಯನ್ನು ಮಾಡಿ ಪ್ರತ್ಯೇಕವಾಗಿಸಿ ಸಾಧ್ಯವಾದಷ್ಟು

ಪಂಚತತ್ತ್ವಗಳನ್ನು ಜಪಿಸಿ, ಬಟ್ಟೆಯನ್ನು ಹೊದಿಸಿ ಕಾಪಾಡಬೇಕು. ಆಮೇಲೆ ಗರ್ಭಗೃಹಕ್ಕೆ ಹೋಗಿ ಪೀಠಪೂಜೆಯನ್ನು ಮಾಡಿ ದೇವರನ್ನಾವಾಹಿಸಿ ಸಕಲೀಕರಣವನ್ನು ಮಾಡಿ ಸ್ನಾನದ ಸಮಯದಲ್ಲಿ ಶುದ್ಧನೀರಿನಿಂದ ಅಭಿಷೇಕಿಸಿ ನೀರಾಜನವನ್ನು ಮಾಡಿ ನಿಜಪಂಚತತ್ತ್ವಗಳಿಂದ ಮಧ್ಯವೇ ಮೊದಲಾದ ಕಲಶಗಳಿಂದ ಅಭಿಷೇಕ ಮಾಡಿ ಪ್ರಣವದಿಂದ ಮೂರಾವರ್ತಿ ವ್ಯಾಪಿಸಿ, ಎದೆಯಲ್ಲಿ ಮುಟ್ಟಿಕೊಂಡು ಪಂಚತತ್ತ್ವಗಳನ್ನು ಜಪಿಸಿ, ಎಲ್ಲಾ ಅವಯವಗಳಲ್ಲಿ ಪ್ರತ್ಯೇಕವಾಗಿ ವ್ಯಾಪಿಸಿ ಐದು ಸ್ಥಾನಗಳಲ್ಲಿ ಸೂತ್ರನ್ಯಾಸವನ್ನು ಮಾಡಿ, ಪುನಃ ಲಿಪಿನ್ಯಾಸವನ್ನು ಪಂಚತತ್ತ್ವನ್ಯಾಸವನ್ನು ಮೂಲಾಕ್ಷರಾಂಗನ್ಯಾಸವನ್ನು ಮಾಡಿ ನೀರಾಜನವನ್ನು ಮಾಡಿ ವಸ್ತ್ರಾದಿ ಉಪಹಾರಗಳನ್ನರ್ಪಿಸಿ, ಪೂಜಿಸಿ, ನೈವೇದ್ಯ ಮಾಡಿ ವೈಶ್ವದೇವವನ್ನು ಮಾಡಿ, ಬಲಿಯನ್ನು ಹರಡಿ ಒಳಗೆ ಹೋಗಿ ನೈವೇದ್ಯವನ್ನು ವಿಸರ್ಜಿಸಿ ಪ್ರಸನ್ನ ಪೂಜೆಯನ್ನು ಮಾಡಿ ಸಂರಕ್ಷಿಸಬೇಕು. ಅಥವಾ ಅವಗಾಹಾಂತವಾದ ವಿಶುದ್ಧಿಯನ್ನು ಮಾಡಿ, ಹೇಳಿದಂತೆ ಪಂಚಕವನ್ನು ಪೂಜಿಸಿ, ಗರ್ಭಗೃಹದಲ್ಲಿ ಪ್ರವೇಶಿಸಿ ಗುರುಗಣಪತಿಯನ್ನು ಪೂಜಿಸಿ ಕೈಯಲ್ಲಿ ನೀರನ್ನು ತೆಗೆದುಕೊಂಡು ಪ್ರಣವವನ್ನು ಎಂಟಾವರ್ತಿ ಜಪಿಸಿ ಬಿಂಬವನ್ನು ಪ್ರೋಕ್ಷಿಸಿ, ಸಂರಕ್ಷಣೆ ಮಾಡಿ ಇನ್ನೊಮ್ಮೆ ಪ್ರೋಕ್ಷಿಸಿ ಹೃದಯದಲ್ಲಿ ಮುಟ್ಟಿಕೊಂಡು ಎಂಟಾವರ್ತಿ ಪ್ರಣವವನ್ನು ಜಪಿಸಿ ಚೈತನ್ಯವನ್ನು ಸುಷುಮ್ನಾ ನಾಡಿಯಿಂದ ತನ್ನಲ್ಲಿ ಉದ್ವಾಸನೆ ಮಾಡಿ, ಬಿಂಬದ ಪಾದ ನಾಭಿ ಹೃದಯ ಕಂಠ ತಾಲು ಪ್ರದೇಶಗಳನ್ನು ಮುಟ್ಟಿ ಲಂ ವಂ ರಂ ಯಂ ಹಂ ಎಂದು ಜಪಿಸಿ ಹೀಗೆ ಐದು ಭೂತಗಳನ್ನು ಸಂಕಲ್ಪಿಸಿ ಪಾದಾಗ್ರವನ್ನು ಮುಟ್ಟಿ ಹ್ಲಾಂ ಎಂದು ಇಪ್ಪತ್ತೈದು ಸಂಖ್ಯೆಯ ಪ್ರತ್ಯೇಕವಾಗಿ ಐದು ಪ್ರಾಣಾಯಾಮಗಳನ್ನು ಮಾಡಿ ಹ್ಲಾಂ ಹುಂಫಟ್ ಹೀಗೆ ಪಾದಾಗ್ರಾದಿ ನಾಭಿಪರ್ಯಂತ ವ್ಯಾಪಿಸಿ, ಪೃಥಿವಿಯನ್ನು ನೀರಿನಲ್ಲಿ ಸಂಹರಿಸಬೇಕು. ಪುನಃ ನಾಭಿಯನ್ನು ಮುಟ್ಟಿ ಹ್ವೀಂ ಎಂದು ಇಪ್ಪತ್ತೈದು ಸಂಖ್ಯೆಯ ಪ್ರತ್ಯೇಕವಾದ ನಾಲ್ಕು ಪ್ರಾಣಾಯಾಮಗಳನ್ನು ಮಾಡಿ, ಹ್ವೀಂ ಹುಂಫಟ್– ಹೀಗೆ ನಾಭಿಯಿಂದ ಹೃದಯ ಪರ್ಯಂತವಾಗಿ ವ್ಯಾಪಿಸಿ, ನೀರನ್ನು ಅಗ್ನಿಯಲ್ಲಿ ಸಂಹರಿಸಬೇಕು. ಪುನಃ ಹೃದಯವನ್ನು ಮುಟ್ಟಿ ಹ್ರೂಂ ಎಂದು ಇಪ್ಪತ್ತೈದಯ ಸಂಖ್ಯೆಯ ಪ್ರತ್ಯೇಕವಾಗಿ ಮೂರು ಪ್ರಾಣಾಯಾಮಗಳನ್ನು ಮಾಡಿ ಹ್ರೂಂ ಹುಂಫಟ್– ಹೀಗೆ ಹೃದಯಾದಿ ಕಂಠ ಪರ್ಯಂತ ವ್ಯಾಪಿಸಿ, ಅಗ್ನಿಯನ್ನು ವಾಯುವಿನಲ್ಲಿ ಸಂಹರಿಸಬೇಕು. ಪುನಃ ಕಂಠವನ್ನು ಮುಟ್ಟಿ ಹ್ಯೈಂ ಎಂದು ಇಪ್ಪತ್ತೈದು ಸಂಖ್ಯೆಯ ಪ್ರತ್ಯೇಕವಾದ ಎರಡು ಪ್ರಾಣಾಯಾಮವನ್ನು ಮಾಡಿ ಹ್ಯೈಂ ಹುಂಫಟ್– ಕಂಠಾದಿ ತಾಲು ಪರ್ಯಂತ ವ್ಯಾಪಿಸಿ ವಾಯುವನ್ನು ಆಕಾಶದಲ್ಲಿ ಸಂಹರಿಸಬೇಕು. ಪುನಃ ತಾಲು ಪ್ರದೇಶವನ್ನು ಮುಟ್ಟಿ, ಹೌಂ ಎಂದು ಇಪ್ಪತ್ತೈದು ಸಂಖ್ಯೆಯ ಒಂದು ಪ್ರಾಣಾಯಾಮವನ್ನು ಮಾಡಿ ಹೌಂ ಹುಂಫಟ್ ತಾಲ್ವಾದಿ ಮೂರ್ಧ ಪರ್ಯಂತ ವ್ಯಾಪಿಸಿ ಆಕಾಶವನ್ನು ಪರಮಾತ್ಮನಲ್ಲಿ ಸಂಹರಿಸಬೇಕು. ಪುನಃ ಶೋಷಣ ದಾಹನ ಪ್ಲಾವನ ಕಾಠಿನ್ಯಗಳನ್ನು ಮಾಡಿ ಪ್ರಣವದಿಂದ ಬಿಂಬವನ್ನು ಕಲ್ಪಿಸಿ, ತನ್ನಲ್ಲಿ ಸಂಹರಿಸಲ್ಪಟ್ಟ ಚೈತನ್ಯವನ್ನು ಬಿಂಬದಲ್ಲಿ ನಿಯೋಜಿಸಿ ಓಂ ಹ್ರೀಂ– ಹೀಗೆ ಐಕ್ಯವನ್ನು ಭಾವಿಸಿ ಓಂ ಹೌಂ ನಮಃ ಮೊದಲಾಗಿ ಪ್ರಾಣಾಯಾಮವನ್ನು ಹಿಂದಿನಂತೆ ಮಾಡಿ ವ್ಯಾಪಕವನ್ನೂ ಮಾಡಿ ಪಂಚಭೂತಗಳನ್ನು ಸೃಷ್ಟಿ ಮಾಡಿ ಸಂವತ್ಸರೋಷಿತ, ಅಂಡಭೇದವನ್ನೂ ಮಾಡಿ ಲಿಪಿಪ್ರಾಣಾಯಾಮ, ಲಿಪಿನ್ಯಾಸವನ್ನೂ ಮಾಡಿ, ಅಂಗವನ್ನು ಮಾಡಿ ಮಂತ್ರಪ್ರಾಣಾಯಾಮ ಮಾಡಿ ವ್ಯಾಪಿಸಿ, ಮೂಲಾಕ್ಷರಾಂಗವನ್ನು ಮಾಡಿ ಪೀಠಪೂಜೆಯನ್ನು ಮಾಡಿ ತನ್ನ ಹೃದಯದಿಂದಾವಾಹಿಸಿ, ಲಿಪಿ ಪಂಚತತ್ತ್ವ ಮೂಲಾಕ್ಷರಾಂಗಗಳನ್ನು ನಿರ್ವಹಿಸಿ ಸ್ನಾನಕಾಲದಲ್ಲಿ ಐದು ಕಲಶದಿಂದಭಿಷೇಕಿಸಿ ನ್ಯಾಸ ಮಾಡಿ ಪೂಜಿಸಬೇಕು. ಇದು ಗುರು ತರ ದೋಷದಲ್ಲಿ ವಿಶೇಷ ವಿಧಿಯು. ಎಲ್ಲಾ ದೇವರಲ್ಲೂ ಸಪ್ತಶುದ್ಧಿ ನಂತರ ಪುಣ್ಯಾಹ ಮಾಡಬೇಕು.

* * * *

## ಸುಬ್ರಹ್ಮಣ್ಯೇ ಮಹಾಕುಂಭಾಭಿಷೇಕಃ

ಮುಂಭಾಗದಲ್ಲಿ ಆರು ದಳದ ಪದ್ಮಕ್ಕಾಗಿ ಪೂರ್ವಾಗ್ರವಾಗಿ ಉತ್ತರಾಗ್ರವಾಗಿ ಐದು ರೇಖೆಗಳನ್ನು ಎಳೆದು ಅಲ್ಲಿ ಹದಿನಾರು ಪದಗಳಲ್ಲಿ ಒಳಗಿನ ನಾಲ್ಕರಲ್ಲಿ ಸಮನಾಗಿ ಮೂರು ವರ್ತುಲವನ್ನು ಮಾಡಿ ಮಧ್ಯವೃತ್ತದಲ್ಲಿ ಕರ್ಣಿಕೆಯನ್ನು ಅದರ ಹೊರಗೆ ದಳಸಂಧಿಗಳನ್ನು ಅದರ ಹೊರಗೆ ಪೂರ್ವಾದಿ ಆರು ದಳಗಳನ್ನು ಮಾಡಿ ದಲಸಂಧಿಯ ಅರ್ಧದಲ್ಲಿ ಕೇಸರಗಳನ್ನು ಮಾಡಿ ದಿಕ್ಕುಗಳಲ್ಲಿ ಎರಡು ಪದವು ದ್ವಾರವು ಕೋಣಗಳಲ್ಲಿ ಒಂದು ಪದವು ಕೋಣವು ಭದ್ರದಲ್ಲಿ ಹೇಳಿದಂತೆ ಅಷ್ಟದಳದಲ್ಲಿ ಹೇಳಿದಂತಾಗಲೀ ಬಣ್ಣಗಳಿಂದ ತುಂಬುವಿಕೆಯು– ಹೀಗೆ ಆರು ದಳದ ಪದ್ಮವನ್ನು ಮಾಡಿ ಬತ್ತ ಮೊದಲಾದುವುಗಳಿಂದ ಪೀಠವನ್ನು ಮಾಡಿ ಅಲ್ಲಿ ನೂಲಿನಿಂದ ಸುತ್ತಿದ ದೊಡ್ಡ ಕಲಶಗಳನ್ನು ಕೆಳಮುಖವಾಗಿ ಇರಿಸಬೇಕು. ದೀಪ ಮೊದಲಾದುವನ್ನೂ ಇಡಬೇಕು. ಆಚಾರ್ಯನು ಅಲ್ಲಿ ಕುಳಿತುಕೊಂಡು ದೇಹಶುದ್ಧಿಯನ್ನು ಶಂಖಪೂರಣವನ್ನು ಆತ್ಮಾರಾಧನೆಯನ್ನೂ ಮಾಡಿ ಗುರುಗಳನ್ನು ಗಣಪತಿಯನ್ನು ಪೂಜಿಸಿ ಗುರುಗಳಿಗೆ ಅರ್ಘ್ಯವನ್ನು ಕೊಟ್ಟು ಗಣಪತಿಗೆ ನೈವೇದ್ಯ ಮಾಡಿ ಎರಡೂ ಕಡೆಯಲ್ಲಿ ಪುಷ್ಪಾಂಜಲಿಯನ್ನು ಮಾಡಬೇಕು. ಪೀಠಪೂಜೆಯನ್ನು ಮಾಡಿ ಭುವನೇಶ್ವರಿಯನ್ನು ಆವಾಹಿಸಿ ಪೂಜಿಸಿ ಷಡ್ದಲ ಪದ್ಮಮುದ್ರೆಯನ್ನು ಮಾಡಲ್ಪಡಬೇಕು. ಪೂರ್ವಾದಿ ದಳಗಳಲ್ಲಿ– ಬ್ರಹ್ಮಣೇ ನಮಃ, ಭದ್ರಕಾಳ್ಯೈ ನಮಃ ಗಣಪತಯೇ ನಮಃ ವಿಷ್ಣವೇ ನಮಃ ಈಶ್ವರಾಯ ನಮಃ ಶಾಸ್ತ್ರೇ ನಮಃ ಹೀಗೆ ಪೂಜಿಸಿ ಕಲಶವನ್ನು ಅಸ್ತ್ರದಿಂದ ತೊಳೆದು, ಕವಚಮಂತ್ರದಿಂಧ ನೂಲನ್ನು ಸುತ್ತಿ ಮೂಲದಿಂಧ ಅಷ್ಟಗಂಧವನ್ನು ಲೇಪಿಸಿ ಪ್ರಣವದಿಂದ ಧೂಪವನ್ನು ಹಿಡಿದು ಮೂಲದಿಂದ ಕೆಳಮುಖನಾಗಿರಿಸಿ, ಶೋಷಣ,

ದಾಹನ ಪ್ಲಾವನ ಕಾಠಿನ್ಯ ಸುಷಿರೀಕರಣಗಳನ್ನು ಮಾಡಿ ಪಂಚತತ್ತ್ವಗಳಿಂದ ಕ್ರಮವಾಗಿ ದರ್ಭವಿನ್ಯಾಸ, ಅಷ್ಟಗಂಧ ಪ್ರೋಕ್ಷಣಾ ಅಕ್ಷತ ವಿಕರಣವನ್ನು ಮಾಡಿ ಮೂಲದಿಂದ ಪೂಜಿಸಿ, ನಾಲ್ಕನೆಯದರಿಂದ ಮೇಲುಮುಖನಾಗಿಸಿ ಮೇಲಕ್ಕೆತ್ತಿ ಐದನೆಯ, ಆರನೆಯ ಹಾಗೂ ಮೂಲಮಂತ್ರವನ್ನು ಹೇಳಿ ಪೀಠದಲ್ಲಿರಿಸಬೇಕು. ಪ್ರಣವದಿಂದ ಕಲಶದ ಮುಖವನ್ನು ಪ್ರೋಕ್ಷಿಸಿ ಕಲೆಗಳನ್ನು ನ್ಯಾಸ ಮಾಡಿ ಪೂಜಿಸಿ ಕುಂಭಾವಾಹನೆಯನ್ನು ಮಾಡಿ ಪೂಜಿಸಿ ಕೂರ್ಚನ್ನಿರಿಸಿ ಮಾನಸ ಪೂರಣವನ್ನು ಮಾಡಿ, ಗಾಳಿಸಿದ ಪೂಜಿಸಲ್ಪಟ್ಟ ನೀರಿನಿಂದ ತುಂಬಿಸಿ, ಅದರಲ್ಲಿ ಚಿನ್ನದಿಂದ ಸಿದ್ಧಗೊಳಿಸಿದ ಪದ್ಮ ಗಜ ನವಿಲು, ಶಕ್ತಿ(ಆಯುಧ) ವಜ್ರಗಳನ್ನು ಕಲಶದಲ್ಲಿ ಹಾಕಿ ಲಿಪಿಪಂಕಜವನ್ನು ಪೂಜಿಸಿ, ಕ್ಷೇತ್ರಜ್ಞ ತತ್ತ್ವದಿಂದಾವಾಹಿಸಿ ಪೂಜಿಸಿ, ಮೂಲದಿಂದಾವಾಹಿಸಿ, ಲಿಪಿ ಮೊದಲಾದುವುಗಳಿಂದ ಸಕಲೀಕರಣವನ್ನು ಮಾಡಿ ಅರ್ಘ್ಯ ಮೊದಲಾಗಿ ಕೊಟ್ಟು ಸ್ನಾನ ಕಾಲದಲ್ಲಿ ಕಲಶದ ಮುಂದೆ ಪುಣ್ಯಾಹ ಪಾತ್ರವನ್ನು ಮಾಡಿ– ಓಂ ಸುಬ್ರಮ್ಹಣ್ಯ ದೇವತಾಃ ಪ್ರೀಯಂತಾಂ– ಇದರಿಂದ ಕೂಡಿ ಪುಣ್ಯಾಹವನ್ನು ಮಾಡಿ ಉಳಿದ ನೀರಿನಿಂದ ಕಲಶವನ್ನು ತುಂಬಿಸಿ ವಸ್ತ್ರ ಮೊದಲಾದ ಉಪಹಾರಗಳನ್ನರ್ಪಿಸಿ ಪುನಃ ಪ್ರಣವ, ಉಪಚಾರ ಮೂಲಾಕ್ಷರಾಂಗಾಯುಧಗಳಿಂದ, ಪುನಃ ಸನತ್ಕುಮಾರ ಮೊದಲಾಗಿ ಮೂರ್ತ್ಯಂಗ ಇಂದ್ರಾದಿಗಳಿಂದ ಪೂಜಿಸಿ ಜಯಂತ ಮೊದಲಾಗಿ ಎಂಟು ಅಂತರಾಳಗಳಲ್ಲಿ– ಆದಿತ್ಯೇಭ್ಯೋ ನಮಃ, ಅಶ್ವಿಭ್ಯಾಂ ನಮಃ, ಪಿತೃಭ್ಯೋ ನಮಃ, ಗಣಪತಯೇ ನಮಃ, ಮಾತೃಭ್ಯೋ ನಮಃ , ಅಪ್ಸರೇಭ್ಯೋ ನಮಃ, ವಸುಭ್ಯೋ ನಮಃ, ರುದ್ರೇಭ್ಯೋ ನಮಃ– ಹೀಗೆ ಪೂಜಿಸಿ ಇನ್ನೊಮ್ಮೆ ವಸ್ತ್ರಾದಿ, ಧೂರ್ತಸೇನಾ ಪರ್ಯಂತ ಪೂಜಿಸಿ ನೈವೇದ್ಯ ಮಾಡಿ ಪ್ರಸನ್ನ ಪೂಜೆಯನ್ನು ಮಾಡಿ ಪೂಜೆಯನ್ನು ಪೂರ್ತಿಗೊಳಿಸಬೇಕು. ಅದರ ಎರಡು ಪಕ್ಕಗಳಲ್ಲಿ ಎರಡು ಸ್ವಸ್ತಿಕಗಳನ್ನು ಬರೆದು ಅಲ್ಲಿ ಬಲದಲ್ಲಿ ಪಂಚಗವ್ಯವನ್ನೂ ಎಡಭಾಗದಲ್ಲಿ ವಿಕಿರವನ್ನು ಸೇರಿಸಿ ಇಟ್ಟು ಅಸ್ತ್ರದಿಂದ ಪೂಜಿಸಿ ರಕ್ಷಿಸಬೇಕು. ವ್ರೀಹಿ ಯವ ತಿಲ ತಂಡುಲ ಮಾಷ ಸರ್ಷಪ ದೂರ್ವಾ ದರ್ಭ ಕುಶಾಗ್ರ ತುಲಸೀದಲ ಪದ್ಮ ಕೇಸರಗಳು ವಿಕಿರವಾಗಿರುತ್ತದೆ. ಹೀಗೆ ಮಹಾಕುಂಭವನ್ನು ಪೂಜಿಸಿ, ಆಚಾರ್ಯ ಮತ್ತ ಬ್ರಾಹ್ಮಣರು ಕುಂಭವನ್ನು ಮುಟ್ಟಿಕೊಂಡು ಈ ಮಂತ್ರಗಳನ್ನು ಜಪಿಸುತ್ತಾರೆ. ಅಗ್ನಿಮೀಳೇ– ಇತ್ಯಾದಿ, ಕದ್ರುದ್ರಾಯ– ಇತ್ಯಾದಿ ಅಗ್ನಿರ್ಹೋತಾನೋ ಅಧ್ವರೇ– ಇತ್ಯಾದಿ ಕುಮಾರಂ ಮಾತಾ– ಇತ್ಯಾದಿ ಕನಿಕ್ರದಜ್ಜನುಷಂ– ಇತ್ಯಾದಿ ಸ್ವಸ್ತಿನೋಮಿಮೀತಾ ಇತ್ಯಾದಿ ಹಿರಣ್ಯವರ್ಣಾಮಿತ್ಯಾದಿ ಶಂನ ಇಂದ್ರಾಗ್ನಿ ಇತ್ಯಾದಿ, ಶಂನೋ ದೇವೀರಿತ್ಯಾದಿ ಸಹಸ್ರಶೀರ್ಷಾ ಇತ್ಯಾದಿ ಯಸ್ಮಿನ್ವಕ್ಷೇ ಇತ್ಯಾದಿ ವಾತ ಆವಾತು ಇತ್ಯಾದಿ– ಮೂಲಮಂತ್ರಗಳೆರಡನ್ನು ಅಂಗಮಂತ್ರಗಳನ್ನು ಗಾಯತ್ರೀ ಷಣ್ಮಂತ್ರಗಳು ದ್ವಾದಶ ಮಂತ್ರಗಳು ಪ್ರಣವಗಳು ಜಪಮಂತ್ರಗಳು. ಹೀಗೆ ಬ್ರಾಹ್ಮಣರಿಂದ ಕೂಡಿ ಜಪಿಸಿ ಗರ್ಭಗೃಹವನ್ನು ಪ್ರವೇಶಿಸಿ, ಪೀಠಪೂಜೆಯನ್ನು ಮಾಡಿ ಮೂಲದಿಂದಾವಾಹಿಸಿ ಲಿಪಿತತ್ತ್ವಮಂತ್ರಗಳಿಂದ ಸಕಲೀಕರಣವನ್ನು ಮಾಡಿ ಅರ್ಘ್ಯ ಮೊದಲಾದ ಉಪಹಾರಗಳನ್ನು ಕೊಟ್ಟು ಸ್ನಾನಕಾಲದಲ್ಲಿ ಶುದ್ಧಜಲಗಳಿಂದ ಅಭಿಷೇಕಿಸಿ ಹೊರಗೆ ಬಂದು ಪೀಠೋದ್ವಾಸನೆಯನ್ನು ಮಾಡಿ ನೀರಾಜನ ಮಾಡಿ, ಕಲಶ, ಪಂಚಗವ್ಯ, ವಿಕಿರ ಕುಶ ಪಲಾಶ ಶಮೀ ಶಾಖೆಗಳನ್ನು ಎತ್ತಿ ಒಳಗೆ ಬಂದು ದೇವರಿಗೆ ನೀರಾಜನ ಮಾಡಿ ಆಪೋಹಿಷ್ಠಾ– ಮೊದಲಾದುವುಗಳಿಂದ ಮೂಲದ್ವಯ, ಅಂಗಮಂತ್ರಗಳಿಂದ, ಗಾಯತ್ರೀ ಷಣ್ಮಂತ್ರ, ದ್ವಾದಶನಾಮಗಳಿಂದಲೂ ದೇವರನ್ನು ಅಭಿಷೇಕಿಸಿ ಆ ಉಳಿದ ನೀರಿನಿಂದ ಕುಶ ಪಲಾಶ ಶಮೀ ಪಲ್ಲವಗಳಿಂದ ಆಪೋಹಿಷ್ಠಾ ಮೊದಲಾಗಿ ಅಭಿಷೇಕಕ್ಕೆ ಹೇಳಿದ ಮಂತ್ರಗಳಿಂದ ಪ್ರೋಕ್ಷಿಸಿ ಅಸ್ತ್ರದಿಂದ ಪಂಚಗವ್ಯ ಪ್ರೋಕ್ಷಣೆ, ವಿಕಿರಾರ್ಪಣವನ್ನೂ ಮಾಡಿ ಸ್ವಲ್ಪ ಉಳಿಯುವಂತೆ ಅಭಿಷೇಕಿಸಿ ವ್ಯಾಪಿಸಿ ಅಂಗವನ್ನು ಮಾಡಿ, ಅವುಗಳಿಂದ ಕೂಡಿ ಹೊರಗೆ ಬಂದು ದ್ವಾರಪಾಲಕರು, ಪರಿವಾರಗಳನ್ನು ಮಹಾಬಲಿಪೀಠವನ್ನೂ ಸಂಪ್ರೋಕ್ಷಿಸಿ ಪಂಚಗವ್ಯಪ್ರೋಕ್ಷಣವನ್ನು ವಿಕಿರಾರ್ಪಣವನ್ನು ಮಾಡಿ ಧೂರ್ತಸೇನ ಪರ್ಯಂತ ಆ ಮೂರನ್ನೂ ಸಮರ್ಪಿಸಬೇಕು. ಪುನಃ ದೇವರನ್ನು ಪೂಜಿಸಿ ನೈವೇದ್ಯ ಮಾಡಿ ವೈಶ್ವದೇವ ಮೊದಲಾದುವನ್ನು ಮಾಡಿ ನೈವೇದ್ಯವನ್ನು ವಿಸರ್ಜಿಸಿ ಪ್ರಸನ್ನ ಪೂಜೆಯನ್ನು ಮಾಡಿ ಉಳಿದುದನ್ನು ಪೂರ್ತಿಗೊಳಿಸಿ ರಕ್ಷಿಸಬೇಕು. ಹೀಗೆ ಸುಬ್ರಮ್ಹಣ್ಯನಲ್ಲಿ ಮಹಾಕುಂಭಪ್ರೋಕ್ಷಣ ಪ್ರಕಾರಃ. ಎಲ್ಲಾ ದೇವತೆಗಳಲ್ಲೂ ಕಾರಣ ಹಾಗೂ ದ್ರವ್ಯವನ್ನನುಸರಿಸಿ ವೇದ ಜಪದಿಂದ ಕೂಡಿ ಸಪ್ತಶುದ್ಧಿಯನ್ನು ಮಾಡಿ, ಮರಣಾದಿ ದೋಷ ಶಾಂತಿಗೆ ಆಗಮೋಕ್ತ ಹೋಮವನ್ನು ಮಾಡಬೇಕು.

**ಕ್ಷಾಳನ ಪ್ಲಾವನ ಸ್ನಾನ ಮಾರ್ಜನಾನಿ ಯಥಾ ಕ್ರಮಂ ।**
**ಧಾರವಗಾಹಸೇಕಾಶ್ಚ ಸಪ್ತೈತಾಬಿಂಬಶುದ್ಧಯಃ ॥**

* * * *

## ಶಿವನಲ್ಲಿ – ಅಧಿವಾಸ ಹೋಮ

ಅಸ್ಮಿನ್ನನ್ವಾಹಿತೇಽಗ್ನಾವಗ್ನಿಂ ಜಾತವೇದಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂಚಾಘೂರ ದೇವತೇ ಆಜ್ಯೇನ, ಅಗ್ನೀಷೋವತಾ ಚಕ್ಷುಷೀ ಆಜ್ಯೇನ ಪ್ರಧಾನ ದೇವತಾಂ ಶಿವಂ ಪ್ರಣವವ್ಯಾಹೃತಿ ಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾ ಪಕ್ವೇನ ಪೂಜಾಮಂತ್ರೈರಾಜ್ಯೇನ ಮೂಲೇನಾಷ್ಟವಾರಮಾಜ್ಯೇನ– ಮೂಲೇನ ಸಮಿದಾಜ್ಯ ಚರು ಲಾಜ ಸರ್ಷಪ ತಿಲ ಯವ ವ್ರೀಹಿ ಸಕ್ತು ಪುನರಾಜ್ಯ– ಇತಿ ದಶದ್ರವ್ಯೈಃ ಪ್ರತ್ಯೇಕಂ ಯಥಾಸಂಖ್ಯಯಾ, ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಚರು

ಶೇಷೇಣಾಗ್ನಿಂ ಸ್ವಿಷ್ಟಕೃತಂ ದೇವಾನನುಯಾಜೇನ ಪ್ರಜಾಪತಿಂಚಾಜ್ಯೇನ ವಸುರುದ್ರಾದಿತ್ಯಾನ್ಪರಿಧಿಭಿಃ ಇಧ್ಮಸನ್ನಹನೇನ ರುದ್ರಂ ವಿಶ್ವಾನ್ದೇವಾನ್ಸಂಸ್ರಾವೇಣ ಅಯಾಸಮಗ್ನಿಂ ದೇವಾನ್ ವಿಷ್ಣುಮಗ್ನಿಂ ವಾಯುಂ ಸೂರ್ಯಂ ಪ್ರಜಾಪತಿಂ ಚೈತಾಃ ಪ್ರಾಯಶ್ಚಿತ್ತ ದೇವತಾಃ ಆಜ್ಯ ದ್ರವ್ಯೇಣ ಜ್ಞಾತಾಜ್ಞಾತ ದೋಷ ನಿರ್ಹರಣಾರ್ಥಮನಾಜ್ಞಾತತ್ರಯೇಣಾಗ್ನಿಮಾಜ್ಯೇನ ನ್ಯೂನಾತಿರಿಕ್ತದೋಷ ನಿರ್ಹರಣಾರ್ಥಮಗ್ನಿಮರುತಶ್ಚಾಜ್ಯೇನ ಏತಾ ಅಂಗದೇವತಾಃ ಪ್ರಧಾನದೇವತಾಃ ಪ್ರಾಯಶ್ಚಿತ್ತ ದೇವತಾಸ್ತಾಃ ಸರ್ವಾಃ ಸನ್ನಿಹಿತಾಃ ಸಂತು. ಏವಮಾತ್ಮಕೇನ ಸಾಂಗೋಪಾಂಗೇನ ಕರ್ಮಣಾ ಸದ್ಯೋಯಕ್ಷ್ಯೇ ॥

* * * *

## ಗಣೇಶೇ – ಅಧಿವಾಸ ಹೋಮಃ

ಅಸ್ಮಿನ್ನನ್ವಾಹಿತೇತ್ಯಾದಿ– ಚಕ್ಷುಷ್ಯಂತಮುಕ್ತ್ವಾ ಪ್ರಧಾನದೇವತಾಂ ಗಣಪತಿಂ ಪ್ರಣವವ್ಯಾಹೃತಿ ಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾಪಕ್ವೇನ ಪೂಜಾಮಂತ್ರೈಃ ಸಕೃತ್ಸಕೃದಾಜ್ಯೇನ ಮೂಲೇನಾಷ್ಟವಾರಮಾಜ್ಯೇನ ಷಣ್ಮಂತ್ರೈರಾಜ್ಯೇನ, ಮೂಲಮಂತ್ರೇಣ ಬಿಲ್ವ ಸಮಿದಾಜ್ಯ ಚರು ಲಾಜ ಪ್ರಥುಕ ಲಡ್ಡುಕಾಪೂಪ ಶಷ್ಕುಲೀ ಪುನರಾಜ್ಯೇತಿ ನವದ್ರವ್ಯೈಃ ಯಥಾಸಂಖ್ಯಯಾ ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷ್ಯೇ

**ಷಣ್ಮಂತ್ರಾಃ**– ವಿಘ್ನಾಯ । ವಿನಾಯಕಾಯ । ವೀರಾಯ । ಶೂರಾಯ । ವರದಾಯ । ಹಸ್ತಿಮುಖಾಯ ನಮಃ– ಇತಿ ಷಣ್ಮಂತ್ರಾಃ ॥

* * * *

## ವಿಷ್ಣೌ – ಅಧಿವಾಸಹೋಮಃ

ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷ್ಯಂತಮುಕ್ತ್ವಾ– ಪ್ರಧಾನದೇವತಾಂ ವಿಷ್ಣುಂ ಪ್ರಣವವ್ಯಾಹೃತಿಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾಪಕ್ವೇನ ಪೂಜಾ ಮಂತ್ರೈರಾಜ್ಯೇನ ಮೂಲೇನಾಷ್ಟವಾರ ಮಾಜ್ಯೇನ ಮೂಲಮಂತ್ರೇಣ ಸಮಿದಾಜ್ಯ ಚರು ಲಾಜ ಸರ್ಷಪ ಯವ ತಿಲ ವ್ರೀಹಿ ಘೃತ ದ್ರವ್ಯೈಃ ಪ್ರತ್ಯೇಕಂ ಯಥಾ ಸಂಖ್ಯಯಾ ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಚರುಶೇಷೇಣಾಗ್ನಿಂ ಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷೇ ॥

* * * *

## ದುರ್ಗಾಯಾಂ – ಅಧಿವಾಸ ಹೋಮಃ

ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷ್ಯಂತ ಮುಕ್ತ್ವಾ ಪ್ರಧಾನದೇವತಾಂ ದುರ್ಗಾಂ ಪ್ರಣವವ್ಯಾಹೃತಿಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ತ್ರಿಷ್ಟುಭಾಪಕ್ವೇನ ಪೂಜಾ ಮಂತ್ರೈರಾಜ್ಯೇನ ಮೂಲೇನಾಷ್ಟವಾರ ಮಾಜ್ಯೇನ ಪಂಚದುರ್ಗಾಭಿರಾಜ್ಯೇನ ಜಾತವೇದಸ– ಇತಿ ಮಂತ್ರೇಣ– ಸಮಿದಾಜ್ಯ ಚರು ಯವ ವ್ರೀಹಿ ತಿಲ ಸರ್ಷಪ ದೂರ್ವಾಭಿರ್ದ್ರವ್ಯೈಃ ಪ್ರತ್ಯೇಕಂ ಯಥಾ ಸಂಖ್ಯಯಾ ಪ್ರತಿದ್ರವ್ಯಂ ವ್ಯಾಹೃತಿಪೂರ್ಣಾಹುತಿಭಿಃ ಚರುಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷ್ಯೇ ॥

* * * *

## ಶಂಕರನಾರಾಯಣೇ – ಅಧಿವಾಸ ಹೋಮಃ

ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷೀ ಆಜ್ಯೇನ ಅತ್ರ ಪ್ರಧಾನ ದೇವತಾಂ ಶಂಕರನಾರಾಯಣಂ– ಪ್ರಣವವ್ಯಾಹೃತಿ ಪೀಠಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾಪಕ್ವೇನ, ಮೂಲೇನಾಷ್ಟವಾರಮಾಜ್ಯೇನ, ಮೂಲಮಂತ್ರೇಣ ಸಮಿದಾಜ್ಯ, ಚರು, ಲಾಜ, ಸರ್ಷಪ, ಯವ ತಿಲ ವ್ರೀಹಿ ಸಕ್ತು ಪುನರಾಜ್ಯ ದ್ರವ್ಯೈಃ (ಅಥವಾ ಮೂಲೇನ ಚತುರ್ಭಿರ್ವೇದಾದ್ಯೈಃ ಭೂರಾದಿ ಚುತುರ್ಭಿಃ ಮೂಲೇನೇತಿ) ಪ್ರತ್ಯೇಕಂ ಯಥಾಸಂಖ್ಯಯಾ ದ್ರವ್ಯಾಂತೇ ವ್ಯಾಹೃತಿ ಪೂರ್ಣಾಹುತಿಭಿಃ ಚರು ಶೇಷೇಣ ಸ್ವಿಷ್ಟಕೃತಮಿತ್ಯಾದಿಸದ್ಯೋಯಕ್ಷ್ಯೇ (ಅಗ್ನಿಮೀಳೇ ಪುರೋಹಿತಂ * * ಇಷೇತ್ವೋರ್ಜೇತ್ವಾವಾಯವ * * ಅಗ್ನಾಯಾಹಿವೀತಯೇ * * ಶಂನೋ ದೇವೀರಭಿಷ್ಟಯೇ * * ಇತಿವೇದಾದ್ಯಾಃ)

* * * *

## ಸ್ಕಂದೇ – ಅಧಿವಾಸ ಹೋಮಃ

ಅಸ್ಮಿನ್ನನ್ವಾಹಿತೇತ್ಯಾದಿ ಚಕ್ಷುಷೀ ಆಜ್ಯೇನ ಪ್ರಧಾನ ದೇವತಾಂ ಸ್ಕಂದಂ– ಪ್ರಣವವ್ಯಾಹೃತಿಪೀಠ ಮಂತ್ರೈಃ ಸಕೃತ್ಸಕೃದಾಜ್ಯೇನ ಗಾಯತ್ರ್ಯಾಪಕ್ವೇನ, ಪೂಜಾಮಂತ್ರೈರಾಜ್ಯೇನ ಮೂಲೇನಾಷ್ಟವಾರಮಾಜ್ಯೇನ ಷಣ್ಮಂತ್ರೈರಾಜ್ಯೇನ ಉಪಚಾರೇಣ ದ್ವಾದಶನಾಮಭಿಶ್ಚೈಕೈಕವಾರಮಾಜ್ಯೇನ ಮೂಲೇನ ಬಿಲ್ವಸಮಿದಾಜ್ಯ ಹವಿರ್ಲಾಜ ತಿಲ ಯವ ಸರ್ಷಪ ದ್ರವ್ಯೈಃ ಪ್ರತ್ಯೇಕಂ ಯಥಾ ಸಂಖ್ಯಯಾ ದ್ರವ್ಯಾಂತೇವ್ಯಾಹೃತಿ ಪೂರ್ಣಾಹುತಿಭಿಃ ಚರುಶೇಷೇಣಾಗ್ನಿಂ ಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷ್ಯೇಃ ॥

ಮಾಡಿ ಸುಷುಮ್ನಾ ನಾಡಿಯಿಂದ ಪಸರಿಸಿದ ಈ ತೇಜಸ್ಸನ್ನು ಸುತ್ತಲೂ ಪ್ರಸಾರಣವನ್ನು ಮಾಡಿ ದೊಡ್ಡ ಪ್ರಾಕಾರದ ಪರ್ಯಂತವಾಗಿ ಪಸರಿಸಿದಂತೆ ಪರಿಕಲ್ಪಿಸಿ ಸಪ್ತ (ಏಳು) ಮಾತ್ರಾ ಪ್ರಣವದಿಂದ ಸಂಹಾರ ಮುದ್ರೆಯಿಂದ ಪುಷ್ಪಾಂಜಲಿಯನ್ನು ಮಾಡುವವನಾಗಿ ಹೊರಗಿನ ಪ್ರಾಕಾರದಿಂದಾರಂಭಿಸಿ, ಮಧ್ಯ ಪ್ರಾಕಾರ ಪರ್ಯಂತವಾಗಿ ಇರುವ ಪರಿವಾರಗಳನ್ನು ತೇಜಸ್ಸಿನಿಂದ (ಕಾಂತಿಯಿಂದ, ಪ್ರಭೆಯಿಂದ) ಸಂಗ್ರಹಿಸಿ ಜಾಗ್ರದವಸ್ಥೆಯಿಂದ ಕೂಡಿ, ತಂದು ಅಲ್ಲಿಯ (ಮಧ್ಯಹಾರ ಪ್ರಾಕಾರ) ತನಕ ತರಬೇಕು. ಹಾಗೆಯೇ ಅಲ್ಲಿಂದ ಆರು ಮಾತ್ರ ಪ್ರಣವದಿಂದ ಪುಷ್ಪಾಂಜಲಿಯನ್ನು ಮಾಡುತ್ತಾ, ಮಧ್ಯಪ್ರಾಕಾರದಿಂದಾರಂಭಿಸಿ ಸ್ವಪ್ನಾವಸ್ಥೆಯಿಂದ ಕೂಡಿ ಒಳಪ್ರಾಕಾರ ಪರ್ಯಂತವಾಗಿ ಇರುವ ಪರಿವಾರಗಳನ್ನು ತೇಜಸ್ಸಿನಿಂದ ಸಂಗ್ರಹಿಸಿ, ಸ್ವಪ್ನಾವಸ್ಥೆಯಿಂದ ಕೂಡಿ ಒಳಪ್ರಾಕಾರ ಪರ್ಯಂತ ಹೊಂದಿಸಬೇಕು. ಹಾಗೆಯೇ ಐದು ಮಾತ್ರೆಯ ಪ್ರಣವದಿಂದ ಪುಷ್ಪಾಂಜಲಿಯನ್ನು ಮಾಡುವವನಾಗಿ, ಒಳಪ್ರಾಕಾರವನ್ನಾರಂಭಿಸಿ, ಒಳಗಿನ ಪರಿಧಿಯ ತನಕ ಇರುವ ಪರಿವಾರಗಳನ್ನು ತೇಜಸ್ಸಿನಿಂದ ಸಂಗ್ರಹಿಸಿ, ಸುಷುಪ್ತ್ಯವಸ್ಥೆಯಿಂದ ಕೂಡಿ ಒಳಪರಿಧಿಯ ಪರ್ಯಂತ ಹೊಂದಿಸಬೇಕು. ಪುನಃ ನಾಲ್ಕು ಮಾತ್ರಾ ಪ್ರಣವದಿಂದ ಪುಷ್ಪಾಂಜಲಿಯನ್ನು ಮಾಡುವವನಾಗಿ ಒಳಗಿನ ಪರಿಧಿಯಿಂದಾರಂಭಿಸಿ ಪ್ರಾಸಾದ ಪರ್ಯಂತದಲ್ಲಿರುವ ಪರಿವಾರಗಳನ್ನು ತೇಜಸ್ಸಿನಿಂದ ಒಂದುಗೂಡಿಸಿ ತುರೀಯಾವಸ್ಥೆಯಿಂದ ಕೂಡಿ ತಂದು ಪ್ರಾಸಾದ ಪರ್ಯಂತ ಹೊಂದಿಸಬೇಕು. ಪುನಃ ತ್ರಿಮಾತ್ರಾ ಪ್ರಣವದಿಂದ ಪುಷ್ಪಾಂಜಲಿಯನ್ನು ಮಾಡಿ ಪ್ರಾಸಾದದಿಂದ ಗರ್ಭಗೃಹ ಪರ್ಯಂತವಾಗಿ ಇರುವ ಪರಿವಾರಗಳನ್ನು ತೇಜಸ್ಸಿನಿಂದ ಸೆಳೆದು ಗರ್ಭಗೃಹ ಪರ್ಯಂತ ಹೊಂದಿಸಬೇಕು. ಎರಡು ಮಾತ್ರಾ ಪ್ರಣವದಿಂದ ಗರ್ಭಗೃಹದಿಂದ ಪೀಠಪರ್ಯಂತವಾಗಿ ಇರುವ ಪರಿವಾರಗಳನ್ನು ತೇಜಸ್ಸಿನಿಂದ ಸಂಗ್ರಹಿಸಿ ಪೀಠಪರ್ಯಂತವಾಗಿ ಹೊಂದಿಸಬೇಕು. ಒಂದು ಮಾತ್ರೆಯ ಪ್ರಣವದಿಂದ ಪೀಠದಿಂದ ಮಂತ್ರಬಿಂಬಪರ್ಯಂತವಾಗಿ ಇರುವ ಪರಿವಾರಗಳನ್ನು ತೇಜಸ್ಸಿನಿಂದ ಸಂಗ್ರಹಿಸಿ ಅವಸ್ಥೆಗಳಿಂದ ಕೂಡಿ ಸೆಳೆದು ತುತ್ತನಾಗಿಸಿದ ಪರಿವಾರವನ್ನು ಆ ತೇಜಸ್ಸಿನೊಡನೆ ಹೊಂದಿಸಬೇಕು. ಪುನಃ ಬಿಂಬದಿಂದ ಪ್ರತಿಲೋಮ ತತ್ತ್ವಗಳಿಂದ ಪ್ರಣವದಿಂದಲೂ ಆ ಎಲ್ಲಾ ತೇಜಸ್ಸಮೂಹವನ್ನು ಬಿಂಬದ ಒಳಗಿನ ಚಿದಾತ್ಮನಲ್ಲಿ ಹೊಂದಿಸಬೇಕು. ಹೀಗೆ ಕ್ರಮವಾಗಿ ಹೊರ ಪ್ರಾಕಾರ ಮೊದಲಾಗಿ ಪ್ರಾಸಾದ ಪರ್ಯಂತವಾಗಿ, ಪ್ರಾಸಾದ ಮೊದಲಾಗಿ ಪ್ರತಿಮೆಯ ಹೃದಯಾಂತವಾಗಿ ಆಯಾಯ ಶಕ್ತಿಯಿಂದ ಜೊತೆಯಲ್ಲಿ ಸೆಳೆದು ಪ್ರತಿಮೆಯ ಹೃತ್ಕಮಲದ ಚೈತನ್ಯದಲ್ಲಿ ಸೇರಿಸಿ ದೇವರನ್ನು ಚಿನ್ಮಾತ್ರವಾಗಿ ಪರಿಕಲ್ಪಿಸಿ ಇದರಿಂದ ತಾನು ಬೇರೆಯಾಗಿರಬೇಕು.

* * * *

## ಸಂಕ್ರಾಮ ವಿಧಿಃ

ದೇವರ ಮುಂಭಾಗದಲ್ಲಿ ಸ್ವಸ್ತಿಕದ ಮೇಲೆ ಸಿದ್ಧಗೊಳಿಸಿದ ಪೀಠದಲ್ಲಿ ದರ್ಭೆಯ ಕೂರ್ಚನ್ನಿರಿಸಿ, ಸಂಸ್ಕಾರಗೊಳಿಸಿದ ಲೋಹಮಯವಾದ ಕಲಶದಲ್ಲಿ ದೂರ್ವೆ ಅಕ್ಷತೆ ಚಿನ್ನ ನವರತ್ನ ಮೊದಲಾದವುಗಳಿಂದ ಕೂರ್ಚೆನೊಂದಿಗೆ ಹಾಕಿ, ಗಾಳಿತವಾದ ತೀರ್ಥಾದ್ಯಾವಾಹನೆಯಿಂದ ಪರಿಶುದ್ಧವಾದ ನೀರಿನಿಂದ ಮಾನಸ ಪೂರಣಾ ನಂತರದಲ್ಲಿ ಮುಕ್ಕಾಲಂಶದಷ್ಟನ್ನು ತುಂಬಿಸಬೇಕು. ಕಲಶದಲ್ಲಿ ಲಿಪಿಪಂಕಜವನ್ನು ಪೂಜಿಸಿ, ಮೂರ್ತಿಯನ್ನು ಪೂಜಿಸಿ, ಕಲಾವಾಹನೆಯನ್ನು ಮಾಡಿ

**ನಮಸ್ತೇ ಸರ್ವಲೋಕೇಶ ಭೂತಾನಾಮಭಯಪ್ರದ ।**
**ಭಕ್ತಪ್ರಿಯ ನಮಸ್ತೇಽಸ್ತು ಪ್ರಸೀದ ಭುವನೇಶ್ವರ ॥**
**ಆಗಚ್ಛ ದೇವ ದೇವೇಶ ಸರ್ವಕಾರಣ ಕಾರಣ ।**
**ನವೀಕರಣಸಿದ್ಧ್ಯರ್ಥಂ ಕುಂಭೇಽಸ್ಮಿನ್ಸನ್ನಿಧಿಂಕುರು ॥**

ಹೀಗೆ ದೇವರನ್ನು ಪ್ರಾರ್ಥಿಸಿ ಮಂತ್ರ ಮೂರ್ತಿಯಲ್ಲಿ 'ಕನಿಕ್ರದಜ್ಜನುಷಂ' ಮೊದಲಾಗಿ, 'ಸ್ವಸ್ತಿನೋಮಿಮೀತಾ' ಮೊದಲಾದ 'ವಾಸ್ತೋಷ್ಪತೇ'– ಮೊದಲಾದ ಮಂತ್ರಗಳಿಂದ ಹೋಮಿಸಿದ ಸಂಪಾತಗಳೆರಡನ್ನು ಬಿಂಬದ ಹೃದಯದಲ್ಲಿ ಸಮರ್ಪಿಸಬೇಕು. (ಹಚ್ಚಬೇಕು) ಆಮೇಲೆ ಎಲ್ಲಾ ದೇವತೆಗಳಲ್ಲಿಯೂ ನಿಜನಿಜ ಗಾಯತ್ರಿಯಿಂದ ಸ್ಥೂಲ ರೂಪವನ್ನೂ, ನಿಜನಿಜ ಮೂಲದಿಂದ ಸೂಕ್ಷ್ಮರೂಪವನ್ನೂ, ಪ್ರಣವದಿಂದ ಪರರೂಪವನ್ನೂ ಮಂತ್ರಬಿಂಬದಿಂದ ವ್ಯುತ್ಕ್ರಮದಿಂದ ಉದ್ವಾಸನಾರೂಪದಿಂದ ಕಲಶದಲ್ಲಿ ಆವಾಹಿಸಬೇಕು. ಅಲ್ಲಿ ಸ್ಥೂಲಾವಾಹನೆಯಲ್ಲಿ ಗಾಯತ್ರಿಯ ಸ್ಥಾನದಲ್ಲಿ ಆಯಾಯ ನಿಜ ಉಪಚಾರ ಮಂತ್ರದಿಂದಲೂ ಆವಾಹಿಸಬಹುದು. ವಿಷ್ಣುವಿನಲ್ಲಿ ಅಷ್ಟಾಕ್ಷರ, ದ್ವಾದಶಾಕ್ಷರ ಪ್ರಣವದಿಂದಲಾಗಲೀ, ಶಿವನಲ್ಲಿ ಷಡಕ್ಷರ, ಪ್ರಾಸಾದ ಪ್ರಣವಗಳಿಂದಲಾಗಲೀ ಸ್ಥೂಲ ಸೂಕ್ಷ್ಮ ರೂಪಗಳನ್ನು ಆವಾಹಿಸಬೇಕು. ಅಂಜಲಿಯಲ್ಲಿ ಪುಷ್ಪಾಕ್ಷತೆಯನ್ನು ಹಿಡಿದು ಬಿಂಬಕ್ಕೆ ಪ್ರದಕ್ಷಿಣ ತಂದು ಪಾದದಿಂದ ಹೃದಯದವರೆಗೆ ಕೊಂಡು ಹೋಗಿ ಅಲ್ಲಿಂದ ಸ್ಥೂಲ ಸೂಕ್ಷ್ಮ ಪರ ರೂಪಗಳನ್ನು ಕಲಶಕ್ಕೆ ಆವಾಹಿಸುವುದು ಪ್ರಯೋಗ ಕ್ರಮ. ತನ್ನ ನಿಜ ಮೂಲಮಂತ್ರ ನ್ಯಾಸಾಂತವಾಗಿ ಕರ್ಮವನ್ನು ಮಾಡಿ ಸ್ವಲ್ಪ (ಸಣ್ಣದಾಗಿ) ಪೂಜಿಸಬೇಕು.

## ಜೀವೋದ್ವಾಸನ ಪ್ರಕಾರ

ಶಂಖದಲ್ಲಿ ನೀರನ್ನು ತುಂಬಿಸಿ ಮೂಲಮಂತ್ರದಿಂದ ಪೂಜಿಸಿ ಬಿಂಬದಲ್ಲಿರುವ ದೇವರ ಹೃದಯ ಕಮಲದ ಮಧ್ಯದಿಂದ ಹೋಮ ಮಾಡಿದ (ಸಂಹಾರ) ಕ್ರಮದಂತೆ ನಾಮ ಮಂತ್ರಗಳನ್ನು ಹೇಳುತ್ತಾ ಆವಾಹಿಸಿ, ಕಲಶಮೂರ್ತಿಯಲ್ಲಿ ಸಂಯೋಜಿಸಿ, ಕ್ಷೇತ್ರಪಾಲನಿಂದ ಗೋಪುರ ದ್ವಾರ ದೇವತೆಗಳವರೆಗೆ, ನಿರ್ಮಾಲ್ಯಧಾರಿಯಿಂದ ಷಡಂಗದವರೆಗೆ, ಚತುರ್ಥ್ಯಂತವಾಗಿ ಹೇಳಿ, ಸೃಷ್ಟಿಸಂಹಾರ ಕ್ರಮದಿಂದ ಮೂಲಪುಟಿತವಾದ ಪಂಚತತ್ತ್ವಗಳನ್ನು ಹೇಳಿ, ಆಮೇಲೆ ಪೃಥಿವೀ ತತ್ತ್ವದಿಂದ ಪ್ರಾಣ ತತ್ತ್ವದವರೆಗೆ ನಾಲ್ಕು ಮಂಡಲಗಳನ್ನು ಹೇಳಿ ಪಾದಾದಿ ದ್ವಾದಶಾಂತಸ್ಥ ಪರಮಾತ್ಮ ಪರ್ಯಂತವಾಗಿ ಶಂಖದ ನೀರನ್ನು ಕೊಂಡು ಹೋಗಿ ಕಲಶದಲ್ಲಿರುವ ಮೂರ್ತಿಯಲ್ಲಿ ಪ್ರಾಣನ್ಯಾಸದ ಹೊರತಾಗಿ ಆವಾಹಿಸಿ ಸಕಲೀಕರಣ ಮೊದಲಾದುವನ್ನು ಮಾಡಿ ಸ್ವಲ್ಪ ಪೂಜಿಸಿ ನೈವೇದ್ಯ ಮಾಡಿ ಅಲ್ಲಿರುವ ದೇವರನ್ನು ಸಂತಸಗೊಳಿಸಬೇಕು. ಶಿವನಲ್ಲಿಯಾದರೂ ಬಿಂದು, ನಾದ, ಶಕ್ತಿ, ಶಾಂತಗಳಿಂದ ಪ್ರಕಾಶಿತವಾದ ಪ್ರಣವದಿಂದ ಸಂಪುಟಿತವಾದ ಪಂಚಬ್ರಹ್ಮದಿಂದ ಕೂಡಿದ ಪಂಚತತ್ತ್ವಗಳಿಂದಲೇ ಆವಾಹನ ವಿಧಿಯನ್ನು ಮಾಡಬೇಕು.

ಓಂ ಓಂ ಈಶಾನಃ ಸರ್ವವಿದ್ಯಾನಾಂ * * * ಸದಾಶಿವೋಂ ಓಂ ಓಂ ಓಂ ತತ್ಪುರುಷಾಯ * * * ಪ್ರಚೋದಯಾತ್ ಓಂ ಬಿಂದ್ವಾತ್ಮನೇ ನಮಃ । ಓಂ ಅಘೋರೇಭ್ಯೋ * * * ರುದ್ರರೂಪೇಭ್ಯಃ ಓಂ ನಾದಾತ್ಮನೇ ನಮಃ । ಓಂ ವಾಮದೇವಾಯ * * * ಮನೋನ್ಮನಾಯ ನಮಃ ಓಂ ಶಕ್ತ್ಯಾತ್ಮನೇ ನಮಃ । ಓಂ ಸದ್ಯೋಜಾತಂ * * * ಭವೋದ್ಭವಾಯ ನಮಃ ಓಂ ಶಾಂತ್ಯಾತ್ಮನೇ ನಮಃ ।

ಎಲ್ಲೆಡೆಯಲ್ಲೂ ಒಳ್ಳೆಯ ಬಟ್ಟೆಯಿಂದ, ದರ್ಭೆಯ ಹಗ್ಗದಿಂದ ಕೂಡಿ ಹೊದಿಸಿ, ಕನಿಕ್ರದಜ್ಜನುಷಂ– ಮೊದಲಾದುದರ ಹುತಸಂಪಾತವನ್ನು ಸಮರ್ಪಿಸಿ, ಉತ್ತಿಷ್ಠ ಬ್ರಹ್ಮಣಸ್ಪತೇ– ಮಂತ್ರವನ್ನು ಜಪಿಸುವವನಾಗಿ ಕಲಶವನ್ನು ಮೇಲಕ್ಕೆತ್ತಿ ಮುಂಡಾಸನ್ನು ಸುತ್ತಿ ಜೀವಕುಂಭವನ್ನು ತಲೆಯಲ್ಲಿರಿಸಿ ಅಲ್ಲಿಂದ ಹೊರಟು ಶಾಕುನಸೂಕ್ತ ಕನಿಕ್ರದಾದಿ ಸೂಕ್ತಗಳನ್ನು ಜಪಿಸುವವನಾಗಿ ಪ್ರಾಸಾದನ್ನು ಸುತ್ತುವರಿದು ಬಾಲಾಲಯವನ್ನು ಬಂದು ಸುತ್ತುವರಿದು ಬಾಗಿಲಿನಲ್ಲಿ ಅರ್ಘ್ಯವನ್ನು ಕೊಟ್ಟು ಒಳಗೆ ತೆಗೆದುಕೊಂಡು ಹೋಗಿ ಹಾಸಿಗೆಯಲ್ಲಿರಿಸಿ ಪೂಜಿಸಿ ರಕ್ಷಿಸಬೇಕು. ಬಿಂಬತ್ಯಾಗ ಪಕ್ಷವು ಮುಂದೆ ಹೇಳಲ್ಪಡುತ್ತದೆ.

* * * *

## ಬಾಲಾಲಯ ಪಕ್ಷ

ಚೆನ್ನಾಗಿ ಸಂಸ್ಕರಿಸಲ್ಪಟ್ಟ ಬಾಲಾಲಯದಲ್ಲಿ ಚಿಕ್ಕ ಪೀಠವನ್ನು ಸಂಸ್ಕರಿಸಿ ಚಿಕ್ಕ ಬಿಂಬವನ್ನೂ ಜೀವಕುಂಭ ಸಹಿತವಾಗಿ ಅಧಿವಾಸ ಮಾಡಿ ಸಂರಕ್ಷಿಸಿ, ಜೀವಕುಂಭದ ಸಮೀಪದಲ್ಲಿ ಜಾಗರೂಕನಾಗಿ ರಾತ್ರಿಯನ್ನು ಕಳೆಯಬೇಕು. ಬೆಳಿಗ್ಗೆ (ಮರುದಿನ) ನಾಂದೀ ಮುಖ ಮೊದಲಾದ ಕ್ರಮದಿಂದ ಚಿಕ್ಕಪೀಠವನ್ನು ಪ್ರತಿಷ್ಠಾಪಿಸಿ, ಸಂರಕ್ಷಿಸಿ, ಮೂಲಬಿಂಬದಲ್ಲಿ ಹೇಳಿರುವಂತೆ ಅಧಿವಾಸ ಹೋಮಾದಿಗಳನ್ನು ಮಾಡಿ ದೇವರನ್ನು ಪೂಜಿಸಿದ ಬಿಂಬದಲ್ಲಿ ಎಲ್ಲವನ್ನೂ ಉದ್ವಾಸನೆ ಮಾಡಿ ಬಿಂಬ ಕಲಶಕ್ರಮದಿಂದ ಹೇಳಿದ ಕ್ರಮದಂತೆ ಕೊಂಡು ಹೋಗಿ ಪರಾವಾಹನ ಪೂಜೆ ಮೊದಲಾದುವನ್ನು ಮಾಡಿ ಹೇಳಲ್ಪಟ್ಟ ಕ್ರಮದಂತೆ ಬಿಂಬವನ್ನು ಪ್ರತಿಷ್ಠಾಪಿಸಿ ನಿದ್ರಾಕಲಶಾಭಿಷೇಕ ಪರ್ಯಂತವಾದ ಕಾರ್ಯಗಳನ್ನು ಮಾಡಿ

ಭಗವನ್ನಲ್ಪಗೇಹೇಽಸ್ಮಿನ್ವಾಸಕ್ಲೇಶೋಽಪಿತೇಹರೇ ।<br>
ವಸ್ತವ್ಯೋಭಗವಂಸ್ತಾವದ್ಯಾವದ್ಗೇಹಂ ಸಮಾಪ್ಯತೇ ॥<br>
ಕಾರಕಸ್ಯಪರಾಮೃದ್ಧಿಮನುಜಾನನ್ಮಹೋದಯಾಂ ।<br>
ಭಕ್ತಾನಾಮನುಕಂಪಾರ್ಥಮಿಹತ್ವಂ ಸ್ಥಾತುಮರ್ಹಸಿ ॥

–ಹೀಗೆ ಪ್ರಾರ್ಥಿಸಿ, ಜೀವಕಲಶಾಭಿಷೇಕವನ್ನು ಮಾಡಬೇಕು. ಪ್ರಾಣನ್ಯಾಸ ಮೊದಲಾದುವನ್ನು ಮಾಡಬೇಕು. ಬೇರೆ ದೇವತೆಗಳಲ್ಲಿ ಊಹಿಸಬೇಕು. ಬಿಂಬ ಪಕ್ಷದಲ್ಲಾದರೆ– ಯಾವದ್ಬಿಂಬಂ ಸಮಾಪ್ಯತೇ– ಹೀಗೆ ಊಹಿಸಬೇಕು. ಇಲ್ಲಿ ಸ್ಥೂಲಾವಾಹನ ಮೊದಲುಗೊಂಡು ಎಲ್ಲಾ ಕಾರ್ಯಗಳನ್ನು ನಿರ್ವಹಿಸಿ ದೇವರನ್ನು ಪೂಜಿಸಿ ಚರುವನ್ನು ನೈವೇದ್ಯ ಮಾಡಿ ಪರಿಷದ್ಬಲಿಯನ್ನು ಹಾಕಿ ದೇವರನ್ನು ಸಂತೋಷಗೊಳಿಸಿ ಬಾಗಿಲನ್ನು ಮುಚ್ಚಿ ಹಿಂದಿನಂತೆ ಮೂರುದಿನ ಕಳೆಯಬೇಕು. ನಾಲ್ಕನೆಯ ದಿನದಲ್ಲಿ ಅಭಿಷೇಕ ಮೊದಲಾಗಿ ಉತ್ಸವದ ಪರ್ಯಂತವಾಗಿ ಹಿಂದೆ ಹೇಳಿದ ಎಲ್ಲಾ ಕಾರ್ಯಗಳನ್ನು ಮಾಡಬೇಕು. ಆದರೆ ಈ ಪಕ್ಷದಲ್ಲಿ ನಪುಂಸ ಶಿಲಾ, ಇಷ್ಟಕೋಪಧಾನ ಮೊದಲಾದುವನ್ನು ಮಾಡಬಾರದು. ಪುನಃ ಪ್ರತಿಮೆಯು ಸಿದ್ಧಗೊಂಡಾಗ ಪೀಠದ ನಪುಂಸಕ ಶಿಲೆಯಿಂದ ಕೂಡಿ, ಶಿಲ್ಪಿಯಿಂದ ಪ್ರತಿಮೆಯನ್ನು ಪರಿಗ್ರಹಿಸಿ, ಜಲಾಧಿವಾಸವನ್ನು ಮಾಡಿ ಪ್ರಾಸಾದಶುದ್ಧಿ ಮೊದಲಾಗಿ

ಪುಣ್ಯಾಹ ಪರ್ಯಂತವಾಗಿ ಮಾಡಿ, ಬಿಂಬವನ್ನು ಜಲಾಧಿವಾಸದಿಂದ ಮೇಲಕ್ಕೆತ್ತಿ ಬಿಂಬಶುದ್ಧಿ ಕಲಶದಿಂದ ಅಭಿಷೇಕಿಸಿ, ಮುಂಭಾಗದಲ್ಲಿರುವ ಸಂಸ್ಕರಿಸಲ್ಪಟ್ಟ ಮಂಟಪದಲ್ಲಿ ಹಾಸಿಗೆಯಲ್ಲಿ ಅಧಿವಾಸ ಮಾಡಿ ಅದರ ಪಕ್ಕದಲ್ಲಿ ಅಲ್ಪ ಬಿಂಬದಲ್ಲಿರುವ ಚೈತನ್ಯವನ್ನು ಸೂತ್ರಚ್ಛೇದಕ್ಕೆ ಹೇಳಿದ ಕ್ರಮದಿಂದ ಸಂಹಾರ ತತ್ತ್ವಹೋಮದಿಂದೊಡಗೂಡಿ ಪ್ರಾರ್ಥಿಸಿ ಜೀವಕಲಶದಲ್ಲಿ ಆವಾಹನೆ ಮಾಡಿ ತಂದು ರಕ್ಷಣೆ ಮಾಡಬೇಕು. ಪುನಃ **ಯಾತ್ರಾಂ ಕುರುಷ್ವದೇವೇಶ ಭಕ್ತಾನಾಮನುಕಂಪಯಾ । ಜೀರ್ಣಮುದ್ಧೃತ್ಯ ತದ್ಭಕ್ತ್ಯೈ: ಕಲ್ಪಿತಂ ಬಿಂಬಮುಜ್ವಲಂ ॥** ಗುಹನಲ್ಲಾದರೂ– **ತೇನ ಗೇಹಂ ವಿಶಾರ್ದ್ಯೇಶ ಉತ್ತಿಷ್ಠ ಶಿಖಿವಾಹನ । ಜೀರ್ಣಮುದ್ಧೃತ್ಯ ತದ್ಭಕ್ತ್ಯೈ: ಕಲ್ಪಿತಂ ಬಿಂಬಮುಜ್ವಲಂ ॥** ಬೇರೆಡೆಯಲ್ಲಿ ಊಹಿಸಿಕೊಳ್ಳಬೇಕು. ಹೇಳಲ್ಪಡುವ ಕ್ರಮದಿಂದ ಬಿಂಬವನ್ನು ಕಿತ್ತು ಹೊರಗೆ ಕೊಂಡು ಹೋಗಿ ಮರದ ಬಿಂಬವಾದರೆ ಹಸುವಿನ ತುಪ್ಪವನ್ನು ಲೇಪಿಸಿ ಅಗ್ನಿಯಲ್ಲಿ ನಿರ್ಮಾಲ್ಯಧಾರಿಯನ್ನಾವಾಹಿಸಿ ಸುಡಬೇಕು. ಲೋಹದ್ದಾದರೆ ಅದನ್ನು ಕರಗಿಸಿ ಲೋಹವನ್ನು ಆಚಾರ್ಯನಿಗೆ ಕೊಡಬೇಕು ಅಥವಾ ನಾಳವನ್ನು ಕತ್ತರಿಸಿ ಕೌತುಕವನ್ನು ಮಾಡಬೇಕು. ಹಿಂದಿನ ದಿನವೇ ಪೀಠಾಧಿವಾಸಾದಿಗಳಿಂದ ಕೂಡಿದ ಪ್ರತಿಮಾಧಿವಾಸವನ್ನು ಮಾಡಿ ಮರುದಿನ ರತ್ನನ್ಯಾಸ ಮಾಡಿದ ಪೀಠದಲ್ಲಿ ಬಿಂಬವನ್ನು ತಂದು ಪ್ರತಿಷ್ಠಾಪಿಸಿ, ಕುಂಭೇಶ, ನಿದ್ರಾಕಲಶ ಜೀವಕಲಶಗಳಿಂದ ಅಭಿಷೇಕಿಸಬೇಕು.

* * * *

## ಬಿಂಬ ಮಾತ್ರ ಜೀರ್ಣವಾದಲ್ಲಿ

ಎಲ್ಲಿ ಒಂದೇ ದಿನದಿಂದ ಹೇಳಲ್ಪಟ್ಟ ಕಾರ್ಯಗಳನ್ನು ಮಾಡಲು ಸಾಧ್ಯವಾದರೆ, ಬಿಂಬ ಮಾತ್ರ ವಿಕಲತೆ ಹೊಂದಿದ್ದರೆ ಅಲ್ಲಿಯೂ ಹೀಗೆ ಉದ್ವಾಸನೆಯನ್ನು ಮಾಡಿ ಜಲಾಧಿವಾಸ ಮೊದಲಾದ ಮೂರ್ತಿಯಿಂದ ಕೂಡಿ ಜೀವಕಲಶದೊಂದಿಗೆ ಅಗ್ರಮಂಟಪದಲ್ಲಿ ಅಧಿವಾಸ ಮಾಡಿ ಕೆಟ್ಟು ಹೋದ ಪ್ರತಿಮೆಯನ್ನು ಪೀಠಾದಿಗಳಿಂದ ಕೂಡಿ ಹೇಳಿದ ಕ್ರಮದಂತೆ ಕಿತ್ತು ಅದನ್ನು ತ್ಯಾಗ ಮಾಡಿಬಿಟ್ಟು ಮಾಡಲ್ಪಟ್ಟ ಪ್ರಾಸಾದ ಶುದ್ಧ್ಯಾದಿಗಳೊಡನೆ ರತ್ನನ್ಯಾಸದೊಡನೆ ಪ್ರಾಸಾದದಲ್ಲಿ ಇರಿಸಿ (ಸ್ಥಾಪಿಸಿ) ಜೀವಾವಾಹನ ಸಮಯದಲ್ಲಿ ಜೀವಕಲಶಾಭಿಷೇಕಾದಿಗಳನ್ನು ಮಾಡಬೇಕು.

* * * *

## ಪ್ರಾಸಾದ ಮಾತ್ರ ಜೀರ್ಣವಾದಲ್ಲಿ

ಪ್ರಾಸಾದ ಮಾತ್ರ ಹಳೆಯದಾಗಿ ಕೆಟ್ಟಿರುವಲ್ಲಿ ಅದನ್ನು ಸರಿಪಡಿಸಲು ಹೆಚ್ಚಿನ ಸಮಯ ಬೇಕಾಗುವಾಗ ಅಲ್ಲಿ ಹೇಳಿದ ಕಾರ್ಯಗಳ ನಡುವೆ ಸೂತ್ರಚ್ಛೇದ ಒಂದೇ ಕರ್ಮವನ್ನು ಹೇಳಿ ಬೇರೆ ಎಲ್ಲ ಕೆಲಸವನ್ನು ಮಾಡಿ ಉದ್ವಾಸನೆಗೆ ಮೊದಲು–

**ನಮಸ್ತೇ ಸರ್ವಲೋಕೇಶ ಭೂತಾನಾಮಭಯಪ್ರದ ।**

**ಭಕ್ತಪ್ರಿಯ ನಮಸ್ತೇಽಸ್ತು ಪ್ರಸೀದ ಭುವನೇಶ್ವರ ॥**

**ಆಗಚ್ಛ ದೇವ ದೇವೇಶ ಸರ್ವಕಾರಣ ಕಾರಣ ।**

**ನವೀಕರಣ ಸಿದ್ಧ್ಯರ್ಥಂ ಕುಂಭೇಽಸ್ಮಿನ್ಸನ್ನಿಧಿಂ ಕುರು ॥**

ಹೀಗೆ ಪ್ರಾರ್ಥಿಸಿ ಆ ದೇವರನ್ನು ಜೀವಕಲಶದಲ್ಲಿ ಸೇರಿಸಿ (ಆವಾಹಿಸಿ) ಹೊರಗೆ ಕೊಂಡು ಹೋಗಿ ಬಾಲಾಲಯದಲ್ಲಿ ಸ್ಥಾಪಿಸಿ ಮೂಲಬಿಂಬವನ್ನು ಕಾಪಾಡಿ ಪ್ರಾಸಾದವನ್ನು ಸಿದ್ಧಗೊಳಿಸಿ, ಶಿಲ್ಪಿಯಿಂದ ಪರಿಗ್ರಹಿಸಿ ಶುದ್ಧಿಗೊಳಿಸಿ ಪ್ರಾಸಾದದಲ್ಲಿರುವ ಪ್ರತಿಮೆಯನ್ನು ಸಂಹರಿಸಿ, ಅಗ್ನಿಮಯವಾಗಿ ಪರಿವರ್ತನಗೊಳಿಸಿ ಜಲಾಧಿವಾಸ ಕಲ್ಪನೆಯಿಂದ ವರುಣಾವಾಹಿತ ನೀರಿನಿಂದ ಅಭಿಷೇಕಿಸಿ ತನ್ನ ಸಮಯದಲ್ಲಿ ಕೌತುಕವನ್ನು ಕಟ್ಟಿ ಪೂಜಿಸಲ್ಪಟ್ಟ ಪೀಠದಲ್ಲಿರಿಸಿ ಆವಾಹಿಸಿ ಅಲ್ಲಿಯೇ ಬಿಂಬ ಘಟಾಭಿಷೇಕವನ್ನು ಮಾಡಿ ಇದುರಿನ ಮಂಟಪದಲ್ಲಿ ಸಿದ್ಧಗೊಳಿಸಿದ ಹಾಸಿಗೆಯಲ್ಲಿರಿಸಿದ ಜೀವಘಟದಲ್ಲಿ ಹಾಗೂ ದೇವಬಿಂಬದಲ್ಲಿ ಪೂಜಿಸಿ ಕ್ರಮದಂತೆ ಅಧಿವಾಸವನ್ನು ಮಾಡಿ ಮಂಟಪದಲ್ಲಿಯೇ ಹೋಮಿಸಿ ಅದರ ಸಂಪಾತವನ್ನು ಜೀವಕಲಶ ಹಾಗೂ ಬಿಂಬದಲ್ಲಿ ಸಂಯೋಜಿಸಿ, ಹಿಂದೆ ಹೇಳಿದಂತೆ ಎಲ್ಲ ಕರ್ಮಗಳನ್ನು ನಿರ್ವಹಿಸಿ ಮುಂದಿನ ದಿನದಲ್ಲಿ ರತ್ನನ್ಯಾಸ ಮೊದಲಾದುವನ್ನು ಮನಸ್ಸಿನಲ್ಲಿಯೇ ಮಾಡಿ ಜೀವಕಲಶ ಮೊದಲಾಗಿ ಎಲ್ಲವನ್ನೂ ಗರ್ಭಗುಡಿಯಲ್ಲಿ ಕೊಂಡು ಹೋಗಿ ಪೀಠದಲ್ಲಿ ಪ್ರತಿಷ್ಠಾಪನವನ್ನು ಮನಸ್ಸಿನಿಂದಲೇ ಪರಿಕಲ್ಪಿಸಿ ಜೀವನ್ಯಾಸವಿಧಿಯಲ್ಲಿ ಜೀವಕಲಶದಿಂದ ಅಭಿಷೇಕಿಸಿ ಹಿಂದೆ ಹೇಳಿದಂತೆ ಕರ್ಮಕಲಾಪವನ್ನು ಮಾಡಬೇಕು.

* * * *

## ಸಂಕೋಚ ಪಕ್ಷಃ

ಪ್ರಾಸಾದ ಮಾತ್ರ ಜೀರ್ಣಗೊಂಡಲ್ಲಿ ನಿಷ್ಕ್ರಮಣ ಕ್ರಮದಿಂದ ಸಂಕೋಚಗೊಳಿಸಿದಲ್ಲಿ ಹೆಚ್ಚಿನದನ್ನು ಬಲ್ಲವನು ನಿಷ್ಕ್ರಮಣ ಪ್ರಧಾನತ್ವದಿಂದ ಹೇಳಲ್ಪಟ್ಟ ವಿಧಿಯನ್ನು ನಿರೂಪಿಸಿ ಉಳಿದ ಕಾರ್ಯಗಳನ್ನು ಮಾಡಿ 'ದೇವೇಶ' ಎಂದು ಪ್ರಾರ್ಥಿಸಿ ಹಾಗೆಯೇ

ಹಿಂದೆ ಹೇಳಿದ ಕ್ರಮದಿಂದ ತತ್ತ್ವಕಲಶದಿಂದ ಅಭಿಷೇಕಿಸಿ ಸಂಕೋಚವನ್ನು ಆಚರಿಸಬೇಕು. ತಿಂಗಳಿನಿಂದಲೂ ಹೆಚ್ಚಾದ ಪ್ರಾಸಾದ ಸಿದ್ಧಗೊಳಿಸಲು ಸಮಯವಾದರೆ ನಿಷ್ಕ್ರಮಣ ವಿಧಿಯು. ಅದಕ್ಕೂ ಮೊದಲು ಸಿದ್ಧಗೊಳ್ಳುವ ಸಂದರ್ಭ ಸಂಕೋಚ ಪಕ್ಷವೆಂದು ಕಲ್ಪಾಭಿಪ್ರಾಯವು.

**ದೇವೇಶ ಪ್ರತಿಮಾಮೂರ್ತೇ ತಂತ್ರಮೂರ್ತೇ ಪರಾವರೇ ।**
**ಅತ್ರ ಸಂಕುಚಿತೋ ಭೂತ್ವಾ ವಾಸಂ ಕುರು ತವಾಜ್ಞಯಾ ॥**

ಹೀಗೆ ಪ್ರಾರ್ಥಿಸಿ ತಾನು ದೇವರಲ್ಲಿ ಐಕ್ಯತೆ ಇದ್ದು ದೇವರ ತೇಜಸ್ಸಿನಲ್ಲಿ ಮಹಾಪ್ರಾಸಾದ ಪರ್ಯಂತವಾಗಿ ಹೊರಗೆ ಅಂಗದಿಂದ, ಅಂತರಂಗದಿಂದಲೂ ಹೇಳಿದ ಕ್ರಮದಿಂದಲೂ ಹೊರಗಿನ ಪದ್ಮದಿಂದ ಅಂತಃಪದ್ಮದಿಂದ ಆಕರ್ಷಿಸಿ (ಸೆಳೆದು) ತನ್ನಲ್ಲಿನ ಚೈತನ್ಯ ಮಾತ್ರದಲ್ಲಿ ಸೇರಿಸಲ್ಪಟ್ಟಾಗ ನಿಜ ಇಚ್ಛಾಶಕ್ತಿಯಿಂದ ಉಂಟಾದ ಆ ಆವಾರಕವನ್ನು ಮೇಲೆ ಕೆಳಗೆಂಬ ಕ್ರಮದಿಂದ ಪದ್ಮಯುಗಳವನ್ನು ಧ್ಯಾನಿಸಿ ದೇವರಿಂದ ತನಗೆ ಪ್ರತ್ಯೇಕತೆಯನ್ನು ಭಾವಿಸಿ, ಆಧಾರಪದ್ಮದ ತುದಿಯ ದಲವನ್ನು ಏರಿ, ಮೇಲಿನ ಕಮಲದಿಂದ ಸುರಿಯುವ ಅಮೃತಮಯವಾದ ಉಪಹಾರಗಳಿಂದ ದೇವರನ್ನು ಸಂತೋಷಗೊಳಿಸಿ ಗುರೂಪದೇಶ ಕ್ರಮದಿಂದ ದೇವರ ತಲೆಯಲ್ಲಿ ಪದ್ಮವು ಅರಳುವ ಪರ್ಯಂತ ಬ್ರಹ್ಮರಂಧ್ರದಲ್ಲಿ ಬೀಳುವ ಅಮೃತಧಾರೆಯನ್ನು ಹಿತವಾಗಿ ಭಾವಿಸಿ, ತಾನು ಅದರಿಂದ ಹೊರಗಿರುವವನಾಗಿ ಆ ಪದ್ಮವನ್ನು ಮೊಗ್ಗಿನಂತೆ ಮಾಡಬೇಕು. ಮೇಲಿನ ಪದ್ಮದಿಂದ ಇಳಿಸಿ ಕೆಳಭಾಗಕ್ಕೆ ಕೊಂಡುಹೋಗಿ ಆಧಾರ ಪದ್ಮವನ್ನು ಆವರಿಸಿ (ಒಳಗೆ ಸೇರಿಸಿಕೊಂಡು) ತ್ರಿಗುಣಾತ್ಮಕವಾದ ಸತ್ವರಜಸ್ತಮೋಮಯವಾದ ತಂತುರೂಪದಿಂದ ಪ್ರಣವದಿಂದ ಸುತ್ತಿ ಅದರ ಹೊರಗೆ ತನ್ನ ತೇಜಸ್ಸಿನಿಂದ ಸಂರಕ್ಷಿಸಿ ತನ್ನಿಂದ ಹೊರಬಂದ ಸುಷುಮ್ನಾ ನಾಡಿಯಿಂದ ಮಾರ್ಗದ ವಿಶ್ರಾಂತಿಯ ಕಡಿಯುವಿಕೆಯ ಕಾರಣದಿಂದ ತನ್ನಲ್ಲಿಯೇ ಇರುವವನಾಗಿ ಬಟ್ಟೆ ಮೊದಲಾದುವುಗಳಿಂದ ಮುಚ್ಚಲ್ಪಟ್ಟ ವಿಗ್ರಹವನ್ನು ಸಂರಕ್ಷಿಸಿ ಪ್ರಾಸಾದವನ್ನು ಬಡಗಿಗಳಿಂದ ಮಾಡಿಸಬೇಕು. ಹಾಗೆಯೇ ಪ್ರಾಸಾದವು ಸಿದ್ಧಗೊಂಡ ನಂತರ ಪ್ರಾಸಾದವನ್ನು ಶುದ್ಧೀಕರಿಸಿ ಆ ಬಿಂಬವನ್ನು ಇರುವಲ್ಲೇ ಕ್ಷಾಲನ ಮೊದಲಾದ ಸಪ್ತಶುದ್ಧಿಗಳಿಂದ ಪ್ರಾಯಶ್ಚಿತ್ತ ಮೊದಲಾದ ಹೋಮಗಳಿಂದ ಕಲಶಾದಿ ಅಭಿಷೇಕಗಳಿಂದ ಶುದ್ಧಗೊಳಿಸಬೇಕು. ಇಲ್ಲಿ ಶುದ್ಧಗೊಳಿಸುವ ಸಮಯದಲ್ಲಿ ಧಾರಾ ಆರಂಭ ಮಾಡಿದಾಗ ಮುಚ್ಚಲ್ಪಟ್ಟ ದೇವ ಚೈತನ್ಯಗರ್ಭವಾಗುಳ್ಳ ಪದ್ಮವನ್ನು ಅರಳಿಸುವ ಮಾನಸಿಕ ಕ್ರಿಯೆಯನ್ನು ಆಚರಿಸಬೇಕು.

* * * *

## ಬಿಂಬತ್ಯಾಗ ಪಕ್ಷಃ

ವಿಗ್ರಹವನ್ನೆ ವಿಸರ್ಜನೆ ಮಾಡುವ ಸಂದರ್ಭದಲ್ಲಿ– ಪ್ರಾಸಾದದ ಮುಂಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ ಅದರ ದಕ್ಷಿಣದಲ್ಲಿ ಶಾಂತಿ ಕಲಶವನ್ನು ಪ್ರತಿಷ್ಠಾಪಿಸಿ, ಅನ್ವಾಧಾನವನ್ನು ಮಾಡಿ ಸಾವಿತ್ರಿಯಿಂದ ತ್ರಿಮಧ್ವಾಪ್ಲುತ ದೂರ್ವೆಯಿಂದ ಸಾವಿರದ ಎಂಟು ಸಂಖ್ಯೆಯಲ್ಲಿ ಹೋಮಿಸಬೇಕು. ವ್ಯಾಹೃತಿಗಳಿಂದ ಹಾಲು ಮರದ ಸಮಿಧಗಳಿಂದಲೂ ಹೋಮಿಸಬಹುದು. ಅದರ ಸಂಪಾತವನ್ನು ಶಾಂತಿಕಲಶದಲ್ಲಿ ಹಾಕಿ ಪ್ರತಿಲೋಮವಾಗಿ ಎಂಟಾವರ್ತಿ ಪಂಚತತ್ತ್ವಗಳಿಂದ ಸಂಪಾತದಿಂದ ಕೂಡಿ ಹೋಮಿಸಬೇಕು. ಸಂಹಾರ ಕ್ರಮದಿಂದ ತತ್ತ್ವಹೋಮವನ್ನು ಮಾಡಿ, ಶಾಂತಿ ಕಲಶದಿಂದ ಅಭಿಷೇಕಿಸಿ ಪಾಯಸ ನೈವೇದ್ಯ ಮೊದಲಾಗಿ ಮಾಡಬೇಕು. ತತ್ತ್ವಕಲಶದಿಂದ ಅಭಿಷೇಕಿಸಿ ಜೀವಕಲಶದಲ್ಲಿ ಉದ್ವಾಸನೆ ಮಾಡಿ ದೇವರನ್ನು ಹೊರಗೆ ಕೊಂಡು ಹೋಗಿ ಶಾಂತಿಜಲದಿಂದ ಅಭಿಷೇಕಿಸಿ ಬಿಂಬವನ್ನು ಕೀಳಬೇಕು.

* * * *

## ಬಿಂಬ ಮೇಲೆತ್ತುವಾಗ

ಬ್ರಾಹ್ಮಣ ಶ್ರೇಷ್ಠರೊಡನೆ ಕೂಡಿ ದೇವರನ್ನು ನಮಸ್ಕರಿಸಿ ಮುಂಭಾಗದಲ್ಲಿ ನಿಂತು ತದೇಕ ಮನಸ್ಸಿನಿಂದ ಶಾಂತಿಯನ್ನು ಪಠಿಸಬೇಕು.

**ಶಾಂತಿರಸ್ತು ಶಿವಂ ಚಾಸ್ತು ಪುಷ್ಟಿರಸ್ತು ಸುಮಂಗಲಂ ।**
**ಸ್ವಸ್ತಿ ಚಾಸ್ತು ಸಮೃದ್ಧ್ಯಸ್ತು ಸರ್ವೇಷಾಂ ಸಂತು ಸಂಪದಃ ॥**
**ಗೋಬ್ರಾಹ್ಮಣೇಭ್ಯಃ ಕ್ಷತ್ರೇಭ್ಯಃ ವಿಟ್ ಶೂದ್ರೇಭ್ಯಸ್ತಥೈವ ಚ ।**
**ಲೋಕೇಭ್ಯಃ ಸರ್ವಭೂತೇಭ್ಯಃ ರಾಜ್ಞೇ ಜನಪದಾಯ ಚ ॥**
**ಗ್ರಾಮಾಯ ಯಜಮಾನಾಯ ಗುರವೇಽಸ್ಮೈ ಗೃಹಾಯ ಚ ।**
**ಬಿಂಬೋದ್ಧಾರವಿಧೇರಸ್ತು ಸಾಕಲ್ಯಮಿಹ ಸರ್ವದಾ ॥**

ಹೀಗೆ ಪ್ರಾರ್ಥಿಸಿ ಆಚಾರ್ಯನು ತಾನು ಗರ್ಭಗುಡಿಯನ್ನು ಪ್ರವೇಶಿಸಿ ಪುಣ್ಯಾಹವನ್ನು ಮಾಡಿ ಯಜಮಾನನಿಗೆ ಮೂರ್ತಿಪರಿಗೆ ಕೌತುಕವನ್ನು ಕಟ್ಟಿ ಎಲ್ಲರನ್ನೂ ಸಂರಕ್ಷಿಸಿ ಮೊದಲು ಹೋಮಿಸಿದ ಸಂಹೃತಿ ಪಂಚತತ್ತ್ವ ಸಂಪಾತದಿಂದ ಕೂಡಿದ ಹೂವುಗಳಿಂದ ಪ್ರತಿಮೆಯಲ್ಲಿರುವ ವಾಸನಾ ಶಕ್ತಿಯನ್ನು ಪ್ರಣವದಿಂದ ಸೂರ್ಯಮಂಡಲದಲ್ಲಿ ಉದ್ವಾಸನೆಯನ್ನು ಮಾಡಬೇಕು. ಉದ್ಧಾರದ ಸಮಯದಲ್ಲಿ ಉಚ್ಚ್ವಂಚಸ್ವ * * * ನಾಸದಾಸೀನ್ನೋಸ * * * ಆತೇಪಿತರ್ಮರುತಾಂ * * * ಸಹಸ್ರಶೀರ್ಷಾ ಪುರುಷಃ * * * ಮೊದಲಾಗಿ ಸೂಕ್ತವನ್ನೂ ಮೂಲಮಂತ್ರವನ್ನು ಆವರ್ತಿಸಬೇಕು. ಆಮೇಲೆ ನಿರ್ಮಾಲಧಾರಿಯ ಮಂತ್ರದಿಂದ ಸಕಲೀಕರಣವನ್ನು ಮಾಡಿ ಪಶುಬಾಲದ ರೋಮ ಕುಶಾದಿಗಳಿಂದ ಮಾಡಿದ ರಜ್ಜು(ಹಗ್ಗ)ವಿನಿಂದ ಕಟ್ಟಿ ಎತ್ತಿನಿಂದ ಚಿನ್ನದ ನೇಗಿಲ ಮುಖದಿಂದ ಪೀಠಬಂಧವನ್ನು ಕಡಿದು ಬಿಂಬವನ್ನು ಮೇಲೆತ್ತಬೇಕು. ಶಿವನಲ್ಲಿ– ಪೀಠದ ಕೆಳಗಡೆಯೇ ಕಡಿದು ಮೊದಲು ಪೀಠವನ್ನು ತೆಗೆದು ಬಿಂಬವನ್ನು ಮೇಲೆತ್ತಬೇಕು. ಪೀಠದ ಬಂಧವನ್ನು ಕಡಿಯುವಲ್ಲಿ ನಿಜಮೂಲಮಂತ್ರವು. ಬಿಂಬ ಮೇಲೆತ್ತುವುದರಲ್ಲಿ ಭೂರ್ಭುವಃಸುವರೋಂ– ಎಂದು ಮಂತ್ರವು. ಅಲ್ಲಿ ಪೀಠದಲ್ಲಿ ದಕ್ಷಿಣಕ್ಕೆ ತಲೆಯಾಗಿ ಮಲಗಿಸಿ ತೊಳೆದು ಸ್ವಲ್ಪ ಪೂಜಿಸಿ, ಸ್ಮರಣಸಹಜ ಶಕ್ತಿಯನ್ನು ಹಿಂದಿನಂತೆ ಉದ್ವಾಸನೆ ಮಾಡಿ ತಲೆಯ ಸಹಿತವಾಗಿ ವಸ್ತ್ರವನ್ನು ಮುಚ್ಚಿ ಹೊರಗೆ ಕೊಂಡು ಹೋಗಿ ಪ್ರಾಸಾದದ ದಕ್ಷಿಣಕ್ಕಿರುವ ಮಂಡಲದಲ್ಲಿ ಸ್ಥಂಡಿಲವನ್ನು ಮಾಡಿ, ಮರಳು, ದರ್ಭೆಗಳನ್ನಿರಿಸಿ, ಅದರಲ್ಲಿ ದಕ್ಷಿಣಕ್ಕೆ ತಲೆಯಾಗಿರಿಸಿ, ಎಳ್ಳು, ಅಕ್ಷತೆಗಳನ್ನು ಚೆಲ್ಲಿ ಅಪ್ರದಕ್ಷಿಣವಾಗಿ ಬಿಂಬವನ್ನು ಮೂರು ಸುತ್ತು ಸುತ್ತಬೇಕು. ವಸ್ತ್ರಾದಿಗಳನ್ನು ತೆಗೆದು ಅಭಿಷೇಕ ಮಾಡಿ ಸ್ವಲ್ಪ ಉಪಹಾರವನ್ನು ಅದರಲ್ಲಿರುವ ಉಳಿದ ವಾಸನೆಯನ್ನು ಸೂರ್ಯನಲ್ಲಿ ಉದ್ವಾಸನೆಯನ್ನು ಮಾಡಿ ಬಟ್ಟೆಯಿಂದ ದರ್ಭೆಯಿಂದಲೂ ಸುತ್ತಿ ನದಿ ಮೊದಲಾದ ಜಲಾಶಯವನ್ನು ಕುರಿತು ಹೋಗಬೇಕು. ಆಳವಾದ ನೀರಿನಲ್ಲಿ ಪೂಜಿಸಿದ ಪೀಠದಲ್ಲಿ ನಿರ್ಮಾಲ್ಯಧಾರಿಯನ್ನು ಆಯಾಯ ಮಂತ್ರಗಳಿಂದ ಆವಾಹಿಸಿ ಪೂಜಿಸಿ, ಬಿಂಬವನ್ನು ಅದರ ವಶಕ್ಕೆ ಒಪ್ಪಿಸಿ ನೀರಿನಲ್ಲಿ ಹಾಕಬೇಕು. ಯಜಮಾನನಿಂದ ಕೂಡಿ ಸ್ನಾನ ಮಾಡಿ ಕ್ರಮದಂತೆ ನಿಜಮೂಲಮಂತ್ರದಿಂದ ತರ್ಪಣವನ್ನು ಮಾಡಬೇಕು. ಪುನಃ ಬಂದು ಪೀಠ ನಪುಂಸಕ ಶಿಲಾದಿಗಳನ್ನು ತೆಗೆದು ಮೂಲಪ್ರಾಸಾದವನ್ನು ಸಂರಕ್ಷಿಸಿ ಜೀವಕುಂಭದೊಡನೆ ಅಲ್ಪಬಿಂಬ ಪ್ರತಿಷ್ಠೆ ಮೊದಲಾಗಿ ಎಲ್ಲಾ ಕಾರ್ಯಗಳನ್ನು ಮಾಡಬೇಕು.

* * * *

## ಅಷ್ಟಬಂಧವು ಜೀರ್ಣವಾದಾಗ

ಪ್ರಾಸಾದ ಶುದ್ಧಿ ಮೊದಲಾಗಿ ಭೂತಬಲಿ ಪರ್ಯಂತವಾಗಿ ಶುದ್ಧಿಯನ್ನು ಮಾಡಿ ಪೂಜಾಮಂತ್ರ ಹೋಮದ ಕೊನೆಯಲ್ಲಿ ಸಂಹಾರ ಮಾರ್ಗದಿಂದ ನವಶಕ್ತಿ ಹೋಮದ ಸಂಪಾತವನ್ನು ತೆಗೆದುಕೊಂಡು, ಪುನಃ ಸೃಷ್ಟಿ ಕ್ರಮದಿಂದ ನವಶಕ್ತಿಗಳಿಂದ ಸಾಧ್ಯವಾದಷ್ಟು ತುಪ್ಪವನ್ನು ಹೋಮಿಸಿ ಚತುರ್ದ್ರವ್ಯ ಹೋಮವನ್ನು ಸ್ವಿಷ್ಟಕೃದಾದಿ ಹೋಮವನ್ನು ಪೂರ್ತಿಗೊಳಿಸಿ ಒಳಗೆ ಹೋಗಿ ಸಂಹಾರ ಸಂಪಾತದಿಂದ ಹಳೆಯದಾದ ಅಷ್ಟಬಂಧ ಚೈತನ್ಯವನ್ನು ಪ್ರಣವದಿಂದ ದೇವರಲ್ಲಿ ವ್ಯಾಪಿಸಿ ಉದ್ವಾಸನೆ ಮಾಡಬೇಕು. ಜೀರ್ಣವಾದ ಅಷ್ಟಬಂಧವನ್ನು ಶೋಧಿಸಿ ಅಭಿಷೇಕಿಸಿ ರತ್ನ, ಸುವರ್ಣ, ಮರಳುಗಳಿಂದ ಬಿಂಬ ಮತ್ತು ಪೀಠದ ಮಧ್ಯವನ್ನು ತುಂಬಿಸಿ, ಪೀಠದಲ್ಲಿ ಶಕ್ತಿ ಬೀಜದಿಂದ ಪ್ರಕೃತಿಯನ್ನೂ ಮೂಲದಿಂದ ಪುರುಷನನ್ನು ಆವಾಹಿಸಿ ಪೀಠ ಮತ್ತು ಬಿಂಬದಲ್ಲಿ ಲಿಪಿನ್ಯಾಸ ಮೊದಲಾದವುಗಳಿಂದ ಸಕಲೀಕರಣವನ್ನು ಮಾಡಿ ಪುಣ್ಯಾಹವನ್ನು ಮಾಡಿ ಸೃಷ್ಟಿಕ್ರಮದಿಂದ ಹೋಮಿಸಿದ ನವಶಕ್ತಿ ಸಂಪಾತವನ್ನು ಸಮರ್ಪಿಸಿ, ಅಷ್ಟಬಂಧವನ್ನು ಮಾಡಿ ಪ್ರಣವದಿಂದ ವ್ಯಾಪನೆಯೊಂದಿಗೆ ಪರಸ್ಪರ ಸೇರಿದಂತೆ ಭಾವಿಸಿ ಮೂಲಮಂತ್ರದಿಂದ ದೇವರನ್ನು ಆವಾಹಿಸಿ ಸಕಲೀಕರಣವನ್ನು ಮಾಡಿ, ನಾಲ್ಕನೇ ದಿವಸ ಮಾಡಬೇಕಾದ ಸ್ನಪನ ವಿಧಿಯನ್ನು ಅಷ್ಟಬಂಧ ಪ್ರತಿಷ್ಠಾದಿ ತ್ರಿರಾತ್ರಿಗಳ ಅನಂತರದಲ್ಲಿ ಮಾಡಬೇಕು. ಈ ಮಧ್ಯದ ದಿನಗಳಲ್ಲಿ ಮಾಡಬೇಕಾದ ಪೂಜೆಯನ್ನು ಬಿಂಬದಲ್ಲೆ ಮಾಡತಕ್ಕದ್ದು. ಈ ಸಂದರ್ಭದಲ್ಲಿ ಕವಾಟ ಬಂದನ ಮೊದಲಾಗಿ ಇರುವುದಿಲ್ಲ.

* * * *

## ಅಷ್ಟಬಂಧ ದ್ರವ್ಯಗಳು

ಪ್ರಮಾಣ ಸಹಿತವಾಗಿ ದ್ರವ್ಯಗಳ ವಿವರಣೆ– ವಸ್ತ್ರಗಳಲ್ಲಿ ಗಾಳಿಸಿದ ಶಂಖದ ಪುಡಿಯು ಆರುಭಾಗವು. ರಾಳವು ನಾಲ್ಕು ಭಾಗವು. ಅಳಲೆಕಾಯಿಯು ಎರಡು ಭಾಗವು. ಅರಗು, ಹತ್ತಿ, ಕಲ್ಲಿನ ಪುಡಿ, ಮಳಲು– ಇವುಗಳು ಒಂದೊಂದು ಭಾಗ. ಅರಗಿನ ಅರ್ಧಾಂಶ ನೆಲ್ಲಿಕಾಯಿ ಪುಡಿ– ಇವುಗಳನ್ನು ಎಳ್ಳೆಣ್ಣೆಯಲ್ಲಿ ಚೆನ್ನಾಗಿ ಸೇರಿಸಿ ಪೇಷಣ ಮಾಡಿ ತಯಾರಿಸಿ ಆಯಾಯ ದೇವರ ನವಶಕ್ತಿ ಸ್ವರೂಪವಾದ ದ್ರವ್ಯಕ್ಕೆ ಅಷ್ಟಬಂಧವೆಂದು ಹೆಸರು. ಈ ದ್ರವ್ಯಗಳಲ್ಲಿ ಹತ್ತಿಯನ್ನು ಕೊನೆಯಲ್ಲಿ ತತ್ಕಾಲದಲ್ಲಿ ಸೇರಿಸಬೇಕೆಂದು ಉಪದೇಶದಿಂದ ತಿಳಿದುಬರುತ್ತದೆ.

* * * *

## ಪರಿವಾರ ಜೀರ್ಣೋದ್ಧಾರ

ಬಲಿಪೀಠ ಮಹಾಧ್ವಜಾದಿಗಳು ಜೀರ್ಣ(ಶಿಥಿಲ)ಗೊಂಡಾಗ ಹೇಳಿದ ಶುದ್ಧಿಯನ್ನು ದೇವರಿಗೆ ಸಪ್ತಶುದ್ಧಿಶೇಷ, ಹೋಮಕಲಶಶೇಷ, ಕಲಶಶೇಷ ಇವುಗಳ ಅವಸ್ರಾವ ಜಲಗಳಿಂದ ಜೀರ್ಣವಾದ ಮಹಾಬಲಿಪೀಠಾದಿಗಳನ್ನು ಶುದ್ಧಗೊಳಿಸಿ ದೇವರನ್ನು ಪೂಜಿಸಿ, ಭೂತಬಲಿಯನ್ನು ಮಾಡಿ ಆಚರಿಸಲ್ಪಡುವ ಕಾರ್ಯಕ್ರಮದ ಬಗ್ಗೆ ದೇವರಲ್ಲಿ ವಿನಂತಿಸಿಕೊಳ್ಳಬೇಕು. ಆಮೇಲೆ ಬಲಿಪೀಠಾದಿಗಳ ಮುಂಭಾಗದಲ್ಲಿ ನಿಜದೇವರ ಪಂಚತತ್ತ್ವಗಳಿಂದ ಸಂಹಾರ ಕ್ರಮದಿಂದ ಒಂದೊಂದನ್ನೂ ಎಂಟೆಂಟರ ಸಂಖ್ಯೆಯಲ್ಲಿ ತತ್ವಹೋಮವನ್ನು ಮಾಡಿ ಆಯಾಯ ತತ್ತ್ವಹೋಮದ ಕಲಶದಿಂದ ಅದನ್ನು ಅಭಿಷೇಕಿಸಿ ಅದರಲ್ಲಿ ಶಕ್ತಿಯ ಸಂಹಾರವನ್ನು ಯುಕ್ತಿಯಿಂದ ಕಲ್ಪಿಸಿ ಅದರ ಮುಂಭಾಗದಲ್ಲಿ ತುಂಬಿದ ಕಲಶದಲ್ಲಿ ಆ ಪೀಠ ಚೈತನ್ಯವನ್ನಾವಾಹಿಸಿ (ಸೂತ್ರಚ್ಛೇದಕ್ಕೆ ಬೇಕಾದ ಹುಂಫಟ್ ಶಬ್ದವನ್ನು ಉಪಯೋಗಿಸಿ) ಕಲಶವನ್ನು ಗರ್ಭಗುಡಿಯಲ್ಲಿ ತಂದು ದೇವರ ಮೂಲಬಿಂಬಕ್ಕೆ ಆ ಕಲಶವನ್ನು ಅಭಿಷೇಕ ಮಾಡಬೇಕು. ಪುನಃ ಅದೆಲ್ಲವನ್ನೂ ನೀರಿನಲ್ಲಿ ಬಿಟ್ಟು ಗರ್ಭನ್ಯಾಸ ಮೊದಲಾದ ಕ್ರಮದಿಂದ ಮೊದಲಿನಂತೆ ಬಡಗಿಯಿಂದ ಮಾಡಿಸಿ ಜಲಾಧಿವಾಸ ಬಿಂಬಶುದ್ಧ್ಯಾದಿಗಳಿಂದ ಶುದ್ಧಿಗೊಳಿಸಿ ಹಿಂದೆ ಹೇಳಿದಂತೆ ಅಧಿವಾಸ ಮಾಡಿ ಪ್ರತಿಷ್ಠೆ ಮೊದಲಾಗಿ ಎಲ್ಲವನ್ನೂ ಮಾಡಬೇಕು. ನಾಲ್ಕನೆಯ ದಿನದಲ್ಲಿ ದೇವರಿಗೆ ಕಲಶಾಭಿಷೇಕವನ್ನು ಮಾಡಿ ಅದರ ಅವಸ್ರಾವ ಪ್ರೋಕ್ಷಣ ಬಲಿದಾನ ಪರ್ಯಂತವಾಗಿ ಎಲ್ಲವನ್ನೂ (ಉತ್ಸವಾದಿಗಳನ್ನು) ಮಾಡಬೇಕು. ಪ್ರಾಯಶ್ಚಿತ್ತ ಪ್ರಕರಣದಲ್ಲಿ ಹೇಳದಿರುವ ಕೆಲವು ಪ್ರಾಯಶ್ಚಿತ್ತಗಳು ಹೇಳಲ್ಪಡುತ್ತದೆ. ಬೀಜಾಂಕುರ ಮೊದಲಾದುವುಗಳು ನಾಶವಾದಲ್ಲಿ ಅದರ ಚೈತನ್ಯವನ್ನು ಕನ್ನಡಿಯಲ್ಲಿ ಅಥವಾ ಚಿನ್ನದಲ್ಲಿ ಉದ್ವಾಸನೆಯನ್ನು ಮಾಡಿ ಕೆಟ್ಟು ಹೋದುದನ್ನು ಎಲ್ಲಾ ತೆಗೆದು ಹಾಕಿ ಸ್ನಾನ ಮಾಡಿ ಪುನಃ ಬೀಜಾವಾಪವನ್ನು ಮಾಡಿ ಆ ಚೈತನ್ಯವನ್ನು ಪುನಃ ಅಲ್ಲಿ ಸೇರಿಸಿ ಪಂಚತತ್ತ್ವಗಳಿಂದ ಇಪ್ಪತ್ತೈದರ ಸಂಖ್ಯೆಯಲ್ಲಿ ತುಪ್ಪವನ್ನು ಹೋಮಿಸಿ ಅದರ ಸಂಪಾತವನ್ನು ಬೀಜದಲ್ಲಿ ಸಮರ್ಪಿಸಿ ಮೂಲದಿಂದ ಆವಾಹಿಸಿ ಪೂಜಿಸಬೇಕು. ಮೂರು ದಿನಕ್ಕೆ ಮೊದಲಾದರೆ ತಿರುಗಿ ಬೀಜದ ಬಿತ್ತುವಿಕೆಯು. ಆಮೇಲಾದರೆ ಅಕ್ಕಿಯ ಬಿತ್ತನೆಯು ಎಂದು ವಿಶೇಷವು. ಇಲ್ಲಿ ಪ್ರಾಯಶ್ಚಿತ್ತ ಹೋಮದಲ್ಲಿ ಪ್ರಣವ ವ್ಯಾಹೃತಿ ಪೀಠಮಂತ್ರಗಳಿಂದ ಹೋಮಿಸಿ, ಮೂಲದಿಂದ ಎಂಟಾವರ್ತಿ ಆಜ್ಯವನ್ನು ಹೋಮಿಸಿ, ಹಿಂದೆ ಹೇಳಿದ ಪಂಚತತ್ತ್ವಹೋಮವು ಮಾಡಲ್ಪಟ್ಟಾಗ ಪುನಃ ಮೂಲದಿಂದ ಎಂಟಾವರ್ತಿ ಹೋಮಿಸಿ ಪೂಜಾಮಂತ್ರವ್ಯಾಹೃತಿ ಪ್ರಣವದಿಂದ ಹೋಮಿಸಬೇಕೆಂದು ವಿಶೇಷವು. ಮೊಳಕೆಗಳು ನೀಲಿ ಬಣ್ಣವಾಗಿದ್ದರೆ ಅಡ್ಡವಾಗಿ ಮೊಳಕೆ ಬಂದಿದ್ದರೂ ಕೆಲವರು ಪುನಃ ಬಿತ್ತನೆ ಮಾಡಬೇಕೆನ್ನುವರು. ಇನ್ನು ಕೆಲವರು ಪ್ರಾಯಶ್ಚಿತ್ತ ಹೋಮ ಮಾತ್ರ ಪರಿಹಾರವೆನ್ನುತ್ತಾರೆ. ಬಲಿದೇವತಾ ದ್ರವ್ಯಗಳು ಬದಲಾದಲ್ಲಿ ಅಥವಾ ಅದರ ಲೋಪವಾದರೆ ನಿಯಮಿತವಾದ ಮೂರು ಪೂಜೆಯ ಕಾಲಾತಿಕ್ರಮವಾದಲ್ಲಿಯೂ ಮೂಲಮಂತ್ರದಿಂದ ನೂರೆಂಟು ಸಂಖ್ಯೆಯಲ್ಲಿ ತುಪ್ಪ ಹೋಮಿಸಬೇಕು.

* * * *

## ಅಗ್ನಿವಿನಾಶ ಪ್ರಾಯಶ್ಚಿತ್ತ

ಸಾಮಾನ್ಯವಾಗಿ ಪ್ರತಿಷ್ಠೆ ಮಾಡಿದ ಅಗ್ನಿಯು ನಾಶವಾದಲ್ಲಿ ಅಲ್ಲಿರುವ ಭಸ್ಮಗಳನ್ನು ತೆಗೆದು ಅದರ ಒಳಗಡೆ ಗೋಮಯದಿಂದ ಮೂರಾವರ್ತಿಯಿಂದ ಶುದ್ಧಿಗೊಳಿಸಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಎಂಟೆಂಟರ (ಗುಣಿತ) ಸಂಖ್ಯೆಯಲ್ಲಿ ಪ್ರಣವಾಹುತಿಗಳಿಂದ ಗರ್ಭಾಧಾನ ಮೊದಲಾದ ಸಂಸ್ಕಾರಗಳನ್ನು ಮಾಡಿ ಸ್ರುಕ್ಕಿನಲ್ಲಿ ಚತುರ್ಗೃಹೀತ ಆಜ್ಯದಿಂದ 'ಮನೋಜ್ಯೋತಿರ್ಜುಷತಾಂ' ಮಂತ್ರದಿಂದ ಹೋಮಿಸಿ, ಭೂರಾದಿವ್ಯಾಹೃತಿಗಳಿಂದ, ಪಂಚತತ್ತ್ವಗಳಿಂದ ಸ್ರುವದಿಂದ ಹೋಮಿಸಿ ಮೂಲಮಂತ್ರದಿಂದಾವಾಹಿಸಿ ಪೂಜಿಸಿ ಮೂಲದಿಂದಲೂ ಅಸ್ತ್ರದಿಂದಲೂ ನೂರೆಂಟರ ಸಂಖ್ಯೆಯಲ್ಲಿ ತುಪ್ಪವನ್ನು ಹೋಮಿಸಬೇಕು. ಅಗ್ನಿಯು ಅಶುದ್ಧಿಯಾದರೆ ಆ ಅಗ್ನಿಯನ್ನು ಕನ್ನಡಿಯಲ್ಲಿ ಪ್ರತಿಫಲಿಸಿ, ಕನ್ನಡಿಯಲ್ಲಿ ಕ್ಷಾಲನ ಮೊದಲಾಗಿ ಸಪ್ತಶುದ್ಧಿಯನ್ನು ಮಾಡಿ ಆಮೇಲೆ ಬೇರೆಡೆಯಿಂದ ಕನ್ನಡಿ, ಚಿನ್ನ ಮೊದಲಾದುವಲ್ಲಿ ಉದ್ವಾಸನೆ ಮಾಡಿ ಅಶುದ್ಧಿಗೊಂಡ ಸ್ಥಳ ಅಥವಾ ಕುಂಡದ ಭಸ್ಮ ಮೊದಲಾದುವುಗಳಿಂದ ಕೂಡಿದ ಬೆಂಕಿಯನ್ನು ಬಿಟ್ಟು ಗೋಮಯದ ನೀರಿನಿಂದ ಸಾರಿಸಿ, ಪುನಃ ಅಗ್ನಿಯನ್ನು ಪ್ರತಿಷ್ಠಾಪಿಸಿ ಪೀಠಪೂಜಾ ನಂತರದಲ್ಲಿ ಮೂರ್ತಿ ಕಲ್ಪನೆ ಮಾಡಿದಾಗ, ಶುದ್ಧವಾದ ಕನ್ನಡಿ ಮೊದಲಾದುವುಗಳಲ್ಲಿರಿಸಿದ ಅಗ್ನಿಯ ಚಿತಿಯನ್ನು ಅಗ್ನಿಯಲ್ಲಿ ಸೇರಿಸಿ ಹಿಂದೆ ಹೇಳಿದ ಅಗ್ನಿನಾಶ ಪ್ರಾಯಶ್ಚಿತ್ತಕ್ಕೆ ಸಂಬಂಧಿಸಿದ ಮನಸ್ವತ್ಯಾಜ್ಯಾಹುತಿಯನ್ನು ಹೋಮಿಸಬೇಕು. ಅಗ್ನಿನಾಶ ಪ್ರಾಯಶ್ಚಿತ್ತಾ ನಂತರದಲ್ಲಿ– ಅಗ್ನಯೇ ಪವಮಾನಾಯ ಸ್ವಾಹಾ– ಅಗ್ನಯೇ ಪಾವಕಾಯ ಸ್ವಾಹಾ– ಅಗ್ನಯೇ ಶುಚಯೇ ಸ್ವಾಹಾ– ಈ ಮೂರು ಮಂತ್ರಗಳಿಂದ ಅಶುದ್ಧಿಯ ಬಲಾಬಲವನ್ನು ತಿಳಿದು, ಸ್ರುವದಿಂದ ನಾಲ್ಕು ಸಂಖ್ಯೆಯ ತುಪ್ಪವನ್ನು ತೆಗೆದುಕೊಂಡು ಸ್ರುಚ್ಚಿನಿಂದಲಾದರೂ ಹೋಮಿಸಬೇಕು ಅಥವಾ ಅಗ್ನ ಆಯೂಂಷಿಪವಸ * * * ಅಗ್ನೇಪವಸ್ವಪಾ * * ಅಗ್ನೇಪಾವಕರೋಚಿಷಾ * * * ಸನಃ ಪಾವಕದೀದಿವಃ * * * ಅಗ್ನಿಃ ಶುಚಿವ್ರತತಮಃ * * * ಉದಗ್ನೇ ಶುಚಯಸ್ತವ * * * ಹೀಗೆ ಎರಡೆರಡು ಮಂತ್ರಗಳನ್ನು ಹೇಳಿ ನಿಂತು ಪೂರ್ಣಾಹುತಿಯನ್ನು ಹೋಮಿಸಬೇಕು.

## ವಿಹೃತಾಗ್ನಿ ನಾಶವಾದಲ್ಲಿ

ಅಧಿವಾಸ ಮೊದಲಾದವುಗಳಲ್ಲಿ ವಿಹೃತಾಗ್ನಿಯು ನಾಶವಾದಲ್ಲಿ ಆವಾಗಲೇ ಭಸ್ಮ ಮೊದಲಾದುವುಗಳನ್ನು ತೆಗೆದು ಸಗಣಿಯ ಮುದ್ದೆಯಿಂದ ಶುದ್ಧೀಕರಿಸಿ ಆಚಾರ್ಯ ಕುಂಡದಿಂದ ಹಿಂದಿನಂತೆ ಅಗ್ನಿಯನ್ನಿರಿಸಿ, ಇರಿಸಿದ ಅಗ್ನಿಯಲ್ಲಿ ಆಜ್ಯವು ಸಿದ್ಧಗೊಂಡಾಗ ಒಂದು ಸಮಿಧವನ್ನು ಹೋಮಿಸಿ ಸ್ರುಚ್ಚಿನಲ್ಲಿ ನಾಲ್ಕು ಬಾರಿಯಲ್ಲಿ ತುಪ್ಪವನ್ನು ತೆಗೆದುಕೊಂಡು ಪೂರ್ವ ದಕ್ಷಿಣ ಉತ್ತರ ಕುಂಡಗಳಲ್ಲಿ ಕ್ರಮವಾಗಿ ಪಂಚಹೋತಾ, ಚತುರ್ಹೋತಾ, ಷಡ್ಢೋತಾ ಮಂತ್ರದಿಂದ ಪಶ್ಚಿಮ ಕುಂಡದಲ್ಲಿ ವಿದಿಕ್ಕುಗಳಲ್ಲಿನ ಕುಂಡಗಳಲ್ಲಿಯೂ ಮನಸ್ವತೀ ಮಂತ್ರದಿಂದ ಹೋಮಿಸಬೇಕು. ಆಚಾರ್ಯನು ತನ್ನ ಅಗ್ನಿಯಲ್ಲಿ ಬ್ರಾಹ್ಮಣ ಏಕಹೋತಾ ಮೊದಲಾದ ಹತ್ತು ಮಂತ್ರಗಳಿಂದ ಹತ್ತು ಆಹುತಿಗಳನ್ನು ಸ್ರುವದಿಂದ ಹೋಮಿಸಬೇಕು. ವಿಹೃತವಾದ ಅಗ್ನಿಯಲ್ಲಿ ವ್ಯಾಹೃತಿ ಪಂಚತತ್ತ್ವಗಳಿಂದ ಒಂಭತ್ತು ಮಂತ್ರಗಳಿಂದ ಮಧ್ಯೇ ಮಧ್ಯೆ ಪೂರ್ಣಾಹುತಿಯಿಂದ ಕೂಡಿ ಪ್ರತ್ಯೇಕವಾಗಿ ಎಂಟೆಂಟರಂತೆ ಸ್ರುವಾಹುತಿಯನ್ನು ಹೋಮಿಸಬೇಕು. ಆಚಾರ್ಯನ ಕುಂಡಾಗ್ನಿಯಲ್ಲಿ ಮೂಲಮಂತ್ರದಿಂದ ನೂರೆಂಟು ತುಪ್ಪದ ಆಹುತಿಯನ್ನು ಹೋಮಿಸಬೇಕು. ಆಚಾರ್ಯ ಕುಂಡದ ಅಗ್ನಿಯು ನಷ್ಟವಾದರೆ ಉತ್ತರ ದಿಕ್ಕಿನ ಕುಂಡದಿಂದ ಸಂಪೂರ್ಣ ಅಗ್ನಿಯನ್ನು ಆಚಾರ್ಯ ಕುಂಡದಲ್ಲಿರಿಸಿ ಗರ್ಭಾಧಾನಾದಿ ಸಂಸ್ಕಾರಗಳನ್ನು ಮಾಡಿ ಹಿಂದೆ ಹೇಳಿದ ಸಾಮಾನ್ಯ ನಾಶ ಪ್ರಾಯಶ್ಚಿತ್ತವನ್ನು ಮಾಡಿ ಉತ್ತರ ಕುಂಡಾಗ್ನಿಯನ್ನು ಪ್ರಣಯನವನ್ನು ಮಾಡಿ ಈ ಕುಂಡದ ಅಗ್ನಿನಾಶಕ್ಕೆ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿ ಮೂಲಾಗ್ನಿಯಲ್ಲಿ ಅದರ ಹಾಗೆ– ಬ್ರಾಹ್ಮಣ ಏಕಹೋತಾ, ಅಗ್ನಿರ್ದ್ವಿಹೋತಾ, ಪೃಥಿವೀತ್ರಿಹೋತಾ, ಅಂತರಿಕ್ಷಶ್ಚತುರ್ಹೋತಾ, ವಾಯುಃಪಂಚಹೋತಾ, ಚಂದ್ರಮಾಷಡ್ಢೋತಾ, ಅನ್ನಂ ಸಪ್ತಹೋತಾ, ದ್ಯೌರಷ್ಟಹೋತಾ, ಆದಿತ್ಯೋನವಹೋತಾ, ಪ್ರಜಾಪತಿರ್ದಶಹೋತಾ– ಈ ಮಂತ್ರಗಳಿಂದ ಹತ್ತು ಆಹುತಿಗಳನ್ನು ಹೋಮಿಸಬೇಕು.

* * * *

## ಆಚಾರ್ಯ ಕುಂಡ ಮತ್ತು ಉತ್ತರ ಕುಂಡದ ಎರಡರ ಅಗ್ನಿನಾಶದಲ್ಲಿ

ಕ್ರಮದಂತೆ ಆಚಾರ್ಯನು ತನ್ನ ಕುಂಡದಲ್ಲಿ ಅಗ್ನಿಯನ್ನುಂಟು ಮಾಡಿ ಚಿತ್ತಿ ಸ್ರುಕ್ ಸಮೂಹಗಳಿಂದ ದಶಹೋತೃ ಚತುರ್ಹೋತೃ, ಪಂಚಹೋತೃ ಷಡ್ಢೋತೃ ಸಪ್ತಹೋತೃ ವಾಗ್ಹೋತೃಗಳ ಮಂತ್ರಗಳಿಂದ ಚಿತ್ತಿಃಸ್ರುಕ್ ಪೃಥಿವೀಹೋತಾ, ಅಗ್ನಿರ್ಹೋತಾ, ಸೂರ್ಯಂತೇ, ಮಹಾಹವಿಃ ವಾಗ್ಘೋತಾ, ಹೀಗೆ ಆರು ಹೋತೃಗಳಿಂದ ಪ್ರತ್ಯೇಕವಾಗಿ ನಾಲ್ಕು ಬಾರಿ ತೆಗೆದುಕೊಂಡ ಆಜ್ಯದಿಂದ ಹೋಮಿಸಿ ಪುನಃ ಏಕಹೋತ್ರಾದಿ ಮಂತ್ರಗಳಿಂದ ಸ್ರುವದಿಂದ ಹತ್ತು ಆಹುತಿಗಳನ್ನು ಹೋಮಿಸಬೇಕು. ಭೂರಾದಿ ನಾಲ್ಕರಿಂದ ನಾಲ್ಕು ನಾಲ್ಕಾವರ್ತಿ ತೆಗೆದುಕೊಂಡು ಪ್ರತ್ಯೇಕವಾಗಿ ಎಂಟಾವರ್ತಿ ಮಂತ್ರವನ್ನು ಹೇಳಿ ಹೋಮಿಸಬೇಕು. ಪಂಚತತ್ತ್ವಗಳಿಂದ ಪ್ರತ್ಯೇಕವಾಗಿ ಚತುರಾವತ್ತಾಜ್ಯದಿಂದ ಪ್ರತ್ಯೇಕಿಸಿ(ವಿಭಾಗಿಸಿ) ಎಂಟಾವರ್ತಿ ಹೋಮಿಸಿ, ಮೂಲಮಂತ್ರದಿಂದ ನೂರೆಂಟು ಸಂಖ್ಯೆಯಲ್ಲಿ ಹೋಮಿಸಬೇಕು. ಪುನಃ ಉತ್ತರದ ಕುಂಡದಲ್ಲಿ ಅಗ್ನಿಯನ್ನು ತೆಗೆದುಕೊಂಡು ಹೋಗಿ ಅಲ್ಲಿ ಅಗ್ನಿನಾಶಕ್ಕೆ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಬೇಕು. ಆಮೇಲೆ ಮೂಲಾಗ್ನಿಯಲ್ಲಿ ಏಕಹೋತ್ರಾದಿ ಮಂತ್ರಗಳಿಂದ ಹತ್ತು ಆಹುತಿಯನ್ನು ಹೋಮಿಸಬೇಕು. ತತ್ತ್ವಹೋಮಾದಿಗಳಲ್ಲಿ ಪ್ರಧಾನಾಗ್ನಿಯು ನಾಶವಾದರೆ ಯಾ ದೋಷಯುಕ್ತವಾದರೆ ಆಚಾರ್ಯ ಕುಂಡಾಗ್ನಿಯ ನಾಶದಂತೆ ಎಲ್ಲಾ ಪ್ರಾಯಶ್ಚಿತ್ತವನ್ನು ಮಾಡಬೇಕು.

* * * *

## ಪ್ರಾಯಶ್ಚಿತ್ತವು ತಿಳಿಯಲ್ಪಡದಿದ್ದಾಗ ಮನೋಜ್ಯೋತಿಃ

ಅಯಾಶ್ಚಾಗ್ನೇ ಯದಸ್ಮಿನ್ಕರ್ಮಣಿ ಸ್ವಸ್ತಿನಃ ಮಿಂದಾಹುತಿ ದ್ವಯ ವ್ಯಾಹೃತಿಗಳನ್ನು ಹತ್ತು ಸರ್ವ ನಿಷ್ಕೃತಿಗಳಾಗಿರುತ್ತವೆ. (ಹೋಮಿಸಬೇಕು) ಇಪ್ಪತ್ತು ಗುಲುಗುಂಜಿ ತೂಕದ ಚಿನ್ನವನ್ನು ಪ್ರಾಯಶ್ಚಿತ್ತ ರೂಪವಾಗಿ ಕೊಡಬೇಕು. ಕರ್ಮದ ಮಧ್ಯದಲ್ಲಿ ಅಂತರಾಗಮನ (ಮಧ್ಯೆ ಬಂದಲ್ಲಿ) ಮನಸ್ವತಿಯನ್ನು ಹೋಮಿಸಬೇಕು. ಹೆಚ್ಚಿನ ದೋಷದ್ದಾದರೆ ಪಂಚದುರ್ಗಾ ಮನಸ್ವತೀ ವ್ಯಾಹೃತಿಗಳಿಂದಲಾಗಲೀ ಪೂರ್ಣಾಹುತಿಯು ಮಾಡಲ್ಪಡಬೇಕು. ಪೂಜಿಸಲ್ಪಟ್ಟ ಕಲಶದಲ್ಲಿ ಅಶುದ್ಧಿಯಾದಲ್ಲಿ ಆ ಕಲಶದಿಂದ ಚಿನ್ನದಲ್ಲಭಿಷೇಕಿಸಿ, ಸಪ್ತಶುದ್ಧಿಗಳನ್ನು ಮಾಡಿ ಆ ಸ್ಥಳವನ್ನು ಶುದ್ಧಿಗೊಳಿಸಿ ಅಲ್ಲಿಯೇ ತುಂಬಿದ ಬೇರೆ ಕಲಶದಲ್ಲಿ ಸಂಯೋಜಿಸಿ ಅದರ ಮುಂಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ ಅಲ್ಲಿ ಅಧಿವಾಸಾಗ್ನಿಯಲ್ಲಾಗಲೀ ಆಯಾಯ ನಿಜಪಂಚತತ್ತ್ವಗಳಿಂದ ಪ್ರತ್ಯೇಕವಾಗಿ ಎಂಟಾವರ್ತಿ ಸ್ರುವದಿಂದ ಆಜ್ಯವನ್ನು ಚತುರ್ಗೃಹೀತಾಜ್ಯದಿಂದ ಸ್ರುಚಿವಿನಿಂದಾಗಲೀ ಹೋಮಿಸಿ, ನಿಜಮೂಲದಿಂದ ನಿಜಾಸ್ತ್ರದಿಂದಲೂ ನೂರೆಂಟಾರ್ತಿ ತುಪ್ಪವನ್ನು ಹೋಮಿಸಿ, ಸಂಪಾತವನ್ನು ಕಲಶದಲ್ಲಿ ಸಮರ್ಪಿಸಿ ಹೋಮದಷ್ಟೇ ಜಪಿಸಬೇಕು. ಅದರಿಂದ ಕ್ರಮದಂತೆ ಅಭಿಷೇಕ ಮಾಡಬೇಕು. ಕಲಶವು ಭಿನ್ನ(ಛಿದ್ರ)ವಾದಲ್ಲಿ ಬೇರೆ ಕಲಶವನ್ನು ಸ್ಥಾಪಿಸಿ ಭಿನ್ನವಾದ ಕಲಶದಲ್ಲಿ ಉಳಿದ ನೀರಿದ್ದರೆ ಆ ಉಳಿದ ನೀರಿನಿಂದ ಯಾ ಬೇರೆ ನೀರಿನಿಂದ ತುಂಬಿಸಿ, ಪೂಜಿಸಿ ಪಂಚತತ್ತ್ವಮಂತ್ರಗಳಿಂದ ಸ್ರುವಾಹುತಿಯನ್ನು ಹೋಮಿಸಿ ಕ್ರಮದಂತೆ ಉಳಿದುದನ್ನು ಮಾಡಬೇಕು. ಜೀವಕುಂಭ ನಿದ್ರಾಕಲಶ ಬ್ರಹ್ಮಕಲಶ ತತ್ತ್ವಕಲಶಗಳು ಛಿದ್ರವಾದರೆ

ಮಿಂದಾಹುತಿಯನ್ನು (ಹಿಂದೆ ಹೇಳಿದ ಪ್ರಾಯಶ್ಚಿತ್ತ) ಮಾಡಬೇಕು. ಕಲಶದಲ್ಲಿ ನೀರಿಲ್ಲದಿದ್ದರೆ ಪುನಃ ಮೂಲಮಂತ್ರಾಭಿಮಂತ್ರಿತ ನೀರಿನಿಂದ ತುಂಬಿ ಪೂಜಿಸಬೇಕು. ಒಂದು ಭಾಗದ ಕಲಶಾಭಿಷೇಕದ ನಂತರ ಒಡೆದದ್ದಾದರೆ ಕಲಶ ಮಂತ್ರ ಬಿಂಬದಲ್ಲಿ ಪ್ರಾಯಶ್ಚಿತ್ತಾಹುತಿಯ ಸಂಪಾತ ಸ್ಪರ್ಶನವನ್ನು ಮಾಡಬೇಕು. ಬಲಿಗಾಗಿ ಕರ್ಮಬಿಂಬವನ್ನು ಕೊಂಡೊಯ್ಯುವಾಗ ಅದು ಬಿದ್ದರೆ, ಮುರಿದುಬಿದ್ದರೆ, ಕೆಟ್ಟುಹೋದರೆ ಅಲ್ಲೇ ಸ್ಥಳದಲ್ಲಿ ಅದನ್ನಿರಿಸಿ ಸಪ್ತಶುದ್ಧಿಯನ್ನು ಮಾಡಿ ಪಂಚತತ್ತ್ವ ಮೂಲಮಂತ್ರ ಅಸ್ತ್ರಮಂತ್ರ ಮೊದಲಾದುವುಗಳಿಂದ ಹಿಂದೆ ಹೇಳಿದ ತಂತ್ರದಿಂದ (ಉಪಾಯದಿಂದ, ಒಟ್ಟುಗೂಡುವಿಕೆಯಿಂದ) ಹೋಮಿಸಿ ಬಲಿಕೌತುಕದಲ್ಲಿ ಸಂಪಾತವನ್ನು ಸ್ಪರ್ಶಿಸಿ ಉಳಿದ ಕರ್ಮವನ್ನು ಪೂರ್ತಿಗೊಳಿಸಿ, ಗರ್ಭಗುಡಿಯಲ್ಲಿ ಒಳಗೆ ಹೋಗಿ ಮೂಲಬಿಂಬದಲ್ಲಿ ಸೇರಿಸಿ ದೋಷವನ್ನನುಸರಿಸಿ ಪ್ರಾಯಶ್ಚಿತ್ತವನ್ನು ಮಾಡಬೇಕು. ಕರ್ಮ ಬಿಂಬವು ಮಾರ್ಗಮಧ್ಯದಲ್ಲಿ ಭಂಗವಾದಾಗ ಆಮೇಲೆ ಬೇರೆ ಬಿಂಬದಲ್ಲಿ ದೇವರನ್ನು ಯೋಜಿಸಿ(ಸೇರಿಸಿ, ಹೊಂದಿಸಿ) ಸಪ್ತಶುದ್ಧಿಯ ನಂತರ ಪಂಚತತ್ತ್ವ ಹೋಮ ಮೊದಲಾಗಿ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿ ಉಳಿದ ಭಾಗವನ್ನು ಪೂರ್ತಿಗೊಳಿಸಿ, ಮೂಲಬಿಂಬದಲ್ಲಿ ಹೊಂದಿಸಿ ಸರಿಯಾಗಿ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಸಾಧಾರಣವಾಗಿ ಪ್ರಾಯಶ್ಚಿತ್ತದಲ್ಲಿ ಭೂರಾದಿವ್ಯಾಹೃತಿಗಳಿಂದ ನಾಲ್ಕಾವರ್ತಿ ತೆಗೆದುಕೊಂಡ ತುಪ್ಪವನ್ನು ಹೋಮಿಸಿ, ಮನಸ್ವತೀ ದಶಾಹುತಿಗಳನ್ನು ಹೋಮಿಸಿ ಪಂಚತತ್ತ್ವ ಮೂಲ ಅಸ್ತ್ರಹೋಮ ಬ್ರಾಹ್ಮಣ ತರ್ಪಣಾದಿಗಳನ್ನು ಮಾಡಬೇಕು. ಪ್ರಾಯಶ್ಚಿತ್ತ ಹೇಳದೆಡೆಯಲ್ಲಿ ತಮ್ಮ ಬುದ್ಧಿಬಲದಿಂದ ಹೇಳಲ್ಪಟ್ಟ ಪ್ರಾಯಶ್ಚಿತ್ತಗಳಲ್ಲಿ ಯಾವುದಾದರೊಂದನ್ನು ಮಾಡಬೇಕು. ದೇವರ ತಲೆಯ ಮೇಲಿನ ಕೊಡೆಯು(ಛತ್ರವು) ಮುರಿದುಬಿದ್ದರೆ **ಸೂರ್ಯೋನೋದಿವಸ್ಪಾತು**– ಈ ಮಂತ್ರದಿಂದ ನೂರೆಂಟರ ಸಂಖ್ಯೆಯಲ್ಲಿ ಜಪಿಸಬೇಕು. ಉತ್ಸವದಲ್ಲಿ ವಾಹನದಲ್ಲಿ ಕುಳಿತಿರುವಾಗ ದಾರಿಯಲ್ಲಿ ಛತ್ರವು ಬಿದ್ದರೆ, ತುಂಡಾದರೆ ದೇವರನ್ನು ವಾಹನದಲ್ಲಿ ಕುಳ್ಳಿರಿಸಿ ಪುನಃ ಉತ್ಸವವನ್ನು ಆಚರಿಸಬೇಕು. ಪ್ರಾಯಶ್ಚಿತ್ತಮಂತ್ರಗಳನ್ನು ಜಪಿಸಬೇಕು.

* * * *

## ರಥಕಲಶ ಪತನವಾದಲ್ಲಿ ಪ್ರಾಯಶ್ಚಿತ್ತ

ಉತ್ಸವದ ಸಮಯದಲ್ಲಿ ರಥವು ಭಗ್ನವಾದರೆ, ಬಿದ್ದರೆ, ಚಕ್ರವು ಹೂತುಹೋದರೆ ಅಲ್ಲಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತವು ಹೀಗಿದೆ–ಉತ್ಸವದ ಸಮಯದಲ್ಲಿ ರಥದ ತುದಿಯ ಕಲಶವು ತುಂಡಾಗಿಬಿದ್ದರೆ ಅಲ್ಲಿ ಕಲಶವನ್ನಿರಿಸಿ, ಅಲ್ಲಿಯೇ ಅಧಿವಾಸ ಹೋಮವನ್ನು ಇಪ್ಪತ್ತೈದರ ಸಂಖ್ಯೆಯಲ್ಲಿ ಮಾಡಬೇಕು. ನೂರೆಂಟರ ಸಂಖ್ಯೆಯಲ್ಲಾಗಲೀ ಕಡಿಮೆಯೆಂದರೆ ನಲವತ್ತೊಂಭತ್ತರ ಸಂಖ್ಯೆಯಲ್ಲಾಗಲೀ ದೇವರಿಗೆ ಕಲಶಾಭಿಷೇಕವನ್ನು ಮಾಡಿ ಹೊಸತಾದ ಶಿಖರಕಲಶವನ್ನು ಪುನಃ ಸ್ಥಾಪಿಸಬೇಕು. ಕ್ರಮದಂತೆ ಹಬ್ಬವನ್ನು ಪುನಃ ಆಚರಿಸಬೇಕು. ಧ್ವಜದಂಡ ಸೂತ್ರ ಮೊದಲಾದುವು ಭಂಗವಾದಲ್ಲಿ ಶಾಂತಿ ಹೋಮಗಳನ್ನು ಮಾಡಿ ಇಪ್ಪತ್ತೈದು ಕಲಶಗಳಿಂದ ದೇವರಿಗೆ ಅಭಿಷೇಕ ಮಾಡಬೇಕು. ರಥವು ಚಲಿಸುತ್ತಿರುವಾಗ ದಂಡಪಟ್ಟಿ ಮೊದಲಾದುವು ತುಂಡಾದರೆ ರಥದಿಂದ ದೇವರನ್ನಿಳಿಸಿ ಅಲ್ಲೇ ನೆಲದಲ್ಲಿ ಮೂರ್ತಿಯನ್ನಿಟ್ಟು, ಬ್ರಹ್ಮ ವಿಷ್ಣು ಮಹೇಶರನ್ನು ಆಯಾಯ ಮಂತ್ರದಿಂದ ಹೋಮಿಸಿ, ಮೂರ್ತಿಹೋಮವನ್ನು ಮಾಡಬೇಕು. ಕೂಡಲೇ ಶಿಲ್ಪಿಯಿಂದ ಪುನಃ ಸರಿಗೊಳಿಸಬೇಕು. ಸಹಸ್ರ ಸಂಖ್ಯೆಯಲ್ಲಿ ಕಲಶಾಭಿಷೇಕವನ್ನು ಮಾಡಬೇಕು. ದಶದಾನವನ್ನು ಮಾಡಿ ರಥಸಂಪ್ರೋಕ್ಷಣೆ ಮಾಡಿ ರಥಾರೋಹಣ ಮಾಡಬೇಕು. ರಥ ಚಕ್ರವು ಹುದುಗಿಹೋದಲ್ಲಿ ವಾಸ್ತುಹೋಮವನ್ನು ಮಾಡಿ ಇಪ್ಪತ್ತೈದು ಕಲಶಗಳಿಂದ ರಥಸಂಪ್ರೋಕ್ಷಣೆ ಮಾಡಬೇಕು.

* * * *

# ಕುಮಾರ ಸೂಕ್ತಂ

ಅಗ್ನಿರ್ಹೋತಾ ನೋ ಅಧ್ವರೇ ವಾಜೀ ಸನ್ಪರಿಣೀಯತೇ ।
ದೇವೋ ದೇವೇಷು ಯಜ್ಞಿಯಃ ॥ ೧ ॥

ಪರಿತ್ರಿ ವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರವ ।
ಆದೇವೇಷು ಪ್ರಯೋದಧತ್ ॥ ೨ ॥

ಪರಿವಾಜಪತಿಃ ಕವಿರಗ್ನಿರ್ಹವ್ಯಾನ್ಯಕ್ರಮೀತ್ ।
ದಧದ್ರತ್ನಾನಿ ದಾಶುಷೇ ॥ ೩ ॥

ಅಯಂ ಯಃ ಸೃಂಜಯೇ ಪುರೋ ದೈವವಾತೇ ಸಮಿಧ್ಯತೇ ।
ದ್ಯುಮಾಂ ಅಮಿತ್ರದಂಭನಃ ॥ ೪ ॥

ಅಸ್ಯ ಘಾ ವೀರ ಈವತೋಗ್ನೇರೀಶೀತ ಮರ್ತ್ಯಃ ।
ತಿಗ್ಮಜಂಭಸ್ಯ ಮೀಳ್ಹುಷಃ ॥ ೫ ॥

ತಮರ್ವಂತಂ ನಸಾನಮಸಿಮರುಷಂ ನ ದಿವಃ ಶಿಶುಂ ।
ಮರ್ಮೃಜ್ಯಂತೇ ದಿವೇ ದಿವೇ ॥ ೬ ॥

ಬೋಧದ್ಯನ್ಮಾ ಹರಿಭ್ಯಾಂ ಕುಮಾರಃ ಸಾಹದೇವ್ಯಃ ।
ಅಚ್ಛಾ ನ ಹೂತ ಉದರಂ ॥ ೭ ॥

ಉತ ತ್ಯಾ ಯಜತಾ ಹರೀ ಕುಮಾರಾತ್ಸಾಹದೇವ್ಯಾತ್ ।
ಪ್ರಯತಾ ಸದ್ಯ ಆದದೇ ॥ ೮ ॥

ಏಷ ವಾಂ ದೇವಾ ವಶ್ವಿನಾ ಕುಮಾರಃ ಸಾಹದೇವ್ಯಃ ।
ದೀರ್ಘಾಯುರುಸ್ತು ಸೋಮಕಃ ॥ ೯ ॥

ತಂ ಯುವಂ ದೇವಾ ವಶ್ವಿನಾ ಕುಮಾರಂ ಸಾಹದೇವ್ಯಂ ।
ದೀರ್ಘಾಯಷಂ ಕೃಣೋತನ ॥ ೧೦ ॥

* * * *

# ಶಾಸ್ತ್ರ ಸೂಕ್ತಂ

ಯಾ ತ ಊತಿರವಮಾ ಯಾ ಪರಮಾ ಯಾ ಮಧ್ಯಮೇಂದ್ರ ಶುಷ್ಮಿನ್ನಸ್ತಿ ।
ತಾಭಿರೂಷು ವೃತ್ರಹತ್ಯೇಽವೀರ್ನ ಏಭಿಶ್ಚ ವಾಜೈರ್ಮಹಾನ್ನ ಉಗ್ರ ॥ ೧ ॥

ಅಭೀ ಸ್ಪೃಧೋ ಮಿಥತೀರರಿಷಣ್ಯನ್ನಮಿತ್ರಸ್ಯ ವ್ಯಥಯಾ ಮನ್ಯುಮಿಂದ್ರ ।
ಆಭಿರ್ವಿಶ್ವಾ ಅಭಿಯುಜೋ ವಿಷೂಚೀರಾರ್ಯಾಯ ವಿಶೋಽವ ತಾರೀರ್ದಾಸೀಃ ॥ ೨ ॥

ಇಂದ್ರ ಜಾಮಯ ಉತಯೇಽಜಾಮಯೋಽರ್ವಾಚೀನಾಸೋ ವನುಷೋ ಯುಯುಜ್ರೇ ।
ತ್ವಮೇಷಾಂ ವಿಥುರಾ ಶವಾಂಸಿ ಜಹಿ ವೃಷ್ಣ್ಯಾನಿ ಕೃಣುಹೀ ಪರಾಚಃ ॥ ೩ ॥

ಶೂರೋ ವಾ ಶೂರಂ ವನತೇಶರೀರೈಸ್ತನೂರುಚಾ ತರುಷಿ ಯತ್ಕೃಣ್ವೈತೇ ।
ತೋಕೇ ವಾ ಗೋಷು ತನಯೇ ಯದಪ್ಸು ವಿಕ್ರಂದಸೀ ಉರ್ವರಾಸು ಬ್ರವೈತೇ ॥ ೪ ॥

ನಹಿ ತ್ವಾ ಶೂರೋ ನ ತುರೋ ನ ಧೃಷ್ಣುರ್ನ ತ್ವಾ ಯೋಧೋ ಮನ್ಯಮಾನೋ ಯುಯೋಧ ।
ಇಂದ್ರ ನಕಿಷ್ಟ್ವಾ ಪ್ರತ್ಯಸ್ತ್ಯೇಷಾಂ ವಿಶ್ವಾ ಜಾತಾನ್ಯಭ್ಯಸಿತಾನಿ ॥ ೫ ॥

ಸ ಪತ್ಯತ ಉಭಯೋರ್ನೃಮ್ಣಮಯೋರ್ಯದೀ ವೇಧಸಃ ಸಮಿಥೇ ಹವಂತೇ ।
ವೃತ್ರೇ ವಾ ಮಹೋ ನೃವತಿ ಕ್ಷಯೇ ವಾ ವ್ಯಚಸ್ವಂತಾ ಯದಿ ವಿತಂತಸೈತೇ ॥ ೬ ॥

ಅಧ ಸ್ಮಾ ತೇ ಚರ್ಷಣಯೋ ಯದೇಜಾನಿಂದ್ರ ತ್ರಾತೋತ ಭವಾ ವರೂತಾ ।
ಅಸ್ಮಾಕಾಸೋ ಯೇ ನೃತಮಾಸೋ ಅರ್ಯ ಇಂದ್ರ ಸೂರಯೋ ದಧಿರೇ ಪುರೋ ನಃ ॥ ೭ ॥

ಅನು ತೇ ದಾಯಿ ಮಹ ಇಂದ್ರಿಯಾಯ ಸತ್ರಾ ತೇ ವಿಶ್ವಮನು ವೃತ್ರಹತ್ಯೇ ।
ಅನುಕ್ಷತ್ರಮನು ಸಹೋ ಯಜತೇಂದ್ರ ದೇವೇಭಿರನು ತೇ ನೃಷ ಹ್ಯೇ ॥ ೮ ॥

ಏವಾ ನಃ ಸ್ಪೃಧಃ ಸಮಜಾ ಸಮತ್ಸ್ವಿಂದ್ರ ರಾರಂಧಿ ಮಿಥತೀರದೇವೀಃ ।
ವಿದ್ಯಾಮ ವಸ್ತೋರವಸಾ ಗೃಣಂತೋ ಭರದ್ವಾಜಾ ಉತ ತ ಇಂದ್ರನೂನಂ ॥ ೯ ॥

* * * *



ಪಾಲಿಕ



ಘಟಕ



ಶರಾವ



ಕರ್ಕರೀಕುಂಭ



ಅಷ್ಟದಳಕುಂಡ



ಷಡಶ್ರಕುಂಡ



ವೃತ್ತಕುಂಡ



ಷಟ್ಕೋಣಕುಂಡ



ಅರ್ಧಚಂದ್ರಾಕೃತಿ ಕುಂಡ



ತ್ರಿಕೋಣ ಕುಂಡ



ಚತುರಶ್ರಕುಂಡ



ಯೋನಿಕುಂಡ



ಲಿಂಗಮುದ್ರಾ



ಸನ್ನಿ ರೋಧ ಮುದ್ರಾ



ಮುಷ್ಟಿ ಮುದ್ರಾ



ಸೃಷ್ಟಿ ಮುದ್ರಾ



ಸ್ಥಾಪನ ಮುದ್ರಾ



ಮೃಗೀ ಮುದ್ರಾ



ಧೂಪ ಮುದ್ರಾ



ದೀಪ ಮುದ್ರಾ



ಗ್ರಾಸ ಮುದ್ರಾ



ಯೋಗ ಸಂಪುಟ



ಧ್ಯಾನ ಮುದ್ರೆ



ಅಗ್ನಿ ಪ್ರಕಾರ



ಶಂಖ ಮುದ್ರೆ



ಚಕ್ರ ಮುದ್ರೆ



ಗದಾ ಮುದ್ರೆ



ಪದ್ಮ ಮುದ್ರೆ



ಅವಕುಂಠನ ಮುದ್ರೆ



ಸಂಹಾರ ಮುದ್ರೆ



ಅಂಜಲಿ



ನಮಸ್ಕಾರ



ಸ್ವಾಗತ



ಧೇನುಮುದ್ರಾ



ಅವಾಹನ ಮುದ್ರಾ



ಅಭಯ ಮುದ್ರಾ


ಶಂಕುಕರ್ಣಃ
ವಾಮನಃ
ಸರ್ವನೇತ್ರಃ
ನಿಋತಿಃ
ವರುಣ ಅನಂತಃ
ವಾಯುಃ
ಅನಂತಃ
ವಿಷ್ಣುಃ
ಪುಂಡರೀಕಃ
ವೀರಭದ್ರಃ-ಗಣೇಶಃ
ಯಮಃ
ಸೋಮಃ
ಸುಮುಖಃ
ಚಂಡ – ಪ್ರಚಂಡ
ಗರುಡಃ
ಇಂದ್ರಃ
ಈಶಾನಃ
ಬ್ರಹ್ಮಾ
ಚಕ್ರಪಾಣಿಃ – ಶಂಖಪಾಣಿಃ
ಶ್ರೀಃ – ಭೂಮಿಃ
ಕುಮುದಃ

# ಗಣೇಶಬಲಿ ದೇವತಾ ಕ್ರಮಃ



# ಶಂಕರನಾರಾಯಣೇ ಬಲಿ ದೇವತಾ ಕ್ರಮಃ

ವಾಮನಾಯ
ಪರ್ವತೇಶಾಯ-ಶಂಕುಕರ್ಣಾಯ
ಗುಹೇಶಾಯ

ಶಂಕರ
ನಾರಾಯಣ

ಅನಂತಾಯ

ನಂದಿನೇಚಂಡಾಯ
ಮಹಬಲಾಯ
ಪ್ರಂಚಂಡಾಯ

ಶೂಲಪಾಣಿಃ-ಪರಶುಪಾಣಿಃ
ಶಂಖಪಾಣಿಃ-ಚಕ್ರಪಾಣಿಃ
ವೃಷಾಯ-ಗರುಡಾತ್ಮನೇ

ಇಂದ್ರಾಯ ಬ್ರಹ್ಮಣೇ
ತೀಕ್ಷ್ಣದಂಷ್ಟ್ರಾಯ-ಮೃಗಾಸ್ಯಾಯ

ಶ್ರೀಯೈ-ಭೂಮ್ಯೈ
ಶೂಲಾಯ-ಟಂಕಾಯ ಅರಣ್ಯೈ-ಕಂಕಾಯ

ಪುಂಡರೀಕಾಯ
ಯಮಾಯ
ಸೋಮಾಯ
ಧನದಾಯ-ಸ್ಕಂದಾಯ
ಬ್ರಾಹ್ಮ್ಯಾದಯಃ
ಗಣೇಶಃ-ವೀರಭದ್ರಃ
ನಿರುತಯೇ
ವಾಯವೇ
ಕುಮುದಾಕ್ಷಾಯ
ಚಂಡೇಶ್ವರಾಯ




ಶಂಕರನಾರಾಯಣೇ
ಬಲಿಪೀಠ ದೇವತೆಗಳು

# ಹನುಮದ್ಬಲಿ ದೇವತಾ ಕ್ರಮಃ



# ಪಂಚವಿಂಶತಿ ಕಲಶ ಮಂಡಲಂ



ಉದ್ದ ಅಗಲಕ್ಕೆ ಆರುರೇಖೆಗಳನ್ನು ಎಳೆದು ಐದು ಪದಗಳಲ್ಲಿ ಶುದ್ಧ ಜಲ ಹೊರತಾಗಿ ಮಧ್ಯಪದ್ಮ ಬರೆದು ಬ್ರಾಹ್ಮ ದೈವಿಕ ಮಾನುಷ ಕ್ರಮದಿಂದ ೨೫ ದ್ರವ್ಯಪೂರಣ ಮಾಡುವುದು

## ಈ ಕೆಳಗಿನಂತೆಯೂ ಮಂಡಲ ರಚಿಸಬಹುದು



೮ ರೇಖೆಗಳು

೭ ಪದ್ಮಗಳು

ಮಧ್ಯದಲ್ಲಿ ೯ ಪದಗಳಲ್ಲಿ

ಕಮಲ, ಕರ್ಣಿಕೆಯಲ್ಲಿ

೧

ದಳಗಳಲ್ಲಿ ೮

ಹೊರಗೆ ದಿಕ್ಕುಗಳಲ್ಲಿ

೪ x ೩ = ೧೨

ವಿದಿಕ್ಕುಗಳಲ್ಲಿ = ೪

೨೫

# ಪಂಚಾಶದುತ್ತರ ದ್ವಿಶತ ಕಲಶ ಮಂಡಲಂ. (ಸ್ಕಂದೇ)

ಉದ್ದ ಅಗಲವಾಗಿ ೧೮ ರೇಖೆಗಳು
೧೭ ಪದಗಳು. ದಿಕ್ಕುಗಳಲ್ಲಿ ೫ ಪದ
ಸೇರಿಸಿ ೩೦ ಕಲಶಗಳು
೩೦ ಪದಗಳು ವಿದಿಕ್ಕುಗಳಲ್ಲಿ ೧
ಪದವನ್ನು ಸೇರಿಸಿ ೨೬ ಕಲಶಗಳು

೩೦x೪=೧೨೦
೨೬x೪=೧೦೪
ಬ್ರಹ್ಮಖಂಡ = ೨೬
೨೫೦



# ಪಂಚಶತ ಕಲಶ ಮಂಡಲಂ (ಷಣ್ಮುಖೇ)

ಉದ್ದ ಅಗಲವಾಗಿ ೩೦ ರೇಖೆಗಳು

೨೯ ಪದಗಳು.

ಐದೈದು ಪದಗಳಿಗೆ ೧

ವೀಧಿಯಂತೆ ನಾಲ್ಕು ವೀಧಿಗಳು

೨೫x೧೭=೪೨೫

೯x೬=೫೪

೯x೨=೧೮

೪೯೭

ಕೋಣಗಳೆಲ್ಲ ೧ ಕೂಡಿಸಿ ೪

೫೦೧



# ಪಂಚ ವಿಂಶತ್ಯುತ್ತರ ಶತ ಕಲಶ ಪದಂ

## ಷಣ್ಮುಖೇ

೨೫x೫=೧೨೫

ಉದ್ದ ಅಗಲಕ್ಕೆ ೬ ರೇಖೆಗಳು

ಮಧ್ಯ ೨೫

ದಿಕ್ಕುಗಳಲ್ಲಿ ೨೫x೪=೧೦೦

ಒಟ್ಟು ೧೨೫



# ಅಷ್ಟೋತ್ತರ ಶತ ಕಲಶ ಮಂಡಲಂ

ಉದ್ದ ಅಗಲಕ್ಕೆ ೧೬ ರೇಖೆಗಳು
೧೫ ಪದಗಳು, ಮಧ್ಯೇ ಪದಗಳಿಂದ ಪದ್ಮ.
ದೈವಿಕಾವರಣ ದಿಕ್ಕುಗಳಲ್ಲಿ ೩X೪=೧೨.
ವಿದಿಕ್ಕುಗಳಲ್ಲಿ ೧X೪=೪,
ಮಾನುಷಾವರಣ ದಿಕ್ಕುಗಳಲ್ಲಿ ೯X೪=೩೬
ವಿದಿಕ್ಕುಗಳಲ್ಲಿ ೮X೪=೩೨,
ಅಂತರಾಳದಲ್ಲಿ೩+೩X೪=೨೪

೧೦೯

ಬ್ರಾಹ್ಮ – ೧
ದೈವಿಕ ದಿಕ್ಕುಗಳಲ್ಲಿ ೩x೪=೧೨
ವಿದಿಕ್ಕುಗಳಲ್ಲಿ ೧x೪=೪
ಮಾನುಷ ದಿಕ್ಕುಗಳಲ್ಲಿ ೯x೪=೩೬
ವಿದಿಕ್ಕುಗಳಲ್ಲಿ ೮x೪=೩೨
ಅಂತರಾಳದಲ್ಲಿ ೩x೮=೨೪

೧೦೯



# ಅಷ್ಟೋತ್ತರ ಶತ ಕಲಶ ಮಂಡಲಂ

ಉದ್ದ ಅಗಲಕ್ಕೆ ೧೬ ರೇಖೆಗಳು
೧೫ ಪದಗಳು. ಮಧ್ಯೇ ಪದಗಳಿಂದ ಪದ್ಮ.
ದೈವಿಕಾವರಣ ದಿಕ್ಕುಗಳಲ್ಲಿ ೩X೪=೧೨.
ವಿದಿಕ್ಕುಗಳಲ್ಲಿ ೧X೪=೪.
ಮಾನುಷಾವರಣ ದಿಕ್ಕುಗಳಲ್ಲಿ ೬X೪=೨೬
ವಿದಿಕ್ಕುಗಳಲ್ಲಿ ೮X೪=೩೨.
ಅಂತರಾಳದಲ್ಲಿ೩+೩X೪=೨೪

<u>೧೦೬</u>

ಬ್ರಾಹ್ಮ - ೧
ದೈವಿಕ ದಿಕ್ಕುಗಳಲ್ಲಿ ೩x೪=೧೨
ವಿದಿಕ್ಕುಗಳಲ್ಲಿ ೧x೪=೪
ಮಾನುಷ ದಿಕ್ಕುಗಳಲ್ಲಿ ೬x೪=೨೬
ವಿದಿಕ್ಕುಗಳಲ್ಲಿ ೮x೪=೩೨
ಅಂತರಾಳದಲ್ಲಿ ೩x೮=೨೪

<u>೧೦೬</u>



# ಷಟ್ಪಂಚಾಶದುತ್ತರ ಶತಕಲಶ ಮಂಡಲ

ಉದ್ದ ಅಗಲಕ್ಕೆ ೧೮ ರೇಖೆಗಳು ೧೭ ಪದಗಳು,
ಮಧ್ಯದಲ್ಲಿ ೯ ಪದಗಳಿಂದ
ಪದ್ಮ ೧, ದೈವಿಕ ದಿಕ್ಕುಗಳಲ್ಲಿ ೭x೪=೨೮,
ವಿದಿಕ್ಕುಗಳಲ್ಲಿ ೪x೪=೧೬,
ಮಾನುಷ ದಿಕ್ಕುಗಳಲ್ಲಿ ೯x೪=೩೬,
ವಿದಿಕ್ಕುಗಳಲ್ಲಿ ೮x೪=೩೨
ಅಂತರಾಳದಲ್ಲಿ ೬x೮=೪೮=೧೫೭

ಮಧ್ಯಪದ್ಮದಲ್ಲಿ – ೧
ದೈವಿಕ ದಿಕ್ಕುಗಳಲ್ಲಿ ೭x೪=೨೮
ವಿದಿಕ್ಕುಗಳಲ್ಲಿ ೪x೪=೧೬
ಮಾನುಷ ದಿಕ್ಕುಗಳಲ್ಲಿ ೯x೪=೩೬
ವಿದಿಕ್ಕುಗಳಲ್ಲಿ ೮x೪=೩೨
ಅಂತರಾಳದಲಿ ೬x೮=೪೮
<u>೧೫೭</u>



# ಸಪ್ತದಶೋತ್ತರ ದ್ವಿಶತ ಕಲಶ ಮಂಡಲಂ

ಮೇಲಕ್ಕೆ ಹಾಗೂ ಅಡ್ಡಲಾಗಿ ೨೦ ರೇಖೆಗಳು

೧೯ ಪದಗಳು

ಮಧ್ಯೆ ೯ ಪದಗಳಿಂದ ಪದ್ಮ ದೈವಿಕ

ಮಾನುಷದಿಕ್ಕು ವಿದಿಕ್ಕು

ಅಂತರಾಳಗಳಲ್ಲಿ ೯X೨೪=೨೧೬+೧=೨೧೭



# ತ್ರಿಪಂಚಾಶದುತ್ತರ ದ್ವಿಶತ ಕಲಶ ಮಂಡಲಂ

ಮೇಲಕ್ಕೆ ಹಾಗೂ ಕೆಳಗಿನಿಂದ ಇಪ್ಪತ್ತೆರಡು ರೇಖೆಗಳು
ಇಪ್ಪತ್ತೊಂದು ಪದಗಳು ಮಧ್ಯದಲ್ಲಿ ಒಂಭತ್ತು ಪದಗಳಿಂದ

ಪದ್ಮ ೧
ದೈವಿಕಾರಣ ದಿಕ್ಕು ವಿದಿಕ್ಕುಗಳಲ್ಲಿ ೯x೮=೭೨
ಮಾನುಷಾವರಣ ದಿಕ್ಕುಗಳಲ್ಲಿ ೧೨x೪=೪೮
ವಿದಿಕ್ಕುಗಳಲ್ಲಿ ೯x೪=೩೬
ಅಂತರಾಳಗಳಲ್ಲಿ ೧೨x೮=೯೬
೨೫೩



# ಏಕೋತ್ತರ ತ್ರಿಶತ ಕಲಶ ಮಂಡಲ

ಉದ್ದ ಹಾಗೂ ಅಡ್ಡವಾಗಿ ೨೪ ರೇಖೆಗಳು ೨೩ ಪದಗಳು, ಮಧ್ಯೆ ೨೫ ಪದಗಳಿಂದ ಪದ್ಮ (ಬ್ರಾಹ್ಮ)

| | |
|---|---|
| ಮಧ್ಯ ೨೫ ರಿಂದ ಬ್ರಾಹ್ಮ (ಕಮಲ) | ೧ |
| ದೈವಿಕಾರಣ ದಿಕ್ಕುಗಳಲ್ಲಿ | ೧೦x೪=೪೦ |
| ವಿದಿಕ್ಕುಗಳಲ್ಲಿ ೩, | ೩x೪=೧೨ |
| ಮಾನುಷಾವರಣ ದಿಕ್ಕುಗಳಲ್ಲಿ | ೨೫x೪=೧೦೦ |
| ವಿದಿಕ್ಕುಗಳಲ್ಲಿ | ೧೭x೪=೬೮ |
| ಅಂತರಾಳದಲ್ಲಿ | ೧೦x೮=೮೦ |
| | ೩೦೧ |



# ಏಕೋತ್ತರಪಂಚಶತಕಲಶ ಮಂಡಲಂ

ಮೂವತ್ತು ರೇಖೆಗಳು ಇಪ್ಪತ್ತೊಂಭತ್ತು ಪದಗಳು (ಉದ್ದ (ಮೇಲೆ) ಅಡ್ಡ (ಅಗಲ) ಗಳಲ್ಲಿ)
ಇಪ್ಪತ್ತೈದು ಮಧ್ಯದ ಪದಗಳಿಂದ ನಡುವೆ ಕಮಲವು

| | |
|---|---|
| ದೈವಿಕ ವಿಭಾಗದ ದಿಕ್ಕು ವಿದಿಕ್ಕುಗಳಲ್ಲಿ | ೧೭x೮=೧೩೬ |
| ಮಾನುಷಾವರಣ ದಿಕ್ಕುಗಳಲ್ಲಿ | ೨೫x೪=೧೦೦ |
| ಅಂತರಾಳದಲ್ಲಿ | ೨೫x೪=೧೦೦ |
| ವಿದಿಕ್ಕುಗಳಲ್ಲಿ | ೧೬x೪=೬೪ |
| ಪುನರಂತಾಳದಲ್ಲಿ | ೨೫x೪=೧೦೦ |
| ಮಧ್ಯಕಮಲದಲ್ಲಿ | ೧ |
| | ೫೦೧ |



# ಸಹಸ್ರ ಕಲಶ ಮಂಡಲ

ಉದ್ದ ಅಗಲವಾಗಿ ೬೦ ರೇಖೆಗಳು, ೩೯ ಪದಗಳು,
ಏಳು ಪದಗಳ ನಂತರ ವೀಥಿಯಂತೆ ೬ ವೀಥಿಗಳು



# ಏಕೋನಪಂಚಾಶಚ್ಛತಕಲಶಪದಂ

## (ಶಿವೇ)

೧೪೯ ಕಲಶ-ರೇಖೆಗಳು ೧೮, ಪದಗಳು ೧೭,
ಮಧ್ಯಬ್ರಾಹ್ಮದಲ್ಲಿ ೯ ಪದಗಳಿಂದ ಪದ್ಮ
ಕರ್ಣಿಕೆ ಹಾಗೂ ದಳಗಳಲ್ಲಿ ೯

| | | |
|---|---|---|
| ದೈವಿಕಾವರಣದಲ್ಲಿ | ದಿಕ್ಕುಗಳಾಲ್ಲಿ | ೩x೪=೧೨ |
| | ವಿದಿಕ್ಕುಗಳಲ್ಲಿ | ೧x೪=೪ |
| ಮಾನುಷಾವರಣದ | ದಿಕ್ಕುಗಳಲ್ಲಿ | ೯x೪=೩೬ |
| | ವಿದಿಕ್ಕುಗಳಲ್ಲಿ | ೧೬x೪=೬೪ |
| | ಅಂತರಾಳದಲ್ಲಿ | ೩x೮=೨೪ |
| | | ೧೪೯ |



# ಏಕೋತ್ತರದ್ವಿಶತಕಲಶಪದಂ (ಶಿವೇ)

ಇಪ್ಪತ್ತು ರೇಖೆಗಳು ಹತ್ತೊಂಭತ್ತು ಪದಗಳು

| | |
|---|---|
| ಒಂಭತ್ತು ಪದಗಳಿಂದ ಬ್ರಾಹ್ಮದಲ್ಲಿ ಅಷ್ಟದಳ ಪದ್ಮ | ೧ |
| ದೈವಿಕಾವರಣದಲ್ಲಿ ದಿಕ್ಕು ಹಾಗೂ ವಿದಿಕ್ಕುಗಳಲ್ಲಿ ಹನ್ನೆರಡರಂತೆ | ೧೨x೮=೯೬ |
| ಮಾನುಷಾವರಣ ದಿಕ್ಕುಗಳಲ್ಲಿ ಆರರಂತೆ | ೬x೪=೨೪ |
| ವಿದಿಕ್ಕುಗಳಲ್ಲಿ ನಾಲ್ಕರಂತೆ | ೪x೪=೧೬ |
| ಅಂತರಾಳದಲ್ಲಿ ಎಂಟರಂತೆ | ೮x೮=೬೪ |
| | ೨೦೧ |



Scanned by CamScanner

# ಸಪ್ತದಶೋತ್ತರ ದ್ವಿಶತಕಲಶಪದಂ (ಶಿವೇ)

ಉದ್ದ ಅಗಲಕ್ಕೆ ೨೦ ರೇಖೆಗಳು ೧೯ ಪದಗಳು

| | |
|---|---|
| ಬ್ರಾಹ್ಮ (ಮಧ್ಯ)ದ ೯ ಪದಗಳಿಂದ ಪದ್ಮ | ೧ |
| ಕಲಶ ದೈವಿಕಾವರಣದಲ್ಲಿ ದಿಕ್ಕುಗಳಲ್ಲಿ | ೬x೪=೨೪ |
| ವಿದಿಕ್ಕುಗಳಲ್ಲಿ | ೪x೪=೧೬ |
| ಮಾನುಷಾವರಣದಲ್ಲಿ ದಿಕ್ಕುಗಳಲ್ಲಿ | ೧೨x೪=೪೮ |
| ವಿದಿಕ್ಕುಗಳಲ್ಲಿ | ೧೬x೪=೬೪ |
| ಅಂತರಾಳದಲ್ಲಿ | ೮x೮=೬೪ |
| | ೨೧೭ |



# ತ್ರಿಶತಕಲಶ ಮಂಡಲಂ

## ತೈಲಾದಿಯುಕ್ತಂ (ಶಿವೇ)

ಉದ್ದ ಅಗಲಕ್ಕೆ ೨೪ ರೇಖೆಗಳು ೨೩ ಪದಗಳು
ಮಧ್ಯ ೧೫ ಪದಗಳಲ್ಲಿ ೧೦೮ ರಂತೆ ಹೊರಗೆ ೧ ಪದ
ವೀಥಿ ೩ ಪದಗಳಿಂದ ದಿಕ್ಕುಗಳಲ್ಲಿ ೧೫ ವಿದಿಕ್ಕುಗಳಲ್ಲಿ ೯ ಅಂತರಾಳದಲ್ಲಿ ೧೨
<u>೧೦೯+೩೬+೯+೯೬+೬೦=೩೧೧</u>



# ಗಂಧಯುಕ್ತ ತೈಲಾದಿ ಸಹಿತ ಪಂಚವಿಂಶತಿ ದ್ರವ್ಯ

ಉದ್ದ ಅಗಲಕ್ಕೆ ೨೬ ರೇಖೆಗಳು ೨೫ ಪದಗಳು

ಮಧ್ಯ ೧೫ ಪದಗಳಲ್ಲಿ ೧೧೨

ದಿಕ್ಕುಗಳಲ್ಲಿ ೪೮

ವಿದಿಕ್ಕುಗಳಲ್ಲಿ ೩೪

ಅಂತರಾಳದಲ್ಲಿ ೪ರ ಮೂರು ಮೂರರಂತೆ ಒ:- ೩೨೦+೧

೩೨೧





## ಶಂಕರನಾರಾಯಣೀ ಅಧಮಮಧ್ಯಮ ಕಲಶ ಮಂಡಲಂ

**(ಏಕೋನ ಪಂಚಾಶತ್ಕಲಶ ಮಂಡಲಂ)**

ಉದ್ದ ಅಗಲಕ್ಕೆ ೧೦ ರೇಖೆಗಳು

೯ ಪದಗಳು

ಮಧ್ಯಕಮಲದಲ್ಲಿ ೯

ದಿಕ್ಕುಗಳಲ್ಲಿ ೬x೪=೨೪

ವಿದಿಕ್ಕುಗಳಲ್ಲಿ ೪x೪=೧೬

೪೯

# ಏಕಾಶೀತಿ ಕಲಶ ಮಂಡಲಂ

## ಶಂಕರನಾರಾಯಣೀ ಅಧಮೋತ್ತಮ ಕಲಶ ಮಂಡಲಂ

ಉದ್ದ ಅಗಲಕ್ಕೆ ೧೨

ಕೋಷ್ಠಗಳು ೧೧

ಮಧ್ಯಕಮಲದಲ್ಲಿ ೯

ದಿಕ್ಕುಗಳಲ್ಲಿ ೯x೪=೩೬

ವಿದಿಕ್ಕುಗಳಲ್ಲಿ ೯x೪=೩೬

೮೧



# ಶಂಕರನಾರಾಯಣೀ ಮಧ್ಯಮಾಧಮ ಮಂಡಲಂ

ಉದ್ದ ಅಗಲಕ್ಕೆ ೧೬ ರೇಖೆಗಳು ೧೫ ಪದಗಳು

ಮಧ್ಯಪದ್ಮದಲ್ಲಿ ೧+೮=೯

ಪದ್ಮದ ಸುತ್ತ ೧೨+೪=೧೬=೨೫

ದಿಕ್ಕು ವಿದಿಕ್ಕುಗಳಲ್ಲಿ ೯x೮=೨೭+೨೫

=೯೭



# ಶಂಕರನಾರಾಯಣೀ ಮಧ್ಯಮ ಮಧ್ಯಮ ಮಂಡಲಂ

ಉದ್ದ ಅಗಲಕ್ಕೆ ೨೦ ರೇಖೆಗಳು ೧೯ ಪದಗಳು

ಪದ್ಮ ಕೂಡಿ ಮಧ್ಯಪುಟ ೬ ರಿಂದ ೪೯ ಕಲಶಗಳು ಅದರ ಸುತ್ತಲೂ

ಎರಡು ಪದಗಳಿಂದ ವೀಥಿ ದಿಗ್ವಿದಿಕ್ಕು ಅಂತರಾಳಗಳಲ್ಲಿ ೧೬ ಪಂಚಗಳು

೧೬x೫=೮೦

೪೯+೮೦=<u>೧೨೯</u>



Scanned by CamScanner

# ಶಂಕರನಾರಾಯಣೀ ಮಧ್ಯಮೋತ್ತಮ ಕಲಶ ಮಂಡಲಂ

ಉದ್ದ ಅಗಲಕ್ಕೆ ೨೦ ರೇಖೆಗಳು ೧೯ ಪದಗಳು
ಮಧ್ಯಪದ್ಮ ದ್ವೈವಿಕಾವರಣ ಸೇರಿ ೮೧ ಕಲಶಗಳು
ಅನಂತರ ೧ ವೀಥಿ-ಮಾನುಷಾವರಣದಲ್ಲಿ
ದಿಕ್ಕು, ವಿದಿಕ್ಕು ಅಂತರಾಳಗಳಲ್ಲಿ
೯×೧೬=೧೪೪+೮೧=೨೨೫



# ಶಂಕರನಾರಾಯಣೀ ಉತ್ತಮಾಧಮ ಕಲಶ ಮಂಡಲಂ

ಮೇಲೆ ಹಾಗೂ ಕೆಳಕ್ಕೆ ೨೪ ರೇಖೆಗಳು ೨೩ ಪದಗಳು ಮಧ್ಯ ೧ (ಬ್ರಹ್ಮಕಲಶ)

ಹದಿನೈದು ಪದಗಳಲ್ಲಿ ೧೦೮

ದಿಕ್ಕುವಿದಿಕ್ಕುಗಳಲ್ಲಿ ೧೬x೫=೮೦

(ಹೊರಗಿನ ಆವರಣ) .

ಅಂತರಾಳದಲ್ಲಿ ೮x೩=೨೪

ಬ್ರಹ್ಮಕಲಶ ೧

೨೧೩



# ಶಂಕರನಾರಾಯಣೀ ಉತ್ತಮ ಮಧ್ಯಮ ಕಲಶ ಮಂಡಲಂ

ಉದ್ದ ಅಗಲಕ್ಕೆ ೨೪ ರೇಖೆಗಳು ೨೩ ಪದಗಳು
ಮಧ್ಯ ೯ ಪದಗಳಿಂದ ಪದ್ಮ ೧
ಮಧ್ಯ ೧೫ ಪದಗಳಲ್ಲಿ ೧+೧೦೮
ಹೊರಾವರಣದಿಗ್ವಿದಿಕ್ಕು ೧೬x೯=೧೪೪
ಅಂತರಾಳದಲ್ಲಿ ೨೪
೨೭೭



# ಶಂಕರನಾರಾಯಣೀ ಉತ್ತಮೋತ್ತಮ ಕಲಶ ಮಂಡಲಂ

೨೬ ರೇಖೆಗಳು ೨೫ ಪದಗಳು

ಮಧ್ಯ ೧. ಮಧ್ಯ ೧೫ ಪದಗಳಂದ ೧೦೮

| | |
|---|---|
| ದಿಕ್ಕುಗಳಲ್ಲಿ | ೧೨x೪=೪೮ |
| ವಿದಿಕ್ಕುಗಳಲ್ಲಿ | ೧೬x೪=೬೪ |
| ಅಂತರಾಳಗಳಲ್ಲಿ | ೧೨x೮=೯೬ |
| ಅವಾಂತರಾಳದಲ್ಲಿ | ೪x೮=೩೨ |
| | ೩೪೯ |



# ಏಕೋನ ಪಂಚಾಶತ್ಕಲಶ ಮಂಡಲಂ

೧೨ ರೇಖೆ ೧೧ ಪದಗಳು ಮಧ್ಯದ ಇಪ್ಪತ್ತೈದು ಪದಗಳಿಂದ ಪದ್ಮ (ಉದ್ದ ಅಗಲ) ಮಧ್ಯ-ಬ್ರಾಹ್ಮ-೧, ದಲದಲ್ಲಿ ದೈವಿಕಾವರಣ ೮, ದಿಕ್ಕುಗಳಲ್ಲಿ ೨x೪=೮, ವಿದಿಕ್ಕುಗಳಲ್ಲಿ ೪x೪=೧೬, ಅಂತರಾಳದಲ್ಲಿ ೨x೮=೧೬,=<u>೪೯</u>



# ಏಕಾಶೀತಿ ಕಲಶ ಮಂಡಲಂ

ಮೇಲಿಂದ ಕೆಳಗೆ ಅಡ್ಡವಾಗಿ ೧೪ ರೇಖೆಗಳು ೧೩ ಪದಗಳು
ಮೂರು ಪುಟದ ನಂತರ ವೀಥಿ ಮಧ್ಯದ ೨೫ ಪದಗಳಿಂದ ಪದ್ಮ
ಮಧ್ಯ (ಬ್ರಾಹ್ಮ) –೧, ಎಂಟುದಳಗಳಲ್ಲಿ ೮, ದಿಕ್ಕುಗಳಲ್ಲಿ ೩x೪ = ೧೨
ವಿದಿಕ್ಕುಗಳಲ್ಲಿ – ೨೬, ಅಚಿತರಾಳಾದಲ್ಲಿ೩ ೮=೨೪

೧+೮+೧೨+೩೬+೨೪=<u>೮೧</u>



